# ಕುಂದಗೋಳ ಪರಿಸರದ ಹಿಂದುಸ್ತಾನಿ ಸಂಗೀತಗಾರರು

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಂಗೀತದಲ್ಲಿ ಪಿಎಚ್.ಡಿ. ಪದವಿಗಾಗಿ
ಸಿದ್ಧಪಡಿಸಿ ಸಲ್ಲಿಸಿದ ಮಹಾಪ್ರಬಂಧ

ಸಂಶೋಧಕರು

ಆಶೋಕ ಹುಗ್ಗಣ್ಣವರ

ಮಾರ್ಗದರ್ಶಕರು

ಡಾ. ಹನುಮಣ್ಣ ನಾಯಕ ದೊರೆ
ಡೀನ್, ಲಲಿತ ಕಲೆಗಳ ನಿಕಾಯ ಮುಖ್ಯಸ್ಥರು
ಸಂಗೀತ ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ



ಲಲಿತ ಕಲೆಗಳ ನಿಕಾಯ ಸಂಗೀತ ಮತ್ತು ನೃತ್ಯ ವಿಭಾಗ, ಕನ್ನಡ
ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩೨೭೬

೨೦೦೬

# ಕುಂದಗೋಳ ಪರಿಸರದ ಹಿಂದುಸ್ತಾನಿ ಸಂಗೀತಗಾರರು

ಹಂಪಿಯ ಕನ್ನಡ ವಿಶ್ವವಿದ್ಯಾಲಯಕ್ಕೆ ಸಂಗೀತದಲ್ಲಿ ಪಿಎಚ್.ಡಿ. ಪದವಿಗಾಗಿ
ಸಿದ್ಧಪಡಿಸಿ ಸಲ್ಲಿಸಿದ ಮಹಾಪ್ರಬಂಧ



ಸಂಶೋಧಕರು
ಅಶೋಕ ಹುಗ್ಗಣ್ಣವರ

ಮಾರ್ಗದರ್ಶಕರು
ಡಾ. ಹನುಮಣ್ಣ ನಾಯಕ ದೊರೆ
ಡೀನ್, ಲಲಿತ ಕಲೆಗಳ ನಿಕಾಯ ಮುಖ್ಯಸ್ಥರು
ಸಂಗೀತ ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ



ಲಲಿತ ಕಲೆಗಳ ನಿಕಾಯ ಸಂಗೀತ ಮತ್ತು ನೃತ್ಯ ವಿಭಾಗ, ಕನ್ನಡ
ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ ೫೮೩೨೭೬

೨೦೦೬

# ದೃಢೀಕರಣ ಪತ್ರ

ಅಶೋಕ ಹುಗ್ಗಣ್ಣವರ ಇವರು 'ಕುಂದಗೋಳ ಪರಿಸರದ ಹಿಂದುಸ್ತಾನಿ ಸಂಗೀತಗಾರರು' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಕನ್ನಡ ವಿಶ್ವವಿದ್ಯಾಲಯ ಲಲಿತಕಲಾ ನಿಕಾಯದ ಸಂಗೀತ ಮತ್ತು ನೃತ್ಯ ವಿಭಾಗಕ್ಕೆ ಪಿಎಚ್.ಡಿ. ಪದವಿಗಾಗಿ ಸಲ್ಲಿಸುತ್ತಿರುವ ಪ್ರಸ್ತುತ ಮಹಾಪ್ರಬಂಧವನ್ನು ಈ ಮೊದಲು ಇವರು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: ೨. ೩. ೨೦೦೭.

ಡಾ. ಹನುಮಣ್ಣ ನಾಯಕ ದೊರೆ
ಮುಖ್ಯಸ್ಥರು
ಸಂಗೀತ ಮತ್ತು ನೃತ್ಯ ವಿಭಾಗ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ-೫೮೩೨೭೬

# ಪ್ರಮಾಣ ಪತ್ರ

'ಕುಂದಗೋಳ ಪರಿಸರದ ಹಿಂದುಸ್ತಾನಿ ಸಂಗೀತಗಾರರು' ಎಂಬ ಶೀರ್ಷಿಕೆಯ ಈ ಮಹಾಪ್ರಬಂಧವನ್ನು ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಡಾ. ಹನುಮಣ್ಣ ನಾಯಕ ದೊರೆ ಅವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿ, ಲಲಿತಾಕಲಾ ನಿಕಾಯದ ಸಂಗೀತ ಮತ್ತು ನೃತ್ಯ ವಿಭಾಗಕ್ಕೆ ಸಲ್ಲಿಸುತ್ತಿದ್ದೇನೆ. ಈ ಮಹಾಪ್ರಬಂಧವು ಮೂಲರೂಪದ ಸಂಶೋಧನಾ ಕೃತಿಯಾಗಿದ್ದು, ಈ ಮೊದಲು ನಾನು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ಸ್ಥಳ : ವಿದ್ಯಾರಣ್ಯ

ದಿನಾಂಕ: ೨.೭.೨೦೦೮

ಅಶೋಕ ಹುಗ್ಗಣ್ಣವರ
ಸಂಶೋಧಕ

# ಪರಿವಿಡಿ

# ಅಧ್ಯಾಯ-ಒಂದು

# ಅಧ್ಯಯನದ ಉದ್ದೇಶ ಮತ್ತು ಮಹತ್ವ

## ೧.೧. ಪೀಠಿಕೆ

ಭಾರತೀಯರ ಜನ ಜೀವನದಲ್ಲಿ ಸಂಗೀತವು ಸಂಸ್ಕೃತಿಯ ಪ್ರಾಣ ಸಂಚಾರದಂತೆ ಕಾಲಕ್ರಮದಲ್ಲಿ ನಿರಂತರ ಹರಿದು ಬಂದಿದೆ. ಹಳ್ಳಿಗಳಲ್ಲಿ ಕೃಷಿಗೆ ಸಂಬಂಧಿಸಿದ ದೈನಿಕ ಜೀವನ ಚಕ್ರ, ಋತುವಿಲಾಸ, ಕಾಯಕ ವೈವಿಧ್ಯತೆಗಳ ವೃತ ನಿಷ್ಠ ಆಚರಣೆಯ ಜೊತೆಗೆ ಸಂಗೀತವು ಅನುಷಂಗಿಕವಾಗಿ ಬಳಕೆಯಾಗುತ್ತ ಬಂದಿದೆ. ಪಟ್ಟಣದವರ ಜೀವನ ಕ್ರಮದಲ್ಲಿ ಸಂಗೀತವು ಶೋಕಿಯ, ಅಂತಸ್ತಿನ ಕಲಾತ್ಮಕ ಅಭಿವ್ಯಕ್ತಿ ಮಾಧ್ಯಮವಾಗಿದೆ. ಈ ನಡುವೆ ಸಂಗೀತವು ಭಾರತೀಯರ ವೈವಿಧ್ಯಮಯ ಜೀವನ ಶೈಲಿಯ ಸಂಕೀರ್ಣತೆಗೆ ಜೀವಂತ ಸಾಕ್ಷಿಯಾಗಿದೆ.

ಕ್ರಿ.ಶ. ೨ ನೇ ಶತಮಾನದಷ್ಟು ಹಿಂದೆಯೇ ಶಾಸ್ತ್ರೀಯ ಸಂಗೀತದ ಉಗಮವನ್ನು ಗುರುತಿಸಲಾಗಿದೆ. ಭರತನ ನಾಟ್ಯ ಶಾಸ್ತ್ರದಲ್ಲಿ ಮೊಟ್ಟ ಮೊದಲ ಸಲ ರಂಗಭೂಮಿಗೆ ಸಂಬಂಧಿಸಿದಂತೆ ಸಾಂದರ್ಭಿಕವಾಗಿ ಸಂಗೀತದ ಉಪಯೋಗವನ್ನು ಉಲ್ಲೇಖಿಸಿರುವುದನ್ನು ಗಮನಿಸಬಹುದು. ಉತ್ತರ ಭಾರತದಲ್ಲಿ ಸಂಗೀತವು ಹಿಂದುಸ್ತಾನಿ ಸಂಗೀತ ಪರಂಪರೆಯ ರೂಪದಲ್ಲೊ ದಕ್ಷಿಣ ಭಾರತದಲ್ಲಿ ಕರ್ನಾಟಕಿ ಸಂಗೀತ ರೂಪದಲ್ಲೊ ಸತತ ನಡೆದು ಬಂದಿರುವುದು ಕುತೂಹಲಕರ ಸಂಗತಿಯಾಗಿದೆ. ಪ್ರಾಯಶಃ ಸಂಗೀತದ ಈ ವಿಭಜನೆಯು ೧೬ ನೇ ಶತಮಾನದಲ್ಲಿ ಭಾರತದ ಮೇಲೆ ಮುಸ್ಲಿಂರು ದಾಳಿ ನಡೆಸಿದ ನಂತರ ಆಗಿರಬಹುದು. ಮುಖ್ಯವಾಗಿ ಈ ಎರಡೂ ಸಂಗೀತ ಪರಂಪರೆಗಳು ಧಾರ್ಮಿಕ ಆಚರಣೆಯಿಂದಲೋ ಭಕ್ತಿಪಂಥದ ಚಳುವಳಿಯಿಂದಲೋ ಸ್ಫೂರ್ತಿ ಪಡೆದಿವೆ. ಸಂಗೀತವು ಕಾಲಾಂತರದಲ್ಲಿ ರಾಜಾಶ್ರಯದಿಂದ ನಿಧಾನವಾಗಿ ಲೋಕಾಶ್ರಯದತ್ತ ಸಾಗಿರುವುದು ಗಮನಾರ್ಹವಾಗಿದೆ.

ಸಂಗೀತವು ಇತರ ವಿಷಯಗಳಂತೆ ಮನುಷ್ಯ ಜೀವನದಲ್ಲಿ ಹಾಸುಹೊಕ್ಕಾಗಿದೆ. ವಿಶ್ವದೊಂದಿಗಿನ ಅವನ ಸಂಬಂಧಗಳ ಮೂಲಗ್ರಹಿಕೆಯಲ್ಲಿಯೇ ನಾದ ರೂಪ ಇರುವುದನ್ನು ನೋಡುತ್ತೇವೆ. ಮನುಷ್ಯ ತನ್ನ ಹುಟ್ಟು ಮತ್ತು ಅಸ್ತಿತ್ವದ ಸ್ವರೂಪವನ್ನೊ, ದೇವರನ್ನೊ, ನಿಸರ್ಗವನ್ನೋ, ಕಸಬನ್ನೊ ಅರಿಯುವಾಗ ಸಂಗೀತ ಮಾಧ್ಯಮವನ್ನು ಒಂದು ಶೋಧನಾತ್ಮಕ ಉಪಕರಣದಂತೆ ಉಪಯೋಗಿಸುತ್ತ ಬಂದಿರುವುದು ಆಕಸ್ಮಿಕವಲ್ಲ. ಸಂಗೀತದ ಹುಟ್ಟಿಗೆ ಕಾರಣವೆಂದು ಊಹಿಸಲ್ಪಟ್ಟ ಸಂಗತಿಗಳು ಜೀವನವನ್ನು ಅರಿಯುವ, ಹೆಚ್ಚು ಸುಂದರಗೊಳಿಸಿ ಅಭಿವ್ಯಕ್ತಿಗೊಳಿಸಿಸುವ ಯತ್ನಗಳು ಆಗಿವೆ. ಮನುಷ್ಯನನ್ನು ವಾಸ್ತವ ಮತ್ತು ಕಾಲ್ಪನಿಕ ಜಗತ್ತುಗಳಿಗೆ, ಲೌಕಿಕ ಮತ್ತು ಅಲೌಕಿಕ ಸೆಳೆತಗಳಿಗೆ ನಂಟು ಬೆಸೆಯುವ ಸಂಗೀತ ಸಂಕೀರ್ಣವಾದುದು. ಆದ್ದರಿಂದ ಸಂಗೀತದ ಸ್ವರೂಪವನ್ನು

ಅರಿಯುವ ಮತ್ತು ವಿಶ್ಲೇಷಿಸುವ ಕ್ರಮ ಸಮಗ್ರವೂ ಅಂತರಕ್ರಿಯಾತ್ಮಕವೂ ಆಗಿರಬೇಕು. ಮನುಷ್ಯ ಸಮುದಾಯದ ಪಾರುಲೌಕಿಕವೂ ಅಮೂರ್ತವೂ ಆದ ಆಶೋತ್ತರಗಳನ್ನು ಕಟ್ಟುವ ಮಹತ್ವಾಕಾಂಕ್ಷೆ ಕಾರ್ಯದಲ್ಲಿ ತೊಡಗಿರುವ ಹಲವು ಕಲೆಗಳಲ್ಲಿ ಸಂಗೀತವೂ ಒಂದು ಎಂಬುದು ನಿರ್ವಿವಾದ. ಸಂಗೀತವು ವ್ಯಕ್ತಿಯೋರ್ವನ ವೈಯಕ್ತಿಕ ಪ್ರತಿಭೆ, ಕಲ್ಪನೆ, ಸೃಜನ ಶೀಲತೆ ಮತ್ತು ಆದರ್ಶಗಳ ಅಭಿವ್ಯಕ್ತಿಯಾಗಿರುವಂತೆಯೇ ಒಂದು ಜನಾಂಗದ ಸಮೂಹ ಜೀವನ ಶೈಲಿಯ ಅಭಿವ್ಯಕ್ತಿಯೂ ಹೌದು. ಸಂಗೀತವು ಒಂದು ಪ್ರದೇಶದ ನಂಬಿಕೆ, ಧಾರ್ಮಿಕ ಆಚರಣೆ, ರಾಜಕೀಯ ಸ್ಥಿತಿ, ಆರ್ಥಿಕ ಹಿನ್ನೆಲೆ, ವಾಸ್ತುಶಿಲ್ಪ, ದೈನಿಕ ಕಾಯಕಗಳನ್ನು ಅವಲಂಬಿಸಿರುತ್ತದೆ. ಈ ಎಲ್ಲ ಸಂಗತಿಗಳು ಒಟ್ಟಂದದಲ್ಲಿ ಒಂದು ಮತ್ತೊಂದನ್ನು ಪ್ರಚೋದಿಸುವ ನಿಯಂತ್ರಿಸುವ ಪರಸ್ಪರ ರೂಪಿಸಿಕೊಳ್ಳುವ ಪ್ರಕ್ರಿಯೆಯಲ್ಲಿ ತೊಡಗಿರುತ್ತವೆ.

ಒಂದು ಜನಾಂಗದ ಸಾಮಾಜಿಕ ಸಂರಚನೆಯಲ್ಲಿ ಸಂಗೀತವನ್ನು ಒಳಗೊಂಡು ವಿವಿಧ ರೀತಿಯ ಸಾಂಸ್ಕೃತಿಕ ಅಂಶಗಳು ಬೆರೆತಿರುತ್ತವೆ. ತನ್ನ ದೈನಿಕ ಕಾರ್ಯ ನಿರ್ವಹಣೆಯಲ್ಲೂ ಅದು ಈ ಎಲ್ಲ ಸಾಂಸ್ಕೃತಿಕ ಅಂಶಗಳನ್ನು ನಿಯಮಿತವಾಗಿ ಆಚರಿಸುತ್ತಿರುತ್ತದೆ. ಇಂಥ ಸಾಮಾಜಿಕ ಪರಿಸರ ಸಂಗೀತ ಸ್ವರೂಪವನ್ನು ಅರಿಯಲು ಜನರ ದಿನಚರಿಯಲ್ಲಿ ಸಂಯೋಗಗೊಂಡ ಭಿನ್ನ ಲಲಿತ ಕಲೆಗಳ ಅಂತರ್ಗತ ಸಂಬಂಧ, ಸ್ವರೂಪ, ಪ್ರಭಾವಗಳ ಅಧ್ಯಯನವು ಅಗತ್ಯವಾಗಿದೆ.

ಕಾಲದ ಗತಿಯಲ್ಲಿ ಹುಟ್ಟಿ ಬೆಳೆಯುವ ಅಮೂರ್ತ ಗುಣದ ಸಂಗೀತ ಪ್ರವೃತ್ತಿಯಲ್ಲಿ ಸಂಚಾರಿಯಾಗಿದೆ. ಮೌಖಿಕ ಪರಂಪರೆಯನ್ನು ಅನುಸರಿಸುವದರಿಂದಲೂ, ಇದರ ಭಾಷೆ ಕಾಲಾತೀತವಾದದ್ದರಿಂದಲೂ, ಪ್ರಾದೇಶಿಕ ಗಡಿಗಳು ಅದನ್ನು ನಿರ್ಬಂಧಿಸಲಾರವು ಎಂಬುದು ನಿಜ. ಆದರೆ ಸಂಗೀತವು ಒಂದು ಪ್ರದೇಶದ ಮಣ್ಣಿನ ವಾಸನೆಯಿಂದ, ಕಾಲಘಟ್ಟದ ಪ್ರಭಾವದಿಂದ ಮುಕ್ತವಲ್ಲ ಎಂಬುದು ಕೂಡ ಅಷ್ಟೇ ನಿಜ. ಆದ್ದರಿಂದ ಏಕಕಾಲದಲ್ಲಿ ಪ್ರಾದೇಶಿಕ ರುಚಿಯನ್ನು, ವಿಶ್ವಾತ್ಮಕ ವ್ಯಾಪ್ತಿಯನ್ನು ಪಡೆದ ಸಂಗೀತ ಬಹುರೂಪಿಯಾಗಿದೆ.

ಸಂಗೀತದ ಬಹುರೂಪತೆಗೆ ಅದು ಉಳಿದು ಬೆಳೆದು ಬಂದ ಆಯಾ ಪ್ರದೇಶದ ಸಾಂಸ್ಕೃತಿಕ ಆಚರಣೆಗಳು ಕಾರಣವಾಗಿದೆ. ಒಂದು ಪ್ರದೇಶದ ದೇವಸ್ಥಾನದ ವಾಸ್ತುಶಿಲ್ಪಗಳು ಅಲ್ಲಿ ವರ್ಷದುದ್ದಕ್ಕೂ ನಿರಂತರ ನಡೆಯುವ ಉತ್ಸವಗಳು, ವಾರ್ಷಿಕ ಹಬ್ಬಗಳು ಅಲ್ಲಿಯ ಜನರು ಪ್ರಕೃತಿಯೊಂದಿಗೆ ಇಟ್ಟುಕೊಂಡಿರುವ ಜಾನಪದೀಯ ಸಂಬಂಧ ದುಡಿಮೆಯೊಂದಿಗೆ ಹಾಸು ಹೊಕ್ಕಾಗಿರುವ ಹಾಡುಗಳು ಊರಿನೊಂದಿಗೆ ಸಂಪರ್ಕಕ್ಕೆ ಬಂದಿರುವ ಕಲಾವಿದರು, ಜನಸಾಮಾನ್ಯರ ಅಭಿರುಚಿ, ಸಂಗೀತ ಪರಿಚಾಲಕರು, ಬಡವ ಶ್ರೀಮಂತರ ನಡುವಿನ ಸಂಬಂಧದ ಸ್ವರೂಪ ಮುಂತಾದ ವಿಷಯಗಳ ಅಂತರ್ ಸಂಬಂಧ ಜಾಲದಲ್ಲಿ ಸಂಗೀತವನ್ನು ವಿಶ್ಲೇಷಿಸಿದಾಗ ಅದಕ್ಕೊಂದು ಮಾನವೀಯ ಸ್ವರೂಪ ಪ್ರಾಪ್ತವಾಗುತ್ತದೆ.

ಭಾರತದ ಒಟ್ಟು ಜನ ಸಂಖ್ಯೆಯ ಮುಕ್ಕಾಲು ಭಾಗ ಜನರು ಹಳ್ಳಿಗಳಲ್ಲಿಯೇ ಜೀವಿಸುತ್ತಿದ್ದಾರೆ. ಆಧುನಿಕತೆಯ ಪ್ರವೇಶದಿಂದ ತಾಂತ್ರಿಕತೆಯ ಪ್ರಭಾವದಿಂದ ಬದಲಾವಣೆಗಳು ಕ್ಷಿಪ್ರ ಗತಿಯಲ್ಲಿ ಸಂಭವಿಸುತ್ತಿದ್ದರೂ ಹಲವು ಹಳೆಯ ಸಂಪ್ರದಾಯಗಳು ಇನ್ನೂ ಆಚರಣೆಯಲ್ಲಿವೆ. ಗ್ರಾಮ ಭಾರತದ ಕಲೆಯ ಸಂಗೋಪನೆಯಲ್ಲಿ ಸ್ತ್ರೀ ಪುರುಷರಿಗೆ ಪ್ರತ್ಯೇಕವಾದ ಪಾತ್ರಗಳಿವೆ. ಹಲವು ಸಲ ಸ್ತ್ರೀಯರ ಹಾಡುಗಳು ಸಂಗೀತ ಸಾಧನಗಳು ಹಿಮ್ಮೇಳಗಳು ಇಲ್ಲದೇ ನಡೆಯುತ್ತವೆ. ಕಾಲಕಾಲಕ್ಕೆ ನಡೆಯುವ ಕುಟುಂಬದಲ್ಲಿನ ಹಬ್ಬಗಳು, ಧಾರ್ಮಿಕ ಆಚರಣೆಗಳು ಮನೆಯ ದಿನಚರಿಯ ಯಾಂತ್ರಿಕ ಕ್ರಿಯೆಗಳಂತೆ ನಡೆದು ಹೋಗುತ್ತವೆ. ಪುರುಷರು ಪಾಲ್ಗೊಳ್ಳುವ ಕೃಷಿಗೆ ಸಂಬಂಧಿಸಿದ ಸುಗ್ಗಿಯಂತಹ ಹಬ್ಬಗಳಲ್ಲಿ ಭಕ್ತಿಪ್ರಧಾನವಾದ ಹಾಡುಗಳು ಸಂಗೀತ ವಾದ್ಯಗಳು ಸಹಿತ ವ್ಯಕ್ತವಾಗುತ್ತವೆ.

ಸಾಂಪ್ರದಾಯಿಕ ಸಮಾಜದಲ್ಲಿ ಸಂಗೀತವನ್ನು ದೈವಿಕ ಶ್ರದ್ಧೆಯ ಪ್ರತೀಕವಾಗಿ, ಭಜನೆಯಾಗಿ, ಮನರಂಜನಾ ಸಾಧನವಾಗಿ ನಡೆಸಿಕೊಂಡು ಬಂದ ಉದಾಹರಣೆಗಳು ಸಿಗುತ್ತವೆ. ಆದರೆ ಇತ್ತೀಚಿಗೆ ವಿಶೇಷ ಸಂದರ್ಭಗಳಲ್ಲಿ ಅಗತ್ಯ ಸಂಗೀತ ಸೇವೆಗಾಗಿ ಸಂಗೀತವನ್ನು ವೃತ್ತಿಯಾಗಿಸಿಕೊಂಡ ಪರಿಣಿತರ ಲಭ್ಯತೆಯೂ ಇದೆ. ಕೆಲವು ಜನಾಂಗಗಳಲ್ಲಿ ಸಂಗೀತ ಆರಾಧನೆಯು ಮನೆತನದ ಅನುವಂಶಿಕ ಪರಂಪರೆಯಾಗಿದೆ. ಕಾಲಾಂತರದಿಂದ ಹಳ್ಳಿಗಳಲ್ಲಿ ಸಾಗಿ ಬಂದ ಸಾಂಪ್ರದಾಯಿಕ ಮನರಂಜನಾ ಪ್ರಕಾರಗಳು ಮುಖ್ಯವಾಗಿ ಸಂಗೀತ, ಸಿನೇಮಾ ದೂರದರ್ಶನಗಳ ಪ್ರಭಾವದಿಂದ ಅಪಾಯಕ್ಕೆ ಸಿಲುಕಿವೆ. ಹಳ್ಳಿಗಳಲ್ಲಿ ಪ್ರಚಲಿತದಲ್ಲಿರುವ ಜಾನಪದ ಸಂಗೀತವನ್ನು ಹೊಸ ಬಗೆಯಲ್ಲಿ ರೂಪಾಂತರಿಸಿಗೊಂಡು ಸಮೂಹ ಮಾಧ್ಯಮ ಮೂಲಕ/ಪ್ರಸಾರ ಮಾಡಿ ಜನರ ಅಭಿರುಚಿಯನ್ನು ಕೆಡಿಸಿ ಹಣ ಗಳಿಸುವ ವ್ಯಾಪಾರಿ ಮಾರ್ಗ ಹಿಡಿದಿರುವುದು ಶೋಚನಿಯ ಇದು ವ್ಯವಸ್ಥಿತವಾಗಿ ನಮ್ಮ ಭಾರತೀಯ ಸಂಗೀತ ಪರಂಪರೆಯ ಮೇಲೆ ನಡೆಯುವ ಆಕ್ರಮಣವಾಗಿದೆ.

ಇಂಥ ಸಂದರ್ಭದಲ್ಲಿ ಸಂಗೀತ ಪರಂಪರೆಯ ಸಂರಕ್ಷಣೆಗೆ ಸಾಂಸ್ಥಿಕ ಆಧಾರವು ಅಗತ್ಯವಾಗಿದೆ. ನಾಡಿನ ಹಲವು ಪ್ರದೇಶಗಳಲ್ಲಿ ಸಂಗೀತೋತ್ಸವಗಳು ನಿರಂತರವಾಗಿ ಜರುಗಲು ಪ್ರಾದೇಶಿಕ ಸಂಸ್ಥೆಗಳ ಪಾತ್ರವನ್ನು, ಅದರ ಪೋಷಕರ ಜವಾಬ್ದಾರಿಯನ್ನು ನಿರಾಕರಿಸುವಂತಿಲ್ಲ. ಇಂಥ ಪ್ರದೇಶಗಳಲ್ಲಿ ಹುಟ್ಟಿಕೊಂಡ ಸಂಸ್ಥೆಗಳಿಗೆ ಸಂಗೀತ ಪರಂಪರೆಯ ನೆನಪಿದೆ. ಸಂಗೀತ ರೂವಾರಿಗಳು ರೂಪಿಸಿದ ರೋಚಕ ಕಥೆಗಳಿವೆ.

ನೈಸರ್ಗಿಕವಾಗಿ ಮನುಷ್ಯರೆಲ್ಲರೂ ಒಂದೇ ವರ್ಗಕ್ಕೆ ಸೇರಿದವರಾದರೂ ಆಯಾ ಸಂಗೀತ ಆಯಾ ಸಮುದಾಯದ ವಿಶಿಷ್ಟ ಸಂಸ್ಕೃತಿಗೆ ಅನುಗುಣವಾಗಿಯೇ ವಿಕಾಸಗೊಳ್ಳುತ್ತದೆ. ಸುತ್ತಮುತ್ತಲಿನ ಜಗತ್ತನ್ನು ವೀಕ್ಷಿಸುವ, ಅರ್ಥೈಸುವ ಕ್ರಮವನ್ನು ಆಯಾ ಸಂಸ್ಕೃತಿ ಸೂಚಿಸುತ್ತದೆ. ಅಥವಾ ಅದರ ತಿರುಗ ಮುರುಗು ಸರಿಯೇ.

ಅಂದರೆ ನಾವು ಪ್ರಪಂಚವನ್ನು ಅವಲೋಕಿಸುವ ಕ್ರಮವೇ ನಮ್ಮ ಸಂಸ್ಕೃತಿಯ ವೇಷ ಭೂಷಣಗಳನ್ನೂ ನಡಿಗೆಯ ಶೈಲಿಯನ್ನೂ ನಿರ್ಧರಿಸುತ್ತದೆ. ನಮ್ಮ ನಂಬಿಕೆಗಳು, ಚಿಂತನೆಗಳು, ಶ್ರವಣಕ್ರಮ, ಶಬ್ದ ಸೃಷ್ಟಿ, ಶಬ್ದಗಳ ಬಳಕೆ, ಈ ಎಲ್ಲದರ ಪರಿಪಾಕದಿಂದ ಆ ಕ್ರಮ ರೂಪಗೊಳ್ಳುತ್ತದೆ.

ಸಂಗೀತಕ್ಕೆ ಸಹೃದಯ ಆಶ್ರಯದಾತರು ಬೇಕು. ಮನುಷ್ಯರು ಮಾತಿಗೂ ಮೊದಲು ಸಂಗೀತ ನಿರ್ಮಿತಿಯನ್ನು ಮಾಡಿದರು. ಅದರ ನಿರ್ಮಿತಿಯ ಸಂದರ್ಭದಲ್ಲಿ ಅದು ನೀಡುವ ಆನಂದ ಹಾಗೂ ಅರ್ಥಗಳನ್ನು ಕಂಡುಕೊಂಡರು. ಸಂಗೀತವು ಎಲ್ಲರಿಗೆ ಅರ್ಥವಾಗುವಂತೆ ಬೆಳೆಯಲು ಅದಕ್ಕೆ ಸುತ್ತಮುತ್ತಲಿನ ಸಮಾಜದ ಪೋಷಣೆ ದೊರಕಬೇಕು. ಸಂಗೀತವೇ ನಿರ್ಗಮಿಸಿದರೆ ಜೀವನ ಕ್ರಮದ ಪರಿಸ್ಥಿತಿಯಲ್ಲಿ ಬದುಕನ್ನು ಗ್ರಹಿಸುವ, ಸೃಷ್ಟಿಸುವ ವಿಧಾನವಾಗಳು ಏನಾಗಬಲ್ಲವು? ಏಕೆಂದರೆ ಸಂಗೀತವಿರುವುದು ಇತರರು ಕೇಳಲು ಮಾತ್ರವೇ ಅಲ್ಲ; ಇದರಲ್ಲಿ ತಾತ್ವಿಕ ಅಂಶಗಳು ಸೇರಿಕೊಂಡಿವೆ. ಕುತೂಹಲಕಾರಿ ಅಂಶವೇನೆಂದರೆ ಅದೆಷ್ಟೋ ಸಂದರ್ಭಗಳಲ್ಲಿ ನಮ್ಮೊಂದಿಗೆ ನಾವೇ ಮಾತನಾಡುತ್ತಿರುತ್ತೇವೆ. ಹಾಗೇ ನಮಗೆ ನಾವೇ ಹಾಡಿಕೊಳ್ಳುತ್ತಲಿರುತ್ತೇವೆ. ನಮಗೆ ನಾವೇ ಏಕೆ ಹಾಡಿಕೊಳ್ಳುತ್ತೇವೆ, ನಮ್ಮೊಂದಿಗೆ ನಾವು ಮಾತನಾಡಿಕೊಳ್ಳತ್ತೇವೆ ಎಂದು ತತ್ವಜ್ಞಾನಿಗಳು ಅಚ್ಚರಿಪಡುತ್ತಿರುತ್ತಾರೆ. ಸಂಗೀತ ಸೃಷ್ಟಿ ಮುಖಾಂತರ ನಾವು ಜಗತ್ತಿನಲ್ಲಿ ನಮ್ಮ ಅಸ್ತಿತ್ವದ ಸ್ವರೂಪವೇನು ಎಂದು ಅರ್ಥ ಮಾಡಿಕೊಳ್ಳಲು ಮತ್ತು ನಮ್ಮ ಸುತ್ತಲಿನ ಜಗತ್ತು ನಮ್ಮನ್ನು ಅರಿಯುವಂತೆ ಮಾಡಲು ನಡೆಸುವ ಪ್ರಯತ್ನವೆನ್ನಬಹುದು. ಅಂತೆಯೇ ನಾವು ಸಾಮಾಜಿಕ ಸತ್ಯದೊಡನೆ ಹೊಂದಿಕೊಳ್ಳುವ ಅಥವಾ ಹೊಂದಿಕೊಳ್ಳದ ವೈಯಕ್ತಿಕ ಸತ್ಯಗಳನ್ನು ರೂಪಿಸುವ ಪ್ರಯತ್ನದಲ್ಲಿ ತೊಡಗುತ್ತೇವೆ. ವ್ಯಕ್ತಿಗಳಾಗಿ ಸಾಮಾಜಿಕರಾಗಿ ಹೇಗೆ ನಮ್ಮ ಬದುಕನ್ನು ಸಾಗಿಸುತ್ತೇವೆ ಎಂಬುದನ್ನು ಅರಿಯುವ ಪ್ರಯತ್ನ ಮಾಡುತ್ತೇವೆ.

ಭಾರತೀಯ ಸಂಗೀತಕ್ಕೂ ಅಧ್ಯಾತ್ಮಕ್ಕೂ ನಡುವೆ ಸಂಬಂಧ ಕಲ್ಪಿಸುವ ರೂಢಿ ನಮ್ಮಲ್ಲಿದೆ. ಇಲ್ಲಿ ವಿಶೇಷವಾಗಿ ಭಕ್ತಿ ಚಳುವಳಿ ಉಂಟು ಮಾಡಿರುವ ಸಾಂಸ್ಕೃತಿಕ ಪ್ರಭಾವ ಅದಕ್ಕೆ ಕಾರಣ ಹಾಗಾಗಿ ನಾವು ಬಹುಬೇಗ ಇವೆರಡರ ನಡುವೆ ಸಂಬಂಧ ಕಲ್ಪಿಸಿ ಮಾತನಾಡುತ್ತೇವೆ. ಯಾವುದೇ ಸಂಗೀತದ ಮೂಲ ಸ್ವರೂಪವೇ ಆಧ್ಯಾತ್ಮಿಕವಾದುದು ಅಂದರೆ ಅದು ಅಮೂರ್ತ ನಿರಾಕಾರ, ಕೇವಲ ಅನುಭವ ವೇದ್ಯವಾದುದು; ನಿಂತಲ್ಲೆ ನೆಲೆಯೂರದೇ ತೇಲುತ ನಮ್ಮ ನೆನಪಿನಲ್ಲಿ ಮಾತ್ರ ಉಳಿಯುವಂತದ್ದು. ಹೀಗಿದ್ದೂ ದೇಶಕಾಲಾತೀತವಾಗಿ ಜನರನ್ನು ಪರಿವರ್ತಿಸುವ ಒಂದು ಅಪೂರ್ವವಾದ ಶಕ್ತಿ ಸಂಗೀತಕ್ಕಿದೆ. ಇದು ಅನಾದಿ ಕಾಲದಿಂದಲೂ ಬೇರೆ ಬೇರೆ ಸಾಂಸ್ಕೃತಿಕ ವಲಯಗಳಲ್ಲಿ ಹುಟ್ಟಿ, ಬೆಳೆದು, ಜನರ ಮನಸ್ಸನ್ನು ನಿಗೂಢ ಬಗೆಯಲ್ಲಿ ಪ್ರಭಾವಿಸುತ್ತ ಬಂದಿದೆ. ಈ ನಿಗೂಢತೆಯೇ ಒಂದು ಅನುಭಾವ, ಒಂದು ಮಹತ್ತರ ಶಕ್ತಿ. ಯಾವುದೇ ಒಂದು ಸಂಗೀತ ಸಂಸ್ಕೃತಿಗೆ ಮಾತ್ರ ಬದುಕಿನ ತೀರ ಸಂಕೀರ್ಣ ವಿಚಾರಗಳನ್ನು ಅಭಿವ್ಯಕ್ತಿಸುವ ಶಕ್ತಿ ಇದೆ. ಎಲ್ಲ ಕಡೆಗಳಲ್ಲೂ ಹೇಳಲೇ ಬೇಕಾದ್ದುದ್ದನ್ನು ಹೇಳಿ ತಲುಪಿಸುವ ಸಂವಹನ ಮಾರ್ಗಗಳನ್ನು ಆಯಾ ಸಂಗೀತ ಪದ್ಧತಿಗಳು ಅಥವಾ ಘರಾಣಾ ಪದ್ಧತಿಗಳು ಕಂಡುಕೊಂಡಿವೆ.

ಶ್ರೀ ಭಾಸ್ಕರ ಚಂದಾವರಕರ್ ''ಸಂಗೀತವು ನಮ್ಮಲ್ಲಿ ಉಳಿಯದಿದ್ದರೆ ನಮ್ಮ ಬದುಕಿನಿಂದ ಅದು ಹೊರಟೇ ಹೋದರೆ ಬದುಕನ್ನು ಗ್ರಹಿಸುವ ಒಂದು ಅಮೂಲ್ಯ ವಿಧಾನ ಕೂಡ ಅದರೊಂದಿಗೆ ನಿರ್ಗಮಿಸುತ್ತದೆ''[೧] ಎಂದಿದ್ದಾರೆ. ಜಗತ್ತಿನ ಯಾವುದೇ ಭಾಗದಲ್ಲಾಗಲಿ ಯಾವುದೇ ಶ್ರೇಷ್ಠ ಕಲೆಯಾದರೂ ಸಹೃದಯರ ಪೋಷಣೆ ಇಲ್ಲದೇ ಉಳಿಯಲಾರದು. ಸಹೃದಯರ ಅಭಿರುಚಿ ಕಾಪಾಡಿಕೊಂಡು ಬರಲು ಪ್ರಾದೇಶಿಕ ಸಂಘಟನೆಗಳು ಸಂಗೀತ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವದು ಅಗತ್ಯವಾಗಿದೆ.

ಸಂಗೀತ ಬಾಹ್ಯವನ್ನು ಮರೆಸಿ ನಾದಾನುಸಂಧಾನದಿಂದ ಕಲಾವಿದನನ್ನು ಶ್ರೋತೃಗಳನ್ನು ಭಾವನಾ ಪ್ರಪಂಚಕ್ಕೆ ಒಯ್ಯುವ ಸಾಧನವಾಗಿದೆ. ಆತ್ಮ ವಿಕಾಸವನ್ನುಂಟು ಮಾಡುವ ಪರಮ ಶ್ರೇಷ್ಠ ಮಂತ್ರವೆಂದು ಪ್ರಾಚೀನ ಕಾಲದಿಂದಲೂ ಸಂಗೀತವನ್ನು ವ್ಯಾಖ್ಯಾನಿಸುತ್ತಾ ಬಂದಿದ್ದಾರೆ. ಸತ್ಯ ಸಾಧನೆಯಿಂದ ಭಾವ ಸಮಾಧಿಗೊಯ್ದು ಪರಿಪೂರ್ಣತೆಯ ಸೌಂದರ್ಯವನ್ನು ಎತ್ತಿ ತೋರಿಸುವ ರಸಗನ್ನಡಿಯಲ್ಲಿ ಇಹಪರಗಳ ನೋಟಗಳು ಸಂಗಮಿಸುತ್ತವೆ. ಆದ್ದರಿಂದಲೇ ಗಾನ ಕಲೆ ಜನರ ನಿತ್ಯ ಜೀವನದಲ್ಲಿ ಹಾಸು ಹೊಕ್ಕಾಗಿದೆ. ಮಗು ನಿದ್ರೆ ಹೋಗಲು ಗಾನರೂಪದ ಮಧುರ ಜೋಗುಳವೇ ಬೇಕು ಮದುವೆ ಮುಂತಾದ ಶುಭ ಕಾರ್ಯಗಳಲ್ಲಿ ಸಂಗೀತದ ಹಿನ್ನೆಲೆ ಅಗತ್ಯವಾಗಿದೆ. ಸಕಲ ಪೂಜಾಕಾರ್ಯಗಳಲ್ಲಿ ಭಗವಂತನ ಸಂತುಷ್ಟತೆಗೆ ಸಂಗೀತ ಸೇವೆ ಬೇಕಾಗಿದೆ. ಹೀಗೆ ಭಾರತೀಯರ ಸಮಾಜದಲ್ಲಿ ಸಂಗೀತವಿಲ್ಲದ ಸಮುದಾಯಗಳಿಲ್ಲ, ಸಮಾರಂಭಗಳಿಲ್ಲ, ಹಳ್ಳಿಗಳಲ್ಲಿ ಹೊಲ ಉಳುವಾಗ, ಕಾಳು ಬಿಡಿಸುವಾಗ, ಬಂಡಿ ಹೊಡೆಯುವಾಗ, ರಾಗಿ ಬೀಸುವಾಗ, ದೋಣಿಯಲ್ಲಿ ನದಿ ದಾಟುವಾಗ, ಜಾತ್ರೆ ನಡೆಯುವಾಗ ಹೀಗೆ ಹಲವು ಸನ್ನಿವೇಶಗಳಲ್ಲಿ ಸಂಗೀತ ದೇಹ ಶ್ರಮ ಪರಿಹರಿಸಿ ಚಿತ್ತಕ್ಕೆ ಆನಂದ ಮತ್ತು ಶಾಂತಿಗಳನ್ನೊದಗಿಸಿ ಮುಂದಿನ ಕೆಲಸಕ್ಕೆ ಚೈತನ್ಯ ನೀಡುತ್ತದೆ. ಆಧುನಿಕ ಯುಗದ ವೈದ್ಯಕೀಯ ರಂಗದಲ್ಲಿ ಸಂಗೀತ ಚಿಕಿತ್ಸೆ ಪ್ರಯೋಗದಲ್ಲಿದೆ. ಇದು ಸಂಗೀತದ ಲೌಕಿಕ ಪ್ರಯೋಜನವಾದರೆ ನಾದೋಪಾಸನೆಯಿಂದ ಜೀವನ್ಮುಕ್ತಿ ಪಡೆಯಲು ಜನತೆಯನ್ನು ಸನ್ಮಾರ್ಗಿಗಳಾಗಲು ಅನುಸರಿಸುವ ವಿಧಾನವು ಅಲೌಕಿಕವಾದುದು.

ಯಾವುದರ ನಿಷ್ಠಾಪೂರಕ ಅಧ್ಯಯನ ಮನುಷ್ಯನಿಗೆ ದೇವರು ಅವನ ಅಪಾರ ಮಹಿಮೆ ಮತ್ತು ಶಕ್ತಿ, ಪ್ರಪಂಚಕ್ಕೂ, ನಿಸರ್ಗಕ್ಕೂ ಇರುವ ನಿಕಟ ಸಂಬಂಧ ಪ್ರಪಂಚದಲ್ಲಿ ಸ್ಥಾನ ಮತ್ತು ಕರ್ತವ್ಯಗಳ ಕುರಿತು ಅರಿವನ್ನು ಉಂಟು ಮಾಡುವದೊ ಅದೇ ನಿಜವಾದ ವಿದ್ಯೆಯೆಂದು ನಮ್ಮ ಪ್ರಾಚೀನರು ತೋರಿಸಿದ್ದಾರೆ. ಈ ಮಹತ್ತರ ಅರಿವನ್ನುಂಟು ಮಾಡುವ ಶಕ್ತಿ ಸಂಗೀತಕ್ಕಿದೆ. ಆದ್ದರಿಂದ ಸಂಗೀತವು ವಿಜ್ಞಾನವು ಹೌದು ಕಲೆಯೂ ಹೌದು. ಈ ಗುಣಗಳಿಂದಾಗಿ ಲಲಿತಕಲೆಗಳಲ್ಲಿ ಅದಕ್ಕೆ ಅಗ್ರಸ್ಥಾನ ದೊರೆಯುತ್ತದೆ.

---

೧. ಸಂಗೀತ ಸಂವಾದ : ಭಾಸ್ಕರ ಚಂದಾವರಕರ್, ಪುಟ-೧೦

## ೧.೨. ಸಮಸ್ಯೆ

**ಕುಂದಗೋಳ ಪರಿಸರದ ಹಿಂದುಸ್ತಾನಿ ಸಂಗೀತಗಾರರು- ಜೀವನ ವೃತ್ತಾಂತ**

ಅ. ಜೀವನ ವೃತ್ತಾಂತ

ಬ. ಘರಾನಾಗಳ ವೈಶಿಷ್ಟ್ಯ

## ೧.೩. ಅಧ್ಯಯನದ ಉದ್ದೇಶ ಮತ್ತು ಮಹತ್ವ

ಪರಿಪೂರ್ಣತೆಯ ಹಾಗೂ ನಿಸರ್ಗದಲ್ಲಿರುವ ಕಲಾ ನೈಪುಣ್ಯತೆಯ ಅರಿವನ್ನುಂಟು ಮಾಡುವುದೇ ಲಲಿತ ಕಲೆಗಳ ಗುರಿಯಾಗಿದೆ. ಕಲಾವಿದ ಈ ತನ್ನ ಪ್ರಯತ್ನದಲ್ಲಿ ಭಾವ ಜೀವಿಯಾಗಿ ಆತ್ಮ ವಿಕಾಸ ಹೊಂದಿ ಕೃತಿಯಲ್ಲಿ ತನ್ನ ಭಾವ ಲಹರಿಯ ಮುದ್ರೆಯನ್ನು ಒತ್ತಿರುತ್ತಾನೆ. ಈ ಪ್ರಯತ್ನದ ಫಲಿತಾಂಶವೇ ಅನಾದಿಕಾಲದಿಂದ ಕಾಲಕಾಲಕ್ಕೂ ನಮಗೆ ಕಂಡು ಬಂದಿರುವ ಗುಡಿ ಗೋಪುರಗಳು, ಶಿಲ್ಪ ಕಲಾಕೃತಿಗಳು ಮತ್ತು ಸಂಗೀತ ಕೃತಿಗಳು.

ಸಂಗೀತ ತನ್ನ ಸ್ವರೂಪದಲ್ಲಿ ಕಾಲಾತೀತ ಕಲೆಯಾದರೂ ಅದರ ಸ್ಥಿತಿ ಮತ್ತು ಸಾಧ್ಯತೆಯಲ್ಲಿ ಮನುಷ್ಯನ ವರ್ತಮಾನ ಕ್ಷಣದ ರಸಾನುಭವವೂ ಹೌದು. ಕಾಲ ನಮ್ಮೊಳಗೆ ಇರುವ ಜೈವಿಕ ಗಡಿಯಾರವಾಗಿದೆ. ಜನನ, ಮರಣ ಬೆಳವಣಿಗೆ, ಹಸಿವು, ಬಾಯಾರಿಕೆ ಮುಂತಾದ ಪ್ರಕೃತಿ ಸಹಜ ಕ್ರಿಯೆಗಳು ಜೈವಿಕ ಕಾಲದ ಉದಾಹರಣೆಗಳು. ಇನ್ನೊಂದು ಭೌತಿಕ ಕಾಲ ಸೂರ್ಯನ ಸುತ್ತ ಭೂಮಿ ತಿರುಗುವುದು, ಕಾಲವನ್ನು ಸೃಷ್ಟಿಸುವ ಸೂರ್ಯ ಇಡೀ ವಿಶ್ವವೇ ಚಲಿಸುತ್ತಿದೆ ಎಂಬ ಭ್ರಮೆಯನ್ನು ಮೂಡಿಸುವ ಆಕಾಶಕಾಯಗಳ ಪರಿಭ್ರಮಣ, ಬೀಜ, ಸಸಿ, ಮರ, ಹೂವು, ಹಣ್ಣು ರೂಪಾಂತರಗಳು. ಮೂರನೆಯದು ಮನೋಕಾವ್ಯ ಕ್ಷಣ ಒಂದು ಯುಗವಾಗಿ ಯುಗವೊಂದು ಕ್ಷಣವಾಗಿ ಎಂಬಂತ ಮಾತುಗಳು ಮನೋಕಾಲಕ್ಕೆ ಸೇರುತ್ತವೆ. ನಮ್ಮ ಚಿತ್ತಾಕಾರದಲ್ಲಿ ಕಾಲದೇಶಗಳನ್ನು ಏಕತ್ರ ಹಿಡಿಯುವ ಪರಮ ಶಕ್ತಿ ಸಂಗೀತಕ್ಕಿದೆ. ಮನುಷ್ಯನನ್ನು ಸಂಗೀತದ ಮೂಲಕ ಕಾಲದಲ್ಲಿ ಜೀವಂತ ಘಟಕವನ್ನಾಗಿಯೂ ಸಾಮಾಜಿಕ ಮತ್ತು ಚಾರಿತ್ರಿಕ ಘಟನೆಯನ್ನಾಗಿಯೂ ವಿವರಿಸಬಹುದು. ಸಮಾಜದ ಸ್ವಾಸ್ಥ್ಯವನ್ನು ಪರೀಕ್ಷಿಸಲು ಸಂಗೀತದ ನಾಡಿ ಮಿಡಿತವೇ ಸಾಕು. ಪುಟ್ಟ ಪುಟ್ಟ ತೊರೆಗಳು ಎಲ್ಲೋ ಅಜ್ಞಾತ ಸ್ಥಳದಲ್ಲಿ ಹುಟ್ಟಿ ತವಕದಲ್ಲಿ ಸಮುದ್ರ ಸೇರಲು ಧಾವಿಸುವಂತೆ ಆಕಾಶವನ್ನು ವ್ಯಾಪಿಸುವ ಮೋಡ ತನ್ನ ಓಟದ ನಡುವೆ ಯಾವುದೋ ಒಂದು ಪ್ರದೇಶದಲ್ಲಿ ಮಳೆಯಾಗಿ ಸುರಿಯುವಂತೆ ಸಂಗೀತವೂ ಒಂದು ಜನಪದದ ಬೊಗಸೆಯಲ್ಲಿ ಉಕ್ಕಬಲ್ಲದು. ವೃತ್ತಾಕಾರದಲ್ಲಿ ಪಸರಿಸುವ ಶಬ್ದ ತರಂಗಗಳಂತೆ ಸಂಗೀತ ತನ್ನ ಜನನ ಬಿಂದುವಿನಲ್ಲೇ ಒಂದು ಕೇಂದ್ರವನ್ನು ಸೃಷ್ಟಿಸಿಕೊಳ್ಳಬಹುದು. ಅಥವಾ ತನ್ನ ಕೇಂದ್ರವನ್ನು ಲಯಗೊಳಿಸಿಕೊಂಡು ಸರ್ವಂತರ್ಯಾಮಿಯಾಗಿ ಬಿಡಬಲ್ಲದು.

''ಸಂಗೀತದ ಆವರ್ತನಶೀಲ ಗುಣ ಭೌತಕಾಲವನ್ನು ಪ್ರತಿನಿಧಿಸಿದರೆ ಜೈವಿಕ ಹಾಗೂ ಮನೋಕಾಲವನ್ನು ಸಂಗೀತದ ಮಾಧುರ್ಯ ಪ್ರತಿನಿಧಿಸುತ್ತದೆ. ಸಂಗೀತದ ಈ ಎರಡೂ ಗುಣಗಳು ಸಂಗೀತದ ಒಡನಾಟವಿರುವ ಪ್ರದೇಶವೊಂದರ ಜನರ ಜೀವನದಲ್ಲಿ ಹೇಗೆ ಅಂತರ್ಗತಗೊಂಡಿವೆ ಎಂಬುದು ಕುತೂಹಲಕರವಾದ ಸಂಗತಿಯಾಗಿದೆ''[೨] ಎಂದು ಚಂದಾವರಕರ್ ಅಭಿಪ್ರಾಯಪಡುತ್ತಾರೆ.

ಸಾವಿರಾರು ವರ್ಷಗಳ ಇತಿಹಾಸವಿರುವ ಸಂಗೀತದ ಮಹಾನ್ ಪರಂಪರೆಯನ್ನು ಸಮಾನ ಮನಸ್ಕರ ಸಮುದಾಯ ಉಪಾಸನೆ ಮಾಡುವ ಕ್ರಮ ವಿಶಿಷ್ಟವಾಗಿರುತ್ತದೆ. ಸಮುದಾಯದ ಧಾರ್ಮಿಕ ನಂಬಿಕೆಗಳನ್ನು ಸ್ಥಾವರಗೊಳಿಸಿರುವ ಆ ಪ್ರದೇಶದ ಶಿಲ್ಪಗಳು ಕಾಲಕಾಲಕ್ಕೆ ಬಂದು ಹೋಗುವ ಹಬ್ಬಗಳ ನಡಿಗೆಯನ್ನು ಕೈ ಹಿಡಿದು ನಲುಮೆಯ ಬೆರಗಿನಿಂದ ಮುನ್ನಡೆಸುವ ಸಂಗೀತ ಎಬ್ಬಿಸುವ ಚೈತನ್ಯದ ಅಲೆಗಳು ಒಂದು ಪರಿಸರವನ್ನು ಹೇಗೆ ಅಲೌಕಿಕ ಕಾಂತಿಯಿಂದ ಬೆಳಗುತ್ತದೆ ಎಂದು ಅನುಭವಿಸುವದು ಒಂದು ಧಾರ್ಮಿಕ ಪವಿತ್ರ ಕಾರ್ಯವಾದೀತು.

ಶ್ರೇಣೀಕೃತ ಸಮಾಜದ ಹಲವು ಜಾತಿ ಮತ ವರ್ಗಗಳ ನಡುವಿರುವ ಚರಿತ್ರೆಯ ವೈಷಮ್ಯ ಹಿಂಸೆಯ ಗಾಯಕ್ಕೆ ಸಾಮರಸ್ಯದ ಶುಶ್ರೂಷೆ ನೀಡುವ ಸಂಗೀತದ ಮಾತೃ ಸ್ವರೂಪವನ್ನು ಅರಿಯುವುದೇ ಒಂದು ರೋಚಕ ಸತ್ಯವಾಗಿದೆ.

ಆಸ್ತಿ ಮತ್ತು ಅಧಿಕಾರದ ಹಸಿವಿನಿಂದ ಎಲ್ಲವನ್ನು ತನ್ನ ಸ್ವಂತದೆಂಬ ಅಟ್ಟಹಾಸದಲ್ಲಿ ಮೆರೆಯುವ ಮನುಷ್ಯನ ಆಕ್ರಮಣಶೀಲ ಹಿಂಸಾತ್ಮಕ ಪ್ರವೃತ್ತಿಯನ್ನು ಮೃದುಗೊಳಿಸುವ ಮಾನವತೆಯತ್ತ ಕಣ್ತೆರಿಸಿ ಕರೆದೊಯ್ಯುವ ಸಂಗೀತದ ಅದ್ಭುತ ಪರಿವರ್ತನಶೀಲ ಗುಣದ ಶೋಧವು ಈ ಅಧ್ಯಯನದ ಗುರಿಗಳಲ್ಲಿ ಒಂದಾಗಿದೆ.

ಈ ಎಲ್ಲ ಸಂಗತಿಗಳು ಕುಂದಗೋಳ ಪರಿಸರದಲ್ಲಿ ಸಂಭವಿಸಿ ಸಂಗೀತ ಪರಂಪರೆಗೆ ಹೇಗೆ ಜೀವಶಕ್ತಿಯನ್ನು ತುಂಬಿದವು? ಜಮಖಂಡಿ ಸಂಸ್ಥಾನಕ್ಕೆ ಸೇರಿದ ಕುಂದಗೋಳದ ದಣಿಗಳೂ ಜಮೀನುದಾರರೂ ಆಗಿದ್ದ ಶ್ರೀರಂಗನಗೌಡರ ಸಂಗೀತದ ಕುರಿತಾದ ಅಭಿರುಚಿ ಅವರ ಸಿರಿತನದ ಬಹುದೊಡ್ಡ ಪಾಲನ್ನು ಹೇಗೆ ಸೆಳೆದುಕೊಂಡಿತು? ಈ ಪ್ರಶ್ನೆಗಳು ಪ್ರಸ್ತುತ ಅಧ್ಯಯನದ ಮುಖ್ಯ ಘಟ್ಟದಲ್ಲಿ ಹೊಸ ನೋಟವನ್ನು ನೀಡಬಲ್ಲವು. ಅಂದಿನ ಆಡಳಿತ ಭಾಷೆಯಾಗಿದ್ದ ಮರಾಠಿ ಸಂಪರ್ಕದಿಂದ ಮಹಾರಾಷ್ಟ್ರ ಮತ್ತು ಕರ್ನಾಟಕದ ನಡುವೆ ಸಾಂಸ್ಕೃತಿಕ ಕೊಡಕೊಳ್ಳುವಿಕೆಗೆ ಸಂಗೀತವೇ ರಹದಾರಿಯನ್ನು ತೆರೆಯಿತು. ಭಾರತವನ್ನು ಪ್ರವೇಶಿಸಿದ ಆಧುನಿಕತೆಯನ್ನು ಸಂಗೀತವು ವಿಶಿಷ್ಟವಾದ ರೀತಿಯಲ್ಲಿ ಎದುರಿಸಿದೆ. ಆಧುನಿಕತೆಯ ಸಂಕೇತವಾಗಿರುವ ಉಗಿಬಂಡಿಯು ಅಬ್ದುಲ್‌ಕರೀಮ್‌ಖಾನರಂಥ ಸಂಗೀತಗಾರರನ್ನು ಕುಂದಗೋಳಕ್ಕೆ ಕರೆಯಿಸಲು ಪರೋಕ್ಷವಾಗಿ ಸಹಾಯ ಮಾಡಿದ್ದು ಹಿಂದುಸ್ತಾನಿ ಸಂಗೀತದ ಇತಿಹಾಸದಲ್ಲಿ ಒಂದು ಮೈಲುಗಲ್ಲಾಗಿದೆ. ಮೈಸೂರಿನ ನಾಲ್ವಡಿ ಕೃಷ್ಣರಾಜ ಒಡೆಯರು ತಮ್ಮ ಆಸ್ಥಾನದ ಸಂಗೀತೋತ್ಸವಕ್ಕೆ ಉತ್ತರದ ಕಡೆಯಿಂದ ಪ್ರಸಿದ್ಧ ಗಾಯಕರನ್ನು

೨. ಸಂಗೀತ ಸಂವಾದ : ಭಾಸ್ಕರ ಚಂದಾವರಕರ್, ಪುಟ-೧೪

ಆಮಂತ್ರಿಸುತ್ತಿದ್ದರು. ಹೀಗೆ ಆಸ್ಥಾನದತ್ತ ಮುಖವಾಗಿ ಹೊರಟ ಸಂಗೀತ ದಿಗ್ಗಜರು ಕುಂದಗೋಳ ಪರಿಸರವನ್ನು ತಮ್ಮ ಹಾಡುಗಾರಿಕೆಯಿಂದ ಬೆಳದಿಂಗಳಾಗಿ ತೊಯ್ದದ್ದು ಕಲಾಲೋಕದ ಒಂದು ಪುಣ್ಯವಾಗಿದೆ.

ಕುಂದಗೋಳ ಪರಿಸರದ ಜನರನ್ನು ಜಾತಿ ಮತಗಳ ಗಡಿ ದಾಟಿಸಿ ಭಾವೈಕ್ಯತೆಯನ್ನು ಸಾಧಿಸುವಲ್ಲಿ ಸಂಗೀತದ ಪಾತ್ರ ಗಮನಾರ್ಹವಾಗಿದೆ. ಶಿಶುನಾಳ ಶರೀಫರು ಇದಕ್ಕೆ ಜ್ವಲಂತ ಉದಾಹರಣೆ. ರಂಗಭೂಮಿ ಮತ್ತು ಸಂಗೀತದ ನಡುವಿನ ದಾಂಪತ್ಯ ಸಂಬಂಧಕ್ಕೆ ಕುಂದಗೋಳ ಹೊರತಾಗಿಲ್ಲ.ಸಂಗೀತ ಪ್ರಧಾನವಾದ ನಾಟಕಗಳು ಹಾಡುಗಾರರಿಗೆ ಆರ್ಥಿಕ ಆಶ್ರಯವನ್ನು, ಶ್ರೋತೃ ಮತ್ತು ಪ್ರೇಕ್ಷಕರನ್ನು ಒದಗಿಸಿರುವುದು ಚಾರಿತ್ರಿಕ ಸತ್ಯ.

ಭಾರತೀಯ ಸಂಸ್ಕೃತಿಯಲ್ಲಿ ಧರ್ಮ ಮತ್ತು ಸಂಗೀತಗಳಿಗೆ ಗಾಢ ಸಂಬಂಧವಿರುವ ಸಂಗತಿ ಈಗಲೂ ಸತ್ಯವೆ. ಕುಂದಗೋಳ ಪರಿಸರದ ವಾಸ್ತುಶಿಲ್ಪಗಳು ಹೆಪ್ಪುಗಟ್ಟಿದ ಸಂಗೀತದಂತಿವೆ. ಕಾಲಾಂತರದಿಂದ ಜನರಲ್ಲಿ ಕಲಾಭಿರುಚಿಯನ್ನು ಸಂರಕ್ಷಿಸಿದ ಈ ಶಿಲ್ಪಗಳು ಸಂಗೀತಾರಾಧನೆಯನ್ನು ಪೋಷಿಸಿಕೊಂಡು ಬಂದಿವೆ. ಧಾರ್ಮಿಕ ವ್ರತವಾಗಿ ಭಕ್ತಿಯ ಅಭಿವ್ಯಕ್ತಿಯಾಗಿ ಸಂಗೀತ ಜನರನ್ನು ಒಂದುಗೂಡಿಸಿದ ಸಾಕ್ಷಿಯಾಗಿ ಈ ಪರಿಸರದಲ್ಲಿ ನಿಂತಿದೆ. ಉತ್ತರದ ಸಂಗೀತ ಘರಾಣೆಗಳ ವಿಸ್ತರಣೆ ಅವುಗಳ ವೈವಿಧ್ಯತೆಯ ಆವಿಷ್ಕಾರ ಆ ಮೂಲಕ ಬೆಸೆದುಕೊಂಡ ಗುರು ಶಿಷ್ಯರ ಸಂಬಂಧ ಈ ಪರಿಸರದಲ್ಲಿ ಒಂದು ಲೀಲೆಯಂತೆ ಸಂಬವಿಸಿರುವದನ್ನು ಗುರುತಿಸಬಹುದಾಗಿದೆ. ಹೀಗೆ ಸಂಗೀತ ಪರಂಪರೆಯ ಅಂತಃಸತ್ವ ಜನ ಸಮೂದಾಯದ ಹಲವು ಮೂಲಾಸಕ್ತಿಗಳಿಂದ ಸಮೃದ್ಧಗೊಂಡು ಮಾನವೀಯ ಆಕೃತಿಯನ್ನು ಪಡೆದ ಬಗೆಯನ್ನು ಕಂಡುಕೊಳ್ಳುವುದು ಯಾವುದೇ ಸಂಸ್ಕೃತಿಯ ಜೀವಂತಿಕೆಗೆ ಸಾಕ್ಷಿಯಾಗಿದೆ.

## ೧.೪. ಅಧ್ಯಯನದ ವ್ಯಾಪ್ತಿ

ಹಿಂದುಸ್ತಾನಿ ಸಂಗೀತ ಪರಂಪರೆಯ ರಸ ಯಾತ್ರೆಯಲ್ಲಿ ಹಲವು ಹಾಡುಗಾರರು ಸಮಾಗಮಗೊಂಡು ಚೈತನ್ಯದ ಅಲೆ ಎಬ್ಬಿಸಿದ ಕುಂದಗೋಳ ಪರಿಸರವನ್ನು ವಿಶ್ಲೇಷಿಸುವದು.

ಕುಂದಗೋಳ ಪರಿಸರ : ಕುಂದಗೋಳ ತಾಲ್ಲೂಕಿನ ಸುತ್ತಲಿನ ಪ್ರದೇಶಗಳಾದ ಹುಬ್ಬಳ್ಳಿ, ಧಾರವಾಡ, ಗದಗ, ಶಿಗ್ಗಾಂವ, ಶಿರಹಟ್ಟಿ, ನವಲಗುಂದ ಮತ್ತು ಕಲಘಟಗಿ ಈ ಪರಿಸರದ ಸಂಗೀತ ವ್ಯಾಪ್ತಿಯಾಗಿದೆ.

## ೧.೫. ಅಧ್ಯಯನದ ವಿಧಾನ

ಪ್ರಸ್ತುತ ಅಧ್ಯಯನಕ್ಕೆ ಈ ಕೆಳಗಿನ ವಿಧಾನವನ್ನು ಬಳಸಿಕೊಳ್ಳಲಾಗಿದೆ.

೧. ಆಕರ ಗ್ರಂಥಗಳು ೨. ಸಂದರ್ಶನ, ೩. ವಾಸ್ತುಶಿಲ್ಪಗಳ ಅಧ್ಯಯನ, ೪. ಮುದ್ರಿತ ಅವತರಣಿಕೆಗಳು, ೫. ಭಾವಚಿತ್ರಗಳು, ೬. ಪತ್ರಿಕೆಗಳು.



# ಅಧ್ಯಾಯ–ಎರಡು
# ಹಿಂದುಸ್ತಾನಿ ಸಂಗೀತ ಪರಂಪರೆಯ ಐತಿಹಾಸಿಕ ನೋಟ
## (ಪ್ರಸ್ತುತ ಅಧ್ಯಯನಕ್ಕೆ ಸಂಬಂಧಿಸಿದ ಸಾಹಿತ್ಯದ ಪರಾಮರ್ಶೆ)

---

### ೨.೧. ಸಂಗೀತದ ಹುಟ್ಟು

ಸಂಗೀತದ ಹುಟ್ಟಿನ ಬಗೆಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಈ ಅಭಿಪ್ರಾಯಗಳು ಬಹುಶಃ ದಂತ ಕಥೆಗಳನ್ನೂ, ಧಾರ್ಮಿಕ ಭಾವನೆಗಳನ್ನೂ ಅವಲಂಭಿಸಿದ್ದುದು ಕಂಡುಬರುತ್ತದೆ. ಈ ಬಗೆಗೆ ಸಂಪೂರ್ಣವಾಗಿ ಪ್ರಾಮಾಣಿಕವಾದ ಐತಿಹಾಸಿಕ ಆಧಾರಗಳು ಹಾಗೂ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯಗಳು ಮನನೀಯವಾಗಿವೆ.

### ೨.೨. ಭಾರತೀಯ ವಿದ್ವಾಂಸರ ಅಭಿಪ್ರಾಯ

ಸಾಮಾನ್ಯವಾಗಿ ಎಲ್ಲ ಭಾರತೀಯ ವಿದ್ವಾಂಸರೂ ಹಿಂದೂ ಧರ್ಮದ ಮೂಲ ಗ್ರಂಥಗಳಾದ ವೇದ ಹಾಗೂ ಪುರಾಣಗಳನ್ನೇ ಆಧಾರವಾಗಿಟ್ಟುಕೊಂಡು ಬೇರೆ ಬೇರೆ ದೃಷ್ಟಿಕೋನದಿಂದ ಸಂಗೀತದ ಹುಟ್ಟಿನ ಬಗ್ಗೆ ಚರ್ಚಿಸಿದ್ದಾರೆ.

ಆದಿ ವಿಷ್ಣು ತನ್ನ ಮಗನಾದ ಬ್ರಹ್ಮದೇವನಿಗೆ ಎಲ್ಲರಿಗಿಂತ ಮೊದಲು ಸಂಗೀತ ವಿದ್ಯೆಯನ್ನು ಕಲಿಸಿದನು. ಅನಂತರ ಬ್ರಹ್ಮನು ಈ ವಿದ್ಯೆಯನ್ನು ಶಿವನಿಗೂ, ವೀಣಾ ಪುಸ್ತಕಪಾಣಿ ಸರಸ್ವತಿಗೂ ಹೇಳಿಕೊಟ್ಟನು. ಸರಸ್ವತಿಯು ನಾರದನಿಗೂ ಈ ಸಂಗೀತ ವಿದ್ಯೆಯನ್ನು ಕಲಿಸಿದಳು. ನಾರದ ಮುನಿಯಿಂದ ತುಂಬರು, ಗಂಧರ್ವರು, ಯಕ್ಷ, ಕಿನ್ನರು ಹಾಗೂ ಅಪ್ಸರೆಯರಿಗೆ ಈ ವಿದ್ಯೆ ಲಭಿಸಿತು. ಸ್ವರ್ಗಲೋಕದಿಂದ ಭರತ, ಹನುಮಾನ, ನಾರದ ಮುಂತಾದ ಋಷಿಗಳು ಈ ಕಲೆಯ ಪ್ರಸಾರಾರ್ಥವಾಗಿ ಭೂಮಿಯ ಮೇಲೆ ಅವತರಿಸಿದರೆಂದು ಹೇಳಲಾಗುತ್ತಿದೆ.

### ೨.೩. ಸಂಗೀತದ ಉತ್ಪತ್ತಿಯ ಬಗೆಗೆ ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯ

ಈಜಿಪ್ತಿನ ಸಂಸ್ಕೃತಿಗಳಿಗೆ ಮೂಲವಾದದ್ದೆಂದು ಕೆಲವು ಪಾಶ್ಚಾತ್ಯ ವಿದ್ವಾಂಸರ ಅಭಿಪ್ರಾಯವಿದೆ. ಕ್ರಿ.ಪೂ. ೩೦೦೦ ವರ್ಷಗಳಷ್ಟು ಪ್ರಾಚೀನವಾದ ಈಜಿಪ್ತ ಸಂಸ್ಕೃತಿಯೇ ವಿಶ್ವಕ್ಕೆ ಸಂಗೀತದ ಕೊಡುಗೆಯನ್ನಿತ್ತೆಂದು ಅವರ ಅಭಿಪ್ರಾಯ. ಆದರೆ ಈ ಸಂಸ್ಕೃತಿಗಿಂತ ಮೊದಲೇ ಭಾರತದಲ್ಲಿಯ ಸಿಂಧೂನದಿ ಸಂಸ್ಕೃತಿಯಲ್ಲಿ ಸಂಗೀತದ ಆವಿಷ್ಕಾರವಾಗಿತ್ತೆಂಬುದು ಗಮನಾರ್ಹ ಅಂಶವಾಗಿದೆ. ಭಾರತದಲ್ಲಿ ಇತಿಹಾಸ ಸಂಶೋಧನಾ ಇಲಾಖೆಯವರಿಗೆ ಉತ್ಖನನದಲ್ಲಿ ಕೆಲವು ಮೂರ್ತಿಗಳು ಹಾಗೂ ಶಿಲಾಲೇಖಗಳು ದೊರೆತಿವೆ. ಇದರಿಂದಾಗಿ ಭಾರತದಲ್ಲಿ ಕ್ರಿ.ಪೂ. ೪೦೦೦ ವರ್ಷಗಳ ಹಿಂದೆಯೇ ಸಂಗೀತವಿತ್ತು ಎನ್ನುವದರ ಬಗೆಗೆ ತಿಳಿದು ಬರುತ್ತದೆ. ಸುಪ್ರಸಿದ್ಧ ಪಾಶ್ಚಾತ್ಯ

ಇತಿಹಾಸಕಾರರಾದ 'ಬಂಟಾಡೋಲ್' ಇವರು ಬರೆದ 'ದಿ ಯುನಿವರ್ಸಲ್ ಮ್ಯೂಸಿಕ್' ಎಂಬ ಪುಸ್ತಕದಲ್ಲಿ ಸಂಗೀತದ ಉತ್ಪತ್ತಿಯ ಬಗೆಗೆ ಕೆಲವು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ''ಸಂಗೀತದ ಉತ್ಪತ್ತಿ 'ಇಸಾಮಸೀಹ'ನಿಂದಲೇ ಆಯಿತು''[೩] ಎಂದು ಅವರ ಹೇಳಿಕೆ. ಇಸಾಮಸೀಹನ ಪೂರ್ವದಲ್ಲಿ ಯಾವದೇ ರೀತಿಯ ಸೃಷ್ಟಿ, ಸಂಸ್ಕೃತಿ ಹಾಗೂ ಸಂಗೀತವಿರಲಿಲ್ಲವಂತೆ. ಇಸಾಮಸೀಹನು ವಿಶ್ವಕ್ಕೆ ಸಂಗೀತದ ಕೊಡುಗೆ ಕೊಡದಿದ್ದಲ್ಲಿ ಈಗ ವಿಶ್ವದಲ್ಲಿ ಸಂಗೀತವೇ ಇರುತ್ತಿರಲಿಲ್ಲವಂತೆ.

ಒಮ್ಮೆ ಇಸಾಮಸೀಹ ಅರಣ್ಯದಲ್ಲಿ ತಿರುಗಾಡುತ್ತಿರುವಾಗ ದಣಿದು ಒಂದು ಗಿಡದ ಕೆಳಗೆ ವಿಶ್ರಾಂತಿ ತೆಗೆದುಕೊಳ್ಳುತ್ತಿದ್ದನು. ಬಹಳ ದಣಿದ ಕಾರಣ ಅವನಿಗೆ ಕೂಡಲೇ ನಿದ್ರೆ ಬಂದಿತು. ನಿದ್ರೆಯಿಂದ ಎಚ್ಚೆತ್ತಾಗ ಅವನಿಗೆ ಅತ್ಯಂತ ಮಧುರವಾದ ಒಂದು ಸ್ವರ ಕೇಳಿಬಂತು. ಅದನ್ನು ಅವನು ಈ ಮುಂಚೆ ಎಂದೂ ಕೇಳಿರಲಿಲ್ಲ. 'ಲಿಂಡಾ' ಎಂಬ ಪಕ್ಷಿ ಈ ಮಧುರ ಸ್ವರಾಲಾಪನೆ ಮಾಡುತ್ತಿತ್ತು. 'ಇಸಾಮಸೀಹನು' ಈ ಸ್ವರ ಗುಂಜನದಿಂದ ಆನಂದ ಭರಿತನಾಗಿ ಕುಣಿಯಲು ಪ್ರಾರಂಭಿಸಿದನು. ಈ ಪ್ರಕಾರ 'ಲಿಂಡಾ' ಪಕ್ಷಿಯ ಮೂಲಕ ಸಂಗೀತದ ಉತ್ಪತ್ತಿ ಹಾಗೂ ಇಸಾಮಸೀಹರಿಂದ ನೃತ್ಯದ ಆವಿಷ್ಕಾರವಾಯಿತೆಂದು ಹೇಳಲಾಗುತ್ತದೆ. ಅಲ್ಲದೇ ಇಸಾಮಸೀಹನು ಲಿಂಡಾಪಕ್ಷಿಯ ಸ್ವರಗಳನ್ನು ಅನುಕರಿಸಿ ವಿಶ್ವಕ್ಕೆ ಸಂಗೀತ ಸ್ವರಗಳ ಕಲ್ಪನೆ ಮಾಡಿ ಕೊಟ್ಟನೆಂದು ಹೇಳಲಾಗುತ್ತದೆ. ಮತ್ತೊಂದು ಫಾರಸಿ ದಂತ ಕಥೆಯಲ್ಲಿ 'ಹಜರತ್ ಮೂಸಾ ಪೈಗಂಬರರು' ಒಮ್ಮೆ ನಾವೆಯಲ್ಲಿ ಪ್ರಯಾಣ ಮಾಡುತ್ತಿದ್ದರು ಅವರಿಗೆ ಆಗ ಒಂದು ಕಲ್ಲು ಕಾಣಿಸಿತು. ಆ ಕ್ಷಣವೇ ಒಬ್ಬ ದೇವದೂತನು ಬಂದು ಆ ಕಲ್ಲನ್ನು ಯಾವಾಗಲೂ ಅವರ ಹತ್ತಿರವೇ ಇಟ್ಟುಕೊಳ್ಳಲು ತಿಳಿಸಿದನು. ಕೆಲಕಾಲದ ನಂತರ 'ಹಜರತ್ ಮೂಸಾ' ಕಾಡಿನಲ್ಲಿ ತಿರುಗಾಡುವಾಗ ಅತ್ಯಂತ ರಭಸದಿಂದ ಮಳೆ ಬೀಳಲು ಪ್ರಾರಂಭವಾಯಿತು. ಮಳೆಯ ಹನಿಗಳು ಅವರ ಬಳಿಯಲ್ಲಿದ್ದ ಕಲ್ಲಿನ ಮೇಲೆ ಬಿದ್ದು ಈ ಕಲ್ಲು ಏಳು ತುಂಡುಗಳಾಯಿತು. ಈ ಏಳು ತುಂಡುಗಳಿಂದ ಏಳು ಧ್ವನಿಗಳು ಉತ್ಪನ್ನವಾದವು. ಈ ಧ್ವನಿಗಳ ಆಧಾರದ ಮೇಲೆಯೇ ಸಂಗೀತದ ಜನನವಾಯಿತು ಎಂದು ಹೇಳಲಾಗಿದೆ.

ಪ್ರಸಿದ್ಧ ಸಂಗೀತಜ್ಞರಾದ 'ಕಾಹಿ ಮೋಲಾಫೋ' ಅವರು ''ನಾರಿಯ ಸೌಂದರ್ಯವೇ ಸಂಗೀತದ ಉಗಮ''[೪] ಎಂದು ಕಾರಣ ಹೇಳುತ್ತಾರೆ. ಇವರು 'ತಮ್ಮ ಸಂಗೀತದ ಜನನ ಹಾಗೂ ವಿಕಾಸದ ಕಥೆ' ಎನ್ನುವ ಗ್ರಂಥದಲ್ಲಿ ಹೀಗೆ ಹೇಳುತ್ತಾರೆ.

---

೩. ಭಾರತೀಯ ಸಂಗೀತ ಚರಿತ್ರೆ : ಡಾ. ಬಿ.ಡಿ.ಪಾಠಕ, ಪು-೩

೪. ಅದೇ, ಪುಟ-೨

''ಸೃಷ್ಟಿಯಲ್ಲಿ ಪ್ರಥಮವಾಗಿ ನಾರಿಯ ಜನನವಾದಾಗ ಅವಳ ಕಡೆಗೆ ಪುರುಷನು ಆಕರ್ಷಿತನಾಗಲಿಲ್ಲ. ತತ್ ಪರಿಣಾಮವಾಗಿ ಪೃಥ್ವಿಯ ಮೇಲೆ ಸಂತಾನೋತ್ಪತ್ತಿಯ ವಿಕಾಸಕ್ರಮದಲ್ಲಿ ಬಾಧೆಯುಂಟಾಯಿತು. ಇದನ್ನು ತಿಳಿದ ಸೃಷ್ಟಿಕರ್ತನು ನಾರಿಯನ್ನು ಸಂಗೀತದಿಂದ ಅಲಂಕರಿಸಿದನು ಅವಳು ಬಂದ ತಕ್ಷಣ ವಿಶ್ವವು ಅವಳ ಮೋಹಪಾಶದಲ್ಲಿ ಸಿಲುಕಿಕೊಂಡಿತು. ನಾರಿಯ ಸೌಂದರ್ಯದಿಂದ ಏಳು ಸ್ವರಗಳು ಉತ್ಪನ್ನವಾದವು ಈ ಪ್ರಕಾರ ನಾರಿಯಿಂದ ಸಂಗೀತದ ಉತ್ಪತ್ತಿಯಾಯಿತು.''[೫]

''ಪ್ಲೇಟೋ ಹಾಗೂ ಅರಿಸ್ಟಾಟಲ್''ರ ಅಭಿಪ್ರಾಯದಂತೆ ''ಮನುಷ್ಯ ಪ್ರಾಣಿಯಲ್ಲಿ ಬೇರೆ ಬೇರೆ ಮನೋಭಾವನೆಗಳ ಹುಟ್ಟುವಿಕೆಯೇ ಸಂಗೀತದ ಉಗಮವಾಗಿದೆ.''[೬]

ಸಂಗೀತವು ಮಾನವನ ಕಲ್ಪನಾಶಕ್ತಿ ಹಾಗೂ ಉತ್ಪಾದಕ ಶಕ್ತಿಯ ಕೊಡುಗೆಯಾಗಿದೆ. ಆದಿಮಾನವನು ಸಂಗೀತದ ಧ್ವನಿಯ ಮೂಲಕ ಭಾವನೆಗಳನ್ನು ವ್ಯಕ್ತಪಡಿಸುವ ಕಲೆಯಲ್ಲಿ ಪರಿಣಿತನಾಗಿರಲಿಲ್ಲ. ಅವನು ತನ್ನ ಮನೋಭಾವನೆಗಳನ್ನು ಸುಖ ಹಾಗೂ ದುಃಖದ ಅನುಭವಗಳನ್ನು ಮುಖವಿಕಾರದಿಂದಲೋ, ಹಸ್ತಾದಿ ಅಂಗಾಂಗಗಳ ಚಲನವಲನದಿಂದಲೊ ಅಭಿವ್ಯಕ್ತಪಡಿಸುತ್ತಿದ್ದನು. ಕಾಲಕಳೆದಂತೆ ಅವನಿಗೆ ವಸ್ತುಗಳ ಅವಶ್ಯಕತೆಯುಂಟಾಯಿತು. ನೀರಡಿಕೆಯಾದಾಗ ನದಿ ಹಳ್ಳಗಳ ನೀರು ಕುಡಿದು, ಹಸಿವೆಯಾದಾಗ ಹಣ್ಣು ಹಂಪಲಗಳನ್ನು ತಿಂದು ಜೀವಿಸುತ್ತಿದ್ದನು. ನಿಸರ್ಗದ ಬಣ್ಣ ಬಣ್ಣದ ವಾತಾವರಣದಲ್ಲಿ ಪಶು ಪಕ್ಷಿಗಳ ಧ್ವನಿಗಳು ಅವನ ಮನಸ್ಸಿನಲ್ಲಿ ಆಶ್ಚರ್ಯಜನಕ ಪ್ರವೃತ್ತಿಗಳನ್ನು ನಿರ್ಮಿಸುತ್ತಿದ್ದವು.

ಮೇಘ ಗರ್ಜನೆ, ಗಿಡಗಳ ಸಪ್ಪಳ, ಕೋಗಿಲೆ ಹಾಗೂ ನವಿಲಿನಂತಹ ಪಕ್ಷಿಗಳ ಮಧುರಧ್ವನಿ ಇತ್ಯಾದಿಗಳನ್ನು ಕೇಳಿದಾಗ ಅವನು ತನ್ನ ಜೀವನದ ಕಷ್ಟಗಳನ್ನು ಮರೆಯುತ್ತಿದ್ದನು. ನಿಸರ್ಗ ನಿರ್ಮಿತ ಅನೇಕ ಮಧುರ ಧ್ವನಿಗಳನ್ನು ಕೇಳಿದ ಅವನ ಮನಸ್ಸಿನಲ್ಲಿ ಅಂತಹ ಧ್ವನಿಗಳನ್ನೇ ಅನುಕರಣದಿಂದ ಉತ್ಪನ್ನ ಮಾಡಬೇಕೆಂಬ ಆಶೆಯುಂಟಾಯಿತು. ಕಾಲಕ್ರಮೇಣ ಅವನಿಗೆ ಈ ಪ್ರಕೃತಿಯ ಬೇರೆ ಬೇರೆ ಸ್ವರಗಳ ಅನುಕರಣೆ ಮಾಡುವಲ್ಲಿ ಯಶಸ್ಸು ದೊರಕಿತು. ಮುಂದೆ ಅವನು ತನ್ನ ಕಲ್ಪನಾ ಶಕ್ತಿಯ ಬಲದಿಂದ ಅನೇಕ ಮಧುರ ಸ್ವರಗಳನ್ನು ಸೃಷ್ಟಿ ಮಾಡಿರಬಹುದು. ಇದೇ ಸಂಗೀತದ ಹಿನ್ನೆಲೆಯಾಗಿರಬಹುದು. ಈಶ್ವರ ಸಾಕ್ಷಾತ್ಕಾರಕ್ಕೆ ಸಾಧನವಾಗಬಲ್ಲ ಈ ನಿಯಮಬದ್ಧ ಸಂಗೀತವನ್ನೇ ಭರತ ಮುನಿಯು ಮಾರ್ಗ ಅಥವಾ ಮಾರ್ಗ ಸಂಗೀತವೆಂದು ಕರೆದನು.

---

೫. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೩

೬. ಅದೇ, ಪುಟ-೪

## ೨.೪. ವೇದಪೂರ್ವಕಾಲದಲ್ಲಿ ಸಂಗೀತ

ವೇದಪೂರ್ವಕಾಲದ ಭಾರತದ ಜನರಿಗೆ ಸಂಗೀತದ ಜ್ಞಾನವು ಎಷ್ಟರಮಟ್ಟಿಗಿತ್ತು ಎನ್ನುವುದರ ಬಗೆಗೆ ಪಾಶ್ಚಾತ್ಯ ವಿದ್ವಾಂಸರಾದ ಮಿಸ್ಟರ್ ಗಲ್ಬಿಲ್ ಮಿಲ್ ಇವರು ತಮ್ಮ 'ದಿ ಹಿಸ್ಟರಿ ಆಫ್ ಅರ್ಲೀ ಮ್ಯೂಸಿಕ್ ಆಫ್ ಇಂಡಿಯಾ' ಎಂಬ ಗ್ರಂಥದಲ್ಲಿ ಈ ಪ್ರಕಾರ ಅಭಿಪ್ರಾಯಪಟ್ಟಿದ್ದಾರೆ. ''ಶಿಲಾಯುಗದ ಮಾನವನಿಗೆ ಸಂಗೀತದ ಜ್ಞಾನವು ಸಾಕಷ್ಟು ಇತ್ತು. 'ಅಗ್ಸಾ' ಎಂಬ ಪಾಷಾಣದಿಂದ ಅವನು ವಾದ್ಯ ನಿರ್ಮಿಸಿದನು. ಸಂಗೀತದ ಪ್ರಯೋಗವನ್ನು ವಿಶೇಷವಾಗಿ ಮಾನವನು ಬೇಟೆಯಾಡುವಾಗ, ಮೀನು ಹಿಡಿಯುವಾಗ ಹಾಗೂ ನಾರಿಯನ್ನು ಪ್ರಸನ್ನಗೊಳಿಸುವದಕ್ಕಾಗಿ ಮಾಡುತ್ತಿದ್ದನು.''[೭]

ಭಾರತದ ಅಂಧಕಾರ ಯುಗದಲ್ಲಿ ಮಾನವರು ಕಾಡು ಸ್ಥಿತಿಯಲ್ಲಿ ಜೀವಿಸುತ್ತಿದ್ದರು. ಪ್ರಾಣಿಗಳನ್ನು ಬೇಟೆಯಾಡಿ ತಮ್ಮ ಹೊಟ್ಟೆ ತುಂಬಿಕೊಳ್ಳುತ್ತಿದ್ದರು. ಕಲ್ಲಿನ ಗುಹೆಗಳು ಮರದ ಪೊಟರೆಗಳು ಅವರ ನಿವಾಸ ಸ್ಥಾನಗಳಾಗಿದ್ದವು. ಆ ಕಾಲದಲ್ಲಿ ಭಾಷೆ ಇನ್ನು ಹುಟ್ಟಿಕೊಂಡಿರಲಿಲ್ಲ. ಆದ್ದರಿಂದ ಮನುಷ್ಯನು ಬೇರೆ ಬೇರೆ ಧ್ವನಿಗಳ ಮೂಲಕ ವಿಚಿತ್ರ ಸಂಜ್ಞೆಗಳ ಮೂಲಕ ಹಾಗೂ ವಿವಿಧ ಮುಖ ಮುದ್ರೆಗಳ ಮೂಲಕ ತಮ್ಮ ಆನಂದ, ಪ್ರೇಮ, ದುಃಖ, ವೀರಾವೇಶ ಮುಂತಾದ ಮನೋಭಾವನೆಗಳನ್ನು ವ್ಯಕ್ತಮಾಡುತ್ತಿದ್ದನು. ತಮಗೆ ನೀರಡಿಕೆಯಾದರೆ, ನಿದ್ರೆ ಬಂದರೆ, ಹಸಿವೆಯಾದರೆ, ಕೋಪ ಬಂದರೆ ಅವುಗಳನ್ನು ಬೇರೆ ಬೇರೆ ಹಸ್ತ ಹಾಗೂ ಮುದ್ರೆಗಳ ಮೂಲಕ ವ್ಯಕ್ತಮಾಡುತ್ತಿದ್ದನು. ಅನೇಕ ಪ್ರಕಾರದ ಧ್ವನಿಗಳ ಉಚ್ಚಾರಣೆ ಹಾಗೂ ವೈಚಿತ್ರ್ಯಪೂರ್ಣ ಅಂಗವಿಕ್ಷೇಪಗಳೇ ಸಂಗೀತದ ಅವಿಕಸಿತ ರೂಪವೆಂದು ಹೇಳಬಹುದು. ಕಾಲಾಂತರದಲ್ಲಿ ಈ ಅವಿಕಸಿತ ರೂಪವು ವಿಕಾಸ ಹೊಂದಲು ಪ್ರಾರಂಭವಾಯಿತು. ಈ ರೀತಿಯ ವಿಕಸನ ಆರಂಭವಾದುದು ಕೂಡಾ ಪೂರ್ವಕಾಲದಿಂದೆಂಬುದನ್ನು ಮರೆಯಲಾಗದು.

ಆ ಕಾಲದಲ್ಲಿ ಮಾನವನು 'ಆಗ್ಸಾ' ಎಂಬ ಪಾಷಾಣದಿಂದ ವಾದ್ಯ ನಿರ್ಮಿಸಿದನೆಂಬ ಉಲ್ಲೇಖವಿದೆ. ಬೇಟೆಯಾಡುವ ಸಮಯದಲ್ಲಿ ಸಂಗೀತದ ಪ್ರಯೋಗವಾಗಲು ಪ್ರಾರಂಭವಾಯಿತು. ಬೇರೆ ಬೇರೆ ಧ್ವನಿಗಳ ಮೂಲಕ ಪಶುಪಕ್ಷಿಗಳನ್ನು ಮುಗ್ಧರನ್ನಾಗಿ ಮಾಡಿ ಅವುಗಳ ಬೇಟೆಯಾಡುತ್ತಿದ್ದರು. ಕೆಲವು ಪ್ರಾಣಿಗಳ ಚರ್ಮದಿಂದ ವಾದ್ಯಗಳು ನಿರ್ಮಾಣಗೊಂಡವು. ಸ್ತ್ರೀ ಮನರಂಜನೆಗಾಗಿಯೂ, ಸಂಗೀತದ ಉಪಯೋಗವಾಗಲಾರಂಭಿಸಿತು. ಹಲವು ಕಾಲಾನಂತರ ಸಾಮಾಜಿಕ ಜೀವನದ ವಿಚಾರಗಳು ಆದಿಮಾನವರಲ್ಲಿ ಬರತೊಡಗಿದ್ದವು. ಇಂತಹ ಸಾಮಾಜಿಕ ಜೀವನದ ಬಗೆಗೆ ಆಲೋಚಿಸುವ ಜನಾಂಗದಲ್ಲಿ ಸಂಗೀತದ ಜ್ಞಾನ ಆದಿಮಾನವರಿಗಿಂತ, ಅಧಿಕವಾಗಿ ಇದ್ದಿರಬಹುದೆಂದು ಊಹಿಸಲಾಗಿದೆ.

---

೭. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೩

ಸಾಮಾಜಿಕ ಜೀವನದ ಜೊತೆಗೆ ಸಾಮೂಹಿಕ ಸಂಗೀತವು ಇದೇ ಯುಗದಲ್ಲಿ ಆಗಿರಬಹುದೆಂದು ಭಾವಿಸಲಾಗಿದೆ. ಭಾಷೆಯ ಜನನವಾದಂದಿನಿಂದ ಸಂಗೀತದಲ್ಲಿ ಸೊಗಸು ಹೆಚ್ಚುತ್ತ ಹೋಯಿತು. ಸಂಗೀತದಲ್ಲಿ ಕೇವಲ ಧ್ವನಿಗಳಷ್ಟೇ ಅಲ್ಲದೇ ಶಬ್ದಗಳ ಪ್ರಯೋಗವೂ ಪ್ರಾರಂಭವಾಯಿತು. ಗಾಯನದ ಜೊತೆ ನೃತ್ಯಗಳ ಪ್ರಚಾರವೂ ಸಹ ಸಾಕಷ್ಟಾಯಿತು.

ಆ ಕಾಲದ ಜನರು ಸಂಗೀತವನ್ನು ಪ್ರಧಾನವಾಗಿ ಈಶ್ವರಾರಾಧನೆಯ ಒಂದು ಸಾಧನವೆಂದು ಭಾವಿಸುತ್ತಿದ್ದರು. ಆದ್ದರಿಂದ ಸಂಗೀತಕ್ಕೆ ಒಂದು ಧಾರ್ಮಿಕ ರೂಪ ಪ್ರಾಪ್ತವಾಯಿತು. ಸಂಗೀತ ಸಾಧನೆಗಾಗಿ ಅವರಿಗೆ ಸಾಕಷ್ಟು ಸಮಯ ಸಿಗುತ್ತಿದ್ದಿಲ್ಲ ಏಕೆಂದರೆ ಅವರು ಯುದ್ಧಗಳಲ್ಲಿ ನಿರತರಾಗಿರುತ್ತಿದ್ದರು. ಯುದ್ಧಾನಂತರ ದೊರಕಿದ ಸಮಯವನ್ನು ಆಹಾರ ಸಂಗ್ರಹಣೆ ಮತ್ತು ಇತರ ಜೀವನಾವಶ್ಯಕ ವಸ್ತುಗಳನ್ನು ದೊರಕಿಸುವದರಲ್ಲಿ ಕಳೆಯುತ್ತಿದ್ದರು. ಆದರೂ ಹೇಗಾದರೂ ಮಾಡಿ ಸಂಗೀತಕ್ಕಾಗಿ ಸ್ವಲ್ಪ ಸಮಯವನ್ನು ಉಳಿಸಿಕೊಳ್ಳುತ್ತಿದ್ದರು.

**೨.೫. ಸಿಂಧೂ ಸಂಸ್ಕೃತಿಯಲ್ಲಿ ಸಂಗೀತ**

ಉತ್ಖನನದಲ್ಲಿ ಪ್ರಾಪ್ತವಾಗಿರುವ ಅವಶೇಷಗಳ ಆಧಾರದ ಮೇಲೆ ಇತಿಹಾಸ ತಜ್ಞರು ಸಿಂಧೂ ಸಂಸ್ಕೃತಿಯ ಕಾಲ ಕ್ರಿ.ಪೂ. ೩೨೫೦ ರಿಂದ ಕ್ರಿ.ಪೂ. ೨೭೫೦ ವರೆಗೆ ಎಂದು ಹೇಳುತ್ತಾರೆ.

ಹರಪ್ಪಾ ಎಂಬ ಸ್ಥಳದಲ್ಲಿ ಉತ್ಖನನ ಮಾಡಿದಾಗ ನೃತ್ಯಗತ ಭಂಗಿಯಲ್ಲಿ ಪುರುಷನ ಭಗ್ನ ಸ್ಥಿತಿಯಲ್ಲಿದ್ದ ಒಂದು ಮೂರ್ತಿ ದೊರಕಿದ್ದು ಆ ಮೂರ್ತಿಯಲ್ಲಿ ನರ್ತಕನು ತನ್ನ ಬಲಗಾಲನ್ನು ಭೂಮಿಯ ಮೇಲೆ ಸ್ಥಿರವಾಗಿಟ್ಟು ಎಡಗಾಲನ್ನು ನರ್ತನ ಕ್ರಿಯೆಯಲ್ಲಿ ಮೇಲಕ್ಕೆ ಎತ್ತಿದ್ದಾನೆ. ನೃತ್ಯ ಕಲಾ ಮರ್ಮಜ್ಞರು ಆ ಮೂರ್ತಿಗೆ ನಟರಾಜ ಶಿವನ ರೂಪವೆಂದು ಭಾವಿಸುತ್ತಾರೆ.

'ಮೋಹೆಂಜೋದಾರೋ' ಉತ್ಖನನದಲ್ಲಿ ನೃತ್ಯದ ಭಂಗಿಯಲ್ಲಿ ಈರ್ವ ನಾರಿಯರ ಮೂರ್ತಿ ದೊರಕಿದ್ದು ಆ ಮೂರ್ತಿಯ ಮುಡಿ ಶೃಂಗಾರಯುಕ್ತವಾಗಿ, ಬಳೆಗಳನ್ನು ಶೃಂಗಾರಕ್ಕಾಗಿ ಎರಡೂ ಕೈಗಳ ತುಂಬ ಬಳಸಿದ್ದು ಕಂಡು ಬರುತ್ತದೆ. ಇಂತಹ ಮೂರ್ತಿಗಳ ನಿರ್ಮಾಣ, ಸಂಗೀತ ಪ್ರಿಯ ಸಂಸ್ಕೃತಿಯ ಪ್ರತೀಕವೆಂಬುದರಲ್ಲಿ ಸಂಶಯವಿಲ್ಲ.

ಹರಪ್ಪಾದ ಉತ್ಖನನದಲ್ಲಿ ಪ್ರಾಪ್ತವಾದ ಒಂದು ಚಿತ್ರದಲ್ಲಿ ಓರ್ವ ಪುರುಷನು ವ್ಯಾಘ್ರದ ಮುಂದೆ ಡೊಳ್ಳು ಬಾರಿಸುವ ಸಂಕೇತವನ್ನು ಚಿತ್ರಿಸಲಾಗಿದೆ. ಮತ್ತೆ ಪ್ರಾಪ್ತವಾದ ಕೆಲವು ಮೂರ್ತಿಗಳಲ್ಲಿ ತಾಳ, ಕರ, ತಾಳ ಮುಂತಾದ ವಾದ್ಯಗಳ ಚಿತ್ರಣ ಕಂಡು ಬರುತ್ತದೆ. ಇದರಿಂದ ಆ ಕಾಲದ ಜೀವನದಲ್ಲಿ ಸಂಗೀತದ ಸಾಕಷ್ಟು ಪ್ರಚಾರವಿದ್ದು ಧಾರ್ಮಿಕ ಹಾಗೂ ಲೌಕಿಕ ಸಮಾರಂಭಗಳಲ್ಲಿ ಗೀತವಾದ್ಯ ಹಾಗೂ ನೃತ್ಯಗಳ ಮೂಲಕ ಜನರ ಮನರಂಜನೆ

ಮಾಡಲಾಗುತ್ತಿತ್ತು. ಗೀತ ಹಾಗೂ ನೃತ್ಯಗಳ ಜೊತೆಗೆ ಡೊಳ್ಳು ದುಂದುಭಿ ಮುಂತಾದ ವಾದ್ಯಗಳನ್ನು ಉಪಯೋಗಿಸುತ್ತಿದ್ದರು.

'ದಿ ಫ್ಲೋ ಆಫ್ ಇಂಡಿಯನ್ ಮ್ಯೂಸಿಕ್' ಎಂಬ ಗ್ರಂಥದ ಕರ್ತಕರಾದ ಜಾನ್ಮಾನ್ಸ ಇವರು ''ಸಿಂಧೂ ಸಂಸ್ಕೃತಿಯಲ್ಲಿ ಸಂಗೀತ ರೂಪದಲ್ಲಿ ಹಾಡಲ್ಪಡುವ ಗೀತಗಳ ವಿಕಾಸವಾಗಿತ್ತು''[೮] ಎಂದು ಅಭಿಪ್ರಾಯಪಟ್ಟಿದ್ದಾರೆ. ಇದರಿಂದ ಆ ಕಾಲದಲ್ಲಿ ಕಾವ್ಯ ಮತ್ತು ಸಂಗೀತದ ಪರಸ್ಪರ ಸಂಬಂಧ ಬೆಳೆದಿತ್ತು ಎಂದು ಗೊತ್ತಾಗುತ್ತದೆ.

ಪ್ರಖ್ಯಾತ ಇತಿಹಾಸಕಾರರಾದ ಕಾರ್ಡಿಯಲ್ ಶೋಮ್ಸ ಎಂಬುವವರು 'ರೈಜ್ ಅಯಂಡ ಫಾಲ್ ಆಫ್ ಇಂಡಿಯನ್ ಮ್ಯೂಸಿಕ್' ಎಂಬ ಗ್ರಂಥದಲ್ಲಿ ''ಸಿಂಧೂ ಸಂಸ್ಕೃತಿಯಲ್ಲಿ ಸಂಗೀತದ ಮಟ್ಟ ಸರ್ವೋತ್ಕೃಷ್ಟವಿದ್ದು ಅದರಲ್ಲಿ ಆಧ್ಯಾತ್ಮಿಕತೆ ಹಾಗೂ ನೈತಿಕತೆಗಳು ವಿಶೇಷವಾಗಿ ಕಂಡುಬರುತ್ತಿದ್ದವು. ಅದರಲ್ಲಿ ಶೃಂಗಾರ ಭಾವನೆಗಳಿಗೆ ಆಸ್ಪದವಿರಲಿಲ್ಲ. ಆದ್ದರಿಂದ ಸಂಗೀತದ ರೂಪ ಪವಿತ್ರವಾಗಿಯೂ ಹಾಗೂ ನೈತಿಕ ಮಟ್ಟದಲ್ಲಿ ಉಚ್ಚವಾಗಿಯೂ ಇತ್ತು''[೯] ಎಂದು ವಿಶ್ಲೇಷಿಸಿದ್ದಾರೆ.

ಸಿಂಧೂ ಸಂಸ್ಕೃತಿ ಹಾಗೂ ಅಂಧಕಾರ ಯುಗದ ದ್ರಾವಿಡ ಸಂಸ್ಕೃತಿಯಲ್ಲಿರುವ ಸಂಗೀತದ ವಿಕಾಸ ಕ್ರಮ ಹೆಚ್ಚುಕಡಿಮೆ ಸಮಾನವಾಗಿತ್ತೆಂಬ ಅಭಿಪ್ರಾಯವನ್ನು 'ಪ್ರಾರಲ್ಯ ಪ್ರತಿ ಶಂಖ್ಯಾಯನ' ಎಂಬುವವರು ''ಭಾರತೀಯ ಸಂಗೀತದ ಹುಟ್ಟು ಹಾಗೂ ಅದರ ವಿಕಾಸ ಕ್ರಮದ ಸ್ವರ್ಣಿಮ ಪಥ' ಎಂಬ ಗ್ರಂಥದಲ್ಲಿ ವ್ಯಕ್ತಪಡಿಸಿದ್ದಾರೆ. ಅವರ ಅಭಿಪ್ರಾಯದಂತೆ ''ಅಂಧಕಾರ ಯುಗದ ದ್ರಾವಿಡರ ಸಂಗೀತ ಹಾಗೂ ಸಿಂಧೂ ಸಂಸ್ಕೃತಿಯಲ್ಲಿಯ ಸಂಗೀತ ಇವುಗಳೆರಡೂ ಉಚ್ಚಮಟ್ಟದಾಗಿದ್ದು ಎರಡೂ ಸಂಸ್ಕೃತಿಯಲ್ಲಿಯ ಜನಾಂಗ, ಸಂಗೀತ ಸಾಧನೆ ಮಾಡುವುದರಲ್ಲಿ ವಿಶೇಷ ಆಸಕ್ತಿಯನ್ನು ವಹಿಸಿತ್ತಲ್ಲದೆ, ಜೀವನದಲ್ಲಿ ಸಂಗೀತದ ವಿಕಾಸವೆಂದರೆ ಮಾನವ ಸಮಾಜ ವಿಕಾಸವೆಂಬ ಭಾವನೆಯನ್ನು ತಳೆದಿದ್ದಿತು.''[೧೦]

## ೨.೬. ವೇದಕಾಲದಲ್ಲಿ ಸಂಗೀತ

ವೈದಿಕ ಯುಗದ ವಿಶಾಲವಾದ ಆ ಕಾಲಖಂಡದಲ್ಲಿ ಆ ಕಾಲದ ಸಂಗೀತ ಹಾಗೂ ಸಂಗೀತ ಸಾಧನೆಯ ಬಗೆಗೆ ಉಲ್ಲೇಖಗಳು ಸಿಗುತ್ತವೆ. ವೇದ, ಬ್ರಾಹ್ಮಣ, ಉಪನಿಷತ್ ಹಾಗೂ ಅರಣ್ಯಕಗಳಲ್ಲಿ ಆ ಕಾಲದ ಸಂಗೀತ ಪರಿಸ್ಥಿತಿ, ಸಂಗೀತದ ಬಗೆಗಿದ್ದ ಜನರ ಮನೋಭಾವನೆ ಮತ್ತು ಆಗ ಪ್ರಚಾರದಲ್ಲಿದ್ದ ಸಂಗೀತದ ಬಗೆಗೂ ಹಲವಾರು ಅಂಶಗಳು ತಿಳಿದುಬರುತ್ತವೆ.

---

೮. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೧೩

೯. ಅದೇ, ಪುಟ-೧೩

೧೦. ಅದೇ, ಪುಟ-೧೪

ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಆರ್ಯರು ಹೊರಗಿನಿಂದ ಬಂದವರೆಂದು ಭಾವಿಸಿದರೆ, ಅವರು ಏಕಕಾಲಕ್ಕೆ ಬಂದವರಲ್ಲ. ಬೇರೆ ಬೇರೆ ಸಮಯದಲ್ಲಿ, ಬೇರೆ ಬೇರೆ ಸ್ಥಳಗಳಿಂದ ಪಂಗಡಗಳಾಗಿ ಭಾರತಕ್ಕೆ ಬಂದವರೆಂದು ತಿಳಿದುಕೊಳ್ಳಬಹುದು. ಆರ್ಯದ್ರಾವಿಡ ಸಂಸ್ಕೃತಿಗಳ ಸಂಘರ್ಷವುಂಟಾದಾಗ ದ್ರಾವಿಡರ ಉಚ್ಚಮಟ್ಟದ ಸಂಸ್ಕೃತಿ ಹಾಗೂ ಸಂಗೀತದಿಂದ ಆರ್ಯರು ಪ್ರಭಾವಿತರಾದರು ಹಾಗೂ ಅವುಗಳನ್ನು ತಮ್ಮಲ್ಲಿ ಅರಗಿಸಿಕೊಂಡರು.

## ೨.೭. ಋಗ್ವೇದ ಕಾಲದಲ್ಲಿ ಸಂಗೀತ

ಪ್ರತಿಯೊಂದು ಕುಟುಂಬದಲ್ಲಿ ಸಂಗೀತಕ್ಕೆ ಒಂದು ವಿಶಿಷ್ಟ ಸ್ಥಾನವಿತ್ತು. ಪ್ರಾತಃಕಾಲ ಮತ್ತು ಸಾಯಂಕಾಲ ಪೂಜಾಸಂದರ್ಭಗಳಲ್ಲಿ ಸಂಗೀತದ ಉಪಯೋಗ ಅವರ ಕುಟುಂಬದಲ್ಲಿ ಪ್ರಾರಂಭವಾಯಿತು. ಸ್ತ್ರೀಯರು ಮನೆಯಲ್ಲಿ ಕೆಲಸ ಮಾಡುವಾಗ, ಪುರುಷರು ಹೊಲಗೆಲಸಗಳಲ್ಲಿ ತೊಡಗಿದಾಗ ಹಾಡುಗಳನ್ನು ಹಾಡುವದು ರೂಢಿಯಲ್ಲಿ ಬಂದಿತು. ಸಂಗೀತವು ಪ್ರತಿಯೊಂದು ಕುಟುಂಬದಲ್ಲಿ ಸುಖ, ಶಾಂತಿ ಆನಂದಗಳಿಗೆ ಕಾರಣವಾಯಿತು.

ಶ್ರೀ ಉಮೇಶ ಜೋಶಿಯವರು 'ಸಂಗೀತದ ಇತಿಹಾಸ' ವೆಂಬ ತಮ್ಮ ಪುಸ್ತಕದಲ್ಲಿ ಹೀಗೆ ಹೇಳಿದ್ದಾರೆ. ''ಋಗ್ವೇದ ಕಾಲದಲ್ಲಿ ಸಂಗೀತದ ಬೆಳವಣಿಗೆ ಮನೆಯೊಳಗೆ ನಡೆದಷ್ಟು ಹೊರಗಡೆ ನಡೆಯಲಿಲ್ಲ.''[೧೧] ಸಂಗೀತದ ಪ್ರದರ್ಶನ ಸಾರ್ವಜನಿಕ ಕಾರ್ಯಕ್ರಮಗಳಲ್ಲಿಯೂ ಆಗುತ್ತಿತ್ತು. ಆದರೆ ಇಂತಹ ಸಂದರ್ಭಗಳು ತೀರ ಕಡಿಮೆ. ಪುರುಷರ ದಿನಚರಿ ಅನಿಶ್ಚಿತವಾಗಿತ್ತು. ಆದರೂ ಅವರಿಗೆ ಬೆಳಗಿನ ಅಥವಾ ಸಂಜೆಯ ಸಮಯದಲ್ಲಿ ಸಂಗೀತಕ್ಕೆ ಸಮಯ ದೊರಕುತ್ತಿತ್ತು. ಏಕೆಂದರೆ ಆ ಹೊತ್ತಿನಲ್ಲಿ ಅವರು ತಮ್ಮ ಇಷ್ಟದೇವತೆಗಳ ಆರಾಧನೆಯನ್ನು ಸಂಗೀತಮಯ ಪ್ರಾರ್ಥನೆಗಳಿಂದ ಮಾಡುತ್ತಿದ್ದರು.

## ೨.೮. ಯಜುರ್ವೇದದಲ್ಲಿ ಸಂಗೀತ

ಯಜುರ್ವೇದವು ಯಜ್ಞ ಯಾಗಾದಿ ಧಾರ್ಮಿಕ ಸಮಾರಂಭಗಳಿಗೆ ಸಂಬಂಧಿಸಿದುದಾಗಿದೆ. ಯಜ್ಞಯಾಗ ಮಾಡುವ ಕಾಲಕ್ಕೆ ಪಠಿಸುವ ಮಂತ್ರಗಳನ್ನು ಹಾಗೂ ವಿನಿಯೋಗ ವಾಕ್ಯಗಳನ್ನು ಗದ್ಯರೂಪದಲ್ಲಿ ವೈಶಿಷ್ಟ್ಯಪೂರ್ಣವಾಗಿ ಚಿತ್ರಿಸಿದ್ದು ಕಂಡುಬರುತ್ತದೆ. ಈ ಮಂತ್ರಗಳ ಉಚ್ಚಾರಣೆಯನ್ನು ಬಹುತೇಕವಾಗಿ 'ಉಪಾಂಶು' ಸ್ವರಗಳಲ್ಲಿ ಮಾಡಲಾಗುತ್ತಿತ್ತು.

ಸೋಮಯಾಗಗಳಲ್ಲಿಯ 'ಸಮನ್' ಹಾಗೂ ಲೌಕಿಕ ಸಂಗೀತದ ವಿವರಣೆ ಯಜುರ್ವೇದದಲ್ಲಿಯೂ ಕಂಡು ಬರುತ್ತದೆ. ಇದರಿಂದ ತತ್ಕಾಲೀನ ಸಂಗೀತದ ಅಭಿವೃದ್ಧಿ ಹಾಗೂ ಅದರ ವಿಕಾಸ ಕ್ರಮದ ಬಗೆಗೆ ತಿಳಿದು

೧೧. ಭಾರತೀಯ ಸಂಗೀತದ ಚರಿತ್ರೆ : ಡಾ.ಬಿ.ಡಿ.ಪಾಠಕ, ಪು-೧೫

ಬರುತ್ತದೆ. ಶುಕ್ಲ ಯಜುರ್ವೇದದ 'ವಾಜಿಸನೇಯಿ' ಸಂಹಿತೆಯಲ್ಲಿ ತತ್ಕಾಲೀನ ಉದ್ಯೋಗಗಳ ಹಾಗೂ ಕಲಾ ಕೌಶಲ್ಯಗಳ ಪರಿಚಯ ದೊರಕುತ್ತದೆ. ನೇಕಾರರು, ಶೈಲೂಷರು (ನಟರು) ನರ್ತಕರು, ಗಾಯಕರು, ವೀಣಾವಾದಕರು, ದುಂದುಭಿವಾದಕರು ಮುಂತಾದವರ ಉಲ್ಲೇಖ ಇದರಲ್ಲಿ ಸಿಕ್ಕುತ್ತದೆ.

ವೀಣಾ ಸಾಕ್ಷಾತ್ ಲಕ್ಷ್ಮಿಯ ಅವತಾರವೆಂಬ ಭಾವನೆ ಆಗ ಇತ್ತು. ಗಾಯನದ ಜೊತೆಗೆ 'ಅಶ್ವಮೇಧ' ಯಜ್ಞದಲ್ಲಿ ಪ್ರತಿದಿನವೂ ಅದರ ಬಳಕೆಯಾಗುತ್ತಿತ್ತು.

### ೨.೯. ಸಾಮವೇದದಲ್ಲಿ ಸಂಗೀತ

ಸಂಗೀತದ ದೃಷ್ಟಿಯಿಂದ ಸಾಮವೇದಕ್ಕೆ ಒಂದು ವಿಶಿಷ್ಟವಾದ ಸ್ಥಾನವಿದೆ. 'ವೇದಾನಾಂ ಸಾಮವೇ ದೋಸ್ಮಿ' ಎಂದು ಸ್ವಯಂ ಭಗವಂತನು ಗೀತೋಪದೇಶ ಮಾಡುವಾಗ ಹೇಳಿದ್ದಾನೆ. ಸಾಮವೇದವು ಗಾಯತ್ರಿ ಛಂದಸ್ಸಿನಲ್ಲಿ ನಿಬದ್ಧವಾಗಿದ್ದು ಗಾಯನವನ್ನು ಸರ್ವಶ್ರೇಷ್ಠವೆಂದು ಭಾವಿಸಲಾಗಿದೆ.

ಸಾಮಸಾಹಿತ್ಯದಲ್ಲಿ 'ಉದ್ಗೀಥ' ಶಬ್ದದ ಸಂಬಂಧವನ್ನು ಉಚ್ಚ ಧ್ವನಿಯಲ್ಲಿ ಹಾಡುವ 'ಓಂಕಾರ' ಅಥವಾ 'ಪ್ರಣವ'ದ ಜೊತೆಗೆ ಕಾಣಿಸಲಾಗಿದೆ. ಸ್ವರವೇ ಸಾಮದ ಸರ್ವಸ್ವ ಮತ್ತು ವಿಶಿಷ್ಟ ಸ್ವರಗಳ ಸನ್ನಿವೇಶವೇ ಸಾಮ ಶಬ್ದದ ಮೂಲಾಧಾರ. ಯಜ್ಞ ಯಾಗಗಳಲ್ಲಿ ಋಕ್ಕಳನ್ನು ಹಾಡಲು ಗಾಯಕರನ್ನು ನಿಯುಕ್ತ ಮಾಡಲಾಗುತ್ತಿತ್ತು. ಅವರೇ 'ಉದ್ಗಾತೃ'ಗಳೆನಿಸಿದರು.

ಇವರು ಅತಿ ಸುಶ್ರಾವ್ಯವಾಗಿ ಋಕ್ಕಗಳನ್ನು ಹಾಡುತ್ತಿದ್ದರು. ಆ ಕಾಲದ ಲೋಕ ಸಂಗೀತದ ಸ್ವರಗಳನ್ನು ಋಕ್ಕಗಳನ್ನು ಹಾಡುವಾಗ ಉಪಯೋಗಿಸುತ್ತಿದ್ದರು. ಯಜ್ಞ ಯಾಗಾದಿ ಧಾರ್ಮಿಕ ಕಾರ್ಯಗಳಲ್ಲಿ ಸಂಗೀತ ಅವಶ್ಯಕವಾಗಿದ್ದಂತೇ ಸಾಮಾಜಿಕ ಸಮಾರಂಭಗಳಲ್ಲೂ ಅವಶ್ಯವಾಗಿತ್ತು.

ಸಾಮವೇದ ಕಾಲದಲ್ಲಿ 'ಸ್ವರಾಂಕನ' ಪದ್ಧತಿಯು ಪ್ರಚಾರದಲ್ಲಿತ್ತು. ಸಾಮವೇದದ ಈ ಸ್ವರಾಂಕನ ಪದ್ಧತಿಯು ತನ್ನದೇ ಆದ ಒಂದು ವೈಶಿಷ್ಟ್ಯದಿಂದೊಡಗೂಡಿದೆ. ಆಧುನಿಕ ಕಾಲದಲ್ಲಿ ಸ್ವರಲಿಪಿ ಪದ್ಧತಿಯನ್ನು ಉಪಯೋಗಿಸುವಂತೆ ಆ ಕಾಲದಲ್ಲಿ ಸ್ವರಗಳನ್ನು ಅಂಕೆಯ ಮೂಲಕ ತೋರಿಸಲಾಗುತ್ತಿತ್ತು. ಉದಾ : ಸ್ವರಗಳ ಬದಲಾಗಿ ೧,೨,೩, ಈ ಪ್ರಕಾರ ಅಂಕೆಗಳು ಬರೆಯಲ್ಪಡುತ್ತಿದ್ದವು. ಬಹುಶಃ ಈ ಅಂಕೆಗಳು ಉದಾತ್ತ, ಅನುದಾತ್ತ ಹಾಗೂ ಸ್ವರಿತ ಮುಂತಾದ ಸ್ವರಗಳ ಸಂಕೇತವಾಗಿರಬಹುದು. ಕೆಲವು ಕಡೆ ೧ ರಿಂದ ೭ ರವರೆಗೆ ಅಂಕಿಗಳ ಪ್ರಯೋಗವಾದುದು ಕಂಡುಬರುತ್ತದೆ. ಈ ಅಂಕೆಗಳ ಸ್ಥಾನವು ಸಾಹಿತ್ಯದ ಅಕ್ಷರಗಳ ಮೇಲೆ ಹಾಗೂ ಮಧ್ಯದಲ್ಲಿ ಮಾಡಿರುವದು ಕಂಡುಬರುತ್ತದೆ. ಅರ್ಥಾತ್ ಯಾವ ಶಬ್ದಗಳ ಮೇಲೆ ಯಾವ ಅಂಕಿ ಇರುತ್ತದೆಯೋ ಆ ಸಂಕೇತದ ಪ್ರಕಾರ ಅಂದರೆ ಪ್ರಥಮ, ದ್ವಿತೀಯ, ತೃತೀಯ, ಚತುರ್ಥ, ಮಂದ್ರ ಹಾಗೂ ಅತಿಸ್ವಾರ ಕ್ರಮಗಳಲ್ಲಿ ಹಾಡಲಾಗುತ್ತಿತ್ತು.

## ೨.೧೦. ಅಥರ್ವವೇದದಲ್ಲಿ ಸಂಗೀತ

ಲೋಕಗೀತೆಗಳ ಪ್ರಚಾರ ಸಾಮಾನ್ಯ ಜನರಲ್ಲಿಯೇ ಇತ್ತು. ವಿವಿಧ ಬಗೆಯ ವ್ಯವಸಾಯ ಮಾಡುವಂತಹ ಜನರು ತಮ್ಮ ವ್ಯವಸಾಯದ ವೇಳೆಯಲ್ಲಿ ಮನೋರಂಜನೆಗಾಗಿ ವ್ಯವಸಾಯಕ್ಕೆ ಸಂಬಂಧಿಸಿದ ಗೀತೆಗಳನ್ನು ಹಾಡುತ್ತಿದ್ದರು. ಸ್ತ್ರೀ ಪುರುಷರ ಸಮೂಹ ನೃತ್ಯ ಸಮಾರಂಭಗಳು ಸಹ ನಡೆಯುತ್ತಿದ್ದವು. ಸಂಗೀತ ವಾದ್ಯಗಳಲ್ಲಿ 'ಆಘಟ', 'ಕರ್ಕರಿ' ಹಾಗೂ 'ದುಂದುಭಿ' ಮುಂತಾದ ವಾದ್ಯಗಳ ಉಲ್ಲೇಖವಿದೆ. ಗಂಧರ್ವ, ಅಪ್ಸರಾಗಣ ಮುಂತಾದ ದೈವೀ ಜೀವಿಗಳು ಯಾವಾಗಲೂ ಸುರಾಪಾನ, ಕಾಮಿನೀಗೀತ ಹಾಗೂ ನೃತ್ಯಾದಿ ವಿಲಾಸಗಳಲ್ಲಿ ಮಗ್ನರಾಗಿರುತ್ತಿದ್ದರು ಎಂದು ವರ್ಣಿಸಲಾಗಿದೆ. ಇವರ ವಿಲಾಸ ಸ್ಥಾನವು ಜನನಿವಾಸಕ್ಕಿಂತ ದೂರವಾಗಿ ನೀರಿನಲ್ಲಿ ಅಥವಾ ವೃಕ್ಷಗಳ ಮೇಲೆ ಇರುತ್ತಿತ್ತು. ಗೀತ, ವಾದ್ಯ ಹಾಗೂ ನೃತ್ಯದ ಜೊತೆಗೆ ಅವರ ಹರ್ಷಭರಿತ ಸ್ವಚ್ಛಂದ ಜೀವನದ ವರ್ಣನೆಯನ್ನು ಇದರಲ್ಲಿ ಕಾಣಬಹುದು. ಯುದ್ಧದಲ್ಲಿ ಇಂತಹ ಗಂಧರ್ವರು ದೇವಾಧಿಪತಿ ಇಂದ್ರನಿಗೆ ಸಹಾಯ ಮಾಡುತ್ತಿದ್ದರು.

## ೨.೧೧. ಉಪನಿಷತ್ ಕಾಲದಲ್ಲಿ ಸಂಗೀತ

ಉಪನಿಷತ್ತುಗಳಲ್ಲಿ ಸಾಮಗಾನದ ಸಾಕಷ್ಟು ಪ್ರಶಂಸೆ ಮಾಡಿದುದು ಕಂಡು ಬರುತ್ತದೆ. ಉಳಿದ ವೇದಗಳಂತೆ ಸಾಮವೇದವು ಕೂಡ ಪರಮಾತ್ಮನ ಮುಖದಿಂದಲೇ ಉದ್ಭವಾಯಿತೆಂದು ಉಪನಿಷತ್ತು ತಿಳಿಸುತ್ತದೆ.

ಉಪನಿಷತ್ತುಗಳಲ್ಲಿ ಸಂಗೀತದ ಮಹತ್ವವನ್ನು ಕುರಿತು ಚರ್ಚಿಸಲಾಗಿದೆ. ಸಂಗೀತದಲ್ಲಿಯ ಗೀತ, ವಾದ್ಯ ಹಾಗೂ ನೃತ್ಯಗಳಿಂದ ಪ್ರಾಪ್ತವಾಗುವ ರಸಾನಂದವು ಪರಮಾನಂದ ಅಥವಾ ಬ್ರಹ್ಮಾನಂದದ ಮೂಲ ಎಂದು ಭಾವಿಸಲಾಗಿದೆ. ಉಪನಿಷತ್ ಕಾಲದಲ್ಲಿ ಸಂಗೀತವು ಬ್ರಹ್ಮಾನಂದ ಸ್ವರೂಪವೆಂದೂ ಸಂಗೀತಗಾರರು ಸ್ವರ್ಗೀಯ ಆನಂದವನ್ನು ಭೋಗಿಸುವವರೆಂದೂ ಭಾವಿಸಲಾಗುತ್ತಿತ್ತು.

ಗಾಂಧರ್ವರ ಉಲ್ಲೇಖ ಪ್ರಥಮವಾಗಿ ಉಪನಿಷತ್ತುಗಳಲ್ಲಿ ಕಂಡು ಬರುತ್ತದೆ. ವಿಶೇಷವಾಗಿ ಸೀತೋಪನಿಷತ್ತಿನಲ್ಲಿ ಇದರ ಉಲ್ಲೇಖ ಸಿಕ್ಕುತ್ತದೆ. 'ನರಸಿಂಹ ಪೂರ್ವ ತಾಪಿನೀ' ಉಪನಿಷತ್ತಿನಲ್ಲಿ ಸಾಮಗಾಯನದ ಮಹತ್ವವನ್ನು ಕುರಿತು ಹೀಗೆ ಹೇಳಿದೆ ''ಸಾಮಗಾನದ ಸರಿಯಾದ ಸ್ವರೂಪವನ್ನು ತಿಳಿದ ಮನುಷ್ಯನಿಗೆ ಅಮೃತತ್ವ ಪ್ರಾಪ್ತವಾಗುತ್ತದೆ.''[೧೨] ಛಾಂದೋಗ್ಯದಲ್ಲಿ ಸಾಮ ಗಾನವು ವಿಶಿಷ್ಟ ಇಚ್ಛಾ ಪೂರ್ತಿಗಾಗಿ ಮಾಡಲಾಗುತ್ತಿತ್ತೆಂದು ವರ್ಣಿಸಲಾಗಿದೆ. ಉದಾ : ಗಾಯತ್ರ, ರಥಂತಕ, ವಾಮದೇವ್ಯ, ಬೃಹತ್, ವೈರೂಪ್, ವೈರಾಜ, ಶಕ್ವರಿ, ರೇವತಿ, ಯಜ್ಞಾ ಯಜ್ಞೀಯ, ರಾಹನ್ ಮುಂತಾದವು.

---

೧೨. ಭಾರತೀಯ ಸಂಗೀತದ ಚರಿತ್ರೆ : ಡಾ.ಬಿ.ಡಿ.ಪಾಠಕ, ಪು-೨೮

ಉಪನಿಷತ್ ಕಾಲದಲ್ಲಿ ಸಾಮಗಾನಕ್ಕೆ ಗೌರವಪೂರ್ಣ ಸ್ಥಾನವಿತ್ತು. ಇದರಲ್ಲಿ ಸಂಗೀತದ ವಿಷಯ ಕುರಿತು ಗುಣಗಾನ ಮಾಡಲಾಗಿದೆ. ವೈದಿಕ ಕಾಲದ ಏಳು ಸ್ವರಗಳ ಉಲ್ಲೇಖ ಇದರಲ್ಲಿ ಬರುತ್ತದೆ. ನಾದವು ಪರಬ್ರಹ್ಮದಲ್ಲಿ ವಿಲೀನವಾಗುವ ಒಂದು ಸಾಧನವೆಂದು ಭಾವಿಸಲಾಗಿದ್ದು ಇದನ್ನು ಮಂತ್ರಯೋಗ ಮುಂತಾದ ಹಠಯೋಗಕ್ಕಿಂತ ಶ್ರೇಷ್ಠವೆಂದು ಪರಿಗಣಿಸಲಾಗಿದೆ.

ಉಪನಿಷತ್ತುಗಳ ಜೊತೆಗೆ ಶಿಕ್ಷಾ ಗ್ರಂಥಗಳಲ್ಲಿ ಸಹ ಸಂಗೀತದ ಉತ್ಕೃಷ್ಟ ವರ್ಣನೆ ಇದೆ. ವೇದಾಂಗ ಸಾಹಿತ್ಯದ ರಚನೆಯಾಗಿದ್ದು ಆದರಲ್ಲಿ ಶಿಕ್ಷಾ ಹಾಗೂ ಪ್ರತಿಶಾಖೆಯ ಗ್ರಂಥಗಳಿಗೆ ಒಂದು ವೈಶಿಷ್ಟ್ಯಪೂರ್ಣ ಸ್ಥಾನವಿದೆ. ಶಿಕ್ಷಾ ಗ್ರಂಥಗಳಲ್ಲಿ ಸಂಗೀತಕ್ಕೆ ಸಂಬಂಧಿಸಿದ ಆರು ವಿಷಯಗಳ ನಿರೂಪಣೆ ದೊರಕುತ್ತದೆ. ಉದಾ : ವರ್ಣ, ಸ್ವರ, ಮಂತ್ರ, ಬಲ, ಸಾಮ ಹಾಗೂ ಸಂತಾನ, ಶಿಕ್ಷಾ ಗ್ರಂಥಗಳಲ್ಲಿ ಇದರ ಹೊರತಾಗಿ ವೈದಿಕ ಧ್ವನಿಗಳ ನಾದ ಹಾಗೂ ಕಾಲದ ಚರ್ಚೆ ಮಾಡಿರುವುದು ಕಂಡು ಬರುತ್ತದೆ.

ನಾರದೀಯ ಶಿಕ್ಷಾ, ಮಾಂಲುಕೀ, ಯಜ್ಞವಲ್ಕ, ಶಿಕ್ಷಾ ಹಾಗೂ ಪಾಣಿನೀಯ ಶಿಕ್ಷಾ ಮುಂತಾದ ಶಿಕ್ಷಾ ಗ್ರಂಥಗಳಲ್ಲಿ ಸಂಗೀತದ ವಿಶೇಷ ವರ್ಣನೆಯಿದೆ. ಈ ಶಿಕ್ಷಾಕರ್ತರು ವೇದಗಳಲ್ಲಿಯ ವಿಭಿನ್ನ ಸ್ವರೋಚ್ಚಾರಣೆ ಅವುಗಳ ಕಾಲ, ಸ್ಥಾನ ಹಾಗೂ ಉದ್ಭವ ಮುಂತಾದವುಗಳ ಬಗೆಗೆ ವಿವರಣೆ ನೀಡಿದ್ದಾರೆ. ಈ ವಿವರಣೆಗಳಿಂದ ವೇದಗಳ ಆರ್ಚಿಕ, ಗಾಥಿಕ ಹಾಗೂ ಸಾಮಿಕ ಸ್ವರಾಂತರಗಳ ಪರಿಚಯ ದೊರೆಯುತ್ತದೆಂದು ಕೆಲ ವಿದ್ವಾಂಸರು ಊಹಿಸಿದ್ದಾರೆ. ಶಿಕ್ಷಾ ಗ್ರಂಥಗಳಲ್ಲಿ ಬರುವ ಸಂಗೀತದ ವಿವೇಚನೆಯನ್ನು ಕುರಿತು ಡಾ. ಶರಶ್ಚಂದ್ರ ಪರಾಂಜಪೆಯವರು ತಮ್ಮ 'ಭಾರತೀಯ ಸಂಗೀತದ ಇತಿಹಾಸ'ದಲ್ಲಿ ಈ ಪ್ರಕಾರ ಹೇಳಿದ್ದಾರೆ.

''ವರ್ಣೋಚ್ಚಾರಕ್ಕೆ ಸಂಗೀತ ಹಾಗೂ ಸಾಹಿತ್ಯದಲ್ಲಿ ಮಹತ್ವಪೂರ್ಣ ಸ್ಥಾನವಿದೆ. ವರ್ಣೋಚ್ಚಾರದ ಮುಖ್ಯ ಸ್ಥಾನಗಳು ಮೂರು. ಉರಸ್, ಕಂಠ ಹಾಗೂ ಶಿರಸ್, ಈ ಮೂರು ಸ್ಥಾನಗಳಿಂದ ಉತ್ಪನ್ನವಾಗುವ ಸ್ವರಗಳಿಗೆ 'ಸವನ' ಎಂದು ಕರೆಯಲಾಗಿದೆ. ಉರಸ್‌ದಿಂದ ಉತ್ಪನ್ನವಾಗುವ ಧ್ವನಿಗೆ ಮಂದ್ರ ಎಂದೂ, ಕಂಠದಿಂದ ಉತ್ಪನ್ನವಾಗುವ ಧ್ವನಿಗೆ 'ಮಧ್ಯ' ಅಥವಾ 'ಮಧ್ಯಮ' ಹಾಗೂ ಶಿರಸ್ಸಿನಿಂದ ಉತ್ಪನ್ನವಾಗುವ ಧ್ವನಿಗೆ 'ತಾರ' ಉಚ್ಚ ಅಥವಾ ಉತ್ತಮ ಎಂಬ ಸಂಜ್ಞೆ ಕೊಡಲಾಗಿದೆ.''[೧೩]

### ೨.೧೨. ಪುರಾಣ ಕಾಲದಲ್ಲಿ ಸಂಗೀತ

ಪುರಾಣ ಕಾಲದಲ್ಲಿ ಬೃಹದ್ಧರ್ಮ ಪುರಾಣ ವಾಯು ಪುರಾಣ, ವಿಷ್ಣು ಪುರಾಣ. ಮಾರ್ಕಂಡೇಯ ಪುರಾಣ, ಹರಿವಂಶ ಪುರಾಣ ಮುಂತಾದವುಗಳಲ್ಲಿ ಸಂಗೀತದ ವರ್ಣನೆ ಹಾಗೂ ವಿಮರ್ಶೆ ಸಿಕ್ಕುತ್ತದೆ. ಈ ವಿಮರ್ಶೆಯ ಮೂಲಕ ಪುರಾಣ ಯುಗದಲ್ಲಿ ವೇದಕಾಲೀನ ಹಾಗೂ ಉಪನಿಷತ್ ಕಾಲೀನ ಸಂಗೀತದಲ್ಲಿ ವೇದಕಾಲೀನ

---

೧೩. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೨೯

ಸಂಗೀತದಲ್ಲಿದ್ದ ಏಕಸೂತ್ರತೆ ಮಾಯವಾಗಿದ್ದುದು ಕಂಡುಬರುತ್ತದೆ. ಸಂಗೀತದ ಪ್ರಚಾರ ವೇದಕಾಲದಲ್ಲಿ ಕೆಲವು ಜನಾಂಗಗಳಲ್ಲಿದ್ದದ್ದು ಈ ಕಾಲದಲ್ಲಿ ಜನ ಸಾಮಾನ್ಯರಲ್ಲಿಯೂ ಪ್ರಸಾರಗೊಳ್ಳಲು ಪ್ರಾರಂಭವಾಯಿತು. ಹಾಗೂ ಸಂಗೀತದ ಮನೋರಂಜಕ ತತ್ವವು ಜನರಲ್ಲಿ ವಿಕಾಸ ಹೊಂದಲು ಪ್ರಾರಂಭವಾಯಿತು. ಜನರು ಸಂಗೀತದ ಆಂತರಿಕ ತತ್ವಗಳ ಕಡೆಗೆ ಹೆಚ್ಚು ಗಮನಕೊಡದೇ ಕೇವಲ ಸಂಗೀತದ ಬಾಹ್ಯ ತತ್ವಗಳಿಗೆ ಹೆಚ್ಚು ಮಹತ್ವವನ್ನು ಕೊಡಲಾರಂಭಿಸಿದರು. ವೇದಕಾಲದಲ್ಲಿ ಆದಂತೆಯೇ ಸಂಗೀತದ ಇತಿಹಾಸವು ಪುರಾಣ ಕಾಲದಲ್ಲಿ ಆಗಲಿಲ್ಲ.

ಕ್ಯಾಪ್ಪನ್ಡೇ ಅವರು ತಮ್ಮ 'ದಿ ಹಿಸ್ಟರಿ ಆಫ್ ವರ್ಲ್ಡ್ ಮ್ಯೂಸಿಕ್' ಎಂಬ ಗ್ರಂಥದಲ್ಲಿ ಈ ಪ್ರಕಾರ ಬಗೆದಿದ್ದಾರೆ. ''ಪುರಾಣ ಯುಗದಲ್ಲಿ ಸಂಗೀತದ ಸ್ಥಿತಿ ಉತ್ತಮವಾಗಿತ್ತು. ಯಜ್ಞಕಾರ್ಯಗಳಲ್ಲಿ ವಿಶೇಷ ಪ್ರಚಾರದಲ್ಲಿದ್ದ ವೈದಿಕ ಯುಗದ ಸಂಗೀತವು ಮಾನವನ ವ್ಯಕ್ತಿತ್ವದಲ್ಲಿ ಬಂಧಿತವಾಗಿತ್ತು. ಈ ಯುಗದಲ್ಲಿ ಜೀವನದ ಪರಮೋದ್ದೇಶ ಮೋಕ್ಷವೆಂದು ಭಾವಿಸಲಾಗಿತ್ತು. ಮತ್ತು ಸಂಗೀತ ಮೋಕ್ಷ ಪ್ರಾಪ್ತಿಯ ಒಂದು ಸಾಧನವೆಂದು ನಂಬಲಾಗಿತ್ತು. ಆದುದರಿಂದ ಸಂಗೀತ ಪ್ರಸಾರಕ್ಕೆ ಯಾವ ಚ್ಯುತಿಯೂ ಉಂಟಾಗಲಿಲ್ಲ. ವೈದಿಕ ಯುಗದ ಹಾಗೂ ಪೌರಾಣಿಕ ಯುಗದ ಸಂಗೀತದಲ್ಲಿ ಸ್ವಲ್ಪ ವ್ಯತ್ಯಾಸ ಕಂಡು ಬರುತ್ತದೆ. ಸಮಾಜದಲ್ಲಿ ಸಂಗೀತವನ್ನು ಕುರಿತು ಚರ್ಚಾಕೂಟಗಳು ಏರ್ಪಡುತ್ತಿದ್ದವು. ಆದರೆ ಇಂತಹ ಚರ್ಚಾಕೂಟಗಳಲ್ಲಿ ಸಂಗೀತದ ಕಲಾಂಶದ ಕಡೆಗೆ ವಿಶೇಷ ಗಮನ ಕೊಡದೆ ಜೀವನದ ಮಾರ್ಗವನ್ನು ತೋರಿಸಿ ಮಾನವನನ್ನು ಪ್ರಗತಿಯತ್ತ ಸಾಗಿಸುವದನ್ನು ಕುರಿತು ಚರ್ಚಿಸಲಾಗುತ್ತಿತ್ತು. ಪುರಾಣ ಕಾಲದಲ್ಲಿ ಹೊಸ ವಾದ್ಯ ಯಂತ್ರಗಳ ಆವಿಷ್ಕಾರವಾಗಲಿಲ್ಲ. ಕೇವಲ ವೈದಿಕ ವಾದ್ಯ ಯಂತ್ರಗಳ ಪ್ರಯೋಗ ಮಾಡಲಾಗುತ್ತಿತ್ತು. ಆದ್ದರಿಂದ ಪುರಾಣ ಯುಗದಲ್ಲಿ ಸಂಗೀತ ವಾದ್ಯ ಯಂತ್ರಗಳ ವಿಕಾಸವಾಗದೇ ಗಾಯನ ಹಾಗೂ ನೃತ್ಯ ಪ್ರಕಾರಗಳ ವಿಕಾಸವಾಯಿತೆನ್ನಬಹುದು ಗಾಯನದ ಹೊಸ ಪದ್ಧತಿಗಳ ಪ್ರಸಾರವು ಸಹ ಈ ಕಾಲದಲ್ಲಿ ಆದದ್ದು ಕಂಡು ಬರುತ್ತದೆ.''[೧೪] ಪುರಾಣ ಕಾಲದಲ್ಲಿ ಅದು ಧಾರ್ಮಿಕ ಹಿನ್ನೆಲೆಯನ್ನು ಕಳೆದುಕೊಳ್ಳುತ್ತ ಕೆಳಮಟ್ಟಕ್ಕಿಳಿಯ ತೊಡಗಿತೆಂದೂ ಹೇಳಬಹುದು.

## ೨.೧೩. ರಾಮಾಯಣ ಕಾಲದಲ್ಲಿ ಸಂಗೀತ

ರಾಮಾಯಣ ಮಹಾಕಾವ್ಯವವು ವಾಲ್ಮೀಕಿ ಮಹರ್ಷಿಯ ಒಂದು ಶ್ರೇಷ್ಠ ಕೃತಿಯಾಗಿದೆ. ಭಾರತದ ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವ ಈ ಕಾವ್ಯ ಅನುಷ್ಟುಪ್ ಛಂದಸ್ಸಿನಲ್ಲಿದ್ದು ವೀಣೆಯ ಜೊತೆಗೆ ತಾಳ,

---

೧೪. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೩೧

ಲಯಬದ್ಧವಾಗಿದ್ದು ಸುಶ್ರಾವ್ಯವಾಗಿ ಹಾಡಲ್ಪಡುತ್ತದೆ. ರಾಮಾಯಣದಲ್ಲಿ ಆ ಕಾಲದ ಸಂಗೀತ ತತ್ವಗಳ ವಿವರಣೆ ಕಂಡು ಬರುತ್ತದೆ. ಸಂಗೀತದ ಮೂರು ಅಂಗಗಳಾದ ಗಾಯನ, ವಾದನ ಹಾಗೂ ನೃತ್ಯಗಳು ಈ ಕಾಲದಲ್ಲಿ ಸಾಕಷ್ಟು ಪ್ರಚಾರದಲ್ಲಿದ್ದ ಬಗೆಗೆ ತಿಳಿದುಬರುತ್ತದೆ. ಅಲ್ಲದೇ ಸಂಗೀತದ ಕಾಲಪಕ್ಷ ಹಾಗೂ ಶಾಸ್ತ್ರಪಕ್ಷ ಇವೆರಡೂ ಆ ಕಾಲದಲ್ಲಿ ಉನ್ನತ ಸ್ಥಿತಿಯನ್ನು ಮುಟ್ಟದ ಬಗೆಗೂ ವಿಧಿತವಾಗುತ್ತದೆ.

ಪುರಾಣಕಾಲದಲ್ಲಿ ಸಂಗೀತವನ್ನು ಸಣ್ಣಪುಟ್ಟ ವರ್ಗಗಳಲ್ಲಿ ವಿಭಜಿಸಿದ್ದು ಅಖಂಡವಾಗಿ ಇದರ ಪ್ರವಾಹ ಪ್ರಾರಂಭವಾಯಿತು. ಸಮಾಜದಲ್ಲಿ ನೈತಿಕಮಟ್ಟವು ಉಚ್ಛಸ್ಥಿತಿಯನ್ನು ಹೊಂದಲು ಪ್ರಾರಂಭಿಸಿತು. ರಾಮಾಯಣದಲ್ಲಿ 'ಸಾಮ' ಹಾಗೂ 'ಗಾಂಧರ್ವ' ಇವೆರಡೂ ಸಾಕಷ್ಟು ಪ್ರಮಾಣದಲ್ಲಿದ್ದವು. ಸಾಮಗಾಯನವು ಕೇವಲ ಯಜ್ಞ ಯಾಗಗಳಿಗೆ ಮಾತ್ರ ಸೀಮಿತವಾಗಿತ್ತು. ಗಾಂಧರ್ವವು ಯಜ್ಞಯಾಗಗಳನ್ನು ಬಿಟ್ಟು ಉಳಿದ ವಿಶೇಷ ಪ್ರಸಂಗಗಳಲ್ಲಿ ಉಪಯೋಗಿಸುವಂತಹ ಲೌಕಿಕ ಸಂಗೀತವಾಗಿತ್ತು. ಇದರ ಮಾರ್ಗ ವಿಧಾನ ಅಭಿಜಾತ ಸಂಗೀತದ ದ್ಯೋತಕವಾಗಿತ್ತು. ಇದರಲ್ಲಿ ಗೀತ ಹಾಗೂ ವಾದ್ಯಗಳನ್ನು ಬಳಸಲಾಗುತ್ತಿತ್ತು. ಗಾಂಧರ್ವದ ಗಾಯನ ಮಾಡುವವರಿಗೆ ಗಾಂಧರ್ವರು ಎಂದು ಕರೆಯುತ್ತಿದ್ದರು. ಗಂಧರ್ವರು ವಿಶೇಷತಃ ಗಾನ ಹಾಗೂ ವೀಣಾವಾದನ ಮಾಡುತ್ತಿದ್ದರು. ದೇವಗಂಧರ್ವರಲ್ಲಿ ನಾರದ, ತುಂಬರು, ಹಾಹಾ, ಹೂಹೂ, ಪರ್ವತ, ವಿಶ್ವಾವಸ ಮುಂತಾದವರ ಉಲ್ಲೇಖ ಸಿಗುತ್ತದೆ. ಸುಂದರ ಅಪ್ಸರೆಯರು ನೃತ್ಯಕಲೆಯಲ್ಲಿ ಪ್ರವೀಣರಾಗಿದ್ದರು.

ಗಾಂಧರ್ವ ವಿದ್ಯೆಯಲ್ಲಿ ಪರಿಪೂರ್ಣತೆ ಪಡೆಯಲು ಸಂಗೀತ ಸಿದ್ಧಾಂತಗಳ ಜ್ಞಾನ, ಗುರು ಮುಖದಿಂದ ಸಂಗೀತ ಶಿಕ್ಷಣ, ಗೀತಸ್ವರಗಳ ಸ್ಪಷ್ಟ ಉಚ್ಛಾರಣೆ ಕಾವ್ಯದ ಭಾವಕ್ಕೆ ಅನುಗುಣವಾಗಿ ಹಾಡುವುದು ಇತ್ಯಾದಿ ತತ್ವಗಳು ಅವಶ್ಯಕವೆಂದು ಭಾವಿಸಲಾಗುತ್ತಿತ್ತು.

ರಾಮಾಯಣ ಕಾಲದಲ್ಲಿ ಸಂಗೀತವು 'ಮಾರ್ಗೀಯ' ಹಾಗೂ 'ದೇಶೀ' ಎಂಬ ಎರಡು ಶೈಲಿಗಳಲ್ಲಿ ಪ್ರಚಾರದಲ್ಲಿತ್ತು. ಜಾತಿ ಹಾಗೂ ರಾಗಗಳ ಪ್ರಸಾರ ಸರಿ ಸಮಾನವಾಗಿತ್ತು. ರಾಗಗಳಲ್ಲಿ 'ಕೈಶಿಕ್' ಎಂಬ ರಾಗದ ಪ್ರಚಾರ ವಿಶೇಷವಾಗಿತ್ತು.

ರಾಮಾಯಣ ಕಾಲದಲ್ಲಿ ಶಾಸ್ತ್ರೀಯ ಸಂಗೀತ ಪ್ರಚಾರ ಸಾಕಷ್ಟಿದ್ದು ಸಂಗೀತಾಭ್ಯಾಸಕ್ಕೆ ವಿಶೇಷ ಗಮನಕೊಡಲಾಗುತ್ತಿತ್ತು. ಸಂಗೀತಕ್ಕೆ ರಾಜಾಶ್ರಯವಿತ್ತು ಶ್ರೀ ಕೋಕಡನಿಯವರು 'ಸಂಗೀತದ ಸಂಕ್ಷಿಪ್ತ ಇತಿಹಾಸ'ದಲ್ಲಿ ರಾಮಾಯಣದ ಸಂಗೀತದ ಬಗೆಗೆ ಹೀಗೆ ಬರೆದಿದ್ದಾರೆ.

ರಾಮಾಯಣ ಕಾಲದಲ್ಲಿ ಜನರಲ್ಲಿ ಸಂಗೀತ ಶಿಕ್ಷಣದ ಬಗೆಗೆ ಅಭಿರುಚಿ ಬೆಳೆಯುತ್ತಿತ್ತು. ಬಾಲಕರಲ್ಲಿಯೂ ಸಂಗೀತ ಪ್ರಿಯತೆ ಕಂಡುಬರುತ್ತಿತ್ತು.ಸ್ತ್ರೀಯರು ತಮ್ಮ ಬಿಡುವಿನ ಸಮಯದಲ್ಲಿ ನೃತ್ಯಾಭ್ಯಾಸ ಮಾಡುತ್ತಿದ್ದರು ಅನೇಕ ಪ್ರಕಾರ ನೃತ್ಯಗಳ ಪ್ರಚಾರ ಈ ಕಾಲದಲ್ಲಿ ಆರಂಭವಾಯಿತು. ಮೃದಂಗ ವಾದ್ಯದ ಪ್ರಚಾರವೂ ಈ ಕಾಲದಲ್ಲಿತ್ತು. ರಾವಣನು ಸ್ವತಃ ಶ್ರೇಷ್ಠ ಸಂಗೀತಜ್ಞನಾಗಿದ್ದುದರಿಂದ ಅವನ ರಾಜ್ಯದಲ್ಲಿಯೂ ಸಂಗೀತಕ್ಕೆ ಒಳ್ಳೆಯ ಸ್ಥಾನವಿತ್ತು.

ರಾಮರಾಜ್ಯದಲ್ಲಿ ಜೀವನ ನಿರ್ವಹಣೆಯ ಬಗ್ಗೆ ಜನರಿಗೆ ಚಿಂತೆಯಿರಲಿಲ್ಲ ಪರಿಣಾಮವಾಗಿ ಜನರು ತಮ್ಮ ಅಧಿಕ ಸಮಯವನ್ನು ಸಂಗೀತ ಮುಂತಾದ ಕಲೆಗಳ ಸಾಧನೆಗಾಗಿ ಮೀಸಲಾಗಿಡುತ್ತಿದ್ದರು. ಭೇರಿ, ಘಟ, ಡಿಂಢಿಮ, ಮಡ್ಡುಕ, ಆಡಂಬರ ಮುಂತಾದ ವಾದ್ಯಯಂತ್ರಗಳ ಪ್ರಚಾರ ರಾಮಾಯಣ ಕಾಲದಲ್ಲಿದ್ದ ಬಗ್ಗೆ ತಿಳಿದು ಬರುತ್ತದೆ.

ರಾಮಾಯಣದಲ್ಲಿ ಸಂಗೀತದ ಬಗೆಗೆ ಅನೇಕ ರೂಪಕ ಹಾಗೂ ಉತ್ಪ್ರೇಕ್ಷೆಗಳು ಕಂಡುಬರುತ್ತವೆ. ಇದರಿಂದ ರಾಮಾಯಣ ಕಾಲದ ಸಾಮಾಜಿಕ ಹಾಗೂ ಸಾಹಿತ್ಯಕ ಜೀವನ ಸಂಗೀತಮಯವಾಗಿತ್ತೆಂದು ಊಹಿಸಬಹುದು. ವಾಲ್ಮೀಕಿ ಮಹರ್ಷಿ ಭಾರತೀಯ ಸಂಗೀತಕ್ಕೆ ಒಂದು ಅಪೂರ್ವ ಕಾಣಿಕೆ ನೀಡಿದ್ದಾನೆ ಎಂಬುದರಲ್ಲಿ ಏನೂ ಸಂದೇಹವಿಲ್ಲ.

## ೨.೧೪. ಮಹಾಭಾರತದ ಕಾಲದಲ್ಲಿ ಸಂಗೀತ

ಮಹಾಭಾರತದ ಕಾಲವನ್ನು ವೈದಿಕ ಸಂಸ್ಕೃತಿಯ ಉತ್ಕರ್ಷದ ಕಾಲವೆಂದು ಭಾವಿಸಲಾಗುತ್ತದೆ. ಆದ್ದರಿಂದ ಆಗ ವೈದಿಕ ಸಂಗೀತ ಪರಂಪರೆಯೂ ಪ್ರಚಾರದಲ್ಲಿತ್ತೆಂದು ತಿಳಿಯಬಹುದು. 'ಗೇಯ' ಪ್ರಬಂಧಗಳಲ್ಲಿ ಸಾಮ, ಗಾಥಾ ಹಾಗೂ 'ಮಂಗಳ ಗೀತ'ಗಳ ಪ್ರಚಾರವು ಆ ಕಾಲದಲ್ಲಿತ್ತೆಂದು ಪಂಡಿತರು ಅಭಿಪ್ರಾಯಪಡುತ್ತಾರೆ. 'ಗಾಥಾ' ಎಂಬ ಪ್ರಕಾರದ ಗಾಯನವನ್ನು ಗಂಧರ್ವರು ಹಾಗೂ ಕಥಾಗಾಯಕರು ಮಾಡುತ್ತಿದ್ದರು. ಮಹಾಭಾರತದ ನಿರ್ಮಾಣ ಪರಂಪರೆಯು 'ವೀರಗಾಥಾ'ಗಳ ಮೂಲಕ ಆಗಿದೆಯೆಂದು ಕೆಲ ವಿದ್ವಾಂಸರ ಅಭಿಪ್ರಾಯ. ವೈದಿಕ ಕಾಲದಲ್ಲಿ ಇದ್ದ ಹಾಗೇ ಮಹಾಭಾರತದ ಕಾಲದಲ್ಲಿಯೂ ಧರ್ಮ ಹಾಗೂ ಸಂಗೀತಕ್ಕೆ ಸಮಾನ ಸ್ಥಾನವಿತ್ತು. ಧಾರ್ಮಿಕ ಸಂಗೀತದಿಂದ ಜನರಲ್ಲಿ ಆಧ್ಯಾತ್ಮಿಕ ಭಾವನೆಗಳು ವಿಕಾಸಹೊಂದುತ್ತಿದ್ದವು.

ಮಹಾಭಾರತ ಕಾಲದಲ್ಲಿ ವೈದಿಕ ಹಾಗೂ ಲೌಕಿಕ ಎಂಬ ಎರಡೂ ಸಂಗೀತ ಪದ್ಧತಿಗಳು ಪ್ರಚಾರದಲ್ಲಿದ್ದವು. ಸಂಗೀತದಲ್ಲಿ ಷಡ್ಜ ಮುಂತಾದ ಸಪ್ತ ಸ್ವರಗಳ ವರ್ಣನೆ ಸಿಗುತ್ತದೆ. ಸ್ವರ, ಪದ ಸ್ತೋಮ ಮುಂತಾದವುಗಳ ಅಧ್ಯಯನವು ಸಹ ಈ ಕಾಲದಲ್ಲಿ ನಡೆಯುತ್ತಿತ್ತು. ವೀಣೆಯ ಮೇಲೆ ಗಾಂಧಾರ ಸ್ವರದ ಮೂರ್ಛನಗಳು ಸ್ಥಾಪನೆ ಮಾಡಿದ ಉಲ್ಲೇಖ ಮಹಾಭಾರತದಲ್ಲಿ ಸಿಗುತ್ತದೆ. ಕಂಠ ಸಂಗೀತದ ಜೊತೆಗೆ ಸಾಕಷ್ಟು ವಾದ್ಯಯಂತ್ರಗಳ ವರ್ಣನೆಗಳು ಸಹ ಮಹಾಭಾರತದಲ್ಲಿ ದೊರೆಯುತ್ತವೆ. ಉದಾ : ವೀಣಾ, ವೇಣು, ಮೃದಂಗಪಣವ, ಭೇರಿ, ಶಂಖ, ದುಂದುಭಿ, ಪಷ್ಕರ ಮುಂತಾದ ವಾದ್ಯಗಳಿಂದ ಯುದ್ಧದ ಸಮಯದಲ್ಲಿ ಅತಿ ಘೋರವಾದ ಧ್ವನಿ ಮಾಡಲಾಗುತ್ತಿತ್ತು.

ಮಹಾಭಾರತದಲ್ಲಿ ಭಗವಾನ್ ಶ್ರೀಕೃಷ್ಣನನ್ನು ಸಂಗೀತದ ಮಹಾನ್ ವಿದ್ವಾನನೆಂದು ವರ್ಣಿಸಲಾಗಿದೆ. ಅವನ ಸಂಗೀತ ಪಾಂಡಿತ್ಯದ ಬಗೆಗೆ ಶ್ರೀ ಉಮೇಶ ಜೋಶಿಯವರು ತಮ್ಮ 'ಭಾರತೀಯ ಸಂಗೀತದ ಇತಿಹಾಸ' ಎಂಬ ಗ್ರಂಥದಲ್ಲಿ ಈ ಪ್ರಕಾರ ಬರೆದಿದ್ದಾರೆ. ''ಈ ಯುದ್ಧದಲ್ಲಿ ಭಗವಾನ್ ಶ್ರೀಕೃಷ್ಣನು ಸಂಗೀತದ ಮಹಾನ್ ವಿದ್ವಾನನಾಗಿದ್ದನು. ಇವನು ಸಮಾಜದಲ್ಲಿ ಜ್ಞಾನದ ಪ್ರಚಾರವನ್ನಷ್ಟೇ ಅಲ್ಲದೆ ಸಂಗೀತದ ಪ್ರಚಾರವನ್ನು

ಮಾಡಿದ್ದನು ಸಂಗೀತದಲ್ಲಿ ಅವನಿಗೆ ಪೂರ್ಣ ಪಾಂಡಿತ್ಯವಿತ್ತು. ಅವನ ಸಂಗೀತದ ಮುಖ್ಯ ಕ್ರಿಯಾಸ್ಥಳವು ವಜ್ರಭೂಮಿಯಾಗಿತ್ತು. ವಜ್ರದ ಕಣಕಣದಲ್ಲಿ ಶ್ರೀಕೃಷ್ಣನ ವೇಣುವಾದನದ ಮಧುರ ಧ್ವನಿ ಇಂದಿಗೂ ನಿನಾದಿಸುತ್ತದೆ. ಯಮುನಾ ನದಿಯ ನೃತ್ಯಮಯ ಅಲೆಗಳನ್ನು ಗೋಪಿ-ಗೋಪಾಲಕರಿಗೆ ಮಂತ್ರಮೂಗ್ಧ ಗೀತವು ಪ್ರತಿಧ್ವನಿತವಾಗುವಂತೆ ಭಾಸವಾಗುತ್ತದೆ. ಗೋಪಿಯರು ಶ್ರೀಕೃಷ್ಣನನ್ನು ಪ್ರೀತಿಸುತ್ತಿದ್ದರು. ಅವನ ಮಾತುಗಳು ಮುಗ್ಧ ವೇಣುವಿನ ಮಧುರ ನಿನಾದಕ್ಕಿಂತ ಹೆಚ್ಚು ಆಕರ್ಷಕವಾಗಿದ್ದವು. ವೇಣುವಾದನದಲ್ಲಿ ಶ್ರೀ ಕೃಷ್ಣನು ಎಷ್ಟು ಪರಿಣಿತನಾಗಿದ್ದನೆಂದರೆ ಅವನ ಮುರಳಿಯ ಧ್ವನಿ ಕೇಳಿದ ಕೂಡಲೇ ಗೋಪಿಕಾ ಸ್ತ್ರೀಯರೆಲ್ಲ ತಾವು ಇದ್ದ ಸ್ಥಿತಿಯಲ್ಲಿಯೇ ಅವನ ಕಡೆಗೆ ಆಕರ್ಷಿತರಾಗುತ್ತಿದ್ದರು.''[೧೫]

ಪಾಂಡುಪುತ್ರ ಅರ್ಜುನನು ಸಹ ಮಹಾನ್ ಸಂಗೀತಜ್ಞನಾಗಿದ್ದನು. ಸಂಗೀತ ಪ್ರಸಾರ ಕಾರ್ಯದಲ್ಲಿ ಇವನು ಸಾಕಷ್ಟು ಸಹಾಯ ಮಾಡಿದ್ದಾನೆಂಬುದರ ಬಗೆಗೆ ಉಲ್ಲೇಖ ಸಿಗುತ್ತದೆ. ಶ್ರೀ ಕೃಷ್ಣನ ವೇಣುವಾದನ ಎಷ್ಟು ಮಧುರ ಹಾಗೂ ಅದ್ವಿತೀಯವಾಗಿತ್ತೋ ಅರ್ಜುನನ ವೀಣಾವಾದನವು ಕೂಡ ಅದ್ವಿತೀಯವಾಗಿತ್ತು. ಅವನಿಗೆ ನೃತ್ಯ ಕಲೆಯಲ್ಲಿ ಸಹ ಸಾಕಷ್ಟು ಪಾಂಡಿತ್ಯವಿತ್ತು. 'ಪಾಂಡವರ ಅಜ್ಞಾತವಾಸದಲ್ಲಿ ಅರ್ಜುನನು ಬೃಹನ್ನಳೆಯ ವೇಷ ಧರಿಸಿ ಸಂಗೀತ ಶಿಕ್ಷಕನಂತೆಯೇ ಕೆಲಸ ಮಾಡಿದನು. ವಿರಾಟ ರಾಜನ ಆಶ್ರಯದಲ್ಲಿದ್ದು ಅವನ ಪುತ್ರಿಯಾದ ಉತ್ತರೆಗೆ ಸಂಗೀತ ಕಲಿಸುತ್ತಿದ್ದನು.'

ಮಹಾಭಾರತದಲ್ಲಿ ಸಂಗೀತದ ವಿಕಾಸ ಕ್ರಮ ಹೇಗಿದ್ದಿತೆಂಬುದರ ಬಗೆಗೆ ಕೆಲವು ಪ್ರಮಾಣಗಳು ಸಿಗುತ್ತವೆ. ಉದಾ: ಪಾಂಚಾಲ ರಾಜನ ಸಭೆಯಲ್ಲಿ ಗೀತ ಹಾಗೂ ನೃತ್ಯ ಮುಂತಾದ ಕಾರ್ಯಕ್ರಮಗಳು ಯಾವಾಗಲೂ ನಡೆಯುತ್ತಿದ್ದವು. ದೇವಾಧಿಪತಿ ಇಂದ್ರನ ಸಭೆಯಲ್ಲಿ ಅರ್ಜುನನ ಸ್ವಾಗತವು ಗೀತ, ವಾದ್ಯ ಹಾಗೂ ನೃತ್ಯಗಳಿಂದ ನಡೆಯಿತು. 'ರೈವತಕ' ಪರ್ವತದಲ್ಲಿ ಲೋಕೋತ್ಸವದಲ್ಲಿ ಏರ್ಪಡಿಸಲಾದ ನೃತ್ಯ ಹಾಗೂ ಸಂಗೀತದಲ್ಲಿ ಭಾಗವಹಿಸಿದ ಶ್ರೀ ಕೃಷ್ಣ ಹಾಗೂ ಅರ್ಜುನರ ವರ್ಣನೆಗಳು ಕಂಡು ಬರುತ್ತವೆ.

ಶ್ರೀಕೃಷ್ಣನ ಭಗವದ್ಗೀತೆಯು ಒಂದು ಶ್ರೇಷ್ಠವಾದ, ಅದ್ವಿತೀಯ ಗ್ರಂಥ ಈ ಕಾವ್ಯದಲ್ಲಿ ಸಮಸ್ತ ಆಧ್ಯಾತ್ಮದ ಸಾರವಡಗಿದೆ. ಜ್ಞಾನಯೋಗ, ಭಕ್ತಿಯೋಗ, ಕರ್ಮಯೋಗ ಈ ಮೂರರ ಸಮನ್ವಯ ಇದರಲ್ಲಿದೆ. ನಿಷ್ಕಾಮ ಕರ್ಮವೇ ಗೀತೆಯ ಮುಖ್ಯ ಉಪದೇಶವಾಗಿದೆ. ಗೀತೆಯ ಈ ಉಪದೇಶದ ಪ್ರಭಾವವು ಸಂಗೀತದ ವಿವಿಧಾಂಗಗಳಲ್ಲಿ ಮೂಡಿಬಂದಿದೆ. ಮಾನವನ ಜೀವನ ಮಾರ್ಗವನ್ನು ಉದಾತ್ತೀಕರಿಸಲಿಕ್ಕೆ ಶ್ರೀಕೃಷ್ಣನು ಸಂಗೀತ ಹಾಗೂ ಗೀತೆಯ ಸಹಾಯ ತೆಗೆದುಕೊಂಡನು.

---

೧೫. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೩೮

## ೨.೧೫. ಪಾಣಿನಿ ಯುಗದಿಂದ ಬೌದ್ಧ ಯುಗದವರೆಗೆ ಸಂಗೀತದ ವಿಕಾಸ ಕ್ರಮ

### ೨.೧೫.೧. ಪಾಣಿನಿ ಯುಗದಲ್ಲಿ ಸಂಗೀತ

ಪಾಣಿನಿಯ ಕಾಲದಲ್ಲಿ ವೈದಿಕ ಸಂಗೀತದ ಪ್ರಚಾರವೂ ಇತ್ತು. ಪಾಣಿನಿಯ ಕಾಲದಲ್ಲಿ ಸಂಗೀತದ ರಚನಾಕಾರರು ಹಾಗೂ ಶಿಕ್ಷಕರು ಬ್ರಾಹ್ಮಣರಾಗಿದ್ದರು. ಧಾರ್ಮಿಕ ಮಂತ್ರಗಳನ್ನು ಹಾಗೂ ಸ್ತೋತ್ರಗಳನ್ನು ಕಂಠಪಾಠ ಮಾಡಲಾಗುತ್ತಿತ್ತು. ಆಗ ಸ್ವರಗಳ ಮೇಲೆ ವಿಶೇಷ ಗಮನ ಕೊಡಲಾಗುತ್ತಿತ್ತು. ಹೋಮ ಹವನದ ಸಮಯದಲ್ಲಿಯೂ ಸಂಗೀತದ ಬಳಕೆ ಮಾಡುತ್ತಿದ್ದರು. ವಾದ್ಯ ಸಂಗೀತಕ್ಕಿಂತ ಕಂಠ ಸಂಗೀತದ ಪ್ರಚಾರವೇ ಹೆಚ್ಚು ಪ್ರಮಾಣದಲ್ಲಿತ್ತು ಇತ್ಯಾದಿಗಳ ಉಲ್ಲೇಖ ದೊರೆಯುತ್ತಿದೆ. ಸಮಾಜದಲ್ಲಿ ವರ್ಣವ್ಯವಸ್ಥೆಯ ಜೊತೆಗೆ ನಾಲ್ಕು ವರ್ಣದವರಲ್ಲಿ ಸಂಗೀತದ ಪದ್ಧತಿಯೂ ಪ್ರಚಾರದಲ್ಲಿತ್ತು. ಶಾಸ್ತ್ರೀಯ ಸಂಗೀತದ ಜೊತೆಗೆ ಲೋಕ ಸಂಗೀತದ ವಿಕಾಸವೂ ನಡೆದಿತ್ತು. ಗ್ರಾಮ್ಯ ಜನರು ತಮ್ಮ ಮನಸ್ಸಿಗೆ ಬಂದ ರೀತಿಯಲ್ಲಿ ಗಾಯನ ವಾದನ ಮಾಡಿ ತಮ್ಮ ಮನೋಭಾವನೆಗಳನ್ನು ಸ್ವಚ್ಛಂಧವಾಗಿ ಪ್ರದರ್ಶನ ಮಾಡುತ್ತಿದ್ದರು. ಅವರ ಅಭಿವ್ಯಕ್ತಿಯಲ್ಲಿ ಗ್ರಾಮೀಣ ವಾತಾವರಣವೇ ಹೆಚ್ಚಾಗಿರುತ್ತಿತ್ತು.

### ೨.೧೫.೨. ಬೌದ್ಧ ಯುಗದಲ್ಲಿ ಸಂಗೀತ

ಈ ಯುಗದಲ್ಲಿ ಸಂಗೀತ ಕೇವಲ ಲೋಕ ಕಲ್ಯಾಣಕ್ಕೆ ಮೀಸಲಿತ್ತು. ನೈತಿಕ ಜೀವನವನ್ನು ಕಲುಷಿತಗೊಳಿಸುವ ವಿಲಾಸೀ ಸಂಗೀತಕ್ಕೆ ಆಗ ಮಹತ್ವವಿರಲಿಲ್ಲ. ಸಂಗೀತದಲ್ಲಿ ಒಂದು ರೀತಿಯ ಕ್ರಾಂತಿ ಪರ ಪರಿವರ್ತನೆ ಕಂಡು ಬರಲಾರಂಭಿಸಿತು. ಜೀವನಕ್ಕೆ ಸ್ಫೂರ್ತಿ ಹಾಗೂ ಆತ್ಮಕ್ಕೆ ಬೆಳಕು ತೋರಿಸುವಂತಹ ಸಂಗೀತದ ರಚನೆಗಳು ಪ್ರಾರಂಭವಾದವು. ಶೃಂಗಾರ ಗೀತ ರಚನೆಯ ಬದಲು ಅಲೌಕಿಕ ಆನಂದವನ್ನುಂಟು ಮಾಡುವ ಗೀತಗಳ ರಚನೆ ಆರಂಭವಾಯಿತು. ಬುದ್ಧನ ತತ್ವಜ್ಞಾನವನ್ನೊಳಗೊಂಡ ಆ ರಚನೆಗಳು ಜನತೆಯಲ್ಲಿ ಆಧ್ಯಾತ್ಮಿಕ ಭಾವನೆಗಳನ್ನು ಜಾಗೃತಗೊಳಿಸದವು. ಆಧ್ಯಾತ್ಮ ಸಾಧನೆಗೆ ಸಾಧಕವಾಗಬಲ್ಲ ಸಂಗೀತಕ್ಕೆ ಎಲ್ಲೆಡೆ ಗೌರವಾದರಗಳು ಲಭ್ಯವಾದವು.

ಈ ಯುಗದ ಸಂಗೀತದಲ್ಲಿ ಸ್ವರ, ಗ್ರಾಮ, ಮೂರ್ಛನಾ ಇವುಗಳ ಜೊತೆಗೆ ರಾಗಗಳ ಪ್ರಚಾರವೂ ಸಹ ಪ್ರಾರಂಭವಾಯಿತು. ಆ ಕಾಲದ ಸುಸಂಸ್ಕೃತ ಪರಿವಾರಗಳಲ್ಲಿಯೂ, ಸಂಗೀತದ ಅಧ್ಯಯನ ನಡೆಯುತ್ತಿತ್ತು. ಸಂಗೀತ ಕಲೆಯಲ್ಲಿ ಪರಿಣತಿ ಪಡೆದ ನರ್ತಕಿಯರಿಗೆ, ಗಾಯಕರಿರಿಗೆ ವಿಶೇಷ ಆದರವಿತ್ತು.

ಈ ಕಾಲದಲ್ಲಿ ತತ್, ಸುಷಿರ, ಅವನದ್ಧ ಹಾಗೂ ಘನ ಈ ಚತುರ್ವಿಧ ವಾದ್ಯಗಳು ಪ್ರಚಾರದಲ್ಲಿದ್ದವು. ತತ್ ವಾದ್ಯಗಳಲ್ಲಿ ವೀಣಾ, ವಲ್ಲಕಿ, ತುಂಬವೀಣಾ, ಮಹತಿ, ಕಚ್ಛಪಿ ಇತ್ಯಾದಿ ವಾದ್ಯಗಳು. ಅವನದ್ದ ವಾದ್ಯಗಳಲ್ಲಿ ದುಂದುಭಿ, ಪಣವ, ಮೃದಂಗ, ಭೇರಿ ಮುಂತಾದವುಗಳು. ಸುಷಿರ ವಾದ್ಯಗಳಲ್ಲಿ ಶಂಖ, ಶೃಂಗ, ತೂರ್ಯಗಳು ಹಾಗೂ ಘನ ವಾದ್ಯಗಳಲ್ಲಿ ಝಲ್ಲರಿ, ಘಂಟಾ ಮುಂತಾದ ವಾದ್ಯಗಳು ರೂಢಿಯಲ್ಲಿದ್ದವು. ವೀಣೆಯಲವ್ಲಿ ಸಪ್ತತಂತ್ರೀವೀಣಾ ಎಂದರೆ ಏಳು ತಂತಿಗಳುಳ್ಳ ವೀಣಾ ಅಧಿಕ ಲೋಕಪ್ರಿಯವಾಗಿತ್ತು. ವೀಣಾ ಹಾಗೂ ಮೃದಂಗ ಬಾರಿಸುವಾಗ ವಾದನ ದಂಡದ ಪ್ರಯೋಗ ಮಾಡಲಾಗುತ್ತಿತ್ತು.

ಬೌದ್ಧ ಯುಗದಲ್ಲಿ ಸಂಗೀತ ಹಾಗೂ ನಾಟಕಕ್ಕೆ ರಾಜಾಶ್ರಯವಿತ್ತು. ರಾಜಸಭೆಯಲ್ಲಿ ಅನೇಕ ಗಾಯಕ, ವಾದಕ ಹಾಗೂ ನರ್ತಕಿಯರನ್ನು ನೇಮಿಸಲಾಗುತ್ತಿತ್ತು. ತಕ್ಷಶಿಲಾ, ವಿಕ್ರಮಶಿಲಾ ಹಾಗೂ ನಾಲಂದಾ ಮುಂತಾದ ವಿಶ್ವವಿದ್ಯಾಲಯಗಳಲ್ಲಿ ಸಂಗೀತ ಬೋಧನೆಯ ಏರ್ಪಾಡಿತ್ತು. ಬೌದ್ಧ ವಾಙ್ಮಯದಲ್ಲಿ ಸಂಗೀತ ಸಲಕರಣೆಗಳ ಉಲ್ಲೇಖ ಬರುತ್ತದೆ. ಅದು ಆ ಕಾಲದ ಸಂಗೀತ ಪರಂಪರೆಯ ಬಗೆಗೆ ತಿಳುವಳಿಕೆ ಕೊಡಲು ಅತ್ಯಂತ ಸಹಾಯ ನೀಡುತ್ತದೆ. ''ಥೇರಿಗಾಥಾ' ಬೌದ್ಧಯುಗದ ಸಂಗೀತದ ಬಗೆಗಿರುವ ಒಂದು ಉತ್ಕೃಷ್ಟ ರಚನೆ ಬೌದ್ಧ ಭಿಕ್ಷುಣಿಯರ ಭಾವನಾತ್ಮಕ ಗೀತಗಳ ಸಂಗ್ರಹವಾಗಿದೆ. 'ಥೇರಿಗಾಥಾ' ಬಗ್ಗೆ ಶ್ರೀ ಉಮೇಶ ಜೋಶಿಯವರು ಈ ಪ್ರಕಾರ ಬರೆದಿದ್ದಾರೆ. 'ಥೇರಿಗಾಥಾ' ಗ್ರಂಥಕ್ಕೆ ಬೌದ್ಧ ವಾಙ್ಮಯದಲ್ಲಿ ಒಂದು ವಿಶೇಷ ಸ್ಥಾನವಿದೆ. ಪಾಲೀ ಭಾಷೆಯಲ್ಲಿ ಶ್ಲೋಕಕ್ಕೆ 'ಗಾಥಾ' ಎಂದು ಹೇಳುತ್ತಾರೆ. ಈ ಗಾಥೆಗಳಲ್ಲಿ ಸಂಗೀತವು ಆಧ್ಯಾತ್ಮಿಕ ಹಿನ್ನೆಲೆಯಲ್ಲಿ ನಿರೂಪಗೊಂಡಿದೆ. ಭಿಕ್ಷುಣಿಯರ ಈ ಗಾಥೆಗಳಲ್ಲಿ ಒಂದು ರೀತಿಯ ಆತ್ಮ ಸಮರ್ಪಣ ಭಾವ ಕಂಡು ಬರುತ್ತದೆ. 'ಥೇರಿಗಾಥಾ' ದಲ್ಲಿ ಜನಜೀವನದ ಚಿತ್ರಣವು ಅತ್ಯಂತ ಸಜೀವವಾಗಿ ಮೂಡಿಬಂದಿದೆ. ಸ್ತ್ರೀಯರು ದುಃಖ ಹಾಗೂ ಕ್ಲೇಶಾದಿಗಳಿಂದ ಮುಕ್ತರಾಗಿ ಸಂಘದ ಕಡೆಗೆ ಹೇಗೆ ಆಕರ್ಷಿತರಾಗುತ್ತಿದ್ದರೆಂಬುದರ ಬಗೆಗೆ ತಿಳಿದು ಬರುತ್ತದೆ. 'ಥೇರಿಗಾಥಾ'ದಲ್ಲಿ ಒಟ್ಟಿಗೆ ೫೨೨ ಗೀತೆಗಳಿದ್ದು, ೭೩ ಭಿಕ್ಷುಣೆಯರು ಇವನ್ನು ರಚಿಸಿದ್ದಾರೆ. ಇವರೆಲ್ಲರೂ ಭಗವಾನ್ ಗೌತಮ ಬುದ್ಧನ ಶಿಷ್ಯೆಯರಾಗಿದ್ದರು.''[೧೬]

## ೨.೧೬. ಜೈನಯುಗದಲ್ಲಿ ಸಂಗೀತ

ಜೈನಯುಗವು ಒಂದು ಅಪೂರ್ವವಾ ಮಾನಸಿಕ, ಆಧ್ಯಾತ್ಮಿಕ ಹಾಗೂ ಕಲಾತ್ಮಕ ಕ್ರಾಂತಿಯ ಯುಗವಾಗಿತ್ತೆಂದು ಹೇಳಲಾಗುತ್ತದೆ. ಅದರಂತೆ ಆ ಕಾಲದ ಸಂಗೀತದಲ್ಲಿಯೂ ಅನೇಕ ಕ್ರಾಂತಿಕಾರಕ ಮಾರ್ಪಾಡುಗಳಾದವು. ಜೈನಧರ್ಮ ಗ್ರಂಥಗಳಲ್ಲಿ ಜೈನಯುಗದ ಸಂಗೀತ ಹಾಗೂ ಅದರ ವಿಕಾಸ ಕ್ರಮದ ಬಗ್ಗೆ ಹೆಚ್ಚಿನ ವಿಷಯಗಳು ತಿಳಿದು ಬರುತ್ತವೆ. ಜೈನ ವಿದ್ವಾಂಸರು ರಚಿಸಿದ 'ರಾಸ್ ಚೌವಾಯಿ' ಮುಂತಾದ ಚಉತ್ರ ಕಾವ್ಯಗಳಲ್ಲಿ 'ಸಂಜ್ಞಾಯ ಹಾಗೂ ಗೀತ' ಮುಂತಾದ ರಚನೆಗಳಲ್ಲಿ ಆ ಸಮಯದಲ್ಲಿ ಪ್ರಚಾರದಲ್ಲಿದ್ದ ದೇಶೀ ಸಂಗೀತದ ಪ್ರಯೋಗಗಳನ್ನು ಮಾಡಿದ್ದಾರೆ. ಈ ಯುಗದಲ್ಲಿ ಜಾನಪದ ಗೀತಗಳ ಪ್ರಚಾರ ಸಾಕಷ್ಟಿತ್ತೆಂದು ಕಂಡು ಬರುತ್ತದೆ.

ಜೈನಯುಗದಲ್ಲಿ ಸಂಗೀತಕ್ಕೆ ರಾಜಾಶ್ರಯವಿತ್ತು. ಆಗಿನ ಕಾಲದ ರಾಜರುಗಳಲ್ಲಿ ಕೆಲವರು ಶ್ರೇಷ್ಠ ಸಂಗೀತ ವಿದ್ವಾಂಸರೂ ಆಗಿದ್ದರು. ಉದಾಹರಣೆಗೆ 'ರಾಜಾ ಉದಯನು' ಮಹಾನ್ ಸಂಗೀತಜ್ಞನಾಗಿದ್ದನು. ಉದಯನು ತನ್ನ ಪತ್ನಿಯು ನಾಟ್ಯವಾಡುತ್ತಿದ್ದಾಗ ಹಿಮ್ಮೇಳದಲ್ಲಿ ವೀಣೆಯನ್ನು ನುಡಿಸುತ್ತಿದ್ದನು. ಈ ಕಾಲದಲ್ಲಿ ಸಂಗೀತ ತಜ್ಞರಿಗೆ ರಾಜಾಸ್ಥಾನದಲ್ಲಿ ಆಶ್ರಯವಿತ್ತು. ಅನೇಕ ಬಗೆಯ ಉತ್ಸವ ಸಮಾರಂಭಗಳಲ್ಲಿ ವಿಶೇಷವಾಗಿ ಧಾರ್ಮಿಕ

---

೧೬. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೪೩

ಕಾರ್ಯಕ್ರಮಗಳಲ್ಲಿ, ನಾಗರಿಕರು ಹಾಗೂ ಗ್ರಾಮ್ಯ ಜನರ ಗೀತ ಹಾಗೂ ನೃತ್ಯಗಳ ಕಾರ್ಯಕ್ರಮಗಳು ನಡೆಯುತ್ತಿದ್ದವು. ಗಾಯಕ, ನರ್ತಕ ಹಾಗೂ ನಟರ ಸಮೂಹವು ನಾಡಿನ ಬೇರೆ ಬೇರೆ ಸ್ಥಳಗಳಲ್ಲಿ ಸಂಚರಿಸಿ ಗ್ರಾಮ್ಯ ಜನರಿಗೆ ಮನರಂಜನೆ ನೀಡುತ್ತಿದ್ದವು. ಹೋಳಿ ಹಬ್ಬದ ಸಮಯದಲ್ಲಿ ಕೆಳವರ್ಗದ ಜನರು ನಗರದ ಮಾರ್ಗಗಳ ಮೇಲೆ ಸಾಮೂಹಿಕ ಗಾಯನ ಹಾಗೂ ನರ್ತನ ಮಾಡುತ್ತಿದ್ದರು.

'ಸಖಂಡಿ' ಅಥವಾ 'ಭೋಜ್ಯ' ಎಂಬ ಉತ್ಸವಗಳಲ್ಲಿ ಸಾಮೂಹಿಕ ಸಂಗೀತದ ಜೊತೆಗೆ ಸಾಮೂಹಿಕ ಭೋಜನ ಪದ್ಧತಿಯೂ ಆ ಕಾಲದಲ್ಲಿ ಪ್ರಚಾರದಲ್ಲಿತ್ತು. ಸಂಗೀತವು ಕೂಡಾ ಜೀವನದ ಒಂದು ಅವಶ್ಯಕ ಅಂಗವೆಂದು ಆಗ ಭಾವಿಸಲಾಗುತ್ತಿತ್ತು.

ವೇದ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತದ ಬಗೆಗೆ ಯಾವ ಧಾರ್ಮಿಕ ಭಾವನೆಗಳಿದ್ದವೋ ಅವು ಈ ಜೈನಯುಗದಲ್ಲಿ ದೂರವಾದವು. ವೇದಕಾಲದಲ್ಲಿಯ ಸಂಗೀತದ ಮೇಲೆ ಬ್ರಾಹ್ಮಣರ ಏಕಮಾತ್ರ ಅಧಿಕಾರವಿತ್ತು. ಆದರೆ ಅದು ಜೈನ ಯುಗದಲ್ಲಿ ಜನ ಸಾಮಾನ್ಯರ ಕೈಯನ್ನು ಸೇರಿತು. ಆ ಕಾಲದ ಬ್ರಾಹ್ಮಣರು ಶೂದ್ರರಿಗೆ ಅಥವಾ ಕೆಳವರ್ಗದ ಜಾತಿಯವರಿಗೆ ಸಂಗೀತವನ್ನು ಕಲಿಸುತ್ತಿರಲಿಲ್ಲ. ಸಂಗೀತವು ಕೇವಲ ಈಶ್ವರೋಪಾಸನೆಗೆ ಒಂದು ಅವಶ್ಯಕ ಮಾಧ್ಯಮವಾಗಿತ್ತು. ಹಾಗಾದರೆ ಸಂಗೀತವಿಲ್ಲದೆ ಕೆಳವರ್ಗದ ಜಾತಿಯವರಿಗೆ ಈಶ್ವರೋಪಾಸನೆ ಹೇಗೆ ಸಾಧ್ಯ ? ಈ ಸಮಸ್ಯೆಯನ್ನು ಮಹಾವೀರನು ನೀಗಿಸಿದನು. ಅವರಿಗಾಗಿಯೇ ಪ್ರಪ್ರಥಮವಾಗಿ ಒಂದು ಆದೇಶವನ್ನು ನೀಡಿದನು. ಇದರಲ್ಲಿ ಪ್ರತಿಯೊಬ್ಬ ಮಾನವನು, ಆತನು ಯಾವ ಮತದವನೇ ಆಗಿರಲಿ, ಯಾವ ಕುಲದವನೇ ಆಗಿರಲಿ, ಆತ್ಮಕಲ್ಯಾಣ ಮಾಡಬಹುದು. ಹಾಗೂ ಈ ಆತ್ಮಕಲ್ಯಾಣಕ್ಕಾಗಿ ಸಂಗೀತ, ಅದರ ವಿಧಿ ನಿಯಮಗಳನ್ನು ಕಲಿಯಬಹುದು. ಹೀಗೆ ಮಹಾವೀರನು ಸಂಗೀತದ ಬಗೆಗಿರುವ ಧಾರ್ಮಿಕ ಬಂಧನಗಳನ್ನು ಪ್ರಪ್ರಥಮವಾಗಿ ಶಿಥಲೀಕರಿಸಿದನು. ಇದರಿಂದ ಶೂದ್ರರಲ್ಲಿ ಹಾಗೂ ಕೆಳಜಾತಿಯ ಜನರಲ್ಲಿ ಕೊಂಚ ಪರಿವರ್ತನೆಯುಂಟಾಗಿ ಅವರಲ್ಲಿ ಕಲಾತ್ಮಕ ಚೈತನ್ಯ ಮೂಡಲಾರಂಭಿಸಿತು. ಅವರು ಕೂಡಾ ಸಂಗೀತದ ಮಹತ್ವವನ್ನು ಅರಿತು ಜೀವನದಲ್ಲಿ ಅದಕ್ಕೆ ಒಂದು ಪವಿತ್ರವಾದ ಸ್ಥಾನವನ್ನು ಕೊಟ್ಟರು.

## ೨.೧೭. ಮೌರ್ಯ, ರಜಪೂತ ಹಾಗೂ ನಾಗಯುಗದವರೆಗೆ ಸಂಗೀತ

ಚಂದ್ರಗುಪ್ತನು ಎಷ್ಟು ಶೂರ ಹಾಗೂ ಪರಾಕ್ರಮಿಯಾಗಿದ್ದನೋ, ಅಷ್ಟೇ ಕಲಾಪ್ರೇಮಿಯೂ ಆಗಿದ್ದನು. ಸಂಗೀತದ ವಿಕಾಸಕ್ಕಾಗಿ ಅವನು ಸಾಕಷ್ಟು ಪ್ರಯತ್ನಿಸಿದನು. ಪ್ರತಿದಿನವೂ ಅವನ ಅರಮನೆಯಲ್ಲಿ ಸಂಗೀತ ಹಾಗೂ ನೃತ್ಯ ಕಾರ್ಯಕ್ರಮಗಳು ನಡೆಯುತ್ತಿದ್ದವು. ಅವನ ಆಸ್ಥಾನವು ಏಶಿಯಾದ ಬೇರೆ ಬೇರೆ ಭಾಗಗಳಿಂದ ತರಿಸಲಾದ ಅತ್ಯುತ್ತಮ ವಿಲಾಸೀ ವಸ್ತುಗಳಿಂದ ಅಲಂಕೃತವಾಗಿತ್ತು. ಅಂತ ವಿಲಾಸೀ ವಸ್ತುಗಳಲ್ಲಿ ಸೌಂದರ್ಯವತಿಯರಾದ ದಾಸಿಯರು ಸಕಲ ಕಲಾ ಸಂಪನ್ನರಾದ ವೇಶ್ಯಾ ಸ್ತ್ರೀಯರು, ನರ್ತಕಿಯರು ಕೂಡಾ ಸಮಾವೇಶಗೊಂಡಿದ್ದರು. ರೂಪ ಸಂಪನ್ನೆಯರಾದ ಬಾಲಕಿಯರಿಗೆ ಚಿಕ್ಕಂದಿನಿಂದಲೇ ಸಂಗೀತ ಮತ್ತು ನಾಟ್ಯ ಶಿಕ್ಷಣ ಕೊಡಿಸಿ. ಕಲೆಗಳಲ್ಲಿ

ಅವರನ್ನೂ ಪರಿಪೂರ್ಣರನ್ನಾಗಿ ಮಾಡಿ 'ಗುಪ್ತ ಚಾರರ' ಕೆಲಸಕ್ಕೆ ನಿಯಮಿಸುತ್ತಿದ್ದರು. ಹಾಗೂ 'ವಿಷಕನ್ಯೆ' ಯರಿಗೆ ತರಬೇತಿ ನೀಡಿ ಅವರನ್ನು ತಮ್ಮ ಕಾರ್ಯಸಾಧನೆಗೆ ಉಪಯೋಗಿಸಿಕೊಳ್ಳುತ್ತಿದ್ದರು. ಗಾಯಕ, ವಾದಕ, ನರ್ತಕ ಹಾಗೂ ನಟ ಮುಂತಾದ ಕಲಾವಿದರಿಗೆ ಯೋಗ್ಯ ಶಿಕ್ಷಣ ನೀಡುವ ಪಂಡಿತರಿಗೆ ಗೌರವ ಧನವನ್ನು ಕೊಟ್ಟು ಸನ್ಮಾನಿಸಲಾಗುತ್ತಿತ್ತು.

ಸಂಗೀತವು ಕೇವಲ ನಗರದ ನಾಗರಿಕರಲ್ಲಿ ಮಾತ್ರವಲ್ಲದೆ ನಾಡಿನ ಗ್ರಾಮಾಂತರ ಪ್ರದೇಶದ ಜನ ಸಾಮಾನ್ಯರಲ್ಲೂ ರೂಢಿಯಲ್ಲಿತ್ತು. ಕೌಟಿಲ್ಯನ ಅರ್ಥಶಾಸ್ತ್ರದ ಉಲ್ಲೇಖವು ಇದಕ್ಕೆ ಪುಷ್ಟಿಕೊಡುತ್ತದೆ. ರಾಜನಿಂದಲೇ ಸಂಗೀತ ಹಾಗೂ ನಾಟ್ಯಶಾಲೆಗಳು ನಡೆಯುತ್ತಿದ್ದವು.

ಪ್ರಸಿದ್ಧ ಇತಿಹಾಸಕಾರನಾದ 'ಅಲಾಮಿ' ಎಂಬುವರು 'ದಿ ಮ್ಯೂಜಿಕ್ ಆಫ್ ಎನ್ಸೆಂಟ್ ಇಂಡಿಯಾ' ಎಂಬ ಪುಸ್ತಕದಲ್ಲಿ ಈ ಪ್ರಕಾರ ಬರೆದಿದ್ದಾರೆ. ''ಚಂದ್ರಗುಪ್ತ ಮೌರ್ಯನು ಮಹಾನ್ ಸಂಗೀತ ಪ್ರೇಮಿಯಾಗಿದ್ದನು. ಅನನಿಗೆ ಲಲಿತಕಲೆಗಳಲ್ಲಿ ಅಪಾರವಾದ ಆಸಕ್ತಿಯಿತ್ತು. ಅವನ ಆಸ್ಥಾನದಲ್ಲಿ ಅನೇಕ ಅನುಪಮ ಸುಂದರಿಯರು ಗಾಯನ, ವಾದನ ಹಾಗೂ ನರ್ತನಗಳಿಂದ ಅವನಿಗೆ ಮನರಂಜನೆ ನೀಡುತ್ತಿದ್ದರು. ಮೇಲಿಂದಮೇಲೆ ಅವನು ಇಂತಹ ಶ್ರೇಷ್ಠತಮ ಸಂಗೀತ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದನು. ಇದರಲ್ಲಿ ಎಲ್ಲಾ ಶ್ರೇಣಿಯ ಕಲಾಕಾರರು ಭಾಗವಹಿಸುತ್ತಿದ್ದರು. ಯಾವ ಕಲಾಕಾರನ ಸಂಗೀತ ರಾಜನ ಮನ ಮೆಚ್ಚುಗೆ ಪಡೆಯುತ್ತಿತ್ತೋ ಅಂತಹ ಕಲಾವಿದರು ರಾಜನಿಂದ ಯೋಗ್ಯ ಸನ್ಮಾನವನ್ನು ಪಡೆಯುತ್ತಿದ್ದರು. ದೇಶದ ಮೂಲೆ ಮೂಲೆಗಳಲ್ಲಿ ಸಂಗೀತದ ಪ್ರಚಾರವಿತ್ತು. ಪಟ್ಟಣ ವಾಸಿಗಳಲ್ಲಿ ಕಂಡು ಬರುತ್ತಿದ್ದ ಅನ್ಯೋನ್ಯ ಹಾಗೂ ಶಾಂತಿಯುತ ಜೀವನ, ಹಳ್ಳಿಯ ನಿವಾಸಿಗಳಲ್ಲಿ ಕಂಡು ಬರುತ್ತಿರಲಿಲ್ಲ. ಆದರೂ ಅವರು ಸಂಗೀತದೊಂದಿಗೆ ತಮ್ಮ ಸಂಬಂಧವನ್ನು ಕಡಿದುಕೊಳ್ಳದೇ ಅದಕ್ಕೆ ಸೀಮಿತರಾಗಿರುತ್ತಿದ್ದರು. ವಿಶೇಷ ಸಮಾರಂಭ ಅಥವಾ ಧಾರ್ಮಿಕ ಕಾರ್ಯಗಳಲ್ಲಿ ಗ್ರಾಮೀಣ ಜನರು ಗಾಯನ ಹಾಗೂ ನರ್ತನವನ್ನೇರ್ಪಡಿಸುತ್ತಿದ್ದರೆಂಬುದು ತಿಳಿದು ಬರುತ್ತದೆ.''[೧೭]

ಇಂತಹ ಸಮಾರಂಭಗಳಲ್ಲಿ ಅವರ ಮನಸ್ಸಿನಲ್ಲಿ ಸ್ವಾಭಾವಿಕವಾಗಿ ಒಂದು ವಿಚಿತ್ರ ರೀತಿಯ ಆನಂದವುಂಟಾಗುತ್ತಿತ್ತು. ಇಂತಹ ಗ್ರಾಮೀಣ ಕಾರ್ಯಕ್ರಮಗಳಲ್ಲಿ ಸ್ತ್ರೀ ಪುರುಷರು ಸ್ವಯಂಪ್ರೇರಣೆಯಿಂದಲೇ ಭಾಗವಹಿಸುತ್ತಿದ್ದರು. ನಗರಗಳಲ್ಲಿ ಯಾವ ತರಹದ ಸಂಗೀತ ಕಾರ್ಯಕ್ರಮಗಳು ನಡೆಯುತ್ತಿದ್ದವೋ ಆ ಮಟ್ಟದಲ್ಲಿ ಅವು ಇರುತ್ತಿರಲಿಲ್ಲವಾದರೂ ಸಶಾಸ್ತ್ರೀಯವಾಗಿ ನಡೆಯುತ್ತಿದ್ದವು. ಆ ಕಾಲದ ಅತ್ಯಂತ ಮಹತ್ವದ ಘಟನೆಯೆಂದರೆ ಭಾರತೀಯ ಸಂಗೀತವು ಪ್ರಪ್ರಥಮವಾಗಿ ಸಿಮೋಲ್ಲಂಘನಗೊಂಡು 'ಗ್ರೀಸ್' ದೇಶವನ್ನು ಪ್ರವೇಶಿಸಿತು. ಹಾಗೂ 'ಗ್ರೀಸ್' ದೇಶದ ಸಂಗೀತವು ಮೊಟ್ಟಮೊದಲಿಗೆ ಭಾರತದಲ್ಲಿ ಪ್ರಚಾರಕ್ಕೆ ಬಂದಿತು.

---

೧೭. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೫೦

ಸಂಗೀತವು ಕೇವಲ ಮನೋರಂಜನೆಯ ಸಾಧನವೆಂದು ಜನರು ತಿಳಿದಿದ್ದರು. ಬೌದ್ಧಕಾಲದಲ್ಲಿಯ ಹಾಗೇ ಶಾಸ್ತ್ರೀಯ ಸಂಗೀತ ಪದ್ಧತಿಯ ಪ್ರಗತಿಯು ಈ ಕಾಲದಲ್ಲಿ ಆಗದೇ ಕೇವಲ ಜನಪದ ಸಂಗೀತ ಹಾಗೂ ಜಾನಪದ ನೃತ್ಯಗಳ ಪ್ರಚಾರವಾಯಿತು. ಅದರಂತೆ ವಾದ್ಯ ಸಂಗೀತದ ಪ್ರಗತಿಯೂ ಸಹ ಈ ಕಾಲದಲ್ಲಾಗಲಿಲ್ಲ. ವೇದಕಾಲದಲ್ಲಿ ವರ್ಣಿಸಲಾದ ಯಾವ ವಾದ್ಯಗಳಿದ್ದವೋ ಅವುಗಳಲ್ಲಿ ಕೆಲವನ್ನು ಈ ಕಾಲದಲ್ಲಿ ಉಪಯೋಗಿಸುತ್ತಿದ್ದರು. ಉದಾ : ವೀಣಾ, ಮೃದಂಗ, ದುಂದುಭಿ ಮುಂತಾದವು.

## ೨.೧೮. ಕನಿಷ್ಕನ ಕಾಲದಲ್ಲಿ ಸಂಗೀತ

ಕನಿಷ್ಕನ ಕಾಲದಲ್ಲಿ ದಕ್ಷಿಣ ಭಾರತದಲ್ಲಿ ಅನೇಕ ಪ್ರಸಿದ್ಧ ಸಂಗೀತ ವಿದ್ವಾಂಸರು ಆಗಿಹೋದರು. ಉತ್ತರ ಭಾರತ ಹಾಗೂ ದಕ್ಷಿಣ ಭಾರತದ ಸಂಗೀತದಲ್ಲಿ ಯಾವ ತರದ ವ್ಯತ್ಯಾಸವೂ ಇರಲಿಲ್ಲ. ಆದ್ದರಿಂದ ದಕ್ಷಿಣ ಭಾರತದ ಸಂಗೀತ ವಿದ್ವಾಂಸರು ಉತ್ತರ ಭಾರತದಲ್ಲಿ ಹಾಗೂ ಉತ್ತರ ಭಾರತದ ಸಂಗೀತ ವಿದ್ವಾಂಸರು ದಕ್ಷಿಣ ಭಾರತದಲ್ಲಿ ತಮ್ಮ ಕಲೆಯನ್ನು ಪ್ರದರ್ಶಿಸುತ್ತಿದ್ದರು.

ಸುಪ್ರಸಿದ್ಧ ಸಂಗೀತ ವಿದ್ವಾಂಸ 'ಅಶ್ವಘೋಷ' ಇದೇ ಕಾಲದಲ್ಲಿ ಆಗಿ ಹೋದನು. ಅಶ್ವಘೋಷನು ಒಬ್ಬ ಶ್ರೇಷ್ಠ ವಿದ್ವಾಂಸನಾಗಿದ್ದನಲ್ಲದೇ ದೊಡ್ಡ ಸಾಹಿತಿಯೂ ಆಗಿದ್ದನು. ಅವನು ಬರೆದ 'ಬುದ್ದ ಚರಿತೆ' ಎಂಬ ಮಹಾಕಾವ್ಯದಲ್ಲಿ ಸಂಗೀತಮಯ ಗೀತೆಗಳಿವೆ. ಈ ಗೀತೆಗಳನ್ನು ಆ ಕಾಲದ ಸ್ತ್ರೀ ಪುರುಷರಿಬ್ಬರೂ ಆನಂದದಿಂದ ಹಾಡುತ್ತಿದ್ದರು. 'ಬುದ್ದ ಚರಿತೆ' ಗ್ರಂಥದ ಪ್ರಭಾವದಿಂದಲೇ 'ಸಾಮ್ರಾಟ ಕನಿಷ್ಕನು' ಬೌದ್ಧ ಧರ್ಮ ಸ್ವೀಕರಿಸಿದನೆಂದು ಹೇಳಲಾಗುತ್ತದೆ. ಕನಿಷ್ಕನ ಆಸ್ಥಾನದಲ್ಲಿ 'ನಾಗಾರ್ಜುನ' ನೆಂಬ ಮಹಾ ಆಧ್ಯಾತ್ಮಿಕ ಪಂಡಿತನಿದ್ದನು. ಇವನು ''ಶೂನ್ಯವಾದದ ಪ್ರತಿಪಾದನೆ ಮಾಡಿ ಸಂಗೀತವು ಶೂನ್ಯದ ಗರ್ಭದಿಂದಲೇ ಉಗಮವಾಯಿತು''[೨೮] ಎಂದು ಹೇಳಿದ್ದಾನೆ.

## ೨.೧೯. ಭರತನ ನಾಟ್ಯಶಾಸ್ತ್ರ

ಮಾನವ ಜಾತಿಯ ಕಲ್ಯಾಣಾರ್ಥವಾಗಿ ದೇವಾಧಿಪತಿಯಾದ ಇಂದ್ರನು ಬ್ರಹ್ಮದೇವನನ್ನು ಕಂಡು ತಪಸ್ಸನ್ನು ಮಾಡಿದನು. ಇವನ ತಪಸ್ಸಿಗೆ ಮೆಚ್ಚಿ ಬ್ರಹ್ಮದೇವನು ಮಾನವರ ಕಲ್ಯಾಣಾರ್ಥವಾಗಿ 'ನಾಟ್ಯವೇದದ' ರಚನೆ ಮಾಡಿ ಇಂದ್ರನಿಗೆ ಕೊಟ್ಟನು. ವಿಶ್ವದಲ್ಲಿ ಈ ನಾಟ್ಯದ ಪ್ರಸಾರ ಮಾಡುವ ಕಾರ್ಯವನ್ನು ಇಂದ್ರನು ನಾರದನಿಗೆ ವಹಿಸಿದನು. ನಾರದನು ಈ ನಾಟ್ಯವೇದವನ್ನು ಭರತಮುನಿಗೆ ಕಲಿಸಿ ಪ್ರಪಂಚದಲ್ಲಿ ಇದರ ಪ್ರಸಾರ ಮಾಡುವಂತೆ ಆದೇಶ ಕೊಟ್ಟನು. ಭರತಮುನಿಯು ಅದನ್ನು ಶಾಸ್ತ್ರ ರೂಪದಲ್ಲಿ ಬರೆದು ಭಾರತೀಯ ನಾಟ್ಯ ಹಾಗೂ ಸಂಗೀತ ಶಾಸ್ತ್ರಕ್ಕೆ ಅಪೂರ್ವ ಕಾಣಿಕೆಯನ್ನಿತ್ತನು. ಮೇಲೆ ಕಾಣಿಸಿದ ಪೌರಾಣಿಕ ಹೇಳಿಕೆಯ ಅನುಸಾರವಾಗಿ ಭರತನ ಈ ನಾಟ್ಯಶಾಸ್ತ್ರವು ನಾಟ್ಯವೇದವೆಂಬ ಹೆಸರಿನಿಂದ ಪ್ರಸಿದ್ಧವಾಗಿದೆ.

---

೧೮. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೫೪

ಗಾಂಧರ್ವದಲ್ಲಿ ಗೀತದ ಅನುಕೂಲಕ್ಕಾಗಿ ವಾದ್ಯವಾದನ ಮಾಡಲಾಗುತ್ತದೆ. ಆದರೆ ಅದರಲ್ಲಿ ನೃತ್ಯಕಲೆಯ ಪ್ರಯೋಗ ಮಾಡಲಾಗುವುದಿಲ್ಲ. 'ಭರತನ' ವಿಚಾರದ ಪ್ರಕಾರ ನೃತ್ಯವು ಒಂದು ಸ್ವತಂತ್ರ ಕಲೆಯಾಗಿರಲಿಲ್ಲ.

ಸ್ವರಗಳು ಏಳು. ಈ ಏಳು ಸ್ವರಗಳ ಹೆಸರುಗಳು ಈ ಪ್ರಕಾರವಿದೆ. ಷಡ್ಜ, ರಿಷಭ, ಗಾಂಧಾರ, ಮಧ್ಯಮ, ಪಂಚಮ, ದೈವತ್ ಹಾಗೂ ನಿಷಾದ. ಶ್ರುತಿಗಳ ಆಧಾರದ ಮೇಲೆ ಈ ಸ್ವರಗಳ ಸ್ಥಾಪನೆ ಮಾಡಲಾಗಿದ್ದು. ಸೂಕ್ಷ್ಮ ಧ್ವನಿಯ ಅಂತರಕ್ಕೆ ಶ್ರುತಿ ಎಂದು ಹೇಳಲಾಗಿದೆ. ಸ್ವರಗಳಿಗೆ ವಾದಿ, ಸಂವಾದಿ, ಅನುವಾದಿ, ವಿವಾದಿ ಸಂಜ್ಞೆಗಳನ್ನು ಕೊಡಲಾಗಿದೆ.

ಭರತನು ಸಪ್ತಸ್ವರಗಳಲ್ಲಿ ಒಟ್ಟಿಗೆ ೨೦ ಶ್ರುತಿಗಳು ಒಳಗೊಂಡಿವೆಯೆಂದು ಭಾವಿಸಿದ್ದಾನೆ. ಷಡ್ಜಗ್ರಾಮ ಯಾವುದು ಭರತನ ಕಾಲದಲ್ಲಿ ಶುದ್ಧಸ್ವರಗಳನ್ನೊಳಗೊಂಡಿತ್ತೋ. ಅದರಲ್ಲಿ ಶ್ರುತಿಗಳಲ್ಲಿ ವಿಭಜನೆ ಈ ಪ್ರಕಾರ ಮಾಡಲಾಗಿದೆ. ಷಡ್ಜದಿಂದ ತಾರ ಷಡ್ಜದವರೆಗೆ ೩, ೨, ೪, ೪, ೪, ೨ ಹಾಗೂ ೪ ಈ ಪ್ರಕಾರ ಪ್ರತಿಯೊಂದು ಸ್ವರಗಳ ಮೇಲೆ ಶ್ರುತ್ಯಂತರವಿದೆ. ಅಂದರೆ ಮಧ್ಯ ಷಡ್ಜಕ್ಕೆ ೪ ಶ್ರುತಿಗಳು ರಿಷಭಕ್ಕೆ ೩, ಗಾಂಧಾರಕ್ಕೆ ೨, ಮಧ್ಯಮಕ್ಕೆ ೪, ಪಂಚಮಕ್ಕೆ ೪, ದೈವತಕ್ಕೆ ೩ ಹಾಗೂ ನಿಷಾದಕ್ಕೆ ೨ ಎಂದು ಭಾವಿಸಲಾಗಿದೆ. ಈ ಪ್ರಕಾರ ಸ್ವರ ಸಪ್ತಕದಲ್ಲಿ ೨೨ ಶ್ರುತಿಗಳಿರುತ್ತವೆ ಮೇಲೆ ಕಾಣಸಿದ ಶ್ರುತಿ ರಚನೆಯಲ್ಲಿ ಪ್ರತಿಯೊಂದು ಸ್ವರ ತಮ್ಮ ಅಂತಿಮ ಶ್ರುತಿಯ ಮೇಲೆ ಇರುತ್ತದೆ.

ಸಂಗೀತ ಶಾಸ್ತ್ರದಲ್ಲಿ ಮೂರು ಗ್ರಾಮಗಳಿವೆ. ಷಡ್ಜಗ್ರಾಮ, ಮಧ್ಯಮ ಗ್ರಾಮ ಹಾಗೂ ಗಾಂಧಾರ ಗ್ರಾಮ. ಆದರೆ ನಾಟ್ಯ ಶಾಸ್ತ್ರದಲ್ಲಿ ಕೇವಲ ಷಡ್ಜ ಹಾಗೂ ಮಧ್ಯಮ ಗ್ರಾಮದ ಉಲ್ಲೇಖವಿದೆ. ಬಹುಶಃ ಭರತನ ಕಾಲದಲ್ಲಿ ಗಾಂಧಾರ ಗ್ರಾಮದ ಲೋಪವಾಗಿತೋ ಏನೋ ?

ಸ್ವರ ಹಾಗೂ ಶ್ರುತಿ ಸಂಖ್ಯೆಗಳ ನಿರೂಪಣಾ ನಂತರ ಭರತ ಮುನಿ ಮೂರ್ಛನೆಗಳ ವಿವರಣೆ ನೀಡಿದ್ದಾನೆ. ಭರತ ಕಾಲದ ಮೂರ್ಛನೆಗಳು ಅವರೋಹಿ ಕ್ರಮದಿಂದ ಸ್ಥಾಪಿಸಲ್ಪಟ್ಟಿದ್ದವು ಎಂದು ಉಲ್ಲೇಖ ಸಿಗುತ್ತದೆ. ೭ ಸ್ವರಗಳ ಕ್ರಮಬದ್ಧವಾದ ಜ್ಞಾನ ಮೂರ್ಛನೆ ಎಂದು ವಿವರಿಸಿದ್ದಾನೆ.

ನಾಟ್ಯಶಾಸ್ತ್ರದಲ್ಲಿ ರಾಗ ಶಬ್ದದ ಪ್ರಯೋಗವೂ ಸಹ ಆಗಿದ್ದು ಕಂಡು ಬರುತ್ತದೆ. ಇದರಿಂದ ಭರತನ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತದಲ್ಲಿ ಜಾತಿ ಗಾಯನದ ಜೊತೆಗೆ ರಾಗ ಗಾಯನ ಪದ್ಧತಿಯೂ ಸಹ ಪ್ರಚಾರದಲ್ಲಿತ್ತು ಎಂಬುದು ಸ್ಪಷ್ಟವಾಗುತ್ತದೆ.

ಸಂಗೀತದಲ್ಲಿ ರಸದ ಆವಿಷ್ಕಾರದ ಬಗೆಗೆ ಸಹ ಭರತನ ನಾಟ್ಯಶಾಸ್ತ್ರದಲ್ಲಿ ಕೆಲವು ಮಹತ್ವಪೂರ್ಣ ವಿಧಾನಗಳನ್ನು ವಿವರಿಸಿದ್ದಾನೆ. ''ಹಾಸ್ಯ ರಸದ ಉತ್ಪತ್ತಿ ಮಧ್ಯಮ ಹಾಗೂ ಪಂಚಮ ಸ್ವರಗಳ ಪ್ರಾಬಲ್ಯದಿಂದ

ಉಂಟಾಗುತ್ತದೆ. ಷಡ್ಜ ಹಾಗೂ ರಿಷಭ್ ಸ್ವರಗಳು ವೀರ, ರೌದ್ರ, ಅದ್ಭುತ ರಸಗಳ ಪೋಷಕವಾಗಿವೆ. ಗಾಂಧಾರ ಹಾಗೂ ನಿಷಾದ ಸ್ವರಗಳು ಕರುಣ ರಸದ ಪೋಷಕವಾಗಿದ್ದು ಧೈವತ ಸ್ವರದ ವಿಶೇಷ ಪ್ರಯೋಗ ಬೀಭತ್ಸ ಹಾಗೂ ಭಯಾನಕ ರಸದ ಪ್ರೇರಕ ಎಂದು ಸಿದ್ಧವಾಗಿವೆ.''[೧೯]

ಸಂಗೀತದಲ್ಲಿ ವರ್ಣ ಹಾಗೂ ಅಲಂಕಾರಗಳ ಸ್ಥಾನ ಪಾಠ್ಯ ಹಾಗೂ ಗೇಯಗಳಲ್ಲಿ ಸಮಾನ ರೂಪದಿಂದ ಮಹತ್ವಪೂರ್ಣವಾಗಿ ಇರುತ್ತವೆ ಎಂದು ನಾಟ್ಯಶಾಸ್ತ್ರದಲ್ಲಿ ಹೇಳಲಾಗಿದೆ. ಸಂಗೀತದ ನಾಲ್ಕು 'ವರ್ಣಗಳು' ಉದಾ : ಆರೋಹಿ, ಅವರೋಹಿ, ಸ್ಥಾಯಿ ಹಾಗೂ ಸಂಚಾರಿ ಹಾಗೂ ಪಾಠ್ಯದ ಆರು ಅಲಂಕಾರಗಳು ಉದಾ : ಉಚ್ಚ, ದೀಪ್ತಿ, ಮಂದ್ರ, ನೀಚ, ಧೃತ್ ಹಾಗೂ ವಿಲಂಬಿತಗಳನ್ನು ನಾಟ್ಯ ಶಾಸ್ತ್ರದಲ್ಲಿ ವಿವರಿಸಲಾಗಿದೆ. ವರ್ಣಗಳ ವಿಸ್ತಾರ ಮಂದ್ರ, ಮಧ್ಯ, ತಾರ ಮೂರು ಸ್ಥಾನಗಳನ್ನು ಮಾಡಲಾಗುತ್ತದೆಯೆಂದು ಹೇಳಲಾಗಿದೆ.

ವೃತ್ತಿ ಗಾಯನ ವಾದನದ ಒಂದು ವಿಶಿಷ್ಟ ಶೈಲಿಯಾಗಿದೆ. ವೃತ್ತಿಯಲ್ಲಿ ಮೂರು ಪ್ರಕಾರಗಳಿವೆ ಎಂದು ಹೇಳಲಾಗಿದೆ. ಉದಾ : ಚಿತ್ರಾ, ವಾರ್ತಿಕ ಹಾಗೂ ದಕ್ಷಿಣ.

೧. ಚಿತ್ರಾವೃತ್ತಿಯಲ್ಲಿ ಗಾನದ ಪ್ರಾಧಾನ್ಯವಿದ್ದು ವಾದ್ಯಗಳು ಸಂಕ್ಷೇಪವಿರುತ್ತದೆ. ಇದಲ್ಲದೇ ಧೃತಲಯ, ಸಮಲಯ ಹಾಗೂ ಅನಾಗತ ಗೃಹ ಇದರ ವೈಶಿಷ್ಟ್ಯವಾಗಿದೆ.

೨. ವಾರ್ತಿಕ ವೃತ್ತಿಯಲ್ಲಿ ಗೀತ ಹಾಗೂ ವಾದ್ಯದ ಸ್ಥಾನ ಸಮಾನವಾಗಿದ್ದು ಮಧ್ಯಲಯ ಸ್ರೋತೋಗತಾಯತಿ ಹಾಗೂ ದ್ವಿಕಲತಾಲ ಇರುವುದು ಈ ಶೈಲಿಯ ವೈಶಿಷ್ಟ್ಯವಾಗಿದೆ.

೩. ದಕ್ಷಿಣ ವೃತ್ತಿಯಲ್ಲಿ ವಿಲಂಬಿತಲಯ 'ಗೋಪಚ್ಚಾಯತಿ' ಹಾಗೂ 'ಚತುಷ್ಕಾಲ' ತಾಲದ ಪ್ರಾಧಾನ್ಯತೆಯಿದೆ.

ಭರತಕಾಲೀನ ತಾಲಪದ್ಧತಿಯ ವರ್ಣನೆಯನ್ನು ಸಹ ನಾಟ್ಯಶಾಸ್ತ್ರದಲ್ಲಿ ವಿವರಿಸಲಾಗಿದೆ. ತಾಲದ ಎರಡು ಪ್ರಕಾರದ ಕ್ರಿಯೆಯನ್ನು ವರ್ಣಿಸಲಾಗಿದೆ. 'ಸಶಬ್ದ' ಹಾಗೂ 'ನಿಶಬ್ದ' ಎಂದು ಭರತಮುನಿಯು ತಾಲವಾದ್ಯಗಳನ್ನು ಘನವಾದ್ಯ ಪ್ರಕಾರಗಳಲ್ಲಿ ಸೇರಿಸಿದ್ದಾನೆ.

ಶಾಸ್ತ್ರೀಯ ಸಂಗೀತದ ಜೊತೆಗೆ ಜಾನಪದ ಸಂಗೀತದ ಪ್ರಚಾರವು ಸಹ ಈ ಕಾಲದಲ್ಲಿ ಸಾಕಷ್ಟಾಯಿತು. ಗ್ರಾಮದಲ್ಲಿದ್ದ ಸ್ತ್ರೀ ಪುರುಷರು ತಾವೇ ರಚಿಸಿದ ಗ್ರಾಮ್ಯ ಭಾಷೆಯಲ್ಲಿಯ ಕಾವ್ಯಗಳನ್ನು ಸ್ವರದೊಂದಿಗೆ ಹಾಡುತ್ತಿದ್ದರು. ಯಾವುದೇ ವಿಶೇಷ ಸಮಾರಂಭಗಳಲ್ಲಿ ಸಾಮೂಹಿಕವಾಗಿ ಗಾಯನ ಹಾಗೂ ನೃತ್ಯಗಳು ನಡೆಯುತ್ತಿದ್ದವು.

---

೧೯. ಭಾರತೀಯ ಸಂಗೀತದ ಚರಿತ್ರೆ : ಡಾ.ಬಿ.ಡಿ.ಪಾಠಕ, ಪು-೬೦

ಸಮುದ್ರಗುಪ್ತನು ಸ್ವತಃ ದೊಡ್ಡ ವಿದ್ವಾಂಸನಾಗಿದ್ದರಿಂದ ಅವನ ರಾಜ್ಯದಲ್ಲಿ ಸಂಗೀತ ಕಲೆಗೆ ಸಾಕಷ್ಟು ಪ್ರೋತ್ಸಾಹ ದೊರಕುತ್ತಿತ್ತು. ಅವನು ಸ್ವತಃ ಒಬ್ಬ ಶ್ರೇಷ್ಠ ವೀಣಾ ವಾದಕನಾಗಿದ್ದನು. ಸಮಯ ಸಿಕ್ಕಾಗ ಗಂಟೆಗಳ ಕಾಲ ಆತ ವೀಣೆಯ ಸಾಧನೆ ಮಾಡುತ್ತಿದ್ದನು. ಯಾವುದೇ ದೇಶದ ಮೇಲೆ ದಂಡೆತ್ತಿ ಹೋಗುವ ಮೊದಲು ಅವನು ವೀಣಾ ವಾದನ ಮಾಡಿಯೇ ಹೋಗುತ್ತಿದ್ದನೆಂದು ಹೇಳಲಾಗುತ್ತದೆ. ವೀಣಾ ವಾದನ ಮೂಲಕ ಅವನಿಗೆ ಆತ್ಮ ಚೈತನ್ಯ ಸಿಗುತ್ತಿತ್ತಲ್ಲದೇ ಇದರಿಂದ ಯುದ್ಧ ಕ್ಷೇತ್ರದಲ್ಲಿ ವಿಜಯ ಪ್ರಾಪ್ತವಾಗುತ್ತಿತ್ತು ಎಂದು ಹೇಳಲಾಗಿದೆ. ತನ್ನ ಸಾಮ್ರಾಜ್ಯ ಸ್ಥಾಪನೆಯ ದ್ಯೋತಕವಾಗಿ ಅವನು ಚಲಾವಣೆಗೆ ತಂದ ನಾಣ್ಯಗಳ ಮೇಲೆ ಅವನು ವೀಣೆ ಬಾರಿಸುತ್ತ ಕುಳಿತಿರುವ ಚಿತ್ರವನ್ನು ಮುದ್ರಿಸಲಾಗಿದೆ. ಅವನ ದರ್ಬಾರಿನಲ್ಲಿ ಅನೇಕ ಶ್ರೇಷ್ಠ ಸಂಗೀತಜ್ಞರು ಹಾಗೂ ನರ್ತಕಿಯರು ಆಶ್ರಯ ಪಡೆದಿದ್ದರು.

ಸಮುದ್ರಗುಪ್ತನ ಕಾಲದಲ್ಲಿ ಶಾಸ್ತ್ರೀಯ ಸಂಗೀತದಲ್ಲಿಯೂ ಸಹ ಕೆಲವು ಬದಲಾವಣೆಗಳಾಗಿ ಅದರ ಪ್ರಚಾರ ಚೆನ್ನಾಗಿ ಆಗುತ್ತಿತ್ತು. ಸಂಗೀತದಿಂದ ಮಳೆ ಬೀಳಿಸುವದು, ನೀರಿನಲ್ಲಿ ಬೆಂಕಿ ಹಚ್ಚುವದು ಮುಂತಾದ ಚಮತ್ಕಾರಿಕ, ಅಪೂರ್ವ ಶಕ್ತಿಯುಳ್ಳ ಸಂಗೀತಜ್ಞರು ಇವನ ಕಾಲದಲ್ಲಿ ಬಾಳಿದರು ಎಂದು ಹೇಳಲಾಗಿದೆ. ಸಮಾಜದಲ್ಲಿ ಸಂಗೀತಗಾರರ ಪ್ರತಿಷ್ಠೆ ಹೆಚ್ಚಾಗುತ್ತಿತ್ತು. ಹಾಗೂ ಅವನ ನೈತಿಕ ಬಲವು ಸಹ ಅಭಿವೃದ್ಧಿ ಹೊಂದಿತ್ತು. ಪವಿತ್ರ ಚಾರಿತ್ರ್ಯವಿಲ್ಲದೆ ಯಾವುದೇ ಕಲೆಯು ವಿಕಾಸದತ್ತ ಸಾಗಲಾರದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಈ ಕಾಲದಲ್ಲಿ ಅನೇಕ ನಾಟ್ಯಶಾಲೆಗಳು ಸ್ಥಾಪಿಸಲ್ಪಟ್ಟವು ಇಂತಹ ನಾಟ್ಯ ಶಾಲೆಗಳಲ್ಲಿ ಅನೇಕ ಪ್ರಕಾರ ನಾಟಕಗಳು ಪ್ರದರ್ಶಿಸಲ್ಪಡುತ್ತಿದ್ದು. ನಾಟಕಗಳಲ್ಲಿ ಸ್ತ್ರೀ ಪುರುಷರು ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಗಾಯನವಾದನದ ಜೊತೆಗೆ ನೃತ್ಯದ ಪ್ರಸಾರವೂ ಸಹ ಈ ಕಾಲದಲ್ಲಿ ಸಾಕಷ್ಟಾಯಿತು ವೇದ ಕಾಲದ ಸಾರ್ಮದ ಹಾಗೇ ಈ ಕಾಲದಲ್ಲಿಯೂ ಸಹ 'ಸಾಭ್ಯಾ' ಎಂಬ ಸಾಮಾಜಿಕ ಸಂಗೀತ ಸಮಾರೋಹವನ್ನು ಆಚರಿಸಲಾಗುತ್ತಿತ್ತು. ಈ ಸಮಾರಂಭದಲ್ಲಿ ವಿವಾಹವಾಗಲು ಬಯಸುವ ಯುವಕ ಯುವತಿಯರು ಭಾಗವಹಿಸಿ ತಮ್ಮ ಸಂಗೀತ ಪ್ರತಿಭೆಯನ್ನು ಪ್ರದರ್ಶಿಸುತ್ತಿದ್ದರು.

ಪಾಶ್ಚಾತ್ಯ ವಿದ್ವಾಂಸರ ಗ್ರಂಥಗಳಿಂದ ಸಮುದ್ರಗುಪ್ತ ಕಾಲದಲ್ಲಿ 'ಸೇಹತಾರ' ಎಂಬ ವಾದ್ಯದ ಬಳಕೆಯಿತ್ತು ಎಂದು ತಿಳಿದುಬರುತ್ತದೆ. 'ಸೇಹತಾರ' ಅರ್ಥಾತ್ 'ಸತಾರ್' ಸಮುದ್ರಗುಪ್ತನ ಅತಿ ಪ್ರಿಯವಾದ್ಯವಾಗಿತ್ತಲ್ಲದೇ ಅವನು ಅತಿ ಭಾವಪರವಶತೆಯಿಂದ ವಾದ್ಯ ನುಡಿಸುತ್ತಿದ್ದನು ಎಂದು ತಿಳಿದುಬರುತ್ತದೆ.

ಜನಪದ ಗೀತಗಳ ಪ್ರಚಾರವೂ ಸಹ ಈ ಕಾಲದಲ್ಲಿ ಇತ್ತು ಎನ್ನುವುದು ಕಂಡು ಬರುತ್ತದೆ. ಭಾರತೀಯ ಸಂಸ್ಕೃತಿ ಹಾಗೂ ಅದರ ಹಿರಿಮೆ ಮಾನವ ಜೀವನ ಮುಂತಾದ ವಿಷಯಗಳು ಜನಪದ ಗೀತೆಗಳಲ್ಲಿ ವರ್ಣಿಸಲಾಗುತ್ತಿದ್ದವು. ಗ್ರಾಮ್ಯ ಜೀವಗಳು ಸಾಮಾಜಿಕ ನೃತ್ಯ ಹಾಗೂ ಜನಪದಗೀತ ಸಮಾರಂಭಗಳಲ್ಲಿ ಅತ್ಯಾನಂದದಿಂದ ಭಾಗವಹಿಸುತ್ತಿದ್ದರು. ಈ ಕಾಲದಲ್ಲಿ ಭಾರತೀಯ ಸಂಗೀತದ ಸರ್ವತೋಮುಖ ಪ್ರಗತಿ ಆಗುತ್ತಿತ್ತು ಎಂದು ತಿಳಿದು ಬರುತ್ತದೆ.

ಆ ಸಮಯದಲ್ಲಿ ಹೇಗೆ ಭಾರತದಲ್ಲಿ ರಾಜಕೀಯ ಏಕಾಧಿಪತ್ಯವಿತ್ತೋ ಹಾಗೆಯೇ ಭಾರತೀಯ ಸಂಗೀತದಲ್ಲಿಯೂ ಸಹ ಏಕಾಧಿಪತ್ಯವಿತ್ತು ಎರಡನೇ ಚಂದ್ರಗುಪ್ತನು (ವಿಕ್ರಮಾದಿತ್ಯನು) ಸಮುದ್ರಗುಪ್ತನ ಹಾಗೆ ಕಲಾಪ್ರೇಮಿಯಾಗಿದ್ದನಷ್ಟೇ ಅಲ್ಲದೇ ವೀಣಾವಾದನ ಪ್ರವೀಣನಾಗಿದ್ದನು. ಬಹುಶಃ ಅವನಿಗೆ ಸಂಗೀತದ ಕೊಡುಗೆ ಅವನ ತಂದೆ ಸಮುದ್ರಗುಪ್ತನಿಂದ ಪ್ರಾಪ್ತವಾಗಿರಬಹುದು. ವಿಕ್ರಮಾದಿತ್ಯನ ಅಂತಃಪುರದಲ್ಲಿ ಸಂಗೀತವು ಮನೋರಂಜನೆಯ ಒಂದು ಪ್ರಮುಖ ಅಂಗವಾಗಿತ್ತು. ಆ ಕಾಲದ ಸಂಗೀತ ಪ್ರಬಂಧಗಳಿಗೆ 'ವಸ್ತು' ಎಂದು ಸಂಜ್ಞೆ ಇತ್ತು. ಇದರಲ್ಲಿ ಬೇರೆ ಬೇರೆ ಚರಣಗಳು ಇರುತ್ತಿದ್ದವು. ನಾಟ್ಯಕ್ಕೆ 'ತೌರ್ಯತ್ರಿಕ' ಎಂಬ ಸಂಜ್ಞೆ ಇತ್ತು. ಇದರಲ್ಲಿ ಗೀತ, ವಾದ್ಯ ಹಾಗೂ ನೃತ್ಯಗಳ ಸಮಾವೇಶವಿತ್ತು. ಸಂಗೀತದಲ್ಲಿ ಜಾತಿಗಳ ಬದಲಾಗಿ ರಾಗ ಪದ್ಧತಿಯ ವಿಶೇಷ ಪ್ರಚಾರವಿತ್ತು.

ಭರತನ ನಾಟ್ಯಶಾಸ್ತ್ರದಲ್ಲಿ ವಿವರಿಸಲಾದ ತತ್ವಗಳು ಸಾಕಷ್ಟು ಪ್ರಮಾಣದಲ್ಲಿ ಈ ಕಾಲದ ಸಂಗೀತದಲ್ಲಿ ಹಾಗೂ ನಾಟ್ಯದಲ್ಲಿ ಕಂಡುಬರುವದು. ಅಲ್ಲದೇ ಜಾನಪದ ಸಂಗೀತವೂ ಸಹ ಈ ಕಾಲದಲ್ಲಿ ವಿಶೇಷ ಲೋಕಪ್ರಿಯವಾಗಿದ್ದು ಪುತ್ರಜನ್ಮ, ನಾಮಕರಣ, ವಿವಾಹ ಮುಂತಾದ ಲೌಕಿಕ ಸಮಾರಂಭಗಳಲ್ಲಿ ಇದರ ಪ್ರಯೋಗ ಮಾಡಲಾಗುತ್ತಿತ್ತು. ಗುಪ್ತ ಕಾಲದಲ್ಲಿ ವೇದಕಾಲೀನ ಸಂಗೀತವಾದ್ಯಗಳ ಹೊರತು ಕೆಲವು ಹೊಸ ವಾದ್ಯಗಳ ಉಲ್ಲೇಖ ಸಿಗುತ್ತವೆ. ಈ ವಾದ್ಯಗಳು ಗಾಯನ ಹಾಗೂ ನೃತ್ಯಗಳ ಜೊತೆಗೆ ನುಡಿಸಲ್ಪಡುತ್ತಿದ್ದವು. ಉದಾ: ಝಲ್ಲರಿ, ಆಲಿಂಗ್ಯ, ತಂತ್ರಿ, ಕಹಳೆ ಹಾಗೂ ಅಲಾಬ್ಬು ವೀಣೆ ಮುಂತಾದವು. ಝಲ್ಲರಿ, ತಂತ್ರಿ ವಾದ್ಯಗಳು ಚರ್ಮ ವಾದ್ಯಗಳಲ್ಲಿ 'ಆಂಬ್ಯ, ಆಲಿಂಗ್ಯ ಹಾಗೂ ಊರ್ಧ್ವಕ' ಎಂಬ ಮೂರು ಮೃದಂಗದ ಪ್ರಕಾರಗಳೂ ಇದ್ದವು.

ಗುಪ್ತ ಕಾಲದಲ್ಲಿ ಭಾರತೀಯ ಸಂಗೀತದ ಪ್ರಸಾರ ಪಾಶ್ಚಾತ್ಯ ದೇಶಗಳಲ್ಲಿಯೂ ಸಹ ಆಯಿತೆಂದು ಹೇಳಲಾಗುತ್ತದೆ. ವಿಕ್ರಮಾದಿತ್ಯನ ಕಾಲದಲ್ಲಿ 'ಫಾಹಿಯಾನ್' ಎಂಬ ಚೀನೀ ಪ್ರವಾಸಿಯು ಭಾರತದಲ್ಲಿಯ ಬುದ್ಧದೇವನ ಪವಿತ್ರ ಭೂಮಿಯ ದರ್ಶನಕ್ಕಾಗಿ ಬಂದಿದ್ದನು. ಅವನು ಬರೆದ ತನ್ನ ಯಾತ್ರೆಯ ವರ್ಣನೆ ಆ ಕಾಲೀನ ಭಾರತದ ರಾಜಕೀಯ, ಸಾಮಾಜಿಕ ಹಾಗೂ ಕಲಾತ್ಮಕ ಸ್ಥಿತಿಯ ಮೇಲೆ ಬೆಳಕು ಬೀರುತ್ತದೆ.

ಗುಪ್ತ ಕಾಲದ ಸಂಗೀತದ ದೃಶ್ಯ ಚಿತ್ರಗಳು ಅಜಂತಾದ ಭಿತ್ತಿ ಚಿತ್ರಗಳಲ್ಲಿ ಉಪಲಬ್ಧವಾಗಿವೆ. ಈ ಚಿತ್ರಗಳ ಮೂಲಕ ಆ ಕಾಲದ ವಾದ್ಯಗಳು, ವಾದ್ಯ ವೃಂದದ ಕಲ್ಪನೆ, ನೃತ್ಯಗಳ ನಾನಾ ಅಂಗವಿಕ್ಷೇಪಗಳು, ತಾಲ ವಾದ್ಯ ಬಾರಿಸುವ ಸ್ತ್ರೀಯರ ಸಮೂಹ ನೃತ್ಯ ಪದ್ಧತಿ ಮುಂತಾದ ಸಂಗತಿಗಳ ಬಗೆಗೆ ಸಾಕಷ್ಟು ವಿವರಣೆ ದೊರಕುತ್ತದೆ. ಸಂಕ್ಷೇಪವಾಗಿ ಹೇಳುವದಾದರೆ ಗುಪ್ತ ಕಾಲವು ಭಾರತೀಯ ಸಂಗೀತದ 'ಸುವರ್ಣಕಾಲ' ಎಂದು ಹೇಳಬಹುದು.

## ೨.೨೦. ಕಾಳಿದಾಸನ ಗ್ರಂಥದಲ್ಲಿ ಸಂಗೀತ

ಕಾಳಿದಾಸನ ರಚನೆಗಳು ಕೆಳಕಂಡ ಎರಡು ತತ್ವಗಳಿಂದ ವಿಮರ್ಶಿಸಲ್ಪಡುತ್ತವೆ. ಅವನ ಕಾಲದ ಸಂಗೀತದ ವಿಕಾಸ ಕ್ರಮ ಹಾಗೂ ಭರತನ ನಾಟ್ಯಶಾಸ್ತ್ರದ ತತ್ವಗಳ ಪ್ರಯೋಗ. ಕಾಳಿದಾಸನ ಭಾಷೆ ಅತ್ಯಂತ ಸರಳ ಹಾಗೂ ಸುಗಮವಾಗಿದೆ. ಪ್ರೇಮ ಹಾಗು ಕರುಣೆ ಈ ಎರಡು ಮಾನವೀಯ ಭಾವನೆಗಳನ್ನು ವ್ಯಕ್ತಮಾಡುವಲ್ಲಿ ಅವನು ಯಶಸ್ವಿಯಾಗಿದ್ದಾನೆ. ಅವನ ವಿಶ್ವವಿಖ್ಯಾತ ಕೃತಿಗಳ ಆಧಾರದ ಮೇಲೆ ಅವನ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತದ ರೂಪವನ್ನು ಕಂಡುಹಿಡಿಯಬಹುದು. ಅವನ ಕೃತಿಯಲ್ಲಿ ಕೆಳಗೆ ಕಾಣಿಸಿದ ಕೆಲ ಅಂಶಗಳು ಕಂಡುಬರುತ್ತವೆ. ಅವನ ಯುಗದಲ್ಲಿ ಸಂಗೀತದ ಜೊತೆಗೆ ಶಿಲ್ಪಕಲೆ, ಚಿತ್ರಕಲೆ, ಕಾವ್ಯ ಮುಂತಾದ ಲಲಿತ ಕಲೆಗಳು ಉಚ್ಚಮಟ್ಟದಲ್ಲಿದ್ದವು. ಆ ಕಾಲದ ಜನರಿಗೆ ನಾಟ್ಯಕಲೆಯ ಅಭಿರುಚಿಯೂ ಸಹ ಸಾಕಷ್ಟಿತ್ತು. ಆಗ ಸಂಗೀತ ಕಲೆಯು ರಾಜ ಮನ್ನಣೆ ಪಡೆದಿತ್ತು. ರಾಜಗೃಹಗಳಲ್ಲಿ ಸಂಗೀತ ಶಾಲೆಗಳ ಏರ್ಪಾಡಿತ್ತು ಇದರ ಪರಿಣಾಮವಾಗಿ ಮಾಲವಿಕಾ, ಶರ್ಮಿಷ್ಠಾ, ಇರಾವತಿ, ಹಂಸಪದಿಕಾ ಶ್ರೇಷ್ಠ ಕಲಾವಿದೂಷಿಗಳ ಆವಿಷ್ಕಾರವಾಯಿತು.

ಸಂಗೀತ ಶಾಲೆಗಳ ಹೊರತಾಗಿ ಸಂಗೀತ ಶಿಕ್ಷಣದ ಏರ್ಪಾಡು, ಗುರು-ಶಿಷ್ಯ ಪರಂಪರೆ ಪದ್ಧತಿಯೂ ಸಹ ಪ್ರಚಲಿತವಿತ್ತು. ರಾಜಭವನದಲ್ಲಿ ಸಂಗೀತದ ಶಿಕ್ಷಣವನ್ನು ವಿಶೇಷ ರೂಪದಿಂದ ರಾಜ ಸ್ತ್ರೀಯರಿಗೆ ಹಾಗೂ ದಾಸಿಯರಿಗೆ ಕೊಡಲಾಗುತ್ತಿತ್ತು. ಸಂಗೀತ ಶಿಕ್ಷಣವನ್ನು ಪ್ರಾರಂಭ ಮಾಡುವ ಪೂರ್ವದಲ್ಲಿ ಸಂಗೀತ ಕಲೆಯ ಆರಾಧ್ಯ ದೇವತೆಯಾದ ಸರಸ್ವತಿಯನ್ನು ಪೂಜಿಸುವ ಪದ್ಧತಿಯಿತ್ತು. ಸಂಗೀತ ಶಾಲೆಗಳಲ್ಲಿ ಸ್ವರ, ವರ್ಣ, ಗೀತೆ, ಮೂರ್ಛನ, ತಾನ, ರಾಗ ವಸ್ತು ಹಾಗೂ ಅಭಿನಯ ಮುಂತಾದ ಸಂಗತಿಗಳ ವಿಧಿವತ್ತಾದ ಶಿಕ್ಷಣ ಕೊಡಲಾಗುತ್ತಿತ್ತು. ಸಮಾಜದಲ್ಲಿ ಸಂಗೀತ ಸ್ಪರ್ಧೆ, ಸಾಮೂಹಿಕ ಸಂಗೀತ ಸಭೆಗಳು ಹಾಗೂ ನೃತ್ಯಕಾರ್ಯಕ್ರಮಗಳ ಏರ್ಪಾಡಿತ್ತು.

ಗಾಯನ ಕಲೆಯಲ್ಲಿ ವಸ್ತುಗಾನ, ರಾಗಾಲಾಪ, ಗೀತಗಾಯನ ಮುಂತಾದ ಪ್ರಕಾರಗಳು ಹಾಡಲ್ಪಡುತ್ತಿದ್ದವು. ಗೀತೆಗಳ ಜೊತೆಗೆ ಬಹುಶಃ ವೇಣುವಾದನ ಮಾಡಲಾಗುತ್ತಿದ್ದವು. ಅವುಗಳಲ್ಲಿ ಬೇರೆ ಬೇರೆ ಪ್ರಕಾರದ ತಾನಗಳು ಹಾಗೂ ಅಲಂಕಾರಗಳೂ ಮಿಶ್ರಿತವಾಗಿ ಹಾಡಲ್ಪಡುತ್ತಿದ್ದವು. ವಾದ್ಯಗಳಲ್ಲಿ ವೀಣಾ, ಮೃದಂಗ, ವೇಣು, ಪುಷ್ಕರ ಮುಂತಾದ ವಾದ್ಯಗಳ ಪ್ರಚಾರವಿತ್ತು. ಸಂಗೀತದ ಹಾಗೂ ನಾಟಕಗಳ ವಿಶೇಷ ಕಾರ್ಯಕ್ರಮಗಳಲ್ಲಿ 'ಪುಷ್ಕರ' ಎಂಬ ವಾದ್ಯವನ್ನು ಉಪಯೋಗಿಸಲಾಗುತ್ತಿತ್ತು. ಆ ಕಾಲದಲ್ಲಿ ನಾಟಕಗಳ ಪ್ರಾರಂಭ, ವಾದ್ಯವೃಂದ, ಸಂಗೀತದಿಂದ ಆಗುತ್ತಿತ್ತು.

## ೨.೨೧. ಶ್ರೀ ಹರ್ಷವರ್ಧನನ ಕಾಲದಲ್ಲಿ ಸಂಗೀತ

ಹರ್ಷವರ್ಧನನು ಸಾಹಿತ್ಯ ಹಾಗೂ ಸಂಗೀತ ಪ್ರೇಮಿಯಾಗಿದ್ದನು. ಅವನು ಒಳ್ಳೆಯ ಲೇಖಕನಾಗಿದ್ದನು. 'ನಾಗಾನಂದ', 'ಪ್ರಿಯದರ್ಶಿಕಾ' ಹಾಗೂ 'ರತ್ನಾವಲೀ' ಎಂಬ ಮೂರು ನಾಟಕಗಳನ್ನು ಬರೆದಿದ್ದಾನೆ. ಇವು ಅತ್ಯಂತ ಲೋಕಪ್ರಿಯವಾಗಿದ್ದವು. ಈ ನಾಟಕಗಳಲ್ಲಿ ಭಾರತೀಯ ಸಂಗೀತದ ಉತ್ಕೃಷ್ಟ ತತ್ವಗಳು

ಕಂಡುಬರುತ್ತವೆ. ಈ ನಾಟಕಗಳ ಜೊತೆಗೆ ಸಂಗೀತದ ಪರಿಮಳವು ಸಹ ಗ್ರಾಮ ಹಾಗೂ ನಗರಗಳಲ್ಲಿ ಹಬ್ಬಿತು. ಇವನ ನಾಟಕಗಳಿಂದ ಆ ಕಾಲದ ಸಂಗೀತ ವಿಕಾಸದ ಸ್ಥಿತಿಯ ಬಗೆಗೆ ಗೊತ್ತಾಗುತ್ತದೆ. ಹರ್ಷವರ್ಧನನ ಸಂಗೀತ ಜ್ಞಾನವು ಉಚ್ಚಮಟ್ಟದ್ದಾಗಿತ್ತು. ಅವನಿಗೆ ಅನೇಕ ರಾಗ-ರಾಗಿಣಿಗಳ ಒಳ್ಳೆಯ ಜ್ಞಾನವಿತ್ತು. ಅವನು ಸ್ವತಃ ಹಾಡುತ್ತಿದ್ದನು.

ಹರ್ಷವರ್ಧನನ ಕಾಲದಲ್ಲಿ ಸಂಗೀತದ ಸ್ಥಿತಿ ಅತ್ಯಂತ ವಿಕಾಸಪೂರ್ಣವಾಗಿತ್ತು. ನಾಟಕಗಳ ಮೂಲಕ ಸಂಗೀತ ಪ್ರಸಾರ ಮಾಡಲಾಗುತ್ತಿತ್ತು. ಅಖಿಲ ಭಾರತೀಯ ಮಟ್ಟದ ಸಂಗೀತ ಸಮ್ಮೇಲನವು ಸಹ ಆ ಕಾಲದಲ್ಲಿ ಏರ್ಪಡುತ್ತಿತ್ತು. ಇಂತಹ ಸಮ್ಮೇಳನದಲ್ಲಿ ದೇಶದಲ್ಲಿಯ ಶ್ರೇಷ್ಠ ಕಲಾಕಾರರು ಭಾಗವಹಿಸುತ್ತಿದ್ದರು. ಸಾಮಾನ್ಯ ಜನರು ನಾಟಕಗಳಲ್ಲಿ ವಿಶೇಷ ಆಸಕ್ತಿಯನ್ನು ತೋರುತ್ತಿರಲಿಲ್ಲ. ಆದರೆ ಅವರು ಗಾಯನ, ವಾದನ ಹಾಗೂ ನರ್ತನದಲ್ಲಿ ವಿಶೇಷ ಆಸಕ್ತಿಯನ್ನು ತೋರಿಸುತ್ತಿದ್ದರು. ಆದ್ದರಿಂದ ನಾಟಕಗಳ ಪ್ರಚಾರಾರ್ಥವಾಗಿ ಅವುಗಳಲ್ಲಿ ಸಂಗೀತ ಹಾಗೂ ನೃತ್ಯ ಸಮಾವೇಶ ಮಾಡಲಾಗುತ್ತಿತ್ತು. ನಾಟಕಕ್ಕಾಗಿ ನಾಟ್ಯಶಾಲೆಗಳು ಹಾಗೂ ಸಂಗೀತದ ಪ್ರದರ್ಶನಕ್ಕಾಗಿ ಬೇರೆ ಬೇರೆ ಸಂಗೀತ ಗೃಹಗಳನ್ನು ರಚಿಸಲಾಗುತ್ತಿತ್ತು. ವಿದ್ವಾಂಸರಾದ ಸಾಹಿತಿಗಳಿಗೆ, ನಾಟಕಕಾರಿಗೆ ರಾಜಾಶ್ರಯವನ್ನು ಕೊಡಲಾಗುತ್ತಿತ್ತು. ಗುಪ್ತರ ಕಾಲದ ಹಾಗೇ ಈ ಕಾಲದಲ್ಲಿಯೂ ಸಹ ಸಂಗೀತದ ವಿ ಾಸ ಕ್ರಮ ಪ್ರಗತಿಪರವಾಗಿತ್ತು. ದೇಶದಲ್ಲಿ ಸಂಗೀತದ ಪ್ರಸಾರ ಸಾಕಷ್ಟಿದ್ದಿತ್ತು. ವಿದೇಶಗಳಲ್ಲಿ ಅದರಲ್ಲೂ ಇರಾನದಲ್ಲೂ ಭಾರತೀಯ ಸಂಗೀತದ ಪ್ರಚಾರವು ವಿಶೇಷವಾಗಿ ಆಯಿತು.

ಆ ಕಾಲದಲ್ಲಿ ಸಂಗೀತ ವಾದ್ಯಗಳಲ್ಲಿ ವಿಪಂಚಿ, ಘೋಷವತಿ, ಪರಿವಾದಿನಿ, ವಲ್ಲಕೀ ಮುಂತಾದ ವೀಣೆಯ ಪ್ರಕಾರಗಳು ಹಾಗೂ ತಾಲ ವಾದ್ಯಗಳಲ್ಲಿ ಮೃದಂಗ, ನಗಾರಿ ಮುಂತಾದ ವಾದ್ಯಗಳು ವಿಶೇಷ ಪ್ರಚಾರದಲ್ಲಿದ್ದವು ಎನ್ನುವುದರ ಬಗೆಗೆ ಉಲ್ಲೇಖ ಸಿಗುತ್ತದೆ.

### ೨.೨೨. ರಜಪೂತ ಕಾಲದಲ್ಲಿ ಸಂಗೀತ

ರಜಪೂತರು ಎಷ್ಟು ಯುದ್ಧ ಪ್ರಿಯರಾಗಿದ್ದರೋ ಅಷ್ಟೇ ಸಂಗೀತ ಪ್ರಿಯರೂ ಆಗಿದ್ದರು. ಅವರು ತಮ್ಮ ರಾಜದರ್ಬಾರದ ಅನೇಕ ಸಂಗೀತಜ್ಞರಿಗೆ ಆಶ್ರಯ ಕೊಟ್ಟು ಅವರ ಯೋಗಕ್ಷೇಮವನ್ನು ನೋಡುತ್ತಿದ್ದರು. ಈ ಕಾಲದ ಸಂಗೀತ ಪದ್ಧತಿಯು ಮೌರ್ಯ ಹಾಗೂ ಗುಪ್ತಕಾಲದ ಹಾಗೆ ಇರಲಿಲ್ಲ. ಸಂಗೀತದಲ್ಲಿಯ ಅಂತರಂಗ ಆಧ್ಯಾತ್ಮಿಕತೆಯ ಅಂಶ, ಗ್ರಂಥಗಳು ರಜಪೂತರ ಕಾಲದಲ್ಲಿ ಲೋಪವಾಗುತ್ತ ಬಂದು ಸಂಗೀತದ ಹೊರಮುಖ ವಿಕಾಸವು ಹೆಚ್ಚಾಗುತ್ತಿತ್ತು. ಇದರ ಪರಿಣಾಮವಾಗಿ ಸಂಗೀತವು ಅನೇಕ ಮಾರ್ಗಗಳಲ್ಲಿ ಹಂಚಿಹೋಗಿ ಅದರ ಸಾರ್ವಭೌಮತ್ವ ನಷ್ಟವಾಯಿತು. ಅನೇಕ ಜಾತಿಗಳಲ್ಲಿ ಸಂಗೀತ ಪದ್ಧತಿಯನ್ನು ವಿಭಜಿಸಲಾಗಿದ್ದರಿಂದ ಸಂಗೀತದ ವಿಕಾಸಕ್ರಮದಲ್ಲಿ ಒಂದು ತರಹದ ಬಾಧೆಯುಂಟಾಯಿತು. ಇದರಿಂದ ಪರಸ್ಪರ ವರ್ಗಗಳಲ್ಲಿ ಸಂಗೀತದ ಹೊಂದಾಣಿಕೆ ಕಂಡು ಬರಲಿಲ್ಲ ಬೇರೆ ಬೇರೆ ವರ್ಗಗಳಲ್ಲಿ ವ್ಯತ್ಯಾಸವು ಕಂಡು ಬರುತ್ತದೆ.

ಬೇರೆ ಬೇರೆ ವರ್ಗದ ಜಾತಿಗಳಲ್ಲಿ ಸಂಗೀತದ ವಿಭಜನೆಯಾಗಿದ್ದರಿಂದ ಸಂಗೀತ ಕ್ಷೇತ್ರದ ಕಲಾಕಾರರಲ್ಲಿ ಸಂಕುಚಿತ ಮನೋಭಾವನೆ ಮೂಡಲು ಪ್ರಾರಂಭಿಸಿತು. ಕಲಾಕಾರರು ತಮ್ಮದೇ ಆದ ಒಂದು ವೈಶಿಷ್ಟ್ಯವನ್ನು ಸೃಷ್ಟಿಸಿ ಬೆಳಸಿ ತಮ್ಮದೇ ಆದ ಸಂಗೀತದ ಘರಾಣೆ ಅಥವಾ ಪರಂಪರೆ ಮಾಡಿಕೊಳ್ಳುತ್ತಿದ್ದರು. ಈ ಪ್ರಕಾರ ಹಿಂದುಸ್ತಾನಿ ಸಂಗೀತ ಪದ್ಧತಿಯಲ್ಲಿ 'ಘರಾಣೆ' ಶಬ್ದವು ಬಹುಶಃ ರಜಪೂತರ ಕಾಲದಿಂದಲೇ ಪ್ರಾರಂಭವಾಗಿರಬೇಕು. ಈ ಕಾಲದ ಹಲವಾರು ಸಂಗೀತಗಾರರಲ್ಲಿ ಅದೊಂದು ವಿಶಿಷ್ಟ ಸ್ವಭಾವ ಬೆಳೆದು ಬಂದಿತು. ಅದು ಯಾವುದೆಂದರೆ ಅವರು ತಮ್ಮ ಸಂಗೀತ ಜ್ಞಾನವನ್ನು ಬೇರೆ ಜಾತಿಯವರಿಗೆ ಅಷ್ಟೇ ಅಲ್ಲ ತಮ್ಮದೇ ಜಾತಿಯವರಿಗೂ ಕೆಲವೊಮ್ಮೆ ಕೊಡಲು ಸಿದ್ದರಿರಲಿಲ್ಲ. ಅವರ ಪುತ್ರ ಅಥವಾ ಅತಿ ಸಮೀಪದ ಸಂಬಂಧಿಕರಿಗೆ ಮಾತ್ರ ಕೊಡುತ್ತಿದ್ದರು. ಇದರಿಂದ ಕಲಾಕಾರರಲ್ಲಿ ಪರಸ್ಪರ ವೈಮನಸ್ಸು ಉಂಟಾಗಲು ಕಾರಣವಾಯಿತು. ಪರಿಣಾಮವಾಗಿ ಸಂಗೀತದ ವಿಕಾಸ ಕ್ರಮದಲ್ಲಿ ಬಾಧೆ ಉಂಟಾಯಿತು.

ರಜಪೂತ ರಾಜರ ವೈಮನಸ್ಸಿನಿಂದ ಇಡೀ ಭಾರತ ದೇಶವು ಪರಕೀಯರ ಆಡಳಿತಕ್ಕೆ ಈಡಾಯಿತು. ರಜಪೂತರು ತಮ್ಮ ವೈಯಕ್ತಿಕ ಜಗಳಕ್ಕಾಗಿ ಅತಿ ದೊಡ್ಡ ಕಲಹವನ್ನು ಮಾಡಲೂ ಹಿಂಜರಿಯುತ್ತಿದ್ದಿಲ್ಲ. ಇವರ ಈ ಕ್ಷುಲ್ಲಕ ಮನೋವೃತ್ತಿಯಿಂದ ಭಾರತೀಯ ಸಂಗೀತದ ಸ್ಥಿತಿ ಅತ್ಯಂತ ಶೋಚನೀಯವಾಗಿತ್ತು.

ರಜಪೂತ ಸ್ತ್ರೀಯರೂ ಅತ್ಯಂತ ಸಂಗೀತ ಪ್ರಿಯರಾಗಿದ್ದರು. ಅವರಿಗೆ ಯುದ್ದಕಲೆಯ ಜೊತೆಗೆ ಸಂಗೀತ ಹಾಗೂ ನೃತ್ಯ ಕಲೆಯ ಶಿಕ್ಷಣವೂ ಬಾಲ್ಯದಿಂದಲೇ ಕೊಡಲ್ಪಡುತ್ತಿದ್ದವು. ಇವರ ಸಂಗೀತ ಪ್ರೀಯತೆಯ ಬಗೆಗೆ ಉಮೇಶ ಜೋಶಿಯವರು ತಮ್ಮ 'ಭಾರತೀಯ ಸಂಗೀತದ ಇತಿಹಾಸ' ದಲ್ಲಿ ಹೀಗೆ ಬರೆದಿರುವರು. ರಜಪೂತ ಸ್ತ್ರೀಯರು ಅತ್ಯಂತ ಸಂಗೀತ ಪ್ರಿಯರಾಗಿದ್ದರು. ಈ ಕಾಲದಲ್ಲಿ ಇಂತಹ ಪ್ರಸಿದ್ಧರಾದ ಹಲವಾರು ಸ್ತ್ರೀಯರು ಆಗಿ ಹೋದರು. ಅವರಲ್ಲಿ ವೀರಕಲ್ಪ, ಧೀರತ್ವ ಹಾಗೂ ಸಂಗೀತವೂ ಸಹಜವಾಗಿ ಬೆಳೆದಿದ್ದವು. ಅವರು ಕೈಯಲ್ಲಿ ಮಿಂಚುವ ಆಯುಧವನ್ನು ಧರಿಸಿ ಯುದ್ಧರಂಗದಲ್ಲಿ ತಮ್ಮ ಪತಿಗಳೊಡನೆ ಸೇರಿ ಯುದ್ಧ ಮಾಡುತ್ತಿದ್ದರಲ್ಲದೆ, ಅಂತಃಪುರದಲ್ಲಿ ವೀಣೆಯ ಜೊತೆಗೆ ಮಧುರವಾದ ಧ್ವನಿಯಿಂದ ಹಾಡಲೂ ಶಕ್ತರಾಗಿದ್ದರು. ಯುದ್ದ ಹಾಗೂ ಸಂಗೀತ ಈ ಎರಡೂ ಶಕ್ತಿಗಳ ಸಮನ್ವಯ ಅವರಲ್ಲಿ ಅತಿ ಸುಂದರ ರೀತಿಯಿಂದ ಆಗಿತ್ತು. ರಜಪೂತ ಸ್ತ್ರೀಯರು ಯುದ್ದದಲ್ಲಿ ಎಷ್ಟು ಧೈರ್ಯದಿಂದ ಯುದ್ದ ಮಾಡುತ್ತಿದ್ದರೋ ಅಷ್ಟೇ ಕೋಮಲ ಹೃದಯದಿಂದ ವೀಣೆಯನ್ನು ಆಸ್ಥಾನದಲ್ಲಿ ಮಧುರವಾಗಿ ಹಾಡುಗಳೊಂದಿಗೆ ನುಡಿಸುತ್ತಿದ್ದರು. ರಜಪೂತ ಕಾಲದಲ್ಲಿ 'ಜೋಹರ್' ಪದ್ಧತಿಯು ಸಹ ಪ್ರಚಾರದಲ್ಲಿತ್ತು. ಯಾವಾಗ ಸ್ತ್ರೀಯರ ಪಾವಿತ್ರ್ಯವನ್ನು ಕೆಡಿಸಲಾಗುತ್ತಿತ್ತೋ ಅಥವಾ ಅವರ ಪತಿಯರು ಯುದ್ಧದಲ್ಲಿ ವೀರಮರಣವನ್ನು ಹೊಂದುತ್ತಿದ್ದರೋ, ಆಗ ಅವರು ಚಿತೆಯಲ್ಲಿ ಹಾರಿ ಪ್ರಾಣ ತ್ಯಾಗ ಮಾಡುತ್ತಿದ್ದರು. ಇದಕ್ಕೆ 'ಜೋಹರ' ಎಂದು ಕರೆಯುವರು. ಸ್ತ್ರೀಯರು 'ಜೋಹರ್'ದಲ್ಲಿ ಪ್ರವೇಶ ಮಾಡುವ ಕಾಲದಲ್ಲಿ ಅವರಿಗೆ ನಖಶಿಖಾಂತ ಅಲಂಕಾರ ಮಾಡುವಾಗ ಒಂದು ತರಹದ ಸಂಗೀತವನ್ನು ಹಾಡಲಾಗುತ್ತಿತ್ತು.

ಯಾವ ಸಮಯಕ್ಕೆ ಆಕೆ ಅಗ್ನಿಪ್ರವೇಶ ಮಾಡುತ್ತಿದ್ದಳೋ ಆ ಕಾಲದಲ್ಲಿ ಸಹ ಗೀತೆಗಳನ್ನು ಹಾಡಲಾಗುತ್ತಿತ್ತು. ಮತ್ತು ವಾದ್ಯಗಳನ್ನು ಬಾರಿಸಲಾಗುತ್ತಿತ್ತು. ಇದರ ಮುಖ್ಯ ಉದ್ದೇಶವಿಷ್ಟೇ ಅತಿ ನಿರ್ಮಲ ಮನಸ್ಸಿನಿಂದ ಸ್ತ್ರೀಯು ಅಗ್ನಿ ಪ್ರವೇಶ ಮಾಡಬೇಕು ಎನ್ನುವುದೇ ಆಗಿದೆ. ಇದರ ಹೊರತಾಗಿ ರಜಪೂತ ಸ್ತ್ರೀಯರ ಜೀವನದಲ್ಲಿ ಸಂಗೀತಕ್ಕೆ ಒಂದು ವಿಶೇಷ ಸ್ಥಾನವಿತ್ತು. ಅವರು ತಮ್ಮ ಬಿಡುವಿನ ವೇಳೆಯಲ್ಲಿ ಸಂಗೀತದ ಬಗೆಗೆ ಹೆಚ್ಚಿನ ಮಹತ್ವವನ್ನು ಕೊಡುತ್ತಿದ್ದರು. ಕೆಲಸ ಮಾಡುವಾಗ ಹಾಡುಗಳನ್ನು ಹಾಡುವುದು ಅವರಿಗೆ ಒಂದು ಪ್ರೀತಿಯ ವಿಷಯವಾಗಿತ್ತು. ಬಾವಿಯಿಂದ ನೀರನ್ನು ಸೇದುವಾಗ ಅವರು ಹಾಡುವ ಹಾಡುಗಳಲ್ಲಿ ಒಂದು ವಿಶಿಷ್ಟ ಸ್ವರಮಾಧುರ್ಯವು ಕೇಳಿ ಬರುತ್ತದೆ.

## ೨.೨೩. ಮುಸಲ್ಮಾನರ ಪ್ರವೇಶ ಕಾಲದ ಸಂಗೀತದಿಂದ ಬ್ರಿಟೀಷ ಕಾಲದವರೆಗಿನ ಸಂಗೀತ

ಕ್ರಿ.ಶ. ೧೦೦೦ ವರ್ಷದಿಂದ ೧೯೫೦ ರವರೆಗಿನ ಕಾಲದಲ್ಲಾದ ಮುಸಲ್ಮಾನರ ಆಕ್ರಮಣದಿಂದ ಭಾರತಕ್ಕೆ ತನ್ನ ರಕ್ಷಣೆ ಮಾಡಿಕೊಳ್ಳಲು ಸಾಧ್ಯವಾಗಲಿಲ್ಲ. ಭಾರತದ ಜನತೆಯಲ್ಲಿ ಒಗ್ಗಟ್ಟು ಇಲ್ಲದಿದ್ದುದು ಹಾಗೂ ಆರ್ಥಿಕ ಪರಿಸ್ಥಿತಿ ಹದಗೆಟ್ಟಿದ್ದುದು ಇದಕ್ಕೆ ಕಾರಣವಾಗಿದ್ದವು. ಮುಸಲ್ಮಾನರ ದಬ್ಬಾಳಿಕೆ ಹಾಗೂ ಆಕರ್ಷಕ ಪ್ರಚೋದನೆಗಳಿಂದ ಅನೇಕ ಜನರು ತಮ್ಮ ನೈತಿಕ ಮಟ್ಟವನ್ನು ಕಳೆದುಕೊಂಡರು. ಆ ಕಾಲದ ಸಂಗೀತ ಸಹ ಪತನ ಮಾರ್ಗದಲ್ಲಿ ಸಾಗಿತ್ತು. ಭೋಗ ಪ್ರಧಾನ ಶೃಂಗಾರಿಕ ವಾತಾವರಣವು ಭಾರತೀಯ ಸಂಗೀತದಲ್ಲಿ ಸಮಾವೇಶವಾಗುತ್ತಿತ್ತು. ಇದರಿಂದ ಸಂಗೀತದ ರೂಪ ವಿರೂಪವಾಗಿ ಅದರಲ್ಲಿಯ ಪಾವಿತ್ರ್ಯತೆ ಹೀನವಾಗಲು ಪ್ರಾರಂಭಿಸಿತು. ಸಂಗೀತದ ಸಮೃದ್ಧ ಪರಂಪರೆ ಈ ಕಾಲದಲ್ಲಿ ಮಿಶ್ರಿತ ರೂಪ ಹೊಂದಿತು.

### ೨.೨೩.೧. ಖಿಲ್ಜೀ ಯುಗ

ಸಂಗೀತದ ಕ್ಷೇತ್ರದಲ್ಲಿ ೧೨ ನೇಯ ಶತಮಾನದಲ್ಲಿ ಉತ್ತರ ಭಾರತದಲ್ಲಿ ಆದ ಅವನತಿಯು ಅಲ್ಲಾಉದ್ದೀನನ ಕಾಲದಲ್ಲಿ ತಡೆಯಲ್ಪಟ್ಟಿತೆಂದು ಹೇಳಬಹುದು. ಅವನು ಸ್ವತಃ ಸಾಹಿತ್ಯ ಹಾಗೂ ಸಂಗೀತ ಪ್ರೇಮಿಯಾಗಿದ್ದರಿಂದ ಇವುಗಳ ಪ್ರಚಾರಕ್ಕಾಗಿ ಸಾಕಷ್ಟು ಸಹಾಯ ಮಾಡಿದನು. ಅವನ ದರ್ಬಾರದಲ್ಲಿ 'ಅಮೀರಖುಸ್ರು' ಎಂಬ ಪಾರ್ಸಿ ಕವಿ ಹಾಗೂ ಸಂಗೀತಜ್ಞನೂ ಇದ್ದನು. ಇವನಿಂದ ಭಾರತೀಯ ಸಂಗೀತದ ಚರಿತ್ರೆಯಲ್ಲಿ ಅಪೂರ್ವ ಪರಿವರ್ತನೆ ಆದದ್ದು ಕಂಡುಬರುತ್ತದೆ.

ಅಮೀರಖುಸ್ರುವಿನ ಪೂರ್ವಜರು 'ಖುರಾಸ್ಸಾನ್' ದೇಶದಿಂದ ಭಾರತಕ್ಕೆ ಬಂದರು ಖುಸ್ರುವಿನ ಜನ್ಮವು ಕ್ರಿ.ಶ. ೧೨೫೩ ರಲ್ಲಿ 'ಪತಿಯಾಳಾ' ಎಂಬಲ್ಲಿ ಆಯಿತು. ಇವನು ಅತ್ಯಂತ ಬುದ್ಧಿವಂತ ಹಾಗೂ ಚತುರನಾಗಿದ್ದನು. ಮೊದಲಿಗೆ ಖುಸ್ರು ಗುಲಾಮ ವಂಶದ 'ಘಿಯಾಸುದ್ದೀನ'ನ ಆಶ್ರಯದಲ್ಲಿ ಇದ್ದನು. ಕ್ರಿ.ಶ. ೧೯೫೫ ರಲ್ಲಿ ಜಲಾಲುದ್ದೀನ ಖಿಲ್ಜಿಯ ನಂತರ ಇವನು ಅಲ್ಲಾಉದ್ದೀನ ಖಿಲ್ಜಿಯ ಬಳಿ ಸೇವೆಗಾಗಿ ಇದ್ದನು. ಅಮೀರಖುಸ್ರು

ಉಚ್ಚಮಟ್ಟದ ಸಂಗೀತಜ್ಞ, ಗಾಯಕ ಹಾಗೂ ಕವಿಯೂ ಆಗಿದ್ದನು. ಭಾರತೀಯ ಸಂಗೀತದಲ್ಲಿ ಪ್ರಪ್ರಥಮವಾಗಿ ಖ್ಯಾಲ ಹಾಗೂ ಕವ್ವಾಲಿ ಹಾಡುಗಾರಿಕೆಯ ಪದ್ಧತಿಯನ್ನು ಪ್ರಚಾರದಲ್ಲಿ ತಂದನು. ಅನೇಕ ಹೊಸ ರಾಗಗಳನ್ನು ಸಹ ರಚಿಸಿದನು. ಉದಾ : ಉಘಾಕ್, ಸಾಜಗಿರಿ, ರಘುಲುಫ್, ಆಯ್ಮನ್, ಸರಪರದ್, ವಸೀತಶಹಾನಾ ಮುಂತಾದವು ಉಲ್ಲೇಖನಿಯವಾಗಿವೆ. ಹೊಸ ರಾಗಗಳು ಹಾಗೂ ಬೇರೆ ಬೇರೆ ಗಾಯನ ಶೈಲಿಯ ಜೊತೆಗೆ 'ಅಮೀರಖುಸ್ರು'ವು ಸಂಗೀತ ವಾದ್ಯಗಳಲ್ಲೂ ಸಹ ಕ್ರಾಂತಿಕಾರಿ ಬದಲಾವಣೆಗಳನ್ನು ಮಾಡಿದ್ದಾನೆ. ಅವನ ಮಗನಾದ ಫಿರೋಜ್ಖಾನನನ್ನು ಕಂಠಸಂಗೀತಕ್ಕಾಗಿ ಅಯೋಗ್ಯನೆಂದು ಭಾವಿಸಿ ಅವನಿಗೆ ವಾದ್ಯ ವಾದನದ ಶಿಕ್ಷಣವನ್ನು ಕೊಡಲು ಯೋಚಿಸಿದನು. ಅದರಿಂದಾಗಿ ತತ್ಕಾಲೀನ ವೀಣೆಯಲ್ಲಿ ಕೆಲವು ಸುಲಭವಾದ ಪರಿವರ್ತನೆಗಳನ್ನು ಮಾಡಿ 'ಸೆಹತಾರ್' ಎಂಬ ಹೊಸ ವಾದ್ಯವನ್ನು ನಿರ್ಮಿಸಿದನು. ಆಧುನಿಕ ಕಾಲದಲ್ಲಿ ಈ ವಾದ್ಯವು ಸಿತಾರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಅಮೀರಖುಸ್ರು ಹಾಗೂ ಫಿರೋಜ್‌ಖಾನ್ ಈ ಪಿತಾಮಹರು 'ಸೆಹತಾರ' ವಾದ್ಯದ ಮೇಲೆ ನುಡಿಸುವಂತಹ ಅನೇಕ ರಚನೆಗಳನ್ನು ರಚಿಸಿದನು. ಈ ರಚನೆಗಳು 'ಫಿರೋಜ್‌ಖಾನಿಗತ್' ಎಂದು ಪ್ರಸಿದ್ಧವಾಗಿವೆ.

ಭರತ ಮುನಿಯ ಕಾಲದಲ್ಲಿ ಜಾತಿ ಗಾಯನವು ಲೋಪವಾಗಿ ಮಾತುಂಗ ಮುನಿಯ ಕಾಲದಲ್ಲಿ ರಾಗ ಗಾಯನ ಪದ್ಧತಿ ಪ್ರಚಾರದಲ್ಲಿ ಬಂತು. ಪುನಃ ಶಾರ್ಙ್ಗ ದೇವನ ಕಾಲದಲ್ಲಿ 'ಆಧುನಾ ಪ್ರಸಿದ್ಧ' ರಾಗಗಳು ಹೊಸ ರೂಪ ಧರಿಸಿ ಪ್ರಚಾರದಲ್ಲಿ ಬಂದವು. ರತ್ನಾಕರದಲ್ಲಿ ಪ್ರತಿಪಾದಿಸಲಾದ 'ತುರುಷ್ಕತೋಡಿ' ಹಾಗೂ ತುರುಷ್ಕಗೌಡ ಮುಂತಾದ ರಾಗಗಳು ದಕ್ಷಿಣ ಭಾರತದಲ್ಲಿ ಮುಸಲ್ಮಾನರ ಪ್ರಭಾವ ಇದ್ದಿತು ಎನ್ನುವುದನ್ನು ಸಿದ್ಧ ಮಾಡುತ್ತವೆ.

ಮಾಲವ, ಗೌಡ, ಕರ್ನಾಡ, ಬಂಗಾಲ, ದ್ರಾವಿಡ, ದಕ್ಷಿಣ ಗುರ್ಜರ, ಸೌರಾಷ್ಟ್ರ ಮುಂತಾದ ರಾಗಗಳು ದಕ್ಷಿಣ ಭಾರತದಲ್ಲಿ ಮುಸಲ್ಮಾನರ ಪ್ರಭಾವ ಇದ್ದಿತು ಎನ್ನುವುದನ್ನು ಸುದ್ಧಿ ಮಾಡುತ್ತವೆ. ಮಾಲವ, ಗೌಡ, ಕರ್ನಾಡ, ಬಂಗಾಲ, ದ್ರಾವಿಡ, ದಕ್ಷಿಣ, ಗುರ್ಜರ, ಸೌರಾಷ್ಟ್ರ ಮುಂತಾದ ರಾಗಗಳು ವಿಶಿಷ್ಟ ಪ್ರದೇಶದ ಜೊತೆಗೆ ಸಂಬಂಧ ಹೊಂದಿದ್ದವು ಎಂಬುದನ್ನು ಸೂಚಿಸುತ್ತದೆ. ಇವುಗಳ ಹೊರತಾಗಿ ಈ ಗ್ರಂಥದಲ್ಲಿ ನಾದ, ಶ್ರುತಿ, ಸ್ವರ, ಗ್ರಾಮ, ಮೂರ್ಛನ, ಜಾತಿಗಳು ಮುಂತಾದ ವಿಷಯಗಳನ್ನು ವಿಸ್ತಾರವಾಗಿ ವರ್ಣಿಸಲಾಗಿದೆ. ನಾಟ್ಯ ಸಾಹಿತ್ಯಕ್ಕಿಂತ ಗಾಯನ ಹಾಗೂ ನೃತ್ಯದ ವಿಮರ್ಶೆಯನ್ನು 'ಸಂಗೀತ ರತ್ನಾಕರ'ದಲ್ಲಿ ಮಾಡಲಾಗಿದೆ. ನಾಟ್ಯಾಭಿನಯ ಹಾಗೂ ಭಾವಪೂರ್ಣ ಅಂಗವಿಕ್ಷೇಪಗಳ ಬಗೆಗೆ ಕೆಲವು ವಿಚಿತ್ರ ಸೂಚನೆಗಳನ್ನು ಸಹ ಶಾರ್ಙ್ಗದೇವನು ತನ್ನ ಗ್ರಂಥದಲ್ಲಿ ಮಾಡಿದ್ದಾನೆ. ''ನಿಸ್ಸಂದೇಹವಾಗಿ ರತ್ನಾಕರವು ನಮ್ಮ ಸಂಗೀತ ಇತಿಹಾಸದಲ್ಲಿ ಒಂದು ಮಹತ್ವಪೂರ್ಣ ಕೊಂಡಿಯಾಗಿದೆ. ಹಾಗೂ ಇದರಿಂದ ಭಾರತೀಯ ಕಲಾಕಾರರಿಗೆ ಒಂದು ಹೊಸಬೆಳಕು ತೋರಿದೆ ''[೨೦] ಎಂದು ಪಂಡಿತ ಭಾತಖಾಂಡೆಯವರು ತಮ್ಮ 'ಉತ್ತರ ಭಾರತೀಯ ಸಂಗೀತ'ದ ಸಂಕ್ಷಿಪ್ತ ಇತಿಹಾಸದಲ್ಲಿ ವಿವರಿಸಿದ್ದಾರೆ.

---

೨೦. ಭಾರತೀಯ ಸಂಗೀತದ ಚರಿತ್ರೆ : ಡಾ. ಬಿ. ಡಿ. ಪಾಠಕ, ಪು-೮೧

## ೨.೨೩.೨. ಮೊಗಲರ ಕಾಲದಲ್ಲಿ ಸಂಗೀತ

ಜಹೀರುದ್ದಿನ ಮಹಮ್ಮದ ಬಾಬರನು ಪಾನಿಪತ್ ಯುದ್ದಲ್ಲಿ ಇಬ್ರಾಹಿಮ್ ಲೋದಿಯನ್ನು ಸೋಲಿಸಿ ದಿಲ್ಲಿಯ ರಾಜ್ಯ ಕೈವಶ ಮಾಡಿಕೊಂಡನು. ಬಾಬರನು ಎಷ್ಟು ಶೂರ ಯೋಧನಾಗಿದ್ದನೋ ಅಷ್ಟೇ ಸಂಗೀತ ಪ್ರೇಮಿಯೂ ಆಗಿದ್ದನು ಎಂದು ಹೇಳಲಾಗುತ್ತದೆ. ಅವನು ಸ್ವತಃ ಒಳ್ಳೆಯ ಗಾಯಕನಾಗಿದ್ದನು. ಅವನ ದರ್ಬಾರದ ಅನೇಕ ಸಂಗೀತಜ್ಞರಿಗೆ ಆಶ್ರಯ ಕೊಟ್ಟಿದ್ದನೆಂದು ಕೆಲವು ಉಲ್ಲೇಖಗಳು ದೊರಕುತ್ತವೆ. ಇವನ ಕಾಲದಲ್ಲಿ ಭಾರತೀಯ ಸಂಗೀತದ ವಿಕಾಸ ತೃಪ್ತಿಕರವಾಗಿತ್ತು ಅರೇಬಿಯನ್ ಹಾಗೂ ತುರ್ಕಿ ಸಂಗೀತದ ಪ್ರಭಾವ ಉತ್ತರ ಭಾರತದಲ್ಲಿಯ ಸಂಗೀತದ ಮೇಲೆ ಆದಶ್ಯ ಕಂಡುಬರುತ್ತದೆ. ಇದರ ಪ್ರಭಾವವು ಭಾರತೀಯ ಸಂಗೀತದ ಮೇಲೆ ಬೀರಿದ್ದರೂ ಭಾರತೀಯ ಸಂಗೀತದ ಮೂಲ ಆತ್ಮ ಸೌಂದರ್ಯವು ಕಡಿಮೆಯಾಗಿರಲಿಲ್ಲ.

ಖ್ಯಾಲ್, ಗಝಲ್ ಹಾಗೂ ಕವ್ವಾಲಿ ಗಾಯನದ ಪ್ರಕಾರಗಳು ಸಹ ಈ ಕಾಲದಲ್ಲಿ ಅಧಿಕವಾಗಿ ಪ್ರಚಾರದಲ್ಲಿ ಇದ್ದವು. ಸಂಗೀತದಲ್ಲಿ ಆಧ್ಯಾತ್ಮಿಕ ತತ್ವಗಳೊಂದಿಗೆ ಸಾಮಾನ್ಯ ಜನರ ಹಾಗೂ ದಣಿದಿರುವ ಸೈನಿಕರ ಮನೋರಂಜನೆ ಮಾಡುವದಕ್ಕಾಗಿ ಶೃಂಗಾರ ರಚನೆಗಳೂ ಒಳಗೊಂಡಿದ್ದವು.

ಬಾಬರನ ಮರಣದ ನಂತರ ಕ್ರಿ.ಶ. ೧೫೩೦ ರಲ್ಲಿ ಅವನ ಮಗನಾದ ಹುಮಾಯುನನು ಪಟ್ಟವೇರಿದನು. ಇವನು ಸ್ವಭಾವತಃ ಶಾಂತ ಮನಸ್ಸಿನವನಾಗಿದ್ದನು ಹಾಗೂ ಪರಾಕ್ರಮಿಯೂ ಆಗಿದ್ದನು. ಇವನ ಕಾಲದಲ್ಲಿ 'ಸೂಫಿ' ಭಕ್ತರು ಸಂಗೀತದ ಮಾಧ್ಯಮದಿಂದಲೇ ತಮ್ಮ ಮತದ ಪ್ರಚಾರ ಮಾಡುತ್ತಿದ್ದರು ಇವರ ವಿಚಾರ ತತ್ವಗಳ ರತಿ ಅತ್ಯಂತ ಆಕರ್ಷಕವಿದ್ದು ಸಂಪೂರ್ಣ ಸಂಗೀತಮಯವಾಗಿತ್ತು.

## ೨.೨೩.೩. ಅಕ್ಬರನ ಕಾಲದಲ್ಲಿ ಸಂಗೀತದ ಬೆಳವಣಿಗೆ

ಅಕ್ಬರನು ಸ್ವತಃ ಮಹಾನ್ ಸಂಗೀತ ಪ್ರೇಮಿಯಾಗಿದ್ದನು ಪ್ರಸಿದ್ದ ಪಾರ್ಸಿ ಇತಿಹಾಸಕಾರನಾದ 'ಅಬ್ದುಲ್ ಫಜಲ್' ನು ಬರೆದ ಐನೆ-ಎ-ಅಕಬರಿ ಎಂಬ ಗ್ರಂಥದಲ್ಲಿ ಅಕಬರನ ಸಂಗೀತ ಪ್ರೇಮಿ ಹಾಗೂ ಅವನ ಕಾಲದಲ್ಲಿ ಇದ್ದ ಸಂಗೀತಗಾರರು ಹಾಗೂ ಆ ಕಾಲದಲ್ಲಿ ಪ್ರಚಾರದಲ್ಲಿದ್ದ ಸಂಗೀತ ವಾದ್ಯಗಳ ಬಗೆಗೆ ಮಾಹಿತಿ ದೊರಕುತ್ತದೆ. ಅವನು ಬರೆದ ಪ್ರಕಾರ ಬಾದಶಹ ಸಲಾನತನಿಗೆ ಒಳ್ಳೆಯ ಸಂಗೀತಜ್ಞರಿಗೆ ಎಷ್ಟು ಜ್ಞಾನವಿತ್ತೊ, ಅಷ್ಟೇ ಜ್ಞಾನ ಸಂಗೀತದಲ್ಲಿ ಇವನಿಗೂ ಇದ್ದಿತು. ಗಾಯನದ ಜೊತೆಗೆ ಅವನು ವಾದ್ಯವಾದನದಲ್ಲಿಯೂ ಸಹ ಪ್ರವೀಣನಾಗಿದ್ದನು. ಅದರಲ್ಲಿಯೂ ನಕ್ಕಾರ ಎಂಬ ವಾದ್ಯವನ್ನು ಬಾರಿಸುವದರಲ್ಲಿ ವಿಶೇಷ ಪ್ರಾವೀಣ್ಯತೆಯನ್ನು ಪಡೆದಿದ್ದನು.

'ಬಾದಶಹ ಸಲಾಮತ್'ರು ಸಂಗೀತದ ಕಡೆಗೆ ವಿಶೇಷ ಗಮನ ಕೊಡುತ್ತಾರೆ. ಹಾಗೂ ಆನಂದ ಕೊಡುವಂತಹ ಕಲೆಯ ಅಭ್ಯಾಸ ಮಾಡುವ ಕಲಾವಿದರಿಗೆ ಆಶ್ರಯವನ್ನು ಕೊಡುತ್ತಾರೆ. ದರ್ಬಾರದಲ್ಲಿ ಹಿಂದು, ಇರಾಣಿ, ತುರಾಣಿ ಹಾಗೂ ಕಾಶ್ಮೀರಿ ಮುಂತಾದ ಅನೇಕ ಸ್ತ್ರೀ ಪುರುಷರು ಸಂಗೀತಜ್ಞರಾಗಿದ್ದಾರೆ. ಈ ತಜ್ಞರಲ್ಲಿ

೭ ವರ್ಗಗಳನ್ನು ಸ್ಥಾಪಿಸಿ ಪ್ರತಿಯೊಂದು ದಿನದಲ್ಲಿ ಅವರು ಬಂದು ಬಾದಷಹ ಸಲಾಮತನಿಗೆ ಸಂಗೀತದ ಆಹ್ಲಾದವನ್ನು ನೀಡಬೇಕಾಗುತ್ತಿತ್ತು.

ದರ್ಬಾರದಲ್ಲಿ ಇದ್ದ ಪ್ರಮುಖ ಸಂಗೀತಗಾರರಲ್ಲಿ ಗ್ವಾಲಿಯರದ 'ಮಿಯಾತಾ ನಸೇನ' ಹಾಗೂ ಬೀನ ವಾದಕರಾದ ಶಿಹಾಬಖಾನ, ಬಾಸುರಿ ವಾದಕರಾದ ಉಸ್ತಮಾಸ್ತ ಹಾಗೂ ಸ್ವರಮಂಡಲ ವಾದಕರಾದ 'ಬೀರಮಂಡಲಖಾನ' ಮುಂತಾದವರು ಇದ್ದರು. ಅಕಬರನ ನಗಾರ ಖಾನೆಯಲ್ಲಿ ಉಪಯೋಗಿಸುವಂತಹ ವಾದ್ಯಗಳ ಉಲ್ಲೇಖವು ಸಹ ಐನ್-ಎ-ಅಕಬರಿಯಲ್ಲಿ ಸಿಗುತ್ತದೆ. ಉದಾಹರಣಾರ್ಥವಾಗಿ ಕುವರ್ಗ (ದಮಾಮ್) ಮಕ್ಕಾರ, ಕರ್ನಾ, ಸಿಂಗ, ಮಂಚಿಕಾ ಮುಂತಾದವುಗಳು.

ಅಕಬರನು ಅತ್ಯಂತ ಕಲಾ ಪ್ರೇಮಿಯಾಗಿದ್ದನು. ಇವನಿಗೆ ಸಂಗೀತ ಕಲೆಯ ಜೊತೆಗೆ ಚಿತ್ರಕಲೆಯ ಮೇಲೆಯೂ ಸಹ ಸಾಕಷ್ಟು ಅಭಿರುಚಿ ಇತ್ತು. ಅವನು ಹೆಚ್ಚಾಗಿ ಮೆಚ್ಚುವದು ಸಂಗೀತವಾಗಿತ್ತು. ಇವನ ಆಳ್ವಿಕೆ ಕಾಲದ ಒಂದು ಪ್ರಮುಖ ವೈಶಿಷ್ಟ್ಯ ಯಾವುದೆಂದರೆ ಇಡೀ ದೇಶಾದ್ಯಂತ, ಮೂಲೆ ಮೂಲೆಯಲ್ಲಿಯೂ ಸಂಗೀತ ಪ್ರಸಾರವಾಗುತ್ತಿತ್ತು. ಇದರ ಜೊತೆಗೆ ಸಂಗೀತದ ಮಟ್ಟವೂ ಉನ್ನತ ಸ್ಥಿತಿಯಲ್ಲಿ ಇದ್ದಿತು, ಸಂಗೀತದಲ್ಲಿಯೂ ಪಾವಿತ್ರ್ಯತೆ ಹಾಗೂ ಉಜ್ವಲತೆ ಸ್ಥಿರವಾಗಿ ಇದ್ದಿತು. ಭಾರತೀಯ ಸಂಗೀತದ ಎಲ್ಲ ಪ್ರವೃತ್ತಿಗಳ ಬೆಳವಣಿಗೆ, ಶಾಸ್ತ್ರೀಯ ರೀತಿಯಿಂದ ಆಗುತ್ತಿತ್ತು.

### ೨.೨೩.೪. ಸಂತ ತುಲಸೀದಾಸ

ಭಾರತೀಯ ಸಂಗೀತದಲ್ಲಿ ಸಂತ ತುಲಸೀದಾಸರಿಗೆ ಒಂದು ಮಹತ್ವಪೂರ್ಣ ಸ್ಥಾನವಿದೆ. ಇವರ ಜನ್ಮ ೧೫೮೪ ರಲ್ಲಿ ಆಯಿತೆಂದು ತಿಳಿದುಬರುತ್ತದೆ. ಇವರು ಶ್ರೇಷ್ಠ ಕವಿಗಳು ಹಾಗೂ ಸಂಗೀತಜ್ಞರೂ ಆಗಿದ್ದರು. ಇವರ ಪೂರ್ಣ ಕಾವ್ಯ ರಚನೆಯು ಸಂಗೀತಮಯವಾಗಿದೆ. ಇವರು ರಚಿಸಿದ ಕಾವ್ಯ 'ರಾಮಚರಿತ ಮಾನಸ' ಭಾರತದ ಒಂದು ಶ್ರೇಷ್ಠ ಪವಿತ್ರ ಗ್ರಂಥವಾಗಿದೆ. ಇದರಲ್ಲಿ ತುಲಸೀದಾಸರು ತಾವು ರಚಿಸಿದ ಪದಗಳಿಗೆ ಸಂಗೀತದ ಮೆರಗನ್ನು ಕೊಟ್ಟು, ಶ್ರೀರಾಮ ನಾಮದ ಪಾವನಮಯ, ದಿವ್ಯ ಆದರ್ಶವನ್ನು ಸಂಗೀತದಲ್ಲಿ ನಿಜಜೀವನದ ತತ್ವಗಳನ್ನು ಆಧ್ಯಾತ್ಮ ಸೌಂದರ್ಯವನ್ನು ಅಳವಡಿಸಿದ್ದಾರೆ. ಭಾರತೀಯ ಸಂಗೀತದ ವಿಕಾಸದಲ್ಲಿ ಇವರು ಮಹತ್ವಪೂರ್ಣವಾದ ಸೇವೆಯನ್ನು ಸಲ್ಲಿಸಿದ್ದಾರೆ.

ದಕ್ಷಿಣ ಭಾರತದಲ್ಲಿ ಭಕ್ತಿಯ ಮಾರ್ಗದಲ್ಲಿ ಜ್ಞಾನ ಪ್ರಸಾರ ಮಾಡುವ ರೀತಿ ೧೦ ನೆಯ ಶತಮಾನದಲ್ಲಿ ಪ್ರಾರಂಭವಾಯಿತು. ಅನೇಕ ಸಂತ ಕವಿಗಳು ತಮ್ಮ ರಚನೆಗಳಲ್ಲಿ ಸಂಗೀತದ ಉಪಯೋಗ ಮಾಡಿ ತಮ್ಮ ವಿಚಾರಧಾರೆಯನ್ನು ಪ್ರಕಟಿಸಿದರು. ೧೨ ನೆಯ ಶತಮಾನದಲ್ಲಿ ವಚನ ಸಾಹಿತ್ಯ ಹಾಗೂ ರಗಳೆ ಮುಂತಾದ ರಚನೆಗಳು ಪ್ರಾರಂಭವಾದವು. ಶ್ರೀ ಬಸವೇಶ್ವರ, ಅಕ್ಕಮಹಾದೇವಿ, ಹರಿಹರ, ಅಲ್ಲಮಪ್ರಭು ಮುಂತಾದ ಶ್ರೇಷ್ಠ ವಚನಕಾರರು ತಮ್ಮ ಅಪೂರ್ವವಾದ ಸಂಗೀತಮಯ ಕಾವ್ಯ ರಚನೆಗಳನ್ನು ಮಾಡಿದ್ದಾರೆ. ೧೩ ನೆಯ

ಶ- ಮಾನದಲ್ಲಿ ಕರ್ನಾಟಕದ 'ನಿಜಗುಣಶಿವಯೋಗಿ'ಗಳು ಸಂಗೀತ ವಿಕಾಸ ಕ್ರಮದಲ್ಲಿ ತಮ್ಮ ಅಪೂರ್ವ ಸೇವೆಯನ್ನು ಸಲ್ಲಿಸಿದ್ದಾರೆ.

ಜಹಾಂಗೀರನ ದರ್ಬಾರಿನಲ್ಲಿ ಅನೇಕ ಸಂಗೀತಜ್ಞರು ಆಶ್ರಯ ಹೊಂದಿದ್ದರು. ಇವರಲ್ಲಿ ಬಿಲಾಸಖಾನ, ಪರವೇಜದಾದ್, ಖುರಂದಾದ, ಹಮಜಾನ್ ಮುಂತಾದ ವಿದ್ವಾಂಸರು ವಿಶೇಷವಾಗಿ ಪ್ರಸಿದ್ಧರಾಗಿದ್ದರು. ಅನೇಕ ಸಂಗೀತ ಕಚೇರಿಗಳ ಏರ್ಪಾಡು ಸಹ ಅವನ ದರ್ಬಾರಿನಲ್ಲಿ ಆಗಾಗ ನಡೆಯುತ್ತಿತ್ತು. ವಿಶೇಷವಾಗಿ ಗಝುಲ್, ಶಾಸ್ತ್ರೀಯ ಗಾಯನ, ಸಿತಾರವಾದನ ಹಾಗೂ ನೃತ್ಯ ಕಾರ್ಯಕ್ರಮಗಳು ಸಂಗೀತ ಕಚೇರಿಗಳಲ್ಲಿ ಏರ್ಪಡುತ್ತಿದ್ದವು.

ಜಹಾಂಗೀರನ ಕಾಲದಲ್ಲಿ ಪಂಡಿತ ಸೋಮನಾಥ ಹಾಗೂ ಪಂಡಿತ ದಾಮೋದರ ಎಂಬ ಇಬ್ಬರು ವಿದ್ವಾಂಸರು ಆಗಿ ಹೋದರು. ಇವರು ಕ್ರಮಶಃ 'ರಾಗಬೋಧ' ಹಾಗೂ 'ಸಂಗೀತ ದರ್ಪಣ' ಎಂಬ ಎರಡು ಮಹತ್ವಪೂರ್ಣ ಸಂಗೀತ ಗ್ರಂಥಗಳನ್ನು ರಚಿಸಿದ್ದಾರೆ.

ಷಹಾಜಾನನು ಒಳ್ಳೆ ಗಾಯಕನೂ, ಕವಿಯೂ ಆಗಿದ್ದನು. ಇವನು ತನ್ನ ದರ್ಬಾರದಲ್ಲಿ ಅನೇಕ ಸಂಗೀತಜ್ಞರಿಗೆ ಆಶ್ರಯವಿತ್ತಿದ್ದನು. ಇವರಲ್ಲಿ ದಿರಂಗಖಾನ, ಬಿಲಾಸಖಾನನ ಅಳಿಯನಾದ ಲಾಲಖಾನ, ಜಗನ್ನಾಥ ಮುಂತಾದ ಸಂಗೀತಜ್ಞರು ಅತ್ಯಂತ ಹೆಸರು ವಾಸಿಯಾಗಿದ್ದರು. ಷಹಾಜಾನನಿಗೆ ಉರ್ದು ಶಾಯರಿಯ ಜೊತೆಗೆ ದ್ರುಪದ ಶೈಲಿಯಲ್ಲಿ ಹಾಡಲಾಗುವ ಗೀತ ಹಾಗೂ ಭಜನೆಗಳೂ ಅತ್ಯಂತ ಪ್ರಿಯವಾಗಿದ್ದವು. ಅವನು ತನ್ನ ದರ್ಬಾರದಲ್ಲಿ ಮೇಲಿಂದ ಮೇಲೆ ಸಂಗೀತ ಹಾಗೂ ನೃತ್ಯ ಕಾರ್ಯಕ್ರಮಗಳನ್ನು ಏರ್ಪಡಿಸುತ್ತಿದ್ದನು.

ಜಹಾಂಗೀರನ ಕಾಲದ ಹಾಗೇ ಇವನ ಕಾಲದಲ್ಲಿಯೂ ಸಂಗೀತದಲ್ಲಿ ಶೃಂಗಾರದ ಅಂಶ ಸಾಕಷ್ಟು ಪ್ರಮಾಣದಲ್ಲಿ ಕಂಡು ಬರುತ್ತಿತ್ತು. ಸಂಗೀತದಲ್ಲಿ ವಿಶೇಷವಾಗಿ ಗಾಯನ ಹಾಗೂ ನೃತ್ಯಗಳ ಪ್ರಚಾರವಿತ್ತು. ಸರ್ವಸಾಮಾನ್ಯ ಜನರಲ್ಲಿಯೂ ಸಹ ಸಂಗೀತದ ಅಭಿರುಚಿ ಇದ್ದದ್ದು ಕಂಡುಬರುತ್ತಿತ್ತು. ಸಂಗೀತಕ್ಕೆ ವಿಶೇಷವಾಗಿ ರಾಜಾಶ್ರಯ ಪ್ರಾಪ್ತವಾಗಿದ್ದರಿಂದ ದೇಶದಲ್ಲಿಯ ವೇಶ್ಯಾ ಜನರೂ ಸಹ ಸಂಗೀತ ಕಲಿಯಲು ಪ್ರಾರಂಭಿಸಿದರು. ಈ ಪ್ರಕಾರ ಸಂಗೀತ ಹಾಗೂ ನೃತ್ಯಗಳನ್ನು ಕೆಳಗಿನ ಜಾತಿಯವರೂ ಸಹ ಕಲಿಯಲು ಪ್ರಾರಂಭಿಸಿದರು. ಭಾರತೀಯ ಸಂಗೀತಕ್ಕೆ ಅಕಬರನ ಕಾಲದಲ್ಲಿದ್ದ ಗೌರವ ಷಹಾಜನನ ಕಾಲದಲ್ಲಿ ಕಡಿಮೆಯಾಗತೊಡಗಿತು. ಸಂಗೀತ ಕೇವಲ ಶೃಂಗಾರದ ಮನರಂಜನೆಯ ಸಾಧನ ಎಂದು ಭಾವಿಸಲಾಗುತ್ತಿತ್ತು.

೧೮ ನೇಯ ಶತಮಾನದ ಉತ್ತರಾರ್ಧದಲ್ಲಿ ಸಂಗೀತದ ಸಾಧನೆ ಹಾಗೂ ಅದರ ಬೆಳವಣಿಗೆ ಸಾಧಾರಣ ರೂಪದಿಂದ ನಡೆಯುತ್ತಿತ್ತು. ಮುಸಲ್ಮಾನ ಶಾಸಕರ ಶಕ್ತಿ ಕ್ಷೀಣಿಸುತ್ತಿದ್ದು ಭಾರತದ ಮೇಲೆ ಬ್ರಿಟಿಶ ಜನರ ಅಧಿಕಾರ ದಿನೇ ದಿನೇ ಹೆಚ್ಚುತ್ತಿತ್ತು. ಈ ಒಂದು ದುರ್ಭರ ಕಾಲದಲ್ಲಿ ಸಂಗೀತ ಕಲೆಯು ರಾಜಾಶ್ರಯದಿಂದ ಹೊರಬಂದು ಸ್ವತಂತ್ರ ರೂಪದಿಂದ ಸಣ್ಣಪುಟ್ಟ ಸಂಸ್ಥಾನಗಳಲ್ಲಿ ಬೆಳೆಯಹತ್ತಿತು. ಈ ಕಾಲದಲ್ಲಿ ಹಿಂದುಸ್ತಾನಿ ಸಂಗೀತದಲ್ಲಿ ಹಿಂದೂ ಹಾಗೂ ಫಾರಸೀ ಸಂಗೀತದ ಒಂದು ಸುಂದರ ಸಮ್ಮಿಶ್ರಣ ಆದದ್ದು ಕಂಡುಬರುತ್ತದೆ. ಫಾರಸಿ ಶಾಸ್ತ್ರೀಯ

ಸಂಗೀತದ ಕೆಲ ಪ್ರಕಾರಗಳು ಪೂರ್ಣವಾಗಿ ಇದ್ದಕ್ಕಿದ್ದ ಹಾಗೇ ಹಿಂದುಸ್ತಾನಿ ಸಂಗೀತದಲ್ಲಿ ಒಳಗೊಂಡವು. ಉದಾ : ತ್ರಿವಟ, ತರಾನಾ, ಗಝುಲ್, ರೇಖತಾ, ಕವ್ವಾಲಿ, ಕುಲಬಾನಾ ಮುಂತಾದವು ಅನೇಕ ಉಚ್ಚ ಶ್ರೇಣಿಯ ಗಾಯಕ ಹಾಗೂ ವಾದಕರು ಈ ಕಾಲದಲ್ಲಿ ಆಗಿಹೋದರು. ಇವರಲ್ಲಿ ಸದಾರಂಗ, ಅದಾರಂಗ, ಗುಲಾಮರಸೂಲ್, ಸಾರಖಾನ, ಲಾಡಖಾನ್, ಜಾನಿ, ಮೊಹಮ್ಮದಖಾನ, ಶೋಮಿಯಾ, ಛಟ್ಟೂಖಾನ, ಕುಶಾಲಖಾನ ಮುಂತಾದವರ ಹೆಸರುಗಳನ್ನು ವಿಶೇಷವಾಗಿ ಹೇಳಬಹುದು.

ಕ್ರಿ.ಶ. ೧೮೧೩ ರಲ್ಲಿ ಪಾಟ್ನಾದ ಸಂಗೀತ ವಿದ್ವಾಂಸರಾದ ಮಹಮ್ಮದ ರೋಜಾ ಇವನು 'ನಗ್ಮಾತೇ ಆಸಫಿ' ಎಂಬ ಗ್ರಂಥ ಬರೆದನು. ಮಹಮ್ಮದ ರಜಾನಿಗೆ ಲಖನೌದ ನವಾಬ ಅಸಿಫ್ ಉದ್ದೌಲನ ಆಶ್ರವಿತ್ತು. 'ನಗ್ಮಾತೇ ಆಸಫಿ' ಗ್ರಂಥದಲ್ಲಿ ಶುದ್ಧ ಸ್ವರಗಳ ಸಪ್ತಕವು ಬಿಲಾವಲದ ಸಪ್ತಕ ಎಂದು ಭಾವಿಸಲಾಗಿದ್ದು ಆರು ಮುಖ್ಯ ರಾಗಗಳು ಹಾಗೂ ಅವುಗಳ ಭಾರ್ಯ ಹಾಗೂ ಪುತ್ರ ವಧು ರಾಗಗಳ ರೂಪದಲ್ಲಿ ವರ್ಗೀಕರಿಸಿದ್ದಾನೆ. ಈ ಹಿಂದೆ ಪ್ರಚಾರದಲ್ಲಿದ್ದ ಮತಗಳ ಕಟು ಟೀಕೆಯನ್ನು ಮಾಡಿ ತನ್ನ ಮತದ ಪ್ರತಿಪಾದನೆಯನ್ನು ತನ್ನ ಗ್ರಂಥದಲ್ಲಿ ಇತನು ಮಂಡಿಸಿದ್ದಾನೆ. ಈ ಗ್ರಂಥ ಅತಿ ಉಪಯುಕ್ತವೆಂದು ಭಾವಿಸಲಾಗಿದೆ.

ಕ್ರಿ.ಶ. ೧೮೪೨ ರಲ್ಲಿ ಕಲಕತ್ತೆಯ ವಿದ್ವಾಂಸರಾದ ಶ್ರೀಕೃಷ್ಣಾನಂದ ವ್ಯಾಸರು 'ಸಂಗೀತಕಲ್ಪದ್ರುಮ' ಗ್ರಂಥ ಬರದರು. ಇದರಲ್ಲಿ ಪ್ರಾಚೀನ ಗೀತೆಗಳ ಸಂಗ್ರಹ ಪ್ರಾಪ್ತವಾಗಿದೆ. ಆ ಕಾಲದ ಸಂಗೀತದ ಬೆಳವಣಿಗೆಯಲ್ಲಿ ಈ ಗ್ರಂಥವು ಸಾಕಷ್ಟು ಸಹಾಯಕಾರಿಯಾಗಿದೆ.

ಕ್ರಿ.ಶ. ೧೯೩೯ ರಲ್ಲಿ ಬಂಗಾಲದ ಶ್ರೀಕೃಷ್ಣಧನ ಬ್ಯಾನರ್ಜಿಯವರು 'ಗೀತಸೂತ್ರ' ಎಂಬ ಗ್ರಂಥವನ್ನು ಬಂಗಾಳಿ ಭಾಷೆಯಲ್ಲಿ ಬರೆದರು. ಇದರಲ್ಲಿ ಮೂರ್ಛನ ಗ್ರಾಮ, ರಾಗ ಮುಂತಾದವುಗಳ ವಿವೇಚನೆಯನ್ನು ವಿಸ್ತಾರವಾಗಿ ಮಾಡಲಾಗಿದೆ. ಕ್ರಿ.ಶ. ೧೯ ನೆಯ ಶತಮಾನದಲ್ಲಿ ಬಂಗಾಲ ಪ್ರಾಂತವು ಸಂಗೀತ ವಿಕಾಸದ ಕೇಂದ್ರವಾಗಿತ್ತು. ಆ ಸಮಯದಲ್ಲಿ ಕಲಕತ್ತೆಯ ಅನೇಕ ಸಂಗೀತ ವಿದ್ವಾಂಸರಾದರಲ್ಲದೇ ಇವರು ಭಾರತೀಯ ಸಂಗೀತ ವಿಕಾಸ ಕ್ರಮಕ್ಕೆ ಸಾಕಷ್ಟು ಸಹಾಯ ಸಲ್ಲಿಸಿದ್ದಾರೆ.

೧೯ ನೆಯ ಶತಮಾನದ ಉತ್ತರಾರ್ಧದಲ್ಲಿ ಮೊಗಲರ ಅಂತಿಮ ಸಾಮ್ರಾಟನಾದ ಬಹಾದ್ದೂರ ಶಹಾ ಆಗಿ ಹೋದರು. ಇವನು ಶ್ರೇಷ್ಠ ಉರ್ದು ಕವಿ ಹಾಗೂ ಸಂಗೀತಜ್ಞನಾಗಿದ್ದನು. ಬಹಾದ್ದೂರ ಶಹಾ ತನ್ನ ರಚನೆಗಳನ್ನು ಜಫರ ಎಂಬ ಉಪನಾಮದಿಂದ ರಚಿಸುತ್ತಿದ್ದನು. ಬ್ರಿಟಿಷರ ವಿರುದ್ಧ ಬಂಡಾಯ ಎಬ್ಬಿಸಿದ ಅಪರಾಧದಲ್ಲಿ ಇವನನ್ನೂ ಬ್ರಿಟಿಷರು ರಂಗೂನದ ಕಾರಾಗೃಹದಲ್ಲಿಟ್ಟರು. ಅಲ್ಲಿಯೆ ಕ್ರಿ.ಶ. ೧೮೬೨ ರಲ್ಲಿ ಈತನು ಮರಣ ಹೊಂದಿದನು.

ಭಾರತಕ್ಕೆ ಯುರೋಪಿಯನ್ನರ ಆಗಮನದಿಂದ ಒಂದು ರೀತಿಯ ಅನೈತಿಕತೆ ಹಾಗೂ ಅಸ್ಥಿರತ್ವ ಹಬ್ಬಿತು. ಬ್ರಿಟಿಷರು ಭಾರತೀಯ ಸಂಗೀತದ ಕಡೆಗೆ ಒಳ್ಳೆಯ ಭಾವನೆಯಿಂದ ನೋಡುತ್ತಿರಲಿಲ್ಲ. ಸಂಗೀತದ ರೂಪವು

ಸಹ ಅತ್ಯಂತ ಅಶ್ಲೀಲವಾಗಿತ್ತು. ಗಝಲ್, ಠುಮರಿ ಮುಂತಾದ ಗಾಯನ ಶೃಂಗಾರಕ ರಚನೆ ಆಗುತ್ತಿತ್ತು. ಸಂಗೀತ ಕೇವಲ ಭೋಗ ವಿಲಾಸದ ಸಾಧನ ಎಂದು ಭಾವಿಸಲಾಗುತ್ತಿತ್ತು. ಪರಿಣಾಮವಾಗಿ ಸುಶಿಕ್ಷಿತ ಸ್ತ್ರೀ ಪುರುಷರು, ಹಿಂದುಸ್ತಾನಿ ಸಂಗೀತಗಾರರು ಚಾರಿತ್ರ್ಯಹೀನರೆಂದು ಭಾವಿಸಲ್ಪಡುತ್ತಿದ್ದರು. ಇದರಿಂದಾಗಿ ಸಂಗೀತದ ಗೌರವ ಕೆಳಮಟ್ಟಕ್ಕೆ ಇಳಿಯಲು ಪ್ರಾರಂಭವಾಯಿತು.

ಸುಗಮ ಸಂಗೀತದ ಬೆಳವಣಿಗೆಯೂ ಸಹ ಈ ಕಾಲದಲ್ಲಿ ಸಾಕಷ್ಟಾಯಿತು. ಶಾಸ್ತ್ರೀಯ ಸಂಗೀತದಲ್ಲಿಯ ಶೃಂಗಾರಕ ರಚನೆಗಳಿಂದ ಸಾಮಾನ್ಯ ಜನರು ಬೇಸತ್ತಿದ್ದರು. ಇದರಿಂದಾಗಿ, ಸುಗಮ ಸಂಗೀತದಲ್ಲಿ ಅಧಿಕತರವಾಗಿ ನಿಸರ್ಗದ ಸುಂದರ ಚಿತ್ರಣ, ಪ್ರಸಂಗ ವಿಶೇಷದ ಚಿತ್ರಣದ ಮುಂತಾದ ವಿಷಯಗಳು ಒಳಗೊಂಡಿರುತ್ತಿದ್ದವು. ಸುಗಮ ಸಂಗೀತದ ಜೊತೆಗೆ ನಾಟ್ಯ ಸಂಗೀತದ ಪ್ರಚಾರವು ಸಹ ಮಹಾರಾಷ್ಟ್ರ ಪ್ರಾಂತ ಹಾಗೂ ಕರ್ನಾಟಕ ಪ್ರಾಂತಗಳಲ್ಲಿ ನಡೆಯುತ್ತಿತ್ತು.

## ೨.೨೪. ಬ್ರಿಟೀಷರ ಕಾಲದಲ್ಲಿ ಸಂಗೀತ

ಐತಿಹಾಸಿಕ ಪರಿವರ್ತನೆಯ ಜೊತೆಗೆ ಭಾರತೀಯ ಸಂಗೀತದಲ್ಲಿಯೂ ಸಾಕಷ್ಟು ಪರಿವರ್ತನೆಗಳು ಈ ಕಾಲದಲ್ಲಿ ಕಂಡು ಬರುತ್ತಿವೆ. ಉತ್ತರ ಭಾರತದಲ್ಲಿ ಸಂಗೀತಕ್ಕೆ ಪ್ರಾಪ್ತವಾದ ರಾಜಾಶ್ರಯವು ಬ್ರಿಟಿಷರ ಕಾಲದಲ್ಲಿ ದೂರವಾಯಿತು. ಏಕೆಂದರೆ ಭಾರತದಲ್ಲಿಯ ಸಂಸ್ಥಾನಗಳ ಮೇಲೆ ಬ್ರಿಟಿಷರ ಸಂಸ್ಕೃತಿಯ ಪ್ರಭಾವ ಬೀಳಲು ಪ್ರಾರಂಭವಾಯಿತು. ಆದರೂ ಕೆಲವು ವಿಶಿಷ್ಟ ಸಂಸ್ಥಾನಗಳಲ್ಲಿ ಕೆಲವು ಸಂಗೀತಜ್ಞರು ಆಶ್ರಯಪಡೆದು ತಮ್ಮ ಸಂಗೀತ ಸಾಧನೆಯಲ್ಲಿ ಮಗ್ನರಾಗಿದ್ದರು. ದಕ್ಷಿಣ ಭಾರತದಲ್ಲಿ ಕರ್ನಾಟಕ ಸಂಗೀತಕ್ಕೆ ಸಂಸ್ಥಾನಿಕರು ಹಾಗೂ ಹಲವಾರು ಧನಿಕರು ಆಶ್ರಯ ನೀಡಿದರು. ಹಿಂದುಸ್ತಾನಿ ಸಂಗೀತದ ಸ್ಥಿತಿ ಮಾತ್ರ ಅತ್ಯಂತ ಶೋಚನೀಯವಾಗಿತ್ತು. ಮೊಗಲರ ಅಂತಿಮ ಕಾಲದಲ್ಲಿಯೇ ಸಂಗೀತಕ್ಕೆ ಧರ್ಮದ ಜೊತೆಯಲ್ಲಿದ್ದ ಸಂಬಂಧವು ದೂರಾಗಿತ್ತು. ಕೇವಲ ಕಾಮಪ್ರಚೋದಿತ ಶೃಂಗಾರಮಯ ರಚನೆಗಳು, ಖ್ಯಾಲ, ಠುಮರಿ ಮುಂತಾದ ಶೈಲಿಗಳಲ್ಲಿ ರಚಿಸಲಾಗುತ್ತಿದ್ದವು. ಐಷಾರಾಮೀ ಹಾಗೂ ವಿಲಾಸೀ ರಾಜರ ಸಂಪರ್ಕದಲ್ಲಿ ಬಂದು ಸಂಗೀತ ಕಲಾಕಾರರ ನೈತಿಕ ಚಾರಿತ್ರ್ಯವು ಸಹ ಇಳಿಮುಖವಾಗಹತ್ತಿತು. ಇದರಿಂದಾಗಿ ಆ ಕಾಲದಲ್ಲಿ ಸಂಗೀತವು ಗೌರವಾನ್ವಿತ ಮನೆಗಳಲ್ಲಿ ಪ್ರವೇಶ ನಿಷಿದ್ಧವೆಂದು ಭಾವಿಸಲಾಗುತ್ತಿತ್ತು.

ಸಂಸ್ಥಾನಿಕರ ಜೊತೆಗೆ ಸಾಮಾನ್ಯ ಜನರೂ ಕೂಡಾ ಯುರೋಪಿಯನ್ನರ ಸಂಸ್ಕೃತಿಯ ಪ್ರಭಾವಕ್ಕೊಳಗಾದರು. ಹಿಂದುಸ್ತಾನಿ ಸಂಗೀತ ಕೇವಲ ವೇಶ್ಯಾ ಜನರಲ್ಲಿ ಮಾತ್ರ ಬೆಳೆಯುತ್ತಿತ್ತು. ವೇಶ್ಯಾ ಕಸಬನ್ನು ಮಾಡುವ ಸ್ತ್ರೀಯರ ಬಳಿಗೆ ಸಂಗೀತ ಸೇರಿ ಅದು ತನ್ನ ಆಧ್ಯಾತ್ಮಿಕತೆ, ಕಲಾತ್ಮಕ, ಭಾವಾತ್ಮಕ ಹಾಗೂ ಸೌಂದರ್ಯಾತ್ಮಕ ರೂಪವನ್ನು ಕಳೆದುಕೊಂಡಿತ್ತು. ಸಮಾಜದಲ್ಲಿ ಸಂಗೀತಜ್ಞರನ್ನು ಅತಿ ಹೀನ ದೃಷ್ಟಿಯಿಂದ ನೋಡಲಾಗುತ್ತಿತ್ತು. ಇದರಿಂದ ಪ್ರತಿಭಾವಂತ ಹಾಗೂ ಉತ್ತಮ ಮನೆತನದ ಜನರು ಸಂಗೀತ ಕ್ಷೇತ್ರದಲ್ಲಿ ಬರಲು

ಭಯಪಡುತ್ತಿದ್ದರು. ಪಾಶ್ಚಾತ್ಯ ಶಿಕ್ಷಣ ಪಡೆದ ಯುವಕ, ಯುವತಿಯರು ಭಾರತೀಯ ಸಂಗೀತವನ್ನು ದೂರ ಮಾಡಿ ಪಾಶ್ಚಾತ್ಯ ಸಂಗೀತ ಪದ್ಧತಿಯನ್ನು ಅನುಸರಿಸಲು ಪ್ರಾರಂಭಿಸಿದರು. ಈ ಪ್ರಕಾರ ಭಾರತೀಯ ಸಂಗೀತ ವಿಶೇಷವಾಗಿ ಹಿಂದುಸ್ತಾನಿ ಸಂಗೀತವು ತನ್ನ ಪತನದ ಹಾದಿಯನ್ನು ಹಿಡಿಯಿತು.

ಬ್ರಿಟಿಷರ ಆಕ್ರಮಣ ಹಾಗೂ ಸಾಮ್ರಾಜ್ಯವಾದದಿಂದ ಕುಗ್ಗಿದ ಭಾರತೀಯ ಸಂಸ್ಕೃತಿ ಬೂದಿಮುಚ್ಚಿದ ಕೆಡದಂತೆ ಒಳಗೊಳಗೆ ಕುದಿಯುತ್ತಿತ್ತು. ರಾಜನೈತಿಕ ದಾಸ್ಯತ್ವದಿಂದ ಮುಕ್ತಿ ಹೊಂದಲು ಯಾವ ಪ್ರಕಾರ ಪ್ರಯತ್ನ ನಡೆಯುತ್ತಿತ್ತೋ ಅದೇ ಪ್ರಕಾರ ಸಂಸ್ಕೃತಿಯ ಎಲ್ಲ ಕ್ಷೇತ್ರಗಳಲ್ಲಿ ಸ್ವತಂತ ವಿಕಾಸ ಹಾಗೂ ಪುನರುದ್ಧಾರದ ಪ್ರಯತ್ನ ನಡೆಯುತ್ತಿತ್ತು. ಸಂಗೀತ ಕ್ಷೇತ್ರದಲ್ಲಿ ಕಾರ್ಯ ಮಾಡಲು ಯಾವದೇ ತರಹದ ಬಂಧನವಿರಲಿಲ್ಲ. ಏಕೆಂದರೆ ಅಪ್ರತ್ಯಕ್ಷವಾಗಿ ಬ್ರಿಟಿಷರು ಕೂಡಾ ಭಾರತೀಯ ಸಂಗೀತದಿಂದ ಪ್ರಭಾವಿತರಾಗಿದ್ದರು. ಸರ್ ವಿಲಿಯಂ ಜೋನ್ಸ್, ಕ್ಯಾಪ್ಟನ್ ವಿಲಾರ್ಡ್ ಮುಂತಾದ ಬ್ರಿಟಿಷ ವಿದ್ವಾಂಸರು ಭಾರತೀಯ ಸಂಗೀತದ ಅಧ್ಯಯನ ಮಾಡಿ ಅದರ ಮೇಲೆ ಕೆಲವು ಗ್ರಂಥಗಳನ್ನು ಬರೆದರು. ಪರಿಣಾಮವಾಗಿ ಸುಶಿಕ್ಷಿತ ಸಂಗೀತದ ಕಡೆಗೆ ಅವರನ್ನು ಆಕರ್ಷಿಸುತ್ತಿದ್ದರು. ಪರಿಣಾಮವಾಗಿ ಸಮಾಜದಲ್ಲಿ ಪುನಃ ಸಂಗೀತಕ್ಕೆ ಉಚ್ಚ ಸ್ಥಾನ ಸಿಕ್ಕಿತು. ಒಳ್ಳೇ ಮನೆತನದವರೂ ತಮ್ಮ ಯುವಕ ಯುವತಿಯರಿಗೂ ಸಂಗೀತದ ಶಿಕ್ಷಣವನ್ನು ಕೊಡಲು ಪ್ರಾರಂಭಿಸಿದರು. ಈ ಮಹಾಕಾರಣಕ್ಕಾಗಿ ಭಾರತೀಯ ಸಂಗೀತವು ಪಂಡಿತ ಪಲುಸ್ಕರರಿಗೆ ಚಿರಋಣಿಯಾಗಿದೆ.

ಭಾರತೀಯ ಸಂಗೀತದ ಬಗೆಗೆ ವಿದೇಶಿಯರ ಕಟುಟೀಕೆಯಿಂದಾಗಿ ಹಾಗೂ ಅಲ್ಲಲ್ಲಿ ಕೇಳಿದ ಸರ್ವಸಾಧಾರಣ ಸಂಗೀತದಿಂದ ಕೆಲವು ಭಾರತೀಯರು ಸಂಗೀತದಲ್ಲಿಯ ವೈಜ್ಞಾನಿಕತೆ ಹಾಗೂ ಸೂಕ್ಷ್ಮತೆಗಳನ್ನು ಪ್ರಕಾಶದಲ್ಲಿ ತರುವದಕ್ಕಾಗಿ ಪಾಶ್ಚಾತ್ಯ ಪದ್ಧತಿಯ ಸ್ಟಾಪ್ ನೋಟೇಶನ್‌ದಲ್ಲಿ ಭಾರತೀಯ ರಾಗ ರಾಗಿನಿಗೆ ಗೀತ ವಾದ್ಯಗಳಲ್ಲಿಯ ರಚನೆಗಳು, ಆಲಾಪಗಳು ಹಾಗೂ ತಾಲಗಳ ಸ್ವರೂಪ ಪ್ರಕಾಶಿಸುವ ಕಾರ್ಯ ಮಾಡಿದರು. ಬಂಗಾಲದಲ್ಲಿ ಸುರೇಂದ್ರ ಮೋಹನ ಠಾಕೂರ ಹಾಗೂ ದಕ್ಷಿಣ ಭಾರತದಲ್ಲಿ ಚಿಕ್ಕಸ್ವಾಮಿ ಮುದಲಿಯಾರರು ಈ ಕಾರ್ಯದಲ್ಲಿ ಸಾಕಷ್ಟು ಶ್ರಮವಹಿಸಿದ್ದರು.

ಆಧುನಿಕ ಕಾಲದಲ್ಲಿ ಜನರ ಜೀವನ ಕಚೇರಿಯ ವೇಳಾಪತ್ರಿಕೆ ವಾಹನ ಸೌಕರ್ಯ ಮುಂತಾಹ ಹಲವಾರು ಕಾರಣಗಳಿಂದ ಶಾಸ್ತ್ರೀಯ ಸಂಗೀತದ ಕಾರ್ಯಕ್ರಮಗಳ ಮೇಲೆ ಸಾಕಷ್ಟು ಅನಿಷ್ಟ ಪ್ರಭಾವ ಆಗಿತ್ತು. ಹಿಂದೆ ಯಾವ ಸಂಗೀತ ಕಾರ್ಯಕ್ರಮಗಳು ದಿನವಿಡೀ ನಡೆಯುತ್ತಿದ್ದವೋ ಅವು ಆಧುನಿಕ ಕಾಲದಲ್ಲಿ ಅತ್ಯಂತ ಅಲ್ಪ ವೇಳೆಯಲ್ಲಿಯೇ ಮುಕ್ತಾಯಗೊಳ್ಳುವಂತಾಯಿತು. ಈಗಿನ ಸಂಗೀತ ಕಚೇರಿಯಲ್ಲಿ ಒಬ್ಬ ಗಾಯಕನದೇ ಕಾರ್ಯಕ್ರಮ ಅಥವಾ ಒಬ್ಬನದೇ ವಾದಕನ ಕಾರ್ಯಕ್ರಮವನ್ನು ಏರ್ಪಡಿಸಲಾಗುತ್ತಿದ್ದು, ಅವನ ಕಾರ್ಯಕ್ರಮದ ಸಮಯವನ್ನು ಸೀಮಿತಗೊಳಿಸಲಾಗುತ್ತದೆ. ಒಂದು ಅಥವಾ ಎರಡು ಘಂಟೆಗಳ ಕಾಲದ ಕಾರ್ಯಕ್ರಮದಲ್ಲಿ ಕಲಾಕಾರನಿಗೆ ಒಂದೆರಡು ಶಾಸ್ತ್ರೀಯ ರಾಗಗಳನ್ನು ಹಾಗೂ ನಾಟ್ಯ ಸಂಗೀತ ಅಥವಾ ಸುಗಮ ಸಂಗೀತವನ್ನು ಹಾಡಲು ಒತ್ತಾಯ ಮಾಡಲಾಗುತ್ತದೆ. ಇದಲ್ಲದೇ ಆಧುನಿಕ ಕಾಲದ ಸಂಗೀತ ಸಭೆಗಳು ಹಾಗೂ

ಅಲ್ಲಿ ಕೂಡುವ ಶ್ರೋತೃವರ್ಗಗಳ ವಿಚಿತ್ರ ವರ್ತನೆ ಕಂಡುಬರುತ್ತದೆ. ಈ ಹೊಸ ಶ್ರೋತೃವರ್ಗಕ್ಕೆ ಶಾಸ್ತ್ರೀಯ ಸಂಗೀತ ಕೇಳುವ ರೀತಿ ಗೊತ್ತಿಲ್ಲ. ಅವರು ಕಾರ್ಯಕ್ರಮದ ಸಭಾಗಾರದಲ್ಲಿ ತಮ್ಮ ಮನಬಂದಂತೆ ಬರುವದು ಹಾಗೂ ಹೋಗುವದನ್ನು ಮಾಡುತ್ತಾರೆ. ಇದಲ್ಲದೆ ಕಾರ್ಯಕ್ರಮ ನಡೆಯುವಾಗ ದಿಟ್ಟ ಧ್ವನಿಯಿಂದ ಮಾತನಾಡುವದು, ತಿಂಡಿ ತಿನಿಸು ತಿನ್ನುವದು, ಪಾನೀಯ ಸೇವಿಸುವದು, ಉಪಸ್ಥಿತರಾದ ತಮ್ಮ ಮಿತ್ರರೊಡನೆ ಕುಶಲ ಸಂಭಾಷಣೆ ನಡೆಸುವದು ಮುಂತಾದ ಕೆಲಸಗಳಲ್ಲಿ ಮಗ್ನರಾಗಿರುತ್ತಾರೆ. ಇದರಿಂದಾಗಿ ಕಲಾಕಾರನ ಏಕಾಗ್ರತೆಯ ಮೇಲೆ ವ್ಯತ್ಯಾಸವಾಗಿ ಅವನ ಕಾರ್ಯಕ್ರಮವು ಯಶಸ್ವಿಯಾಗುವದಿಲ್ಲ. ಈ ಪ್ರಕಾರ ಶಾಸ್ತ್ರೀಯ ಸಂಗೀತದ ಕಡೆಗೆ ಜನರ ಅಭಿರುಚಿಯನ್ನು ಗಮನಿಸಿದರೆ ಅದು ದಿನೇ ದಿನೇ ಕಡಿಮೆಯಾಗುತ್ತಿರುವುದು ಕಂಡು ಬರುವದು. ಇದರಿಂದ ಶಾಸ್ತ್ರೀಯ ಸಂಗೀತಕ್ಕೆ ಬದಲಾಗಿ ಲೋಕ ಹಾಗೂ ಸುಗಮ ಸಂಗೀತಕ್ಕೆ ಮನ್ನಣೆಗಳು ಪ್ರಾರಂಭವಾಯಿತು.

ಈ ಪರಿವರ್ತನೆಗಳಿಗೆ ಹಲವಾರು ಕಾರಣಗಳಿವೆ ಅವುಗಳು ಯಾವವೆಂದರೆ ಮೊದಲನೆಯದಾಗಿ ಶಾಸ್ತ್ರೀಯ ಸಂಗೀತಗಾರರು ತಮ್ಮ ಸಂಗೀತವು ಅತ್ಯಂತ ಕಠಿಣವಾದದ್ದೆಂದೂ ಮತ್ತು ಅಭ್ಯಸಿಸಲೂ ಕಷ್ಟವಾದದ್ದು ಎಂದು ಹೇಳುವುದಲ್ಲದೇ ಜನಸಾಮಾನ್ಯರಲ್ಲಿ ಶಾಸ್ತ್ರೀಯ ಸಂಗೀತದ ಅಭಿರುಚಿಯನ್ನು ಹುಟ್ಟಿಸದಿರುವುದು. ಇದರಿಂದಾಗಿ ಸಾಮಾನ್ಯ ಜನರು, ಶಾಸ್ತ್ರೀಯ ಸಂಗೀತವು ಅತ್ಯಂತ ಕಠಿಣವಾಗಿದ್ದು ಅದನ್ನು ತಿಳಿಯಲು ಅಸಾಧ್ಯವೆಂದು ಭಾವಿಸಲು ಪ್ರಾರಂಭಿಸಿದರು. ಶಾಸ್ತ್ರೀಯ ಸಂಗೀತದಲ್ಲಿ ಇವರು ನಿಯಮಗಳು, ಕಠಿಣ ಸಾಧನೆ ಇವುಗಳಿಗೆ ಹೆದರಿ ಅವರು ಕೇವಲ ಸುಗಮಸಂಗೀತ, ನಾಟ್ಯಸಂಗೀತ, ಲೋಕಸಂಗೀತ ಹಾಗೂ ಚಿತ್ರಪಟ ಸಂಗೀತದ ಬಗೆಗೆ ತಮ್ಮ ಒಲವನ್ನು ತೋರಿಸಿದರು. ಇದರಿಂದಾಗಿ ಶಾಸ್ತ್ರೀಯ ಸಂಗೀತದ ವಿಕಾಸ ಕ್ರಮದಲ್ಲಿ ಕೆಲವು ಮಟ್ಟಿಗೆ ಬಾಧೆಯುಂಟಾಯಿತು. ಹೀಗಾಗಿ ಶಾಸ್ತ್ರೀಯ ಸಂಗೀತದ ಪುನರುತ್ಥಾನ ಕಾರ್ಯದಲ್ಲಿ ಸಾಕಷ್ಟು ಪ್ರೋತ್ಸಾಹ ಹಾಗೂ ಶ್ರಮವಹಿಸುವುದು ಅತ್ಯಗತ್ಯವಾಗಿದೆ.

ಇಂದು ಜೀವಂತ ಶ್ರೇಷ್ಠ ಸಂಗೀತಗಾರರಿಗೆ, ಸಂಗೀತಕ್ಕೆ ಸಂರಕ್ಷಣೆಯನ್ನು ಕೊಡುವುದು, ಹೊರಗಿನ ಕಡೆಗೆ ಔದಾಸೀನ್ಯ ತೋರಿಸುವದು ಹಾಗೂ ಪಂಡಿತ ಭಾತಖಂಡೆ ಮತ್ತು ಪಂಡಿತ ಪಲೂಸ್ಕರ ಹಾಗೂ ತ್ಯಾಗರಾಜ ಮುಂತಾದ ವಿದ್ವಾಂಸರು ಮಾಡಿದ ಕಾರ್ಯದ ಬಗೆಗೆ ಸಂಶೋಧನೆಯ ಮೂಲಕ ಅವರ ಉದ್ದೇಶ ಮುಂದುವರೆಸುವದು ಮುಂತಾದ ಸಂಗತಿಗಳು, ಆಧುನಿಕ ಕಾಲದಲ್ಲಿ ಸಂಗೀತದ ವಿಕಾಸಕ್ರಮಕ್ಕೆ ಸಹಾಯ ನೀಡುವವು ಎಂದು ನಂಬಲಾಗಿದೆ. ನಮ್ಮ ಸ್ವತಂತ್ರ ಭಾರತ ಸರಕಾರ ಹಾಗೂ ಪ್ರಜೆಗಳು ಭಾರತೀಯ ಸಂಗೀತದ ವಿಕಾಸಕಾರ್ಯದಲ್ಲಿ ಸಾಕಷ್ಟು ಸೇವೆಯನ್ನು ಸಲ್ಲಿಸುತ್ತಿದ್ದಾರೆ. ಸಂಸ್ಥಾನದ ವಿಲಿನೀಕರಣದ ನಂತರ ಭಾರತ ಸರಕಾರವು ಆಕಾಶವಾಣಿ ಕೇಂದ್ರಗಳ ಮೂಲಕ ಸಂಗೀತಗಾರರಿಗೆ ಆರ್ಥಿಕ ನೆರವನ್ನು ಕೊಟ್ಟು ಅವರ ಸಂಗೀತ ಪ್ರಸಾರ ಕಾರ್ಯದಲ್ಲಿ ಒಂದು ಮಹತ್ವಪೂರ್ಣ ಹೆಜ್ಜೆಯನ್ನು ಇಟ್ಟಿದೆ. ಇದರ ಪೂರ್ವದಲ್ಲಿ ಸಂಸ್ಥಾನಗಳಲ್ಲಿ ಕೇವಲ ನಿಶ್ಚಿತ ಸಂಖ್ಯೆಯಲ್ಲಿ ಮಾತ್ರ ಸಂಗೀತಗಾರರಿಗೆ ಆಶ್ರಯ ಸಿಗುತ್ತಿತ್ತು. ಅಲ್ಲದೆ ಅವರ ಸಂಗೀತವು ಕೇವಲ

ದರ್ಬಾರದಲ್ಲಿ ಮಾತ್ರ ನಡೆಯುತ್ತಿತ್ತು. ಆದ್ದರಿಂದ ಆ ಕಾರ್ಯಕ್ರಮವನ್ನು ಇನ್ನಿತರ ಜನ ಸಾಮಾನ್ಯರಿಗೆ ಕೇಳಲು ಆಸ್ಪದವಿರುತ್ತಿರಲಿಲ್ಲ. ಆದರೆ ಇಂದು ಆಕಾಶವಾಣಿಯ ಮೂಲಕ ಸಂಗೀತಗಾರರ ವಾಣಿ ಹಾಗೂ ಅವರ ಕಲೆ, ಸರ್ವಸಾಧಾರಣ ಜನರೂ ಕೇಳುವಷ್ಟು ವ್ಯಾಪಕ ಕ್ಷೇತ್ರವನ್ನುಂಟು ಮಾಡಲಾಗಿದೆ. ಇದರಿಂದ ಕೇವಲ ಸಂಗೀತ ಸಾಧಕರು ಹಾಗೂ ಶ್ರೋತೃಗಳಲ್ಲಿ ಹೆಚ್ಚಳವಾಯಿತಲ್ಲದೆ ಶಾಸ್ತ್ರೀಯ ಸಂಗೀತದ ಪ್ರಸಾರ ಹಾಗೂ ವಿಕಾಸ ಕಾರ್ಯದಲ್ಲಿಯೂ ಸಾಕಷ್ಟು ಸಹಾಯವಾಗಿದೆ.

## ೨.೨೫. ಕರ್ನಾಟಕದಲ್ಲಿ ಸಂಗೀತದ ವಿಕಾಸ

ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿಶೇಷವಾಗಿ ಕನ್ನಡ ಮಹಾಕಾವ್ಯಗಳಲ್ಲಿ ಮತ್ತು ಶಿಲ್ಪ ಕಲೆಗಳಲ್ಲಿ ಸಂಗೀತದ ಬಗೆಗಿನ ಅನೇಕ ಸಂಗತಿಗಳನ್ನು ವರ್ಣಿಸಿದ್ದು ಕಂಡುಬರುತ್ತದೆ. ಕ್ರಿ.ಶ. ೪೫೦ ರಲ್ಲಿಯ ತಾಳಗುಂದದ ಶಾಸನದಲ್ಲಿ ಮನೆ ಮನೆಯಲ್ಲಿಯೂ ಸಂಗೀತದ ನಾದ ಕೇಳಿಬರುತ್ತಿತ್ತು ಎನ್ನುವದನ್ನು ಹೇಳಲಾಗಿದೆ. ಅಣ್ಣಿಗೇರಿ ಎಂಬ ಊರು ಅಖಿಲ ಕಲಾ ವಾದ್ಯಗಳಿಂದ ಶೋಭಿಸುತ್ತಿತ್ತೆನ್ನುವದರ ಬಗೆಗೆ ವರ್ಣನೆ ದೊರಕುತ್ತದೆ. ಮಧುಸೂದನ ಎಂಬ ಶ್ರೇಷ್ಠ ಅಧಿಕಾರಿಯು ಗಾಯಕರಿಗೆ, ವಾದಕರಿಗೆ ಹಾಗೂ ಕಥಾಕಾಲಕ್ಷೇಪಕರನ್ನು ಕರೆದು ಸನ್ಮಾನಿಸುತ್ತಿದ್ದನೆಂಬುದು ತಿಳಿದು ಬರುತ್ತದೆ.

ಕರ್ನಾಟಕದ ಪ್ರಾಚೀನ ದೇವಾಲಯಗಳು ರಾಜರ ಅರಮನೆಯಂತೆಯೇ ಕಲಾಪೂರ್ಣವಾಗಿರುತ್ತಿದ್ದವು. ಜನರು ದೇವಸ್ಥಾನಕ್ಕಾಗಿ 'ಅಂಗಭೋಗ್' ರಂಗಭೋಗಕ್ಕಾಗಿ ದತ್ತಿಗಳನ್ನು ಕೊಡುತ್ತಿದ್ದರು. ಅಂಗಭೋಗಗಳೆಂದರೆ ದೇವರ ಶರೀರಕ್ಕೆ ಸಲ್ಲುವ ಧೂಪ, ದೀಪ, ನೈವೇದ್ಯ, ಗಂಧ ಇತ್ಯಾದಿ. ರಂಗ ಭೋಗವೆಂದರೆ ದೇವರೆದುರಿಗೆ ನಡೆಯುವ ನರ್ತನ, ಗಾಯನ ಹಾಗೂ ವಾದನ ಮುಂತಾದವು. ಸಾಮಾನ್ಯವಾಗಿ ಅನೇಕ ದೇವಸ್ಥಾನಗಳಲ್ಲಿ ವೇಣುವಾದಕರು ಆಶ್ರಯ ಪಡೆಯುತ್ತಿದ್ದರು. ಅವರು ನೃತ್ಯ ಗಾಯನ ಹಾಗೂ ವಾದನದಲ್ಲಿ ನಿಪುಣರಾಗಿದ್ದು ತಮ್ಮ ಕಲೆಯಿಂದ ದೇವರ ಸೇವೆ ಮಾಡುತ್ತಿದ್ದರು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಸುರಪುರದ ಆನಂದದಾಸ ಎಂಬ ವಿದ್ವಾಂಸರು ಆಗಿ ಹೋದರು. ಆನಂದದಾಸರು ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತದ ವಿದ್ವಾಂಸರು ಮತ್ತು ಸಾಹಿತ್ಯ ಹಾಗೂ ಆಧ್ಯಾತ್ಮದ ಪಂಡಿತರೂ ಆಗಿದ್ದರು. ಇವರು ಕರ್ನಾಟಕ ಸಂಗೀತದಲ್ಲಿ ಸುರಪುರ ಎಂಬ ಹೊಸ ಶೈಲಿಯನ್ನು ಸೃಷ್ಟಿಸಿದರು.

ಕರ್ನಾಟಕದಲ್ಲಿ ಸಂಗೀತದ ವಿಕಾಸಕ್ಕಾಗಿ ಮಹಾರಾಜರು ಸಲ್ಲಿಸಿದ ಸೇವೆ ಅತ್ಯಂತ ಸ್ತುತ್ಯಾರ್ಹವಾಗಿದೆ. ಮುಮ್ಮಡಿ ಕೃಷ್ಣರಾಜ ಒಡೆಯರ ಅವರು ಅನೇಕ ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತಗಾರರಿಗೆ ಆಶ್ರಯವಿತ್ತಿದ್ದರು. ಮೈಸೂರ ಅರಮನೆಯಲ್ಲಿ ಮೇಲಿಂದ ಮೇಲೆ ಸಂಗೀತ ಕಾರ್ಯಕ್ರಮಗಳು ಏರ್ಪಡಿಸಲ್ಪಡುತ್ತಿದ್ದವು. ಇದೇ ಕಾಲದಲ್ಲಿ ಮಂಗಳೂರಿನ 'ತುಪಾಕಿ' ವಂಶಜಲು ಸಂಗೀತದ ವಿಕಾಸಕ್ರಮದಲ್ಲಿ

ಅಪೂರ್ವ ಕಾಣಿಕೆ ನೀಡಿದ್ದಾರೆ. ೨೦ ನೆಯ ಶತಮಾನದ ಪ್ರಾರಂಭದಲ್ಲಿ ನಾಲ್ವಡಿ ಕೃಷ್ಣರಾಜ ಒಡೆಯರ ಶಾಸನ ಕಾಲವು ಸಂಗೀತಕ್ಕೆ ಅತ್ಯಂತ ಪೂರ್ವಕಾಲವೆಂದು ಹೇಳಬಹುದು. ಉದಾ: ಫೈಯಾಜ್‌ಖಾನರು, ವಿಲಾಯತ ಹುಸೇನ ಖಾನ್‌ರು, ಇನಾಯತ್ ಖಾನರು ಮೊದಲಾದ ಹಿಂದುಸ್ತಾನಿ ಸಂಗೀತದ ವಿದ್ವಾಂಸರು ಆಸ್ಥಾನ ವಿದ್ವಾಂಸರೆಂದು ಇದ್ದರು.

ಇದೇ ಕಾಲದಲ್ಲಿ ಉತ್ತರ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಪ್ರಸಾರವೂ ಪ್ರಾರಂಭವಾಯಿತು. ಕರ್ನಾಟಕದಲ್ಲಿ ಕೇವಲ ರಾಜಸಂಸ್ಥಾನಗಳಷ್ಟೇ ಅಲ್ಲದೇ ಅನೇಕ ಜಮೀನ್ದಾರರಿಂದಲೂ ಕರ್ನಾಟಕ ಸಂಗೀತಕ್ಕೆ ಆಶ್ರಯ ದೊರೆಯಿತು. ಆಧುನಿಕ ಕಾಲದ ಮೈಸೂರು ಮಹಾರಾಜರಾಗಿದ್ದ ದಿ. ಶ್ರೀ ಜಯಚಾಮರಾಜ ಒಡೆಯರು ಭಾರತೀಯ ಸಂಗೀತದಲ್ಲಷ್ಟೇ ಅಲ್ಲದೆ ಪಾಶ್ಚಾತ್ಯ ಸಂಗೀತದಲ್ಲಿಯೂ ಪಾಂಡಿತ್ಯ ಪಡೆದಿದ್ದರು.

### ೨.೨೫.೧. ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತ

ನಮ್ಮ ನಾಡು ಪ್ರಾಚೀನ ಕಾಲದಿಂದ ಶ್ರೇಷ್ಠ ಸಂಗೀತಗಾರರ ನೆಲೆಬೀಡಾಗಿದೆ. ಬಸವೇಶ್ವರರು, ಅಕ್ಕಮಹಾದೇವಿ, ನಿಜಗುಣ ಶಿವಯೋಗಿಗಳು, ಪುರಂದರದಾಸರು ಮುಂತಾದ ಅನೇಕ ಶ್ರೇಷ್ಠ ಸಂತ ಸಂಗೀತಜ್ಞರು ಆಗಿ ಹೋಗಿದ್ದಾರೆ.

ಭಾರತೀಯ ಸಂಗೀತದ ಚರಿತ್ರೆಯಲ್ಲಿ ನಮ್ಮ ನಾಡಿನ ಕೊಡುಗೆ ಅತ್ಯಂತ ಮಹತ್ವಪೂರ್ಣವಾದದ್ದು. ಭಾರತೀಯ ಸಂಗೀತದ ಎರಡು ಪದ್ಧತಿಗಳು ಅಂದರೆ ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತ ಪದ್ಧತಿಗಳು ಪ್ರಚಾರದಲ್ಲಿ ಎಂದಿನಿಂದ ಬಂದವೋ ಅಂದಿನಿಂದ ಸ್ವಾಭಾವಿಕವಾಗಿ ದಕ್ಷಿಣ ಭಾರತದಲ್ಲೆಲ್ಲ ಕರ್ನಾಟಕ ಸಂಗೀತದ ಪ್ರಚಾರ ವಿಶೇಷವಾಗಿತ್ತು. ಪ್ರಚಾರದಲ್ಲಿ ಹೀಗಿದ್ದರೂ ಸುಮಾರು ಎರಡು ನೂರು ವರ್ಷಗಳಿಂದ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಪ್ರವೇಶ ಆದುದನ್ನು ನೋಡಿದರೆ ಅದು ಅತ್ಯಂತ ವೈಶಿಷ್ಟ್ಯಪೂರ್ಣವೆನ್ನಿಸುತ್ತಿದೆ. ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಪ್ರಚಾರ, ವಿಶೇಷ ರೂಪದಿಂದ ಬ್ರಿಟಿಷ ಕಾಲದಿಂದಲೇ ಆಗಲು ಪ್ರಾರಂಭಿಸಿತು ಎಂದು ಕಂಡುಬರುತ್ತದೆ.

ಮೈಸೂರ ಆಸ್ಥಾನದ ದೊರೆಗಳಾದ ಮುಮ್ಮಡಿ ಕೃಷ್ಣರಾಜ ಒಡೆಯರರು ಹಾಗೂ ಶ್ರೀ ಜಯಚಾಮರಾಜ ಒಡೆಯರರು ಸ್ವತಃ ಸಂಗೀತಜ್ಞರೂ, ಸಂಗೀತ ಕಲೆಯ ಪೋಷಕರೂ ಆಗಿದ್ದರು.

ಈ ದೊರೆಗಳು ಕರ್ನಾಟಕ ಸಂಗೀತದ ವಿದ್ವಾಂಸರುಗಳನ್ನಷ್ಟೇ ಅಲ್ಲದೇ ಹಿಂದುಸ್ತಾನಿ ಸಂಗೀತದ ಅನೇಕ ವಿದ್ವಾಂಸರನ್ನೂ ಆಮಂತ್ರಿಸಿ ಆಶ್ರಯವಿತ್ತಿದ್ದರು. ಇದರಿಂದಾಗಿ ಉತ್ತರ ಭಾರತದಲ್ಲಿಯ ಹೆಸರುವಾಸಿ ಹಿಂದುಸ್ತಾನಿ ಸಂಗೀತಗಾರರು ಆಗಾಗ್ಗೆ ಕರ್ನಾಟಕಕ್ಕೆ ಭೇಟಿಯನ್ನು ಕೊಡುತ್ತಲಿದ್ದರು. ಮೈಸೂರಿನ ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಥ್ಥನಖಾನ್ ಮೌಲಾ ಭಕ್ಷ, ಕೇಶವಬುವಾ ಇಂಗಳೇ ಮೊದಲಾದ ಹಿಂದುಸ್ತಾನಿ ಗಾಯಕರು ಆಶ್ರಯಪಡೆದಿದ್ದರು.

ನಥ್ಥನಖಾನರು ಮೈಸೂರ ದರ್ಬಾರಿನಲ್ಲಿ ಆಶ್ರಯ ಪಡೆದಾಗಲೇ ಅವರ ಪುತ್ರರಾದ ವಿಲಾಯತ ಹುಸೇನಖಾನ್ ಇವರ ಜನ್ಮವಾಯಿತು. ಈ ವಿಲಾಯತ ಹುಸೇನ್‌ಖಾನರು ಮುಂದೆ ೧೯೩೫ ರಿಂದ ೧೯೪೦ ರ ವರೆಗೆ ಮೈಸೂರಿನ ಆಸ್ಥಾನ ಗಾಯಕರಾಗಿದ್ದರು.

ಪ್ರಸಿದ್ಧ ಗಾಯಕ ಹಾಗೂ ವೀಣಾ ವಾದಕರಾದ ಉಸ್ತಾದ್ ಮೌಲಭಕ್ಷರು ಅನೇಕ ಕಾಲದವರೆಗೆ ಮೈಸೂರ ಆಸ್ಥಾನ ವಿದ್ವಾನರಾಗಿದ್ದರು.

ಮೈಸೂರ ಸಂಸ್ಥಾನದಲ್ಲಿ ಬಹು ವರ್ಷಗಳಿಂದ ದಸಾರ ಉತ್ಸವ ಆಚರಿಸಲಾಗುವದು ಎಲ್ಲರಿಗೂ ತಿಳಿದ ವಿಷಯ. ಈ ಉತ್ಸವದಲ್ಲಿ ದೇಶಾದ್ಯಂತ ಸಂಗೀತಗಾರರಿಗೆ ಆಮಂತ್ರಣವಿತ್ತು. ಅವರ ಕಲಾಪ್ರದರ್ಶನಕ್ಕೆ ಅವಕಾಶಳ ಮಾಡಿಕೊಡಲಾಗುತ್ತಿತ್ತು. ಈ ಪ್ರಕಾರ ಉತ್ತರ ಭಾರತದಲ್ಲಿದ್ದ ಅನೇಕ ಹಿಂದುಸ್ತಾನಿ ಸಂಗೀತ ವಿದ್ವಾಂಸರು ಮೈಸೂರಿಗೆ ಆಗಮಿಸಿ ತಮ್ಮ ಕಲೆಯ ಪ್ರದರ್ಶನ ಮಾಡುತ್ತಿದ್ದರು.

ಉತ್ತರ ಕರ್ನಾಟಕದ ಗಡಿ ಪ್ರದೇಶಗಳಲ್ಲಿದ್ದ ಮೀರಜ್ ಸಾಂಗ್ಲಿ, ಕೊಲ್ಲಾಪುರ, ಹೈದರಾಬಾದ್ ಮುಂತಾದ ನಗರಗಳಲ್ಲಿ ಹಿಂದುಸ್ತಾನಿ ಸಂಗೀತದ ಅನೇಕ ಪ್ರಖ್ಯಾತ ವಿದ್ವಾಂಸರು ವಾಸಿಸುತ್ತಿದ್ದರು. ಮೀರಜನಲ್ಲಿ ಉಸ್ತಾದ ಅಬ್ದುಲ್ ಕರೀಂ ಖಾನ ಹಾಗೂ ನೀಲಕಂಠ ಬುವಾ ಕೊಲ್ಲಾಪುರದಲ್ಲಿ ಉಸ್ತಾದ ಅಲ್ಲಾದಿಯಾಖಾನ್ ಹಾಗೂ ಅವರ ಪುತ್ರರಾದ ಮಂಜೀಖಾನ್ ಹಾಗೂ ಬುರ್ಜಿಖಾನ್ ವಾಸಿಸುತ್ತಿದ್ದರು. ಸ್ವಾಭಾವಿಕವಾಗಿ ಈ ಗಾಯಕರ ಗಾಯನ ಪ್ರಭಾವವು ಉತ್ತರ ಕರ್ನಾಟಕದಲ್ಲಿ ಸಾಕಷ್ಟು ಪ್ರಮಾಣದಲ್ಲಿ ಇತ್ತು. ಮೈಸೂರ ದರ್ಬಾರಕ್ಕೆ ಆಗಾಗ್ಗೆ ಭೇಟಿ ಕೊಡುವ ಬೀನ ವಾದಕರಾದ ಉಸ್ತಾದ ವಿಲಾಯತ್ ಖಾನರ ತಂದೆಯವರಾದ ಉಸ್ತಾದ ಇನಾಯತ ಖಾನರು ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಪ್ರಸಾರ ಮಾಡುತ್ತಲೇ ಇದ್ದರು. ಪ್ರಸಿದ್ಧ ಹಿಂದುಸ್ತಾನಿ ಗಾಯಕರ ವಾದಕರ ವಿದ್ವಾಂಸರ ಪಾಂಡಿತ್ಯಕ್ಕೆ ಮಾರುಹೋಗಿ, ಕರ್ನಾಟಕದಲ್ಲಿ ಅನೇಕ ಜನರು ಹಿಂದುಸ್ತಾನಿ ಸಂಗೀತದ ಶಿಕ್ಷಣವನ್ನು ಪಡೆಯಲು ಪ್ರಾರಂಭಿಸಿದರು. ಕುಂದಗೋಳದ ಶ್ರೀರಾಮಭಾವು ಕುಂದಗೋಳಕರ ಅರ್ಥಾತ ಸವಾಯಿ ಗಂಧರ್ವರು, ಉಸ್ತಾದ ಅಬ್ದುಲ್ ಕರೀಂಖಾನ್ ಅವರಲ್ಲಿ ಶಿಕ್ಷಣ ಪಡೆದರು. ಬೀನ್ ವಾದ್ಯಗಾರರಾದ ಉಸ್ತಾದ ಮುರಾದಖಾನ್ ಅವರಲ್ಲಿ ಕುಂದಗೋಳದ ಶ್ರೀಕೃಷ್ಣಜಿಪಂತ ಪಾಳಂದೆ ಹಾಗೂ ಹುಬ್ಬಳ್ಳಿಯ ಶ್ರೀ ದತ್ತೋಪಂತ ಪಾಠಕ ಇವರು ಶಿಕ್ಷಣ ಪಡೆದರು. ಧಾರವಾಡದಲ್ಲಿ ಕೆಲವು ಕಾಲದವರೆಗೆ ಗ್ವಾಲಿಯರ್ ಘರಾನೆಯ ಪ್ರಸಿದ್ಧ ವಿದ್ವಾಂಸರಾದ ಭಾಸ್ಕರಬುವಾ ಬಾಕಳೆ ಸಂಗೀತ ಶಿಕ್ಷಕರೆಂದು ಕೆಲಸ ಮಾಡುತ್ತಿರುವಾಗ ಕರ್ನಾಟಕದ ಪ್ರಸಿದ್ಧ ವಿದ್ವಾಂಸರಾದ ಸ್ವ ॥ ಪಂ. ಶಂಕರ ದೀಕ್ಷಿತ ಜಂತ್ರಿ, ಗುರುರಾವ ದೇಶಪಾಂಡೆ ಮತ್ತು ಇತರ ಅನೇಕರು ಹಿಂದುಸ್ತಾನಿ ಸಂಗೀತ ಶಿಕ್ಷಣ ಪಡೆದರು.

ಧಾರವಾಡದಲ್ಲಿ ಪ್ರಖ್ಯಾತ ಬೀನ ವಾದಕರರಾದ ಉಸ್ತಾದ ರೆಹಮತ್ ಖಾನರು ಸ್ಥಾಯೀ ರೂಪದಿಂದ ವಾಸಿಸುತ್ತಿದ್ದರು. ಮಂಜೇಖಾನ್ ಹಾಗೂ ಬುರ್ಜಿಖಾನ ಇವರ ಹತ್ತಿರ ಪದ್ಮಶ್ರೀ ಶ್ರೀ ಮಲ್ಲಿಕಾರ್ಜುನ ಮನ್ಸೂರರು ಹಾಗೂ ಶ್ರೀ ನೀಲಕಂಠ ಬುವಾ ಇವರ ಹತ್ತಿರ ಪಂಡಿತ ಲಿಂಗರಾಜ ಬುವಾ, ಪಂಡಿತ ಬಸವರಾಜ ರಾಜಗುರು ಇವರು ಸಂಗೀತ ಶಿಕ್ಷಣವನ್ನು ಪಡೆದರು. ಈ ಪ್ರಕಾರ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಪ್ರಚಾರವು ಪ್ರಾರಂಭಿಸಲ್ಪಟ್ಟಿತು. ಕರ್ನಾಟಕದಲ್ಲಿ ಇದ್ದಂತೆ ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತದ ಬಳಕೆ ದೇಶದ ಬೇರಾವದೇ ಭಾಗದಲ್ಲಿ ಕಂಡು ಬರುವದಿಲ್ಲ. ಕರ್ನಾಟಕದಲ್ಲಿ ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತ ಪದ್ಧತಿಯ ಮಧುರ ಸಂಗಮ ಅತ್ಯಂತ ವೈಶಿಷ್ಟ್ಯಪೂರ್ಣವಾಗಿದ್ದು ಕನ್ನಡಿಗರಿಗೆ ಇದೊಂದು ಹೆಮ್ಮೆಯ ಸಂಗತಿ.



# ಅಧ್ಯಾಯ-ಮೂರು
# ಕುಂದಗೋಳ ಪರಿಸರದ ಸಾಂಸ್ಕೃತಿಕ ಹಿನ್ನೆಲೆ

## ೩.೧. ಗ್ರಾಮದ ಹಿನ್ನೆಲೆ

ಕುಂದಗೋಳವು ತಾಲೂಕಾ ಸ್ಥಳವಾಗಿದ್ದು ಇದು ಮೊದಲು ಬ್ರಹ್ಮಪುರವಾಗಿದ್ದಿರಬೇಕೆಂದು ಸ್ಥಳಪುರಾಣಗಳಿಂದ ವ್ಯಕ್ತವಾಗುತ್ತದೆ. ಈ ಗ್ರಾಮದ ಐತಿಹಾಸಿಕ ಹಿನ್ನೆಲೆ ಅರಿಯಲು ಇಲ್ಲಿರುವ ಕರ್ನಾಟಕದ ವಾಸ್ತುಶಿಲ್ಪ ಶೈಲಿಯಲ್ಲಿ ಕಟ್ಟಿದ ಕಲ್ಯಾಣ ಚಾಲುಕ್ಯ ಶೈಲಿಯ ಶಂಭುಲಿಂಗ ದೇವಾಲಯವು ಪ್ರಸಿದ್ಧವಾಗಿದ್ದು ಇದನ್ನು ಇತಿಹಾಸ ತಜ್ಞರು ಬಂಕಾಪುರ ಕೋಟೆಯಲ್ಲಿರುವ ಅರವತ್ತು ಕಂಬಗಳ ದೇವಾಲಯದ ಮಾದರಿಯಲ್ಲಿದೆ ಎಂದು ಹೇಳಿದ್ದಾರೆ. ಅಲ್ಲದೆ ಸುಮಾರು ಕ್ರಿ.ಶ. ೧೦೪೦ ಕ್ಕೆ ಸೇರಿದ ಹಾಗೂ ೧೨-೧೪ ನೇ ಶತಮಾನಕ್ಕೆ ಸೇರಿದ ಸುಮಾರು ೧೧ ಶಿಲಾಶಾಸನಗಳು ದೊರೆತಿದ್ದು ಇವೆಲ್ಲ ಕಲ್ಯಾಣಿ ಚಾಲುಕ್ಯ, ಕಲಚೂರಿ, ದೇವಗಿರಿಯಾದವರ ಹಾಗೂ ವಿಜಯನಗರ ಅರಸರ ಕಾಲಕ್ಕೆ ಸೇರಿದವಾಗಿದ್ದು ಇವುಗಳ ಆಧಾರದ ಮೇಲಿಂದ ಕುಂದಗೋಳವನ್ನು ೧೦-೧೧ ನೆಯ ಶತಮಾನಕ್ಕಿಂತಲೂ ಹಿಂದಿನ ಪ್ರಾಚೀನ ಇತಿಹಾಸ ಕಾಲದಲ್ಲಿ ಅಸ್ತಿತ್ವದಲ್ಲಿತ್ತೆಂದು ತಿಳಿಯಬಹುದಾಗಿದೆ.

ಪುಲಿಗೇರಿ (ಲಕ್ಷ್ಮೇಶ್ವರ) ಮುನ್ನೂರು ಬೆಳವಲ ನಾಡಿನ ಪ್ರದೇಶಕ್ಕೆ ಒಳಪಟ್ಟ ನಾಡಾದ ಇದು ಕ್ರಿ.ಶ. ೧೯೪೮ ರಲ್ಲಿ ಧಾರವಾಡ ಜಿಲ್ಲೆಯಲ್ಲಿ ಸಮಾವೇಶವಾಗುವ ಮೊದಲು ಜಮಖಂಡಿ ಸಂಸ್ಥಾನದ ಆಡಳಿತದಲ್ಲಿತ್ತು. ಕರ್ನಾಟಕದ ಖ್ಯಾತ ಸಂಗೀತ ತಜ್ಞರಾದ ಸವಾಯಿ ಗಂಧರ್ವರು ಹುಟ್ಟಿ ಬೆಳೆದ ಈ ಗ್ರಾಮವು ಭಾರತದ ಸಂಗೀತ ನಕ್ಷೆಯಲ್ಲಿ ತನ್ನ ಹೆಸರನ್ನು ಉಳಿಸಿಕೊಂಡಿದ್ದು ಸವಾಯಿ ಗಂಧರ್ವರ ಕೈಯಲ್ಲಿ ಸಂಗೀತಾಭ್ಯಾಸ ಮಾಡಿದ ಭೀಮಸೇನ ಜೋಶಿ ಮತ್ತು ಗಂಗೂಬಾಯಿ ಹಾನಗಲ್ಲರಂಥ ಖ್ಯಾತ ಸಂಗೀತಗಾರರನ್ನು ಭಾರತ ನಾಡಿಗೆ ನೀಡಿದ ಕೀರ್ತಿಯು ಕುಂದಗೋಳ ಸವಾಯಿ ಗಂಧರ್ವರದ್ದಾಗಿದೆ. ಇಂದಿಗೂ ಪ್ರತಿವರ್ಷವೂ ಕುಂದಗೋಳದಲ್ಲಿ ಸವಾಯಿ ಗಂಧರ್ವರ ಪುಣ್ಯ ತಿಥಿಯಂದು ಸಂಗೀತ ಸಮಾರೋಪ ಅತ್ಯಂತ ಸಂಭ್ರಮದಲ್ಲಿ ಜರಗುತ್ತದೆ.

ಸುಮಾರು ೨೦೦ ವರ್ಷಗಳ ಇತಿಹಾಸವನ್ನು ಹೊಂದಿದ ಜಮೀನ್ದಾರ ಮನೆತನವಾದ ನಾಡಗೇರ ಮನೆತನವು ತನ್ನ ವಂಶಜ್ಯೋತಿಯನ್ನು ಉಳಿಸಿಕೊಂಡು ಬಂದಿದ್ದು ಅದಕ್ಕೆ ಅದರದೇ ಆದ ಇತಿಹಾಸವು ಉಂಟು.

ಹೀಗೆ ಕುಂದಗೋಳವು ತನ್ನದೇ ಆದ ಐತಿಹಾಸಿಕ ಪರಂಪರೆಯನ್ನು ಹೊಂದಿದೆ. ಆದರೆ ಕುಂದಗೋಳ ಎಂಬ ಹೆಸರು ಬರಲು ಕಾರಣವೇನೆಂಬ ಪ್ರಶ್ನೆಗೆ ಉತ್ತರವಿಲ್ಲ. ಆದರೆ ಶಾಸನಗಳಲ್ಲಿ (ಕ್ರಿ.ಶ. ೧೩೪೦ ಹಾಗೂ ೧೪೪೪) ಕುಂದಗೋಳ ಮತ್ತು ಕುಂಧಾಗಲ್ಲ ಎಂದು ಉಲ್ಲೇಖಿತವಾಗಿದ್ದು ಅದು ಇಂದು ಬದಲಾಗುತ್ತ ಕುಂದಗೋಳವೆಂದಾಗಿರಬಹುದು.

# ಕುಂದಗೋಳ ಪರಿಸರದ ನಕಾಶೆ



## ೩.೨. ಪ್ರಾಚೀನ ಕಾಲದ ದೇವಾಲಯಗಳು ಮತ್ತು ಶಿಲ್ಪಗಳು

### ಶಂಭುಲಿಂಗ ದೇವಾಲಯ

ಗ್ರಾಮದ ಪಶ್ಚಿಮ ಭಾಗದಲ್ಲಿ ಪೂರ್ವಕ್ಕೆ ಮುಖ ಮಾಡಿರುವ ಶಂಭುಲಿಂಗ ದೇವಾಲಯವು ಗ್ರಾಮದಲ್ಲಿಯ ಅತ್ಯಂತ ದೊಡ್ಡದಾದ ಪ್ರಾಚೀನ ದೇವಾಲಯವಾಗಿದ್ದು ಪ್ರತಿ ಸೋಮವಾರ ಹಾಗೂ ಪ್ರತಿ ಶ್ರಾವಣಮಾಸದಲ್ಲಿ ಮತ್ತು ಮಹಾಶಿವರಾತ್ರಿಯಂದು ಶಂಭುಲಿಂಗ ಗ್ರಾಮದ ಜನರಿಂದ ಅತ್ಯಂತ ವಿಜೃಂಭಣೆಯಿಂದ ಪೂಜಿಸಲ್ಪಡುತ್ತದೆ.

ಕರ್ನಾಟಕದ ಪ್ರಸಿದ್ಧವಾದ ಚಾಲುಕ್ಯ ವಾಸ್ತು ಶೈಲಿಯಲ್ಲಿ ನಿರ್ಮಿತವಾದ ಈ ದೇವಾಲಯವು ಬಿಳಿಗೆಂಪು ಗ್ರಾನೈಟ್ ಮತ್ತು ಕಪ್ಪು ಶಿಲೆಯಿಂದ ಕಟ್ಟಲಾಗಿದ್ದು, ಗರ್ಭಗುಡಿ, ಅರ್ಧಮಂಟಪ (ಮೊಗಸಾಲೆ) ಇದಕ್ಕೆ ಹೊಂದಿಕೊಂಡು ಎರಡು ಕೋಣೆಗಳು ಹಾಗೂ ನವರಂಗ ಭಾಗಗಳನ್ನು ಹೊಂದಿರುವುದು.

### ಗರ್ಭಗುಡಿ

ಸರಳ ಅಧಿಷ್ಠಾನದ ಮೇಲೆ ನಿರ್ಮಿಸಲ್ಪಟ್ಟ ಗರ್ಭಗುಡಿಯ ಭಿತ್ತಿಗಳು ಚೌಕಾಕಾರದ ತುಂಡು ಶಿಲೆಗಳಿಂದ ಕಟ್ಟಲ್ಪಟ್ಟಿದ್ದು ಯಾವುದೇ ಅಲಂಕಾರವನ್ನು ಹೊಂದಿರುವುದಿಲ್ಲ. ಗರ್ಭಗೃಹದ ನಾಲ್ಕು ಮೂಲೆಯಲ್ಲಿರಿಸಲ್ಪಟ್ಟ ಕಂಬಗಳು ಸರಳವಾದ ಘನಾಕೃತಿಯಲ್ಲಿದ್ದು ಅರ್ಧಭಾಗವನ್ನು ಹೊರತೋರಿಸಲಾಗಿದೆ. ಸಮತಟ್ಟಾದ ಹಾಸುಗಲ್ಲಿನ ಮೇಲೆ ಈಶ್ವರಲಿಂಗ (ಶಂಭುಲಿಂಗ) ವು ಸ್ಥಾಪಿಸಲ್ಪಟ್ಟಿದ್ದು ಅತ್ಯಂತ ಹೊಳಪುಳ್ಳ ಕಪ್ಪು ಶಿಲೆಯ ಪಾಣಿಪೀಠ ಭಾಗವನ್ನು ಹಾಗೂ ಕೆಂಪು ಶಿಲೆಯ ಅಂಡಾಕಾರದ ಯೋನಿಪೀಠವನ್ನು ಹೊಂದಿದ್ದು, ಲಿಂಗದ ಅಭಿಷೇಕ ಮಾಡಿದ ನೀರು ಹೊರಬರಲು ಅಲ್ಲಿಂದ ಅಂಬು ಮಾರ್ಗವೊಂದು ಹೊರಸುತ್ತಿದೆ. ಈ ತೆರದ ಸಣ್ಣ ಕಾಲುವೆ ಅಧಿಷ್ಠಾನದ ಮುಂದೆ ಹೊರಕ್ಕೆ ಚಾಚಿರುತ್ತದೆ. ಗರ್ಭಗೃಹದ ಭುವನೇಶ್ವರಿಯು ಕಮಲಾಕೃತಿಯದಾಗಿದ್ದು ಗರ್ಭಗೃಹದ ಮೇಲಿರುವ ಗೋಪುರವು ಇತ್ತಿತ್ತಲಾಗಿ ಸಿಮೆಂಟಿನಿಂದ ಕಟ್ಟಲಾಗಿರುತ್ತದೆ. ಆದರೆ ಇದು ಪೂರ್ವದಲ್ಲಿ ಶಿಲೆಯಿಂದ ಕಟ್ಟಲಾಗಿತ್ತೆಂದು ತಿಳಿದು ಬರುತ್ತದೆ. ಗೋಪುರ ಭಾಗದ ಕೆಲವು ಶಿಲಾತುಂಡುಗಳು ಗ್ರಾಮದ ಹಲವಾರು ಸ್ಥಳಗಳಲ್ಲಿ ಕಂಡು ಬರುವವು. ಉದಾ: ಶಿವಾನಂದ ಬಾಲಿಕಾ ಪ್ರೌಢಶಾಲೆಯ ಗೋಡೆಯಲ್ಲಿ ಕೆಲವನ್ನು ಇರಿಸಲಾಗಿದ್ದು ಅವು ಈ ಗೋಪುರ ಭಾಗದ ಶಿಲ್ಪಗಳೇ ಆಗಿರಬಹುದೆಂದು ಕಂಡು ಬರುತ್ತದೆ.

ಗರ್ಭಗುಡಿಯ ದ್ವಾರವು ಎರಡು ಬದಿಯಲ್ಲಿ ಐದು ಶಿಲಾಪಟ್ಟಿಗಳನ್ನು ಹಾಗೂ ಮೇಲ್ಭಾಗವು ನಾಲ್ಕು ಶಿಲಾಪಟ್ಟಿಗಳನ್ನು ಹೊಂದಿದ್ದು, ಎರಡು ಬದಿಯ ಶಿಲಾಪಟ್ಟಿಗಳ ಮಧ್ಯ ಸ್ತಂಭವು ಒಂದಿದ್ದು ಸ್ತಂಭದ ಪಾದ (ಓಮ) ಭಾಗದಲ್ಲಿ ಹಾಗೂ ಶಿಲಾಪಟ್ಟಿಗಳ ಪಾದ ಭಾಗದಲ್ಲೂ ತ್ರಿಭಂಗಿ ರೂಪದಲ್ಲಿ ದ್ವಾರಪಾಲಕರ ಶಿಲ್ಪಗಳು

ಕಟೆಯಲಾಗಿದ್ದು ಶಿಲ್ಪಗಳ ತಲೆ ಭಾಗದ ಮೇಲೆ ಕೀರ್ತಿ ಮುಖವು ಹಾಗೂ ಕೀರ್ತಿ ಮುಖದ ಮೇಲ್ಭಾಗದಲ್ಲಿ ಪಟ್ಟಿಯುದ್ದಕ್ಕೂ ಲತಾ ತೋರಣವು ಕಟೆಯಲ್ಪಟ್ಟಿರುತ್ತದೆ. ದ್ವಾರದ ಮೇಲ್ಭಾಗದ ಶಿಲಾಪಟ್ಟಿಗಳ ಮಧ್ಯ ಭಾಗದಲ್ಲಿ ಗಜಲಕ್ಷ್ಮಿ ಶಿಲ್ಪವು ಕೆತ್ತಲ್ಪಟ್ಟಿದ್ದು ಮತ್ತು ದ್ವಾರದ ಮೇಲ್ಭಾಗದ (ಪ್ರಸ್ತುತ) ಕಪೋತ ಭಾಗದಲ್ಲಿ ಐದು ಚಿಕ್ಕದೇವಕೋಷ್ಠಗಳಿದ್ದು ಅವುಗಳಲ್ಲಿ ತ್ರಿಭಂಗಿಯಲ್ಲಿ ನಿಂತ ಸ್ತ್ರೀ ಪುರುಷ ಶಿಲ್ಪಗಳಿವೆ.

**ಅರ್ಧಮಂಟಪ** 

ಗರ್ಭಗುಡಿಯಷ್ಟೇ ಎತ್ತರವಾದ ಸರಳ ಅಧಿಷ್ಠಾನದ ಮೇಲೆ ಕಟ್ಟಲಾದ ಅರ್ಧಮಂಟಪದ ಗೋಡೆಗಳು ಸರಳವಾಗಿದ್ದು ದಕ್ಷಿಣದ ಗೋಡೆಯಲ್ಲಿ ಕಿಟಕಿಯನ್ನು ಇರಿಸಲಾಗಿದೆ. ಮಂಟಪದ ಹಿಂಬದಿಯ ಅಂದರೆ ಗರ್ಭಗುಡಿಯ ದ್ವಾರದ ಎಡ ಮತ್ತು ಬಲ ಬದಿಯ ಗೋಡೆಯ ಭಾಗದಲ್ಲಿ ಪಾರ್ವತಿ ಮತ್ತು ಗಣೇಶರ ಶಿಲ್ಪಗಳು ಇರಿಸಲ್ಪಟ್ಟಿವೆ. ಹಾಗೂ ಮಂಟಪದ ಹೊರಬದಿಯ ಗೋಡೆಯ ಭಾಗದಲ್ಲಿ ಒಂಟಿ ಅರೆ ಕಲ್ಲುಗಳ ಮೇಲೆ ಅರೆಗೋಪುರಗಳು ಕೆತ್ತಲ್ಪಟ್ಟಿವೆ. ಮಂಟಪದ ದ್ವಾರದ ಮೇಲ್ಭಾಗದಲ್ಲಿ ರಾಮ, ಲಕ್ಷ್ಮಣ, ಸೀತೆಯರ ಶಿಲ್ಪಗಳು ಕಟೆಯಲ್ಪಟ್ಟಿರುತ್ತದೆ. ಈ ದ್ವಾರದ ಮುಂಭಾಗದಲ್ಲಿಯ ಗರ್ಭಗುಡಿಯ ಲಿಂಗಕ್ಕೆ ಎದುರಾಗಿ ಮೂರು ಅಡಿ ಎತ್ತರದ ಕಪ್ಪುಶಿಲೆಯ ಅತ್ಯಂತ ಹೊಳಪುಳ್ಳ ನಂದಿ ಶಿಲ್ಪವಿದ್ದು, ಇದರ ಎಡ ಮತ್ತು ಬಲಬದಿಗಳಲ್ಲಿ ಕೋಣೆಗಳಿದ್ದು ಕೋಣೆಗಳಿಗೆ ಹೊರ ಬದಿಗೆ ಚಿಕ್ಕ ದ್ವಾರಗಳಿವೆ.



**ತೆರೆದ ಮಹಾಮಂಟಪ :**

ಮಹಾಮಂಟಪವು ಮುಖ್ಯ ದ್ವಾರ ಪೂರ್ವಕ್ಕೆ ಹಾಗೂ ಉತ್ತರ ಮತ್ತು ದಕ್ಷಿಣಕ್ಕೂ ಮೂರು ತೆರೆದ ದ್ವಾರಗಳನ್ನು ಹೊಂದಿದ್ದು ಸುಂದರವಾದ ಹೊಳಪುಳ್ಳ ಕಪ್ಪು ಬಳಪದ ಶಿಲೆಯ ಕಂಬಗಳಿಂದ ಅಲಂಕೃತಗೊಂಡಿದ್ದು, ಉತ್ಸವ, ಸಭೆ, ಸಮಾರಂಭಗಳು ನಡೆಯುವಾಗ ಕೂಡಲು ಅನುಕೂಲವಾಗಿರಲೆಂದು ಮಂಟಪದ ತುದಿಯ ಕಂಬಗಳ ಒಳವಲಯದಲ್ಲಿ ಅವುಗಳನ್ನು ಕೂಡಿಸಿ ಕಲ್ಲಿನ ಆಸನವನ್ನು ಸುತ್ತಲೂ ಅಳವಡಿಸಿ ಒರಗಿ ಕುಳಿತುಕೊಳ್ಳಲು ಅನುಕೂಲವಾಗುವಂತಹ ಒರಗು ಬೆಂಚುಗಳು ಇರುತ್ತವೆ. ಮಂಟಪದ ಮಧ್ಯದಲ್ಲಿನ ಒಳಮಾಳಿಗೆಯಲ್ಲಿರುವ ಭುವನೇಶ್ವರಿಯು ಒಂಬತ್ತು ಭಾಗಗಳನ್ನು ಹೊಂದಿದ್ದು, ಮಧ್ಯದಲ್ಲಿ ನಂದಿಯೊಡನೆ ಇರುವ ಶಿವನ ಶಿಲ್ಪವು ಸುತ್ತಲಿನ ೮ ಭಾಗದಲ್ಲಿ ಅಷ್ಟದಿಕ್ಪಾಲಕರ ಶಿಲ್ಪಗಳು ಸುಂದರವಾಗಿ ಕಟೆಯಲ್ಪಟ್ಟಿವೆ. ಮಂಟಪದ ಕಪೋತ ಭಾಗದ ಮೇಲಿನ (ಕುಂಬಿ) ಭಾಗದಲ್ಲಿ ಸೈನಿಕರ ಮುಂತಾದ ಶಿಲ್ಪಗಳು ಕೆತ್ತಲ್ಪಟ್ಟಿದ್ದು ಹಾಗೂ ಮಂಟಪದ ಕಕ್ಷಾಸನದ ಹಿಂಬದಿಯಲ್ಲಿ (ಛತ್ತಿ) ತೋರಣ, ಸ್ತಂಭಗಳ ಸಾಲು, ಗೋಪುರಗಳ ಸಾಲು ಕೀರ್ತಿಮುಖಗಳು, ಎಲ್ಲಕ್ಕೂ ಮೇಲೆ ದೇವತೆಗಳ ಶಿಲ್ಪಗಳು ಕೆತ್ತಲ್ಪಟ್ಟಿದ್ದು ಮಕರ ತೋರಣ, ಲತಾ ತೋರಣವು ಇದೆ.

**ಕಂಬಗಳು**

ಕಪ್ಪು ಬಳಪದ ಶಿಲೆಯ ಸುಂದರವಾದ ಹೊಳಪುಳ್ಳ ಮಹಾಮಂಟಪದಲ್ಲಿನ ಕಂಬಗಳು. ಚತುರಕೋನಾಕೃತಿಯ ಓಮಪೀಠವನ್ನು ಮೇಲಿನ ಭಾಗವು ಮುಗುಚಿ ಹಾಕಿದ ಕುಂಭದಂತೆ ಇದ್ದು ಇದರ ಮೇಲೆ ವೃತ್ತಾಕಾರದ ಫಲಕ ಹಾಗೂ ಇಳಿ ಬಿದ್ದಿರುವ ಪುಷ್ಪಹಾರಗಳಂತೆ ಅಲಂಕರಣಗಳನ್ನು ಅಳವಡಿಸಿದ್ದು, ಕುಂಭದ ಮೇಲೆ ವೀರಕಾಂಡ (ವೀರಕಂಠ) ಭಾಗವಿದ್ದು ಅದರ ಮೇಲೆ ಪದ್ಮ ಭಾಗ ಇದಕ್ಕೆ ಮೇಲೆಯ ಚೌಕಾಕಾರದ ಫಲಕವಿರುವುದು. ಎಲ್ಲಕ್ಕೂ ಮೇಲೆ ಬೋದಿಗೆಯನ್ನು ಇದರ ಮೇಲೆ ಪುಷ್ಪಗಳ ಕೆತ್ತನೆಯು ಕಂಡು ಬರುವುದು.

**ದ್ವಾರ ಬಾಗಿಲು**

ದೇವಾಲಯದ ಸುಮಾರು ೨೦ ಮೀಟರ ಅಂತರದಲ್ಲಿ ಪೂರ್ವಕ್ಕೆ ಮುಖ ಮಾಡಿರುವ ದ್ವಾರಬಾಗಿಲು ಸರಳವಾಗಿದ್ದು ಯಾವುದೇ ಕೆತ್ತನೆಯೂ ಇರುವುದಿಲ್ಲ. ದ್ವಾರದ ಮೇಲ್ಭಾಗದ ಶಿಲಾಫಲಕದ ಮಧ್ಯದಲ್ಲಿ ಗಣೇಶನ ಶಿಲ್ಪವೊಂದು ಕಟೆಯಲ್ಪಟ್ಟಿರುತ್ತದೆ.

**ಗಣೇಶನ ಶಿಲ್ಪ**

ಗರ್ಭಗುಡಿಯ ದ್ವಾರದ ಎಡ ಗೋಡೆಯಲ್ಲಿರಿಸಲ್ಪಟ್ಟ ಕಪ್ಪು ಶಿಲೆಯ ಹೊಳಪುಳ್ಳ ಗಣೇಶನು ಕಿರೀಟ ಮುಕುಟವನ್ನು ಹೊಂದಿದ್ದು ನಾಲ್ಕು ಕೈಗಳು, ಅಭಯ ಹಸ್ತ, ಅಂಕುಶ, ಪಾಶ ಮತ್ತು ಮೋದಕ ಪಾತ್ರೆ ಹಿಡಿದಿರುವ ಗಣೇಶನು ಕುಳಿತಿದ್ದು, ಕೊರಳಲ್ಲಿ ವೈಜಯಂತಿಹಾರವನ್ನು ಇತರೆ ಆಭರಣಗಳಿಂದ ಅಲಂಕರಿಸಲ್ಪಟ್ಟಿದ್ದು ಹೊಟ್ಟೆಗೆ ಸರ್ಪವನ್ನು ಸುತ್ತಿರುವನು. ಸೊಂಡಿಲು, ಮಾದಕ ಹಸ್ತದ ಮೇಲೆ ಇರಿಸಲ್ಪಟ್ಟಿರುವುದು ಹಾಗೂ ಪ್ರಭಾವಳಿ ಭಾಗದಲ್ಲಿ ಮಕರತೋರಣ ಮತ್ತು ಕೀರ್ತಿ ಮುಖಗಳು ಕೆತ್ತಲ್ಪಟ್ಟಿವೆ.

**ಪಾರ್ವತಿಯ ಶಿಲ್ಪ**

ಗರ್ಭಗುಡಿಯ ದ್ವಾರದ ಬಲಬದಿಯ ಗೋಡೆಯಲ್ಲಿರಿಸಲಾದ ಪಾರ್ವತಿ ಶಿಲ್ಪವು ಕಮಲ ಪೀಠದ ಮೇಲೆ ಕುಳಿತಿದ್ದು, ನಾಲ್ಕು ಹಸ್ತಗಳು, ಅಭಯ, ಪದ್ಮ, ಪಾಶ, ವರದಾನ ರೂಪದಲ್ಲಿದ್ದು ಕರಂಡ ಮುಕುಟವನ್ನು ಹೊಂದಿದ್ದು ಪ್ರಭಾವಳಿಯ ಭಾಗದಲ್ಲಿ ಕೀರ್ತಿಮುಖ ಮತ್ತು ಮಕರ ತೋರಣದ ಕೆತ್ತನೆಯು ಹಾಗೂ ಕೊರಳಭಾಗದಲ್ಲಿ ಸುಂದರವಾದ ಆಭರಣಗಳ ಅಲಂಕರಣೆಯುಳ್ಳ, ಕಪ್ಪುಶಿಲೆಯ ಪಾರ್ವತಿಯ ಶಿಲ್ಪವು ಸುಮಾರು ಕ್ರಿ.ಶ. ೧೨-೧೩ ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿರಬಹುದು.

''ಈ ದೇವಾಲಯದ ರಂಗಮಂಟಪದ ಕಂಬದ ಮೇಲಿರುವ ಶಾಸನದಲ್ಲಿ ಕಲಚೂರಿ ದೊರೆ ಸೋಮದೇವನ ಉಲ್ಲೇಖವಿದ್ದು ಇದು ಸುಮಾರು ಕ್ರಿ.ಶ. ೧೧-೧೨ ನೆಯ ಶತಮಾನಕ್ಕೆ ಸೇರಿದ್ದಾಗಿರಬಹುದೆಂದು ಹಾಗೂ ಗಂಗಾಧರೇಶ್ವರ ಗುಡಿಯ ಗೋಡೆಯಲ್ಲಿರಿಸಲಾದ ಕಲ್ಯಾಣ ಚಾಳುಕ್ಯ ತ್ರಿಭುವನದಲ್ಲಿ ಅರಸನ ಕಾಲದ

ಶಾಸನವೊಂದರಲ್ಲಿ "ಸ್ವಯಂಭೂದೇವರ ಸೂತ್ರಧಾರಿ ಬವ್ಮೋಜನ" ಉಲ್ಲೇಖವಿದ್ದು, ಈ ಸ್ವಯಂಭೂದೇವಾಲಯವೇ ಈ ಶಂಭುಲಿಂಗ ದೇವಾಲಯವಾಗಿರಬಹುದೆಂಬ ಕಾರಣ ಶಂಭುಲಿಂಗ ದೇವಾಲಯದ ಸೂತ್ರಧಾರಿ (ಸ್ಥಪತಿ) ಬರ್ಮೋಜನೆಂದು ಹೇಳಬಹುದು."[೨೧]

## ಸೋಮೇಶ್ವರ ದೇವಸ್ಥಾನ

ಕುಂದಗೋಳದ ನಾಡಗೇರ ಓಣಿಯಲ್ಲಿ ಪೂರ್ವಕ್ಕೆ ಮುಖ ಮಾಡಿರುವ ಈ ದೇವಾಲಯದ ಗರ್ಭಗುಡಿಯ ಭಾಗವು ಮಾತ್ರ ಶಿಲೆಯಿಂದ ಕಟ್ಟಲಾಗಿದ್ದು ಆದರ ಮುಂದಿನ ಭಾವಣಿಯನ್ನು ಇತ್ತಿತ್ತಲಾಗಿ ಕಟ್ಟಲಾಗಿದೆ. ಗರ್ಭಗುಡಿಯು ಸಣ್ಣದಾಗಿದ್ದು ಒಳಮಾಳಿಗೆಯಲ್ಲಿ ಕಮಲಾಕೃತಿಯ ಭುವನೇಶ್ವರಿಯು ಇರುತ್ತದೆ. ಗರ್ಭಗುಡಿಯಲ್ಲಿನ ಈಶ್ವರ ಲಿಂಗದ ಮೇಲಿನ ಸೂತ್ರ ರೇಖೆಯಾದಾರದ ಮೇಲಿಂದ ಈಶ್ವರ ಲಿಂಗವು ಸುಮಾರು ಕ್ರಿ.ಶ. ೧೪-೧೫ ನೇ ಶತಮಾನದ್ದಾಗಿರಬಹುದೆಂದು ಊಹಿಸಬಹುದಾಗಿದೆ. ಲಿಂಗಕ್ಕೆ ಎದುರಾಗಿ ಕಪ್ಪುಶಿಲೆಯ ನಂದಿ ಶಿಲ್ಪವು ಇರುತ್ತದೆ.

## ಶಿಲ್ಪಗಳು

### ಪಾರ್ವತಿಯ ಶಿಲ್ಪ

ಕಪ್ಪು ಶಿಲೆಯಾದ ಪಾರ್ವತಿಯ ಶಿಲ್ಪವು ಸೋಮೇಶ್ವರ ದೇವಾಲಯದ ಗರ್ಭಗುಡಿಯ ದ್ವಾರದ ಬಲಬದಿಯ ಗೋಡೆಯಲ್ಲಿರಿಸಲಾಗಿದೆ. ಶಿಲ್ಪವು ದ್ವಿಭಂಗಿಯ ರೂಪದಲ್ಲಿದೆ. ನಾಲ್ಕು ಕೈಗಳು, ಪದ್ಮ, ಕೊಡಲಿ, ಪಾಶ ಧರಿಸಿದ್ದು ಎಡಬದಿಯ ಕೆಳಕ್ಕೆ ವರದಾನ ರೂಪದಲ್ಲಿದೆ. ಶಿಲ್ಪವು ಕರಂಡ ಮುಕುಟವನ್ನು ಹೊಂದಿದ್ದು ಹೆಚ್ಚು ಆಭರಣಗಳಿಂದ ಅಲಂಕರಿಸಲ್ಪಟ್ಟಿರುವುದಿಲ್ಲ. ಇದು ಸುಮಾರು ೧೦-೧೧ ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿರಬಹುದು.

## ಗಣೇಶನ ಶಿಲ್ಪ

ಇದು ಕಪ್ಪು ಶಿಲೆಯದಾಗಿದ್ದು ಸೋಮೇಶ್ವರ ದೇವಾಲಯದ ಎಡಬದಿಯ ಗೋಡೆಯಲ್ಲಿ ರಚಿಸಲ್ಪಟ್ಟಿದೆ. ಆದರೆ ಶಿಲ್ಪವು ಸುಮಾರು ೩೦ ವರ್ಷಗಳ ಇತ್ತೀಚಿನದಾಗಿದ್ದು ಅತ್ಯಂತ ಸುಂದರವಾದ ಹೊಳಪುಳ್ಳ ಶಿಲ್ಪವು ಇದಾಗಿದೆ.

## ಸಪ್ತ ಮಾತೃಕೆಯರ ಶಿಲ್ಪ

ಸೋಮೇಶ್ವರ ಗುಡಿಯ ಛಾವಣಿ ಗೋಡೆಯಲ್ಲಿರಿಸಲಾದ ಸಪ್ತಮಾತೃಕೆಯರ ಶಿಲ್ಪವು ಕಪ್ಪುಶಿಲೆಯಲ್ಲಿ ಕಟೆಯಲ್ಪಟ್ಟಿದ್ದು ಕ್ರಮವಾಗಿ ವೀಣಾಪಾಣಿ, ವೀರಭದ್ರ, ಬ್ರಾಹ್ಮಿಣಿ, ಮಹೇಶ್ವರಿ, ಕೌಮಾರಿ, ವೈಷ್ಣವಿ, ವರಾಹಿ, ಇಂದ್ರಾಣಿ, ಚಾಮುಂಡಿ, ಗಣೇಶ (ಶಿಲ್ಪದಿಂದ ಬಲದಿಂದ ಎಡಕ್ಕೆ) ರ ಮೂರ್ತಿಗಳು ಇರುತ್ತವೆ. ಇದು ಸುಮಾರು ಕ್ರಿ.ಶ. ೧೦ ನೇ ಶತಮಾನಕ್ಕೆ ಸಂಬಂಧಿಸಿದ್ದಾಗಿರಬಹುದು.

---

೨೧. ಕುಂದಗೋಳ ತಾಲೂಕಿನ ಈಶಾನ್ಯ ವಲಯದ ಪುರಾತತ್ವ - ಒಂದು ಸಮೀಕ್ಷೆ : ಶಿವಪ್ಪ ಚನ್ನಪ್ಪ ಶಾನವಾಡ, ಪುಟ-೨೧

## ಗಂಗಾಧರೇಶ್ವರ ದೇವಾಲಯ

ಗ್ರಾಮದ ಮಧ್ಯದಲ್ಲಿರುವ ಗಂಗಾಧರೇಶ್ವರ ದೇವಾಲಯದ ಗರ್ಭಗುಡಿಯ ಭಾಗ ಮಾತ್ರ ಶಿಲೆಯಿಂದ ಕಟ್ಟಲ್ಪಟ್ಟಿದ್ದು ಉಳಿದ ಭಾಗವು ಇತ್ತೀಚಿನದಾಗಿರುತ್ತದೆ. ಗರ್ಭಗುಡಿಯ ದ್ವಾರವು ಕಲ್ಯಾಣ ಚಾಳುಕ್ಯ ದೇವಾಲಯದ ಮಾದರಿಯದಾಗಿದ್ದು ದ್ವಾರದ ಮೇಲ್ಭಾಗದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು ಅಕ್ಕಪಕ್ಕಕ್ಕೆ ಎರಡು ಗಜಗಳು ತಮ್ಮ ಹಿಂಗಾಲ ಮೇಲೆ ನಿಂತು ಸೊಂಡಿಲಿನಿಂದ ನೀರನ್ನು ಸುರಿಸುತ್ತಿವೆ. ಶಿಲ್ಪದ ಮೇಲಂಚಿನಲ್ಲಿ ಲತಾ ತೋರಣವು ಕಟೆಯಲಾಗಿರುತ್ತದೆ. ಗರ್ಭಗುಡಿಯಲ್ಲಿ ಈಶ್ವರ ಲಿಂಗವಿದ್ದು ಕಪ್ಪುಶಿಲೆಯದಾದ ಇದರ ಮೇಲೆ ಯಾವುದೇ ಸೂತ್ರ ರೇಖೆಗಳು ಕಂಡುಬಂದಿಲ್ಲ. ಗರ್ಭಗುಡಿಗೆ ಎದುರಾಗಿ ಸುಮಾರು ೨೦-೨೫ ಅಡಿ ಅಂತರದಲ್ಲಿ ನಂದಿಶಿಲ್ಪವಿದ್ದು ಸುಮಾರು ನಾಲ್ಕು ಅಡಿ ಎತ್ತರವಾದ ಕಪ್ಪುಶಿಲೆಯ ಹೊಳಪುಳ್ಳ ಸುಂದರವಾದ ಹಣೆಪಟ್ಟಿ ಕೊರಳಾಭರಣಗಳ ಕೆತ್ತನೆಯನ್ನು ಹೊಂದಿದೆ. ಈ ದೇವಾಲಯದ ಹಿಂಬದಿಯ ಗೋಡೆಯಲ್ಲಿ ಎರಡು ಶಾಸನಗಳನ್ನು ಇರಿಸಲಾಗಿದೆ.

## ಗಜಲಕ್ಷ್ಮಿ ಶಿಲ್ಪ

ಶ್ರೀ ಶಿವಾನಂದ ಬಾಲಿಕಾ ಪ್ರೌಢಶಾಲೆಯ ಮುಂಭಾಗದ ಗೋಡೆಯ ತಳಭಾಗದಲ್ಲಿರುವ ಗಜಲಕ್ಷ್ಮಿ ಶಿಲ್ಪ ಬೂದುಗೆಂಪನೆಯ ಶಿಲೆಯದಾಗಿದ್ದು ಸುಂದರವಾಗಿ ಸ್ಪಷ್ಟವಾಗಿ ಶಿಲ್ಪಿಸಲ್ಪಟ್ಟಿರುತ್ತದೆ. ಶಿಲ್ಪದಲ್ಲಿ ಪದ್ಮಾಸನದಲ್ಲಿ ಕುಳಿತಿರುವ ಲಕ್ಷ್ಮಿಯ ಬಲಗೈ ಅಭಯ ಹಸ್ತರೂಪದಲ್ಲಿ ಎಡಗೈಯು ವರದಾನ ರೂಪದಲ್ಲಿದ್ದು ಕರಂಡ ಮುಕುಟವನ್ನು ಧರಿಸಲಾಗಿದೆ. ಅಕ್ಕಪಕ್ಕದಲ್ಲಿ ಎರಡು ಗಜಗಳು ತಮ್ಮ ಸೊಂಡಿಲಿನಿಂದ ಲಕ್ಷ್ಮಿಯ ತಲೆಯ ಮೇಲೆ ನೀರನ್ನು ಸುರಿಸುತ್ತಿವೆ. ಆನೆಯ ಹಿಂಬದಿಯಲ್ಲಿ ಎರಡು ಕಡೆಗೂ ಕುಳಿತಿರುವ ಪುರುಷ ಶಿಲ್ಪಗಳು ಪ್ರಭಾವಳಿಯ ಭಾಗದಲ್ಲಿ ನವಗ್ರಹ ಶಿಲ್ಪಗಳನ್ನು ಕೆತ್ತಲಾಗಿದೆ.

## ದುರ್ಗಾಶಿಲ್ಪ

ಶ್ರೀ ಶಿವಾನಂದ ಬಾಲಿಕಾ ಪ್ರೌಢಶಾಲೆಯ ಗೋಡೆಯಲ್ಲಿರಿಸಲಾದ ಬೂದುಗೆಂಪನೆ ಶಿಲೆಯ ದುರ್ಗೆಯ ಶಿಲ್ಪವು ವೃತ್ತಾಕೃತಿಯ ಲತಾ ತೋರಣದ ಮಧ್ಯ ಪದ್ಮಾಸನದಲ್ಲಿ ಕುಳಿತಿದ್ದು ಹಿಂಬದಿಯ ಎರಡು ಕೈಗಳಲ್ಲಿ ತ್ರಿಶೂಲ ಢಮರುಗಳನ್ನು ಹಿಡಿದಿದ್ದು ಕಿರೀಟ ಮುಕುಟವನ್ನು ಹೊಂದಿದ ದುರ್ಗೆಯ ಶಿಲ್ಪದ ಸುತ್ತಲೂ ಮೂರು ಲತಾ ತೋರಣಗಳು ಸುರುಳಿಯಾಕಾರದಲ್ಲಿ ಸುಂದರವಾಗಿ ಶಿಲ್ಪಿಸಲ್ಪಟ್ಟಿವೆ.

## ಕೀರ್ತಿಮುಖಶಿಲ್ಪ

ಶ್ರೀ ಶಿವಾನಂದ ಬಾಲಿಕಾ ಪ್ರೌಢಶಾಲೆಯ ಗೋಡೆಯಲ್ಲಿರಿಸಲಾದ ಬೂದುಗೆಂಪು ಶಿಲೆಯ ಶಿಲ್ಪವು ಮೂರು ಸುರುಳಿಯಾಕಾರದ ಲತಾ ತೋರಣವು ಅಭಿಮುಖವಾಗಿ ಮೇಲಕ್ಕೇರುತ್ತಾ ಹೋಗಿದ್ದು ಕೆಳಗಿನ ಸುರುಳಿಯಲ್ಲಿ ಎರಡು ಸಿಂಹಗಳು ಅಭಿಮುಖವಾಗಿ ನಿಂತಿದ್ದು ಮುಂಗಾಲನ್ನು ಎತ್ತಿ ಹಿಡಿದಿವೆ. ಹಿಂದೆ ಬಾಲವನ್ನು ಎತ್ತರಿಸಿರುವ ಮತ್ತು ಎರಡನೆಯ ಸುರುಳಿಯಲ್ಲಿ ಪುರುಷ ಶಿಲ್ಪವೊಂದನ್ನು ಕಟೆಯಲಾಗಿದ್ದು ಮೂರನೇ ಸುರುಳಿಯು ನಾಗರ ಹಾವಿನ ಹೆಡೆಯಾಕಾರದಲ್ಲಿದ್ದು ಮೇಲ್ಗಡೆ ಕೀರ್ತಿ ಮುಖವು ಇರುವುದು.

## ಮಕರ ತೋರಣ

ಶ್ರೀ ಶಿವಾನಂದಬಾಲಿಕಾ ಪ್ರೌಢಶಾಲೆಯ ಗೋಡೆಯ ಭಾಗದಲ್ಲಿರಿಸಲಾದ ಕಪ್ಪು ಶಿಲೆಯ ಶಿಲ್ಪವು ಸಮಪಾದ ಭಂಗಿಯಲ್ಲಿ ನಿಂತಿದ್ದು ಕಿರೀಟ ಮುಕುಟವನ್ನು ಹೊಂದಿದೆ. ಶಿಲ್ಪವು ಹೆಚ್ಚು ಆಭರಣಗಳಿಂದ ಅಲಂಕರಿಸಲ್ಪಟ್ಟಿದ್ದು ಶಿಲ್ಪದ ಸುತ್ತ ಲತಾ ತೋರಣ ಎಂಟು ಸುರುಳಿಗಳಿದ್ದು ಸುರುಳಿಗಳಲ್ಲಿ ಚುಟುಕು ಶಿಲ್ಪಗಳು ಕಂಡು ಬರುತ್ತವೆ ಹಾಗೂ ಶಿಲ್ಪದ ಪಾದದ ಕೆಳಗಿನ ಭಾಗದಲ್ಲಿ ಜೋಡು ಪಾರಿವಾಳಗಳನ್ನು ಕಟೆಯಲಾಗಿದೆ.

ಶ್ರೀ ಶಿವಾನಂದಬಾಲಿಕಾ ಪ್ರೌಢಶಾಲೆಯ ಗೋಡೆಯ ಭಾಗದಲ್ಲಿರಿಸಲಾದ ಶಿಲ್ಪಗಳನ್ನು ಶಂಭುಲಿಂಗ ದೆ ವಾಲಯದಿಂದಲೇ ತಂದಿರಿಸಲಾಗಿದೆಯೆಂದು ತಿಳಿದು ಬರುತ್ತದೆ. ಕಾರಣ ಈ ಎಲ್ಲ ಶಿಲ್ಪಗಳು ಸುಮಾರು ಕ್ರಿ.ಶ. ೧೧-೧೨ ನೆಯ ಶತಮಾನಕ್ಕೆ ಸಂಬಂಧಿಸಿದ್ದು ಆಗಿರಬಹುದು.

## ಹನುಮಂತ ದೇವರ ಶಿಲ್ಪ

ತಹಶೀಲ್ದಾರ ಕಛೇರಿಯ ಹಿಂಬದಿಯಲ್ಲಿರುವ ಹನುಮಂತ ದೇವರ ಸಣ್ಣ ಗುಡಿಯೊಂದರಲ್ಲಿದ್ದ ಮಾರುತಿ ಶಿಲ್ಪವು ಕಪ್ಪುಶಿಲೆಯದ್ದಾಗಿರುವುದು. ಮಾರುತಿಯು ಎಡಗೈಯಲ್ಲಿ ಗದೆಯನ್ನು, ಬಲಗೈಯಲ್ಲಿ ಕಮಂಡಲವನ್ನು ಹಿಡಿದಿರುತ್ತಾನೆ. ಶಿಲ್ಪದ ಕೆಳಭಾಗದಲ್ಲಿ ಹಳಗನ್ನಡ ಲಿಪಿ ಇರುವುದು. ಇದು ಸುಮಾರು ೧೫-೧೬ ನೆಯ ಶತಮಾನಕ್ಕೆ ಸಂಬಂಧಿಸಿದ್ದಾಗಿರಬಹುದು.

## ದುರ್ಗಾದೇವಿ ವಿಗ್ರಹ

ಈ ಶಿಲ್ಪವು ತಹಶೀಲ್ದಾರ ಕಚೇರಿಯ ಹಿಂಬದಿಯಲ್ಲಿರುವ ಮಾರುತಿದೇವಸ್ಥಾನದ ಹಿಂದೆ ಇದ್ದು, ಕೈಯಲ್ಲಿ ಕತ್ತಿ, ತ್ರಿಶೂಲ, ಡಮರುಗಳನ್ನು ಧರಿಸಿ ಕುಳಿತಿರುವ ಕಪ್ಪುಶಿಲೆಯ ಈ ಶಿಲ್ಪವು ಸುಮಾರು ಕ್ರಿ.ಶ. ೧೦-೧೧ ನೆ ಶತಮಾನಕ್ಕೆ ಸಂಬಂಧಿಸಿದ್ದಾಗಿರಬಹುದು.

## ವಿಷ್ಣು ಶಿಲ್ಪ

ಸಾರ್ವಜನಿಕ ಗ್ರಂಥಾಲಯದ ಗೋಡೆಯಲ್ಲಿರಿಸಲಾದ ಈ ಶಿಲ್ಪವು ಕಪ್ಪು ಶಿಲೆಯದಾಗಿದೆ. ಶಿಲ್ಪದ ಹಿಂಬದಿಯ ಎರಡು ಕೈಗಳಲ್ಲಿ ಅಂಕುಶ ಮತ್ತು ಶಂಕುಗಳನ್ನು ಧರಿಸಿದ್ದು ಸಮಪಾದ ಭಂಗಿಯಲ್ಲಿದೆ. ಕಿರೀಟ ಮುಕುಟಧಾರಿಯಾದ ಶಿಲ್ಪದ ಎರಡೂ ಬದಿಯಲ್ಲಿ ಕೈಮುಗಿದು ಕುಳಿತಿರುವ ಸ್ತ್ರೀ ಶಿಲ್ಪಗಳಿವೆ.

ಈ ಎಲ್ಲಾ ಶಿಲ್ಪ ಕಲಾಕೃತಿಗಳು ಮತ್ತು ಅವುಗಳ ಹಿಂದಿನ ಗಾಢ ಧಾರ್ಮಿಕ ಶ್ರದ್ಧೆ ಕುಂದಗೋಳ ಪರಿಸರದ ಸಂಗೀತ ಪರಂಪರೆಯ ಪೋಷಕಾಂಶಗಳಾದವು.



# ಅಧ್ಯಾಯ- ನಾಲ್ಕು

# ಕುಂದಗೋಳ ಪರಿಸರದ ಸಂಸ್ಕೃತಿ ಮತ್ತು ಸಂಗೀತ

## ೪.೧. ಸಂಗೀತದ ಧಾರ್ಮಿಕ ಹಿನ್ನಲೆ

''ಪ್ರಪಂಚದ ಯಾವುದೇ ಸಂಸ್ಕೃತಿಯಲ್ಲಿ ಆಧ್ಯಾತ್ಮಿಕ ಅನ್ವೇಷಣೆಗಳಿಗೂ ಸಂಗೀತಕ್ಕೂ ಅನ್ಯೋನ್ಯ ಸಂಬಂಧವಿದೆ. ಧಾರ್ಮಿಕ ಪ್ರವೃತ್ತಿಯು ಮಾನವ ಕುಲದ ವಿಕಾಸದ ಮೂಲವೂ ಹೌದು. ಇದರ ಫಲವಾಗಿ ದೊರೆಯುವ ಮಾನಸಿಕ ಅನುಭವವು ಅಲೌಕಿಕವಾದದ್ದು ಇಂತಹ ಅನುಭವವನ್ನು ಉದ್ದೀಪನಗೊಳಿಸುವ ಸಮೃದ್ಧಿಗೊಳಿಸುವ ಮಾನವಿಕ ಸಂಸ್ಥೆಯೇ ಧರ್ಮವೆಂದು ಕರೆಯಬಹುದಾಗಿದೆ. ಇದರ ಇನ್ನೊಂದು ಮುಖವೇ ಸಂಗೀತವಾಗಿದೆ. ಸಂಗೀತವು ಆಯಾ ಪ್ರದೇಶದ ಸಮಾಜಿಕ ಸಾಂಸ್ಕೃತಿಕ ಪರಿಸರದಿಂದ ಬೆಳೆದು ಮಾನವ ಸ್ವಭಾವಕ್ಕೆ ಮೂಲಭೂತವಾದದ್ದಾಗಿದೆ. ಇದರ ಮೂಲ ದ್ರವ್ಯಗಳಿಂದ ನಾದ ಲಯಗಳನ್ನು ಬುದ್ಧಿ ಪೂರ್ವಕವಾಗಿ ವ್ಯವಸ್ಥೆಗೊಳಿಸಿದರೆ ಆಯಾ ಸಾಮಾಜಿಕ ಸಾಂಸ್ಕೃತಿಕ ವೈಶಿಷ್ಟ್ಯಗಳಿಗೆ ಅನುಗುಣವಾಗಿ ಅದರ ಅನುಭವವನ್ನು ಪಡೆಯಬಹುದಾಗಿದೆ''[೨೩] ಎಂದು ಡಾ. ಸತ್ಯನಾರಾಯಣ ಅಭಿಪ್ರಾಯಪಡುತ್ತಾರೆ.

ಧರ್ಮ ಮತ್ತು ಸಂಗೀತಗಳಲ್ಲಿ ಏಕಮೂಲವು ಏಕ ಅಭಿವ್ಯಕ್ತಿ ವಿಧಾನವು ಇರುವುದು ಸಹಜವಾಗಿದೆ. ಮತ ಧರ್ಮಗಳ ಶ್ರದ್ಧಾಳುಗಳಲ್ಲಿ ಕೆಲವು ಪಂಥದವರು ಸಂಗೀತವನ್ನು ದೈವವಾಣಿಯೆಂದು ಹೇಳಿದರೆ ಇನ್ನು ಕೆಲವರು ಅದು ಅಸುರೀ ಪ್ರಭಾವದ್ದೆಂದು ಹೇಳಿದ್ದುಂಟು. ಭಾರತೀಯ ಸಂಗೀತದ ಮೂಲವೆಂದು ನಂಬಲಾಗುವ ಸಾಮವೇದವು ಅಪೌರುಷ್ಯಯ್ಯವಾದುದು. ಬ್ರಹ್ಮನ ಮುಖದಿಂದ ಪ್ರಕಟವಾದುದು. ಸಂಗೀತಕ್ಕೆ ಮೂಲ ಪುರುಷರು ದೇವತೆಗಳು ಶಿವ, ಬ್ರಹ್ಮ, ಸರಸ್ವತಿ, ಗಣೇಶ ಇವರೆಲ್ಲ ಸಂಗೀತ ಪ್ರವರ್ತಕರು. ಅದನ್ನು ಮಾನವ ಲೋಕದಲ್ಲಿ ಹರಡಿದವರು ನಾರದ, ತುಂಬುರ, ಭರತ, ನಂದಿ, ಮತಂಗ, ಶಾರ್ದೂಲ ಮುಂತಾದ ಋಷಿಗಳು. ಅನೇಕ ಧಾರ್ಮಿಕ ಸನ್ನಿವೇಶಗಳಲ್ಲಿ ಸಂಗೀತವು ಆಯಾ ಧರ್ಮದ ಮೂಲ ಕಲ್ಪನೆ, ಆಚರ ಸಂಹಿತೆ, ರೀತಿ ರಿವಾಜುಗಳು ಇತ್ಯಾದಿಗಳ ಸಂಚಯನ ಸ್ಥಾನವು ಪ್ರಯೋಗ ಆಕರವೂ ಆಗಿದೆ. ನಿತ್ಯಪೂಜೆಯಲ್ಲಿ ಹೆಂಗಸರು, ಭಜನೆಗಳಲ್ಲಿ ಗಂಡಸರು ವಚನಗಳಲ್ಲಿ ಆಚಾರ ನಿಷ್ಠರು ತಮ್ಮ ತಮ್ಮ ನಾದಲಯಗಳ ವಿನ್ಯಾಸದಲ್ಲಿ ರಸಾತ್ಮಕವಾಗಿ ಹಾಡುವುದನ್ನು ಗಮನಿಸಬಹುದಾಗಿದೆ. ಸಂಗೀತಕ್ಕೆ ಒಂದು ಪ್ರದೇಶದ ಜನಪದ ಗಂಧವು ಅಂಟಿಕೊಂಡಿರುತ್ತದೆ. ನಾಟಿ ಮಾಡುವಾಗ, ಕೊಯ್ಲು ಮಾಡುವಾಗ, ಬೀಸುವಾಗ ಮತ್ತು ಕುಟ್ಟುವಾಗ ಸಂಗೀತ ಅವುಗಳಲ್ಲಿ ಅಂತರ್ಗತವಾಗಿರುತ್ತದೆ.

೨೩. ಧರ್ಮ : ಕನ್ನಡ ವಿಶ್ವವಿದ್ಯಾಲಯ ವಿಶ್ವಕೋಶ : ಡಾ. ರಾ. ಸತ್ಯನಾರಾಯಣ, ಪುಟ-೩೬೮

ಸನ್ನಿಹಿತವೂ, ವ್ಯತ್ತೀಕೃತವೂ ಆದ ಅನುಭೂತಿಯನ್ನು ಉಂಟು ಮಾಡುತ್ತವೆ. ಶ್ರವಣೇಂದ್ರಿಯಗೋಚರವಾದ ಈ ಭೌತಿಕ ಪ್ರಚೋದಕಗಳಿಗೆ ದೈಹಿಕ, ರಸಾತ್ಮಕ, ಬೌದ್ಧಿಕ ಮತ್ತು ಇವುಗಳನ್ನು ಮಿರಿದ ಸ್ತರಗಳಲ್ಲಿ ಪ್ರತಿಕ್ರಿಯೆಯು ಮೂಡುತ್ತದೆ. ರಸಾತ್ಮಕಸ್ತರದಲ್ಲಿ ಉಂಟಾಗುವ ಪ್ರತಿಕ್ರಿಯೆಯು ಹಾಡಿ ನುಡಿಸುವವರಲ್ಲಿ ಅಥವಾ ಕೇಳುಗರಲ್ಲಿ ತೀವ್ರವಾಗಿ ಕುದಿಬಿಂದುವನ್ನು ತಲುಪಿದಾಗ ಅಭಿವ್ಯಕ್ತಿಸಾಧಕವು ಅದರ ಸಂಕೇತ ಸಾಮಗ್ರಿ ಮತ್ತು ತಂತ್ರಗಳೂ ಸಾಲದು ಎನ್ನುವ ಅತೃಪ್ತಿಯು ಹುಟ್ಟುತ್ತದೆ. ಆಗ ಈ ಅನುಭವವನ್ನು ಕಲ್ಪನಾಂತರದಲ್ಲಿ, ಬೇರೆ ಸಂಕೇತ ತಂತ್ರಗಳಲ್ಲಿಯೂ ಅನುವಾದಿಸಿಕೊಳ್ಳಬೇಕೆಂಬ ಬಯಕೆ ಉದಯಿಸುತ್ತದೆ, ಪ್ರವೃತ್ತಿ ಮೂಡುತ್ತದೆ. ಒಂದು ಇಂದ್ರಿಯ ವ್ಯಾಪಾರದ ಮೂಲಕ ಆದ ಅನುಭವವನ್ನು ಬೇರೆ ಇಂದ್ರಿಯಗಳಿಗೂ ಹರಡಬೇಕೆಂಬ ಹಂಬಲವು ಬೆಳೆಯುತ್ತದೆ. ಇದನ್ನು ವಿಕಲ್ಪಾಭಿವ್ಯಕ್ತಿವೃತ್ತಿಯೆಂದು ಕರೆಯಬಹುದು. ಇದು ಹೆಚ್ಚು ಹೆಚ್ಚಾಗಿ ವ್ಯಕ್ತಿನಿಷ್ಠವಾದಂತೆಲ್ಲ, ಅನುವಾದವು ಹೆಚ್ಚು ಹೆಚ್ಚು ವಿವರಪೂರ್ಣವಾದಂತೆಲ್ಲ, ವಿಕಲ್ಪಾಭಿವ್ಯಕ್ತಿಯ ಪರಿಣಾಮವೂ ಸಂಪರ್ಕ ಸಾಮರ್ಥ್ಯವೂ ಕಡಿಮೆಯಾಗುತ್ತ ಬರುತ್ತದೆ. ಹೀಗೆ ರಾಗಧ್ಯಾನ ಮೂರ್ತಿಗಳ ನಿರ್ಮಾಣವು ಒಂದು ಇಂದ್ರಿಯ ಕ್ಷೇತ್ರದಲ್ಲಿ ನಡೆಯುವ ಅನುಭವವನ್ನು ಮತ್ತೊಂದು ಇಂದ್ರಿಯ ಮಂಡಲದಲ್ಲಿ ಕಲ್ಪನಾತ್ಮಕವಾಗಿ ಅನುವಾದಿಸಿಕೊಳ್ಳುವ ಅಥವಾ ಪರಿವರ್ತನೆಗೊಳಿಸುವ ಪ್ರಯತ್ನವೆನ್ನಬಹುದು.

ಡಾ. ರಾ. ಸತ್ಯನಾರಾಯಣರವರ ಅಭಿಪ್ರಾಯದ ಪ್ರಕಾರ ''ಮೂರ್ತೀಕರಣತತ್ತ್ವವನ್ನು ರಾಗಗಳಿಗೂ ವಿಸ್ತರಿಸಲಾಯಿತು. ಶ್ರವ್ಯವಾಗಿರುವುದನ್ನು ದೃಶ್ಯವನ್ನಾಗಿಸುವ ಪ್ರಯತ್ನವಿದು. ಶ್ರುತಿ, ಸ್ವರ ಮೊದಲಾದ ಆಂಶಿಕ ದ್ರವ್ಯಗಳಿಗಿಂತ ಹೆಚ್ಚು ಸಾರ್ಥಕವಾದುದು, ಸಫಲವಾದುದು, ತಾಳಮೂರ್ತೀಕರಣಕ್ಕಿಂತ ಹೆಚ್ಚು ಸುಲಭವಾಗಿ ಒಪ್ಪಿಕೊಳ್ಳುವಂತಹುದು. ಸಾರ್ವತ್ರಿಕ ಸಮ್ಮತಿ ಸ್ವೀಕಾರಗಳನ್ನು ಪಡೆಯುವಂತಹದು. ಇದು ಮುಖ್ಯವಾಗಿ ಸೌಂದರ್ಯ ಮಿಮಾಂಸೆಗಿಂತ ಮನೋವೈಜ್ಞಾನಿಕ ಪ್ರಮೇಯವನ್ನು ಒಳಗೊಂಡಿದೆ. ಏಕೆಂದರೆ ಅಮೂರ್ತವನ್ನು ಮೂರ್ತವನ್ನಾಗಿಸುವ. ಅಸ್ಪಷ್ಟವನ್ನು ಸ್ಪಷ್ಟವಾಗಿಸುವ, ಕೇವಲ ಅನುಭವಗಮ್ಯವಾದುದನ್ನು ಬುದ್ಧಿಗಮ್ಯವೂ ಆಗುವಂತೆ ಮಾಡುವ ಪ್ರವೃತ್ತಿಯು ಮಾನವಮಾನಸಕ್ಕೆ ಸಹಜವಾದುದು, ವಿಶಿಷ್ಟವಾದುದು. ಮಾತಿನಲ್ಲಿ ಹೇಳಲಾಗುದುದರಲ್ಲಿ ಮಾತನ್ನು ತೊಡಗಿಸುವ ಬೌದ್ಧಿಕ ಸಾಹಸವೂ ಇದರಲ್ಲಿ ಸೇರಿಕೊಂಡಿದೆ. ಇಂದ್ರಿಯಾಂತರದಲ್ಲಿ ಪ್ರತ್ಯೇಕ್ಷೀಕರಿಸಿಕೊಳ್ಳುವುದರ ಮೂಲಕ ಒಂದು ಅನುಭವದ ಆಯಾಮಗಳನ್ನು ಹೆಚ್ಚಿಸಲೆಳಸುವುದೂ ಮಾನವಕುಲ ಸಾಧಾರಣವಾದ ಪ್ರವೃತ್ತಿಯೆ ಆಗಿದೆ.''[೨೫]

ಹೀಗಾಗಿ ರಾಗಮೂರ್ತೀಕರಣದಲ್ಲಿ ತೊಡಗುವ ಧ್ಯಾನ ಶ್ಲೋಕಗಳೂ ರಾಗಮಾಲಾ ಚಿತ್ರಗಳೂ ಭಾರತೀಯ ಸಂಗೀತದ ದಕ್ಷಿಣೋತ್ತರ ಪ್ರಭೇದಗಳೆರಡರಲ್ಲಿಯೂ ಹದಿನಾರನೆಯ ಶತಮಾನದಿಂದಲೆ ಕಂಡು ಬರುತ್ತವೆ. ಇದು ಕೇವಲ ಚಿತ್ರವಲ್ಲ, ವ್ಯಕ್ತೀಕರಣ ಸಾಧನ, ಎಂಬುದನ್ನು ನೆನಪಿಡಬೇಕು ರಾಗವನ್ನು ಒಬ್ಬ ನಿರ್ದಿಷ್ಟ ವ್ಯಕ್ತಿಯನ್ನಾಗಿ

೨೫. ಇಂಚರ : ಡಾ. ರಾ. ಸತ್ಯನಾರಾಯಣ, ಪುಟ-೧೧೭

ಇಲ್ಲಿ ಇಟ್ಟುಕೊಳ್ಳಲಾಗುತ್ತದೆ. ನಿಸರ್ಗದ ಪರಿಸರದೊಡನೆ ಏಕತಾನವಾಗಿ ಸಮರಸವಾಗಿರುವ ಇಂತಹ ವ್ಯಕ್ತಿಯ ನಿರ್ದಿಷ್ಟ, ಮುಖ್ಯಭಾವವೊಂದನ್ನು ಮೂಡಿಸಲೆಳಸುವುದು ಧ್ಯಾನಶ್ಲೋಕದ ಅಥವಾ ರಾಗಮಾಲಾ ಚಿತ್ರಣದ ಉದ್ದೇಶ. ಪ್ರತಿಯೊಬ್ಬ ವ್ಯಕ್ತಿಗೂ ಇತರರಿಂದ ಪೃಥಕ್ಕರಿಸಿ ನಿರ್ದಿಷ್ಟತೆ, ವೈಶಿಷ್ಟ್ಯ ಮುಂತಾದವುಗಳನ್ನು ಉಂಟು ಮಾಡುವ ಒಂದು ಸ್ಥಾಯೀ ಭಾವವಿರುತ್ತದೆ. ಇದರ ಹಂದರದಲ್ಲಿ ಅವನ ಅಥವಾ ಅವಳ ಭಾವವು ಕಾಲ, ಪರಿಸರ, ಸಂದರ್ಭ ಮುಂತಾದವುಗಳನ್ನು ಅವಲಂಬಿಸಿ ವ್ಯತ್ಯಾಸವಾಗಬಹುದು. ಅಂತೆಯೆ ಸ್ವರಸಂಪತ್ತಿ ಹಾಗೂ ಅದರ ಪ್ರಯೋಗ ವೈಶಿಷ್ಟ್ಯಗಳು, ಗಮಕಗಳು, ಗ್ರಹಾಂಶನ್ಯಾಸಾದಿ ಪ್ರಾಣಗಳು ಮುಂತಾದವುಗಳಿಂದಾಗಿ ಪ್ರತಿಯೊಂದು ರಾಗಕ್ಕೂ ನಿರ್ದಿಷ್ಟವೂ ಪ್ರತ್ಯೇಕವೂ ವಿಶಿಷ್ಟವೂ ಆಗಿರುವ ವ್ಯಕ್ತಿತ್ವವು ಇರುತ್ತದೆ. ಇದನ್ನು ಮನುಷ್ಯ ವ್ಯಕ್ತಿ ಪ್ರತಿ ನಿರ್ಮಾಣದ ರೂಪಕದಿಂದ ಹೇಳುವುದು ರಾಗಮೂರ್ತಿಕರಣದ ತಂತ್ರ. ಆದುದರಿಂದ ಈ ಮುಖ್ಯ, ಸ್ಥಾಯೀ ಭಾವವನ್ನು ಅಭಿವ್ಯಕ್ತಗೊಳಿಸಲು ಅನುಕೂಲಿಸುವ ಚಿತ್ರಣ ತಂತ್ರಗಳನ್ನು ಬಳಸಲಾಗುವುದು. ಹೀಗೆ ನಿಸರ್ಗ ಪರಿಸರಗಳಿಂದ, ಪರಿವಾರ ಪರಿಚರ್ಯಗಳಿಂದ, ಭಂಗಿ, ಗತಿ, ವಾಹನ, ಆಯುಧಗಳು, ಬಣ್ಣ, ರೇಖೆ, ನೆರಳು, ಉಡುಗೆತೊಡುಗೆಗಳು, ಅಲಂಕರಣ ಇತ್ಯಾದಿ ಸಂಕೇತಗಳಿಂದ ಪ್ರತಿಮಾ ನಿರ್ಮಾಣಕಾರ್ಯವು ನಡೆಯುತ್ತದೆ. ಇವುಗಳನ್ನು ವಿಭಾವಗಳೆಂದು ಭಾವಿಸಬಹುದು. ಭಾವ- ಅನುಭಾವಗಳು ಉಪಪ್ರಧಾನವಾಗಿದ್ದು ಸ್ಥಾಯೀಭಾವಕ್ಕೆ ರಸಾನುಭೂತಿಯನ್ನು ಅನ್ವಯಿಸುತ್ತವೆ. ಈ ಚೌಕಟ್ಟಿನಲ್ಲಿ ಸಾಕಷ್ಟು ವಿಸ್ತಾರ ವೈವಿಧ್ಯಗಳಲ್ಲಿ ಸಂಚಾರೀಭಾವಗಳನ್ನು ತುಂಬಲು ಅವಕಾಶವಿರುತ್ತದೆ. ರಾಗದ ಗಾಯನ ವಾದನ ಸಮಯದಲ್ಲಿ, ಅದರ ಅಭಿವ್ಯಕ್ತಿ ಪ್ರವಾಹದಲ್ಲಿ ಈ ಸ್ಥಾಯೀಭಾವದ ಮುಖ್ಯಸ್ತೋತ್ರವೂ ಅನುಭಾವಿ ವಾದಿಗಳ ಉಪಸ್ತೋತ್ರಗಳೂ ರಸೇಂದ್ರಿಗೋಚರಕ್ಕೆ ಬರುವಂತೆ ಮಾಡಲು ಈ ಬಗೆಯ ಧ್ಯಾನ ಶ್ಲೋಕದ ಮನನವು, ಅಥವಾ ರಾಗಮಾಲಾ ಚಿತ್ರದ ಧ್ಯಾನವು ಸ್ಫೂರ್ತಿಯನ್ನು ನೀಡಬಲ್ಲದು. ಏಕೆಂದರೆ ಇಂತಹ ಶ್ರವ್ಯ ಅಥವಾ ದೃಶ್ಯ ವರ್ಣನೆಗಳು ಈ ರಾಗಭಾವ ವ್ಯಕ್ತಿತ್ವದ ಭಾವನಾತ್ಮಕ ಅಂಗಪ್ರತ್ಯಂಗಗಳ ಸಂಕೇತಗಳು. ಶ್ರವ್ಯವಾದುದು ಭಾವ್ಯವಾದಾಗ ಅದನ್ನು ಬೇರೆ ಮಾಧ್ಯಮದಲ್ಲಿ ರಸಾತ್ಮಕವಾದ ಸನ್ನಿವೇಶವನ್ನಾಗಿ ಕಲ್ಪಿಸಿಕೊಂಡು ಅದನ್ನು ವ್ಯಕ್ತೀಕರಿಸಿ, ಉಚಿತವಾದ ಸಂಕೇತ, ಉಪಕರಣ ಮತ್ತು ತಂತ್ರಗಳಿಂದ ಅಭಿವ್ಯಕ್ತಿಗೊಳಿಸುತ್ತದೆ. ರೇಖೆ, ವರ್ಣ, ಪ್ರಕಾಶ ಮತ್ತು ನೆರಳು, ಯಥಾವದ್ದೂರ ನಿರೂಪಣ ಮುಂತಾದ ಸಾಧನಗಳಿಂದ ಮಾಡಿದಾಗ ಇದಕ್ಕೆ ರಾಗಮಾಲಾ ಚಿತ್ರವೆಂಬ ಪಾರಿಭಾಷಿಕ ಸಂಜ್ಞೆಯಿದೆ. ಈ ಬಗೆಯ ಚಿತ್ರಣವು ಕಾಲಕ್ರಮದಲ್ಲಿ ಒಂದು ನಿರ್ದಿಷ್ಟವಾದ ಪರಂಪರೆಯನ್ನೂ ಸಂಪ್ರದಾಯವನ್ನೂ ಬೆಳೆಸಿಕೊಂಡು ಆಮೇಲೆ ಶಾಖೆಗಳಾಗಿ ಒಡೆಯಿತು. ಇವು ರಾಜಪುತ್ರಸ್ಥಾನ, ಮುಘಲ್, ಕಾಂಗ್ರಾ, ಬಂಗಾಲೀ ಮುಂತಾದ ಶೈಲಿಗಳೆಂದು ಪ್ರಸಿದ್ಧವಾಗಿವೆ. ರಾಗಮಾಲಾ ಚಿತ್ರಗಳು ಭಾರತದ ಶಾಸ್ತ್ರೀಯ ಚಿತ್ರಕಲೆಯಲ್ಲಿ ಒಂದು ವಿಶಿಷ್ಟವಾದ ಸ್ಥಾನವನ್ನೂ ಜಗತ್ತಿನ ವಿವಿಧ ಚಿತ್ರಕಲಾ ಶೈಲಿಗಳಲ್ಲಿ ಮಾನ್ಯತೆಯನ್ನೂ ಪಡೆದಿವೆ.

ಧಾರ್ಮಿಕ ಸಂಗೀತದ ಬೆಳವಣಿಗೆಯಲ್ಲಿ ಮಹಿಳೆಯರದು ಗಣನೀಯ ಪಾತ್ರ. ಧಾರ್ಮಿಕ ವಿಧಿಗಳಲ್ಲಿ ಪುರುಷ ಪ್ರಧಾನ ಸಮಾಜದಲ್ಲಿ ಅವರದು ಪ್ರಮುಖ ಪಾತ್ರ. ಇವರು ಆಚರಿಸುವ ಹಬ್ಬ ಹರಿದಿನಗಳ ಧಾರ್ಮಿಕ

ಆಚರಣೆಗಳಿಗೆ ಸಂಬಂಧಿಸಿದ ಹಾಡುಗಳಿವೆ. ಪುರಾಣಗಳಲ್ಲಿ ಹೇಳಿರುವ ಒಂದೊಂದು ವ್ರತಕ್ಕೂ ಸಂಪ್ರದಾಯದ ಹಾಡುಗಳಿವೆ. ಆಯಾ ದೇವರುಗಳಿಗೆ ಸಂಬಂಧಪಟ್ಟಂತೆ ವಿಶೇಷ ಕಟ್ಟಳೆಗಳು ನೈವೇದ್ಯ ವಿಶೇಷ ಪೂಜಾ ವಿಧಿಗಳು ವ್ರತದ ಕಥೆ ಇವುಗಳನ್ನೆಲ್ಲ ಒಳಗೊಳ್ಳುತ್ತವೆ. ಒಮ್ಮೊಮ್ಮೆ ತತ್ವ ಸಂಚಿತಾರ್ಥಗಳನ್ನು ಇವು ಪ್ರತಿಪಾದಿಸುತ್ತವೆ. ಪೂಜೆಯ ಅಂಗವಾಗಿ ಲಾಲಿಗಳು, ಸುಪ್ರಭಾತಗಳು ಮಂಗಳಕರ ಆರತಿಗಳು ಇರುತ್ತವೆ. ಈ ಹಬ್ಬಹರಿದಿನಗಳಲ್ಲದೇ ನಿತ್ಯಪೂಜೆಗೆಂದು ಲಲಿತೆ, ಗಣಪತಿ, ಮೂಕಾಂಬಿಕೆ, ಪಾರ್ವತಿ ಮುಂತಾದ ಪೂಜಾ ವಿಧಿಗಳು ಸ್ತೋತ್ರಗಳು ರಚಿತವಾಗಿವೆ. ಇದೇ ಸಂಬಂಧವಾಗಿ ಉದಯರಾಗ, ತುಳಸಿಪೂಜೆ, ಲಕ್ಷ್ಮೀತುಳಸಿ ಸಂವಾದಗಳು ಅವಾಹನೆಯಂದು ದೇವತೆಯನ್ನು ವಿಸರ್ಜಿಸುವ ಮುನ್ನ ಸೋಗು ಇಡುವುದು ಬೀಳ್ಕೊಡುವುದು ಮುಂತಾದವುಗಳು ಹಾಡಿನ ರೂಪದಲ್ಲಿ ದೊರೆಯುತ್ತದೆ. ಭೀಮನಮವಾಸ್ಯೆ, ಬಲಿಪಾಡ್ಯ, ವಿನಾಯಕ ಚೌತಿ, ನಾಗರಪಂಚಮಿ, ಯುಗಾದಿ ಇತ್ಯಾದಿ ಹಬ್ಬಗಳ ಎಲ್ಲ ವಿವರಗಳಿಗೂ ಪ್ರತ್ಯೇಕವಾಗಿ ಸಂಪ್ರದಾಯದ ಹಾಡುಗಳಿವೆ. ಹೀಗೆ ಧರ್ಮ ಮತ್ತು ಸಂಗೀತಕ್ಕೆ ಇರುವ ಸಂಬಂಧ ಕುಂದಗೋಳ ಪರಿಸರದಲ್ಲೂ ಕಾಣಬಹುದಾಗಿದೆ.

### ೪.೨. ಸಂಗೀತ ಮತ್ತು ಶಿಲ್ಪ ಕಲೆಗಳ ನಡುವಿನ ಸಂಬಂಧ

ಸಂಗೀತ ಅಮೂರ್ತ ಸಂಚಾರಿ ಎಂದಾದರೂ ಹಾಡುಗಾರ ತನ್ನ ಗಾಯನ ಪ್ರಸ್ತುತಿ ಸಂದರ್ಭದಲ್ಲಿ ಹಾವ ಭಾವಗಳ ಮೂಲಕ ಅದಕ್ಕೊಂದು ರೇಖಾತ್ಮಕ ರೂಪ ವಿನ್ಯಾಸದ ಅಭಿವ್ಯಕ್ತಿ ನೀಡಲು ಯತ್ನಿಸಿರುತ್ತಾನೆ. ರಾಗಾಲಾಪನೆಯ ಪ್ರಕ್ರಿಯೆಯಲ್ಲಿ ಅವನ ನೋಟ ಮತ್ತು ಭಂಗಿಗಳಿಂದ ಹೊರಹೊಮ್ಮುವ ಅಸಂಖ್ಯ ರೇಖೆಗಳು ಸುಂದರವಾದ ಕಾಲ್ಪನಿಕ ಚಿತ್ರವನ್ನು ನೇಯುತ್ತಿರುತ್ತವೆ. ಮುಖದ ಮೇಲಿನ ಭಾವಾಭಿವ್ಯಕ್ತಿಗಳು ನರ್ತಿಸುವ ಹಸ್ತಗಳು, ಕೆತ್ತುವ ಶಿಲ್ಪಗಳ ಹಾಡಿನ ರಾಗಕ್ಕೆ ಅನುಭವಿಸುತ್ತಿರುವ ನಾದ ರಸ ಸುಖಕ್ಕೆ ಅನುಗುಣವಾಗಿ ಮೂಡುತ್ತವೆ. ಕಾಲದಲ್ಲಿ ಗತಿಶೀಲವಾಗಿರುವ ಲಯವು ತನ್ನ ವಿಲಂಬಿತ ಅಥವಾ ತೀವ್ರಗತಿಗೆ ಪೂರಕವಾಗಿ ಶ್ರೋತೃಗಳ ಕಲ್ಪನೆಯಲ್ಲಿ ಹರಿಯುವ ನದಿಯನ್ನು, ತೇಲುವ ಮೋಡವನ್ನು ಬಳುಕುವ ಬಳ್ಳಿಯನ್ನು ಹಾರುವ ಹಕ್ಕಿಯ ಚಲುವನ್ನು ಸಮುದ್ರದ ಘೋಷವನ್ನು ದಟ್ಟಕಾಡಿನ ಹಸಿರು ಕಣಿವೆಯನ್ನು ಕಟ್ಟಿಕೊಳ್ಳಬಲ್ಲದು. ಹಾಡಿನಿಂದ ಹೊಮ್ಮುವ ಅಘೋಚರ ತೆರೆಗಳು ಕಟ್ಟಿಕೊಡುವ ಚಿತ್ರಗಳು ಅಸಂಖ್ಯ. ಜೀವನದ ಸುಖ ದುಃಖದ ಕ್ಷಣ ಅನುಭವಿಸಿ ಅದಕ್ಕೆ ಸೂಕ್ತವಾದ ಭಾವಾಭಿನಯವು ತನ್ನ ಗಾಯನ ಶೈಲಿಯಲ್ಲಿ ಪ್ರಕಟಿಸುವ ಹಾಡುಗಾರರು ಗಾನಶಿಲ್ಪಗಳೇ ಆಗಿರುತ್ತಾರೆ.

''ಕುಮಾರ ಗಂಧರ್ವರ ಹಾಡುಗಾರಿಕೆಗೆ ಫ್ರಾನ್ಸಿನ ಚಿತ್ರಕಲೆಯಲ್ಲಿ ಹೊಸದಾಗಿ ಪ್ರಕಟವಾದ ಪೇಂಟಿಂಗ ಶೈಲಿ ಉತ್ತಮ ಉದಾಹರಣೆಯಾಗಿದೆ. ಸ್ಟುಡಿಯೋದಿಂದ ಹೊರಗೆ ಬಂದು ತೆರೆದ ಬೈಲಿನಲ್ಲಿ ತಾವು ನೋಡುತ್ತಿರುವ ಅನುಭವಿಸುತ್ತಿರುವ ಹಾಗೇನೆ ಪೇಂಟ ಮಾಡುವ ಒಂದು ಪ್ರಯೋಗ ಸಹಜ ಬೆಳಕು ಚಲಿಸಿದಂತೆ ವಸ್ತುವಿನ ತೋರಿಕೆಯಲ್ಲೂ ಬದಲಾಗುತ್ತ ಹೋಗುತ್ತದೆ. ಸೂರ್ಯನ ಬೆಳಕಿಗೆ ಅನುಸಾರವಾಗಿ ಗದ್ದೆಯಲ್ಲಿನ ಧಾನ್ಯರಾಶಿ

ಬೇರೆ ಬೇರೆ ದೃಶ್ಯಾನುಭವವನ್ನು ನೀಡುತ್ತದೆ. ಇಂಪ್ರೆಶನಿಸ್ಟ ಶೈಲಿಯ ಮಿತಿಯೇ ಅದರ ವೈಶಿಷ್ಟ್ಯವೂ ಆಗಿದೆ. ಈ ಶೈಲಿಯಲ್ಲಿ ಚಿತ್ರ ಬರೆಯಲು ಕ್ಯಾನವಾಸ್ ಚಿಕ್ಕದಿರಬೇಕು ದೊಡ್ಡ ಕ್ಯಾನವಾಸ್ ತೆಗೆದುಕೊಂಡರೆ ಕೆಲಸ ಮುಗಿಯುವದರೊಳಗೆ ಸೂರ್ಯ ಮುಂದೆ ಚಲಿಸಿರುತ್ತಾನೆ. ಬಣ್ಣ ಹಾಕುತ್ತಿರುವಾಗಲೇ ಬೆಳಕು ದಾಟಿ ಹೋಗುತ್ತದೆ. ಚಿತ್ರಕಲೆಯ ಈ ಶೈಲಿ ಕುಮಾರ ಗಂಧರ್ವರ ಹಾಡುಗಾರಿಕೆಗೆ ಅನ್ವಯಿಸಬಹುದಾಗಿದೆ. ಚಿಕ್ಕವರಿರುವಾಗಲೇ ಕ್ಷಯ ರೋಗ ತಗಲಿ ಶಾರೀರಿಕ ಮಿತಿಗೊಳಗಾದ ಗಾಯಕ ಕುಮಾರ ಗಂಧರ್ವ ಅಂದಿನ ಚಿಕಿತ್ಸೆ ಪ್ರಕಾರ ಶ್ವಾಸಕೋಶಕ್ಕೆ ಕ್ಷಯ ತಗುಲಿದರೆ ಅದರ ಗಾತ್ರವನ್ನೇ ಮೊಟಕುಗೊಳಿಸುತ್ತಿದ್ದರು. ಹೀಗೆ ಮೊಟಕು ಆಗಿ ಆಗಿ ಅವರ ಒಂದು ಶ್ವಾಸಕೋಶ ಪೂರ್ತಿ ಹೋಗೇ ಬಿಟ್ಟಿತು. ಒಂದೇ ಶ್ವಾಸಕೋಶದಿಂದ ಜೀವಿಸಿಕೊಂಡಿದ್ದ ಕುಮಾರ ಗಂಧರ್ವರಿಗೆ ಅಂಥದ್ದೇನು ಧಮ್ಮ ಸಾಸ ಇರಲಿಲ್ಲ ಹೆಚ್ಚೆಂದರೆ ಮಂದ್ರ ಪಂಚಮದಿಂದ ತಾರ ಗಾಂಧಾರದವರೆಗೆ ಇಷ್ಟೂ ಹೆಚ್ಚೆಂದರೆ ಮಧ್ಯಮವನ್ನು ಅರೆಕ್ಷಣ ಸ್ಪರ್ಶಿಸಬಲ್ಲ ಅವರ ಸ್ವರ ಎಂದೂ ಕೂಡಾ ಮಂದ್ರ ಮಧ್ಯಮಕ್ಕೆ ತಾಕುವಂತೆ ಇರಲಿಲ್ಲ. ಹಾಗಾಗಿ ಅವರ ಹಾಡಿನ ಶೈಲಿಯೆಂದರೆ ಇಂಪ್ರೆಶನಿಸ್ಟ ಪೇಂಟಿಂಗ್ ಇದ್ದಂತೆ''[೬] ಎಂದು ಶ್ರೀ ಭಾಸ್ಕರ ಚಂದಾವರಕರ ನುಡಿದಿದ್ದಾರೆ.

ವ್ಯಾನಘೋ ಪೇಂಟಿಂಗನ್ನು ಹತ್ತಿರದಿಂದ ವೀಕ್ಷಿಸಿದರೆ ಕೆಂಪು ಬಣ್ಣ, ಪಕ್ಕದಲ್ಲೆ ಹಸಿರು ಬಣ್ಣ, ಕೆಂಪು ಹಸಿರು ಹೀಗೆ ದೂರದಿಂದ ನೋಡಿದರೆ ಈ ಎರಡೂ ಬಣ್ಣಗಳು ಕಣ್ಣನ್ನು ತಲುಪಿ ಬೇರೆ ತೆರನಾದ ವಿಶೇಷ ಆಕೃತಿಯಾಗಿ ಕಾಣುತ್ತದೆ. ಕುಮಾರ ಗಂಧರ್ವರು ತಮ್ಮ ಹಾಡಿನಲ್ಲಿ ಬಳಸುವುದು ಇಂಥಾ ಒಳಮಾರ್ಗವನ್ನೇ. ಒಂದು ಸ್ವರ ಅದರ ಪಕ್ಕದಲ್ಲಿ ಇನ್ನೊಂದು ಸ್ವರ, ದೀರ್ಘವಲ್ಲದ ಪುಟ್ಟ ಪುಟ್ಟ ಸ್ವರಕಟ್ಟುಗಳು ಸ್ಪಷ್ಟವಾಗಿ ದಿಟ್ಟವಾಗಿ ಅಚ್ಚು ಹೊಡೆದಂತೆ ನಿಲ್ಲುತ್ತವೆ. ಸಣ್ಣ ತಾನ್‌ನಲ್ಲಿಯೂ ಪ್ರತಿ ತಾನ್ ಕೂಡಿ ಶುಭ್ರ ಸ್ಪಟಿಕದಂತೆ ಕಂಗೊಳಿಸುತ್ತದೆ. ಒಂಟೊಂಟಿ ಸ್ವರಗಳ ಮೇಲು ಅಪರಿಮಿತಿ ಹಿಡಿತ ಗಂಧರ್ವರ ಸಾಧನೆಯಾಗಿದೆ. ತನ್ನ ಸ್ವರಕ್ಕೆ ರೇಂಜ ಇಲ್ಲವೆಂದೂ ದಮ್ಮ ಸಾಸ ಇಲ್ಲವೆಂದೂ ಒಂದು ಪ್ರಸ್ತಾರವನ್ನು ಬಹಳ ಹೊತ್ತು ಹಿಡಿದು ನಿಲ್ಲಿಸಿಕೊಳ್ಳುವ ಶಕ್ತಿ ತನಗಿಲ್ಲವೆಂದು ಸ್ವತ ತಿಳಿದಿರುವದರಿಂದಲೇ ಈ ವಿಶಿಷ್ಟ ಶೈಲಿ ಬಳಸಿಕೊಂಡವರು ಕುಮಾರ ಗಂಧರ್ವ.

ಇಂಪ್ರೆಶನಿಸ್ಟ್ ಶೈಲಿಯ ಬಳಿಕ ಬಂದದ್ದು ಪ್ಯಾಂಟ ಸಿಕ್ ಚುಕ್ಕಿ ಚಿತ್ರ ಶೈಲಿ, ಕುಮಾರ ಗಂಧರ್ವರ ಗಾಯನ ಶೈಲಿಯಲ್ಲಿ ಈ ಹೋಲಿಕೆಯು ಕಾಣುತ್ತದೆ. ಚಿಕ್ಕಿಗಳನ್ನು ಜೋಡಿಸಿದಂತೆ ಸ್ವರ ಬಿಂದುಗಳನ್ನು ಜೋಡಿಸಿ ಮಿರಿ ಮಿಂಚಿಸಿ ಮಾಯವಾಗಿಸುವ ಅವರ ಮಾಂತ್ರಿಕ ಹಾಡುಗಾರಿಕೆಯನ್ನು ಗ್ರಹಿಸುತ್ತ ಹೋದಂತೆ ಶ್ರೋತೃವಿನ ಮನದಲ್ಲಿ ಅನೂಹ್ಯವಾದದ್ದೊಂದು ಅನುಭಾವ ಕೃತಿಯ ದರ್ಶನವಾಗುತ್ತದೆ. ಪ್ರತಿ ಸ್ವರಕ್ಕೂ ಒಂದು ಆಕೃತಿ ಇದೆ. ಆ ಆಕೃತಿಯ ಕೇಂದ್ರದೆಡೆಗೆ ಚಲಿಸುವುದೇ ಸಂಗೀತಗಾರನ ಗುರಿಯಾಗಬೇಕು. ನಾನು ರಿಯಾಜ ಮಾಡುವುದೇ ಈ ನಮೂನೆಯಲ್ಲಿ ಒಮ್ಮೆ ಆರಂಭಿಸಿದೊಡನೆ ಸ್ವರ ನನ್ನ ಕಂಠದ ಕೇಂದ್ರದಲ್ಲಿ ಚಲಿಸುತ್ತಿರುತ್ತೆ. ಇದೆಲ್ಲ ಕೇವಲ

---

೨೬. ಸಂಗೀತ ಸಂವಾದ : ಶ್ರೀ ಭಾಸ್ಕರ ಚಂದಾವರಕರ್, ಪುಟ-೧೩೬

ಭೌತಿಕ ವಿವರಣೆಯಲ್ಲ. ವೈದ್ಯನ ಹತ್ತಿರ ಹೋಗಿ ಕೇಳಿದರೆ ಸ್ವರೋತ್ಪತ್ತಿಯ ವೈಜ್ಞಾನಿಕ ವಿವರಣೆಯೇನೋ ಪುಟಗಟ್ಟಲೆ ಸಿಕ್ಕೀತು. ಆದರೆ ಕಂಠದ ಮಧ್ಯದಲ್ಲಿ ಸ್ವರ ಒಂದು ಸಂಚರಿಸುತ್ತ ಹೋಗುವ ವಿಧಾನ ಮುಂತಾದ ಯಾವ ವಿವರವೂ ನಮಗೆ ಸಿಗಲಾರದು ಎಂದು ಗಂಧರ್ವರು ಆಗಾಗ ಹೇಳುತ್ತಿದ್ದರು. ಬಣ್ಣದ ತಟ್ಟೆ ಹಿಡಿದು ಚಿತ್ರ ಬಿಡಿಸುತ್ತ ಹಿಂದೆ ಸರಿದು ಮುಂದೆ ಬಂದು ಬಣ್ಣ ಕಲೆಸಿ ಚಿತ್ರ ಮೂಡಿಸಿದಂತೆ ಒಂದು ರಾಗವನ್ನು ಹಂತ ಹಂತವಾಗಿ ಬೆಳೆಸುತ್ತ ಬೆಳಕು ಚೆಲ್ಲುತ್ತ ಅದರ ಜೀವನಾಡಿಯನ್ನು ದರ್ಶಿಸಬಲ್ಲ ಕುಮಾರ ಗಂಧರ್ವರ ಶೈಲಿ ಅಸಾಧಾರಣವಾದದ್ದು.

ಪ್ರಸಿದ್ಧ ಗಾಯಕರಾಗಿದ್ದ ಹದ್ದುಖಾನ್ ಮತ್ತು ಹಸ್ಸುಖಾನರ ಅನುಭವ ವಿಶಿಷ್ಟವಾಗಿದೆ ಅವರ ಸುತ್ತಲೂ ಇರುವ ಹಲವಾರು ದಂತ ಕಥೆಗಳಲ್ಲಿ ಇದೂ ಒಂದು. ಈ ಖಾನ್ ಸಹೋದರರು ತಮ್ಮ ತಾರುಣ್ಯದಲ್ಲೊಮ್ಮೆ ಆಗ್ರಾಕ್ಕೆ ಹೋದರು. ಆಗ್ರಾಕ್ಕೆ ಹೋದರೆ ತಾಜಮಹಲನ್ನು ನೋಡಲೇಬೇಕೆಂದು ಯಾರೋ ಅವರಿಗೆ ಹೇಳಿದರು. ಅದೃಷ್ಟವಶಾತ್ ಶುಕ್ಲ ಪಕ್ಷದಲ್ಲಿ ಹೊರಟಿದ್ದೀರಿ ಕೆಲದಿನ ಅಲ್ಲುಳಿದು ಬೆಳದಿಂಗಳ ರಾತ್ರಿಯಂದು ತಾಜಮಹಲ್ ನೋಡಿರಿ ಅದೊಂದು ಅತ್ಯದ್ಭುತ ನೋಟ ಸಹೋದರರಿಬ್ಬರು ಬೆಳದಿಂಗಳಿಗಾಗಿ ಕಾದು ಕೂತು ತಾಜಮಹಲ್‌ನ್ನು ನೋಡಿದರು. ಚಂದ್ರಕಾಂತಿಯಲ್ಲಿ ದಿವ್ಯವಾಗಿ ಕಂಗೊಳಿಸುವ ಆ ವಾಸ್ತವನ್ನು ನೋಡಿ ಬೆರಗಾದ ಹಸ್ಸುಖಾನ್ ಹದ್ದುಖಾನ್‌ನ ಬಳಿ ದೇಖೊ ಭಾಯಿ ಓ ಗುಂಬಜ್ ಐಸೆ ಚಮಕ್ ರಹಾ ಹೈ ಜೈಸೆ ಮೇರೆ ತಾನ್ ಕಾ ಏಕ್ ದಾನಾ ರಖಾ ಹೈ (ನೋಡು ಆ ಗುಂಬಜ್ ಹೇಗೆ ಮಿನುಗುತ್ತಿದೆ. ನನ್ನ ತಾನ್‌ನ ಒಂದು ದಾನಾವನ್ನೇ ಎತ್ತಿಟ್ಟಂತಿದೆ) ಇದರಿಂದ ಮನದಟ್ಟಾಗುವ ಸಂಗತಿ ಎಂದರೆ ವಾಸ್ತು ಮತ್ತು ಸಂಗೀತದ ನಡುವಿನ ಸಂಬಂಧ ಅನ್ಯೋನ್ಯವಾದದ್ದೆಂದು ಘನ ಗಂಭೀರ ಸಾಧನೆಯ ಬಳಿಕ ಒಬ್ಬ ಸಾಧಕನಿಗೆ ತನ್ನ ತಾನೆ ಮೂಡುವ ಅನನ್ಯ ಆತ್ಮವಿಶ್ವಾಸವನ್ನು ಸಾಧನೆಯ ಶಿಖರವೇರಿ ಸಾಕ್ಷಾತ್ ಕರಿಸಿಕೊಂಡ ಸಂಗೀತದ ಒಂದು ನಿರ್ದಿಷ್ಟ ರೂಪ ಯಾವುದೋ ಕಲೆಯ ಅಂತಹದೇ ಉತ್ತುಂಗ ಸಾಧನೆಯೊಂದಿಗೆ ಏಕಾಗುವುದನ್ನು ಅದು ಹೇಳುತ್ತದೆ. ವಾಸ್ತು ಕಲೆಯೆಂದರೆ ಸಂಗೀತದ ಘನರೂಪವೆಂದು ಈ ಅರ್ಥದಲ್ಲೇ ಹೇಳಿರುವುದು. ಕುಂದಗೋಳ ಪರಿಸರದ ದೇವಾಲಯದ ಶಿಲ್ಪಗಳೂ ಮತ್ತು ಅಲ್ಲಿ ನಿರಂತರ ನಡೆಯುವ ಸಂಗೀತೋತ್ಸವಗಳನ್ನು ಪರಿಶೀಲಸಬಹುದು.

## ವಿಠಲ ಮಂದಿರ

ಕುಂದಗೋಳದ ಕಿಲ್ಲೆಯಲ್ಲಿರುವ ವಿಠಲ ಮಂದಿರಕ್ಕೆ ಸುಮಾರು ೩೦೦ ವರ್ಷಗಳ ಪ್ರಾಚೀನ ಇತಿಹಾಸವಿದೆ. ಇಲ್ಲಿ ವರ್ಷಂಪ್ರತಿ ನಡೆಯುವ ದಿಂಡಿ ಮಹೋತ್ಸವವು ಭಕ್ತಿ ಪಂಥದ ಚಳುವಳಿ ಸಂದರ್ಭದಲ್ಲಿ ಕರ್ನಾಟಕ ಮತ್ತು ಮಹಾರಾಷ್ಟ್ರಗಳ ನಡುವೆ ಸಂಬಂಧ ಸೇತುವೆಯಾಗಿ ನಿಂತಿರುವುದನ್ನು ಗಮನಿಸಬಹುದಾಗಿದೆ.

೧೩ ರಿಂದ ೧೭ ನೇ ಶತಮಾನದವರೆಗೆ ಮಹಾರಾಷ್ಟ್ರದಲ್ಲಿ ನಡೆದ ಭಾಗವತ ಚಳುವಳಿಗೆ ವಾರಕರಿ ಸಂಪ್ರದಾಯವೆಂದು ಕರೆಯುತ್ತಾರೆ. ಪಂಡರಾಪುರದ ವಿಠೋಬ ಆ ಸಂಪ್ರದಾಯದ ದೇವರು. ವಿಠಲನ ದರ್ಶನಕ್ಕೆ

ದೂರ ದೂರ ಊರಿಂದ ಕಾಲನಡಿಗೆಯಲ್ಲಿ ಬರುತ್ತಾ ಅಭಂಗಗಳನ್ನು ಹಾಡುತ್ತಾ ಬರುವ ಯಾತ್ರಿಕರಿಗೆ ವಾರಕರಿಗಳು ಎಂದು ಹೆಸರು. ಅಂದರೆ ಯಾತ್ರೆ ಮಾಡುವವರು ಎಂದರ್ಥ. ಸಾಮಾನ್ಯವಾಗಿ ಒಂದು ವರ್ಷದಲ್ಲಿ ಭಕ್ತರು ಎರಡು ಬಾರಿ ಈ ಪರಿಯಾಗಿ ಯಾತ್ರೆಗೆ ಹೋಗುವುದು ಧಾರ್ಮಿಕ ಸಂಪ್ರದಾಯವಾಗಿದೆ. ಎಲ್ಲ ಜಾತಿಯ ಜನರು ಈ ಯಾತ್ರೆಯ ಸಂಕೀರ್ತನೆಯಲ್ಲಿ ಪಾಲ್ಗೊಳ್ಳುತ್ತಾರೆ. ಆದ್ದರಿಂದ ಈ ಸಂಕೀರ್ತನೆಯು ಜಾತಿ, ಮತ, ಭಾಷೆ ಮತ್ತು ಪ್ರಾದೇಶಿಕತೆಯನ್ನು ಮೀರಿದ ಭಾವೈಕ್ಯತೆಯ ಸಂಕೇತವಾಗಿದೆ. ವಿಠಲ ಮೂರ್ತಿ ಕೈಯಲ್ಲಿ ಶ್ರೀವಿಷ್ಣು ಚಕ್ರ ಮತ್ತು ಕಮಲವಿದೆ. ವಿಷ್ಣು ಚಕ್ರವು ಜಗತ್ತಿನ ಚಲನಶೀಲತೆಗೆ ಮತ್ತು ದುಷ್ಟರ ಸಂಹಾರಕ್ಕೂ ಕಮಲವು ಜೀವ ಸೃಷ್ಟಿಯ ಸಂಕೇತವಾಗಿದೆ. ಮೂರ್ತಿಯ ಶಿರದ ಮೇಲೆ ಶಿವಲಿಂಗವಿದೆ. ಆದ್ದರಿಂದ ಇದು ಶೈವ ವೈಷ್ಣವರಿಬ್ಬರಿಗೂ ಪೂಜ್ಯ ಭಾವವಾಗಿದೆ. ಭಕ್ತರು ಭಗವಂತನನ್ನು ಪ್ರೇಮ ಸ್ವರೂಪಿಯಾಗಿ ಕಾಣುತ್ತಾರೆ. ಕತ್ತಿನಲ್ಲಿ ತುಳಸಿ ಮಾಲೆ, ಕೈಯಲ್ಲಿ ಧ್ವಜ, ಹಣೆಯಲ್ಲಿ ಗೋಪಿಚಂದನ ಮತ್ತು ಕಪ್ಪು ಚುಕ್ಕಿ ಇವು ಅವರ ವೇಷಭೂಷಣವಾಗಿರುತ್ತದೆ. ರಾಮಕೃಷ್ಣ ಅವರ ಜಪ ಇವರಿಗೆ ಪೂಜ್ಯಗ್ರಂಥ ಜ್ಞಾನೇಶ್ವರಿ ಮತ್ತು ಅಭಂಗಗಳ ಕರ್ನಾಟಕ ಅನೇಕ ದೇವಾಲಯಗಳಲ್ಲಿ ಈ ಅಭಂಗಗಳನ್ನು ಸಂಗೀತಮಯವಾಗಿ ಹಾಡುವ ಪರಂಪರೆ ಇದೆ. ಈ ಭಾಗವತ ಚಳುವಳಿಯಲ್ಲಿ ಬ್ರಾಹ್ಮಣರಿಂದ ಮೊದಲುಗೊಂಡು ಹಲವಾರು ಜಾತಿಯ ಭಕ್ತರು ಭಾಗವಹಿಸುತ್ತಾರೆ. ಭಾಗವತ ಚಳುವಳಿಯ ಗುಂಪಿನಲ್ಲಿ ಬ್ರಾಹ್ಮಣರು, ಸಿಂಪಿಯಾದ ನಾಮದೇವ, ಕುಂಬಾರನಾದ ಗೋಶ, ತೋಟಿಗನಾದ ಸಾವಸ, ಕ್ಷೌರಿಕನಾದ ಸೇನ, ಕುಂಬಿಯಾದ ತುಕಾರಾಮ, ಮರ್ ಜಾತಿಗೆ ಸೇರಿದ ಚೌಕಮೇಲಾ ಇವರೆಲ್ಲ ಒಟ್ಟಿಗೆ ಸೇರಿರುತ್ತಾರೆ. ದೀನದಲಿತರಲ್ಲಿ ಪ್ರೀತಿ ವಿಶ್ವಾಸ, ಔದಾರ್ಯ, ಜಾತಿ ಪದ್ಧತಿ ಖಂಡನೆ, ದೈವ ಭಕ್ತಿ, ಸಮಾನತೆ, ಮೇಲ್ವರ್ಗದವರ ವಿಡಂಬನೆಯ ಧ್ವನಿಗಳು ಅವರ ಅಭಂಗಗಳಲ್ಲಿ ಸ್ಪಷ್ಟವಾಗಿ ಕಾಣುವ ವಿಷಯ ವಸ್ತುಗಳಾಗಿವೆ. ವಾರಕರಿ ಭಕ್ತಿ ಚಳುವಳಿ ಧಾರ್ಮಿಕ ಸುಧಾರಣಾ ಚಳುವಳಿಯಾಗಿದೆ. ವಾರಕಾರಿಗಳು ಹಾಡಿದ ಭಕ್ತಿಗೀತೆಗಳಮುಖ್ಯ ಉದ್ದೇಶ ಫಂಡರಾಪುರದ ವಿಠಲನ ಕಾರುಣ್ಯವನ್ನು ಪಡೆಯುವದೇ ಆಗಿದೆ. ಭಕ್ತಿ ಚಳುವಳಿಗಳು ಮಹಾರಾಷ್ಟ್ರ ಮತ್ತು ಕರ್ನಾಟಕದ ಹಳ್ಳಿಗಳಲ್ಲಿ ದೈವ ಭಕ್ತಿಯನ್ನು ಪ್ರಸಾರ ಮಾಡುವದಿಂದಾಗಿಯೂ ಅದನ್ನು ತನ್ಮಯತೆಯಿಂದ ಮಾಧುರ್ಯದಿಂದ ನಿವೇದಿಸುವ ಶ್ರಮದಿಂದಾಗಿಯೂ ಸಂಗೀತ ಪರಿಸರ ಹುಟ್ಟಿ ಬೆಳೆಯಲು ಕಾರಣೀಭೂತವಾಯಿತು.

ವಾರಕರಿ ಭಕ್ತಿ ಪಂಥದಲ್ಲಿ ಎಲ್ಲ ಜಾತಿಯ ಜನ ಒಂದುಗೂಡಿ ಕಾಲುನಡಿಗೆಯಿಂದ ಸಾಮೂಹಿಕವಾಗಿ ಭಗವಂತನ ಕೀರ್ತನೆ ಮಾಡುತ್ತ ಫಂಡರಾಪುರಕ್ಕೆ ದಿಂಡಿ ಹೋಗುವ ಸಂಪ್ರದಾಯವಿದೆ. ಫಂಡರಾಪುರದ ಯಾತ್ರೆ ಬಹಳ ಜನ ಭಕ್ತರು ಒಂದೆಡೆ ತಮ್ಮೆಲ್ಲ ಭೇದಭಾವಗಳನ್ನು ಮೀರಿ ಸಂಗೀತದಲ್ಲಿ ಸೇರುವಂತೆ ಮಾಡಿದ ನಾದ ತೀರ್ಥ ಕ್ಷೇತ್ರವೂ ಹೌದು. ಜ್ಞಾನದೇವ, ನಾಮದೇವ, ತುಕಾರಾಮ ಹಾಗೂ ಏಕನಾಥರು ಜನಸಾಮಾನ್ಯರ ಭಾಷೆಯಲ್ಲಿ ಹಾಡುವುದನ್ನು ಕೀರ್ತನೆ ಮಾಡುವುದನ್ನು ಕೇಳಿ ದಿಗ್ಭ್ರಮೆಗೊಂಡರು. ಓವಿ, ಅಭಂಗ, ಕಠಾನ, ದಿಂಡಿ ಮತ್ತು ಸಾಕಿ ಎಂಬ ಪ್ರಕಾರಗಳಲ್ಲಿ ರಚನೆಯಾದ ಸಂತರ ಈ ಕೀರ್ತನೆಗಳು ಹಳ್ಳಿಯ ಜನರ ಭಕ್ತಿ ಮತ್ತು ಸಂಗೀತದ

ಮೇಲೆ ಅಗಾಧ ಪ್ರಭಾವ ಬೀರಿದವು. ಇದನ್ನು ಕೇಳಲು ಜನರು ಸೇರುತ್ತಿದ್ದರು. ಓದಲೂ ಬರೆಯಲೂ ಬಾರದ ಅನಕ್ಷರಸ್ಥರು, ಮುಸುರೆ ತೊಳೆಯುವರು, ದನ ಕಾಯುವರು, ಕೀರ್ತನೆಗಳನ್ನು ಹಾಡುವಂತಾಯಿತು.

ಸಂಗೀತದ ಮೂಲಕ ಮುಂದುವರೆದ ಈ ಭಕ್ತಿ ಪರಂಪರೆ ಕುಂದಗೋಳದ ವಿಠಲ ದೇವರ ದಿಂಡಿಮಹೋತ್ಸವವಾಗಿ ಆಚರಿಸಲ್ಪಡುತ್ತದೆ. ಹಳೆಯ ಮಣ್ಣಿನ ದೇಗುಲವನ್ನು ಕೆಡವಿ ಅದೇ ಜಾಗದಲ್ಲಿ ಮೂಲ ವಾಸ್ತುಶಿಲ್ಪವನ್ನು ಇಟ್ಟುಕೊಂಡು ಮಂದಿರದ ಜೀರ್ಣೋದ್ಧಾರ ಮಾಡಿದ್ದಾರೆ. ಪಂಡರಪುರದಿಂದ ತಂದ ಸುಂದರವಾದ ವಿಠಲ, ರಖುಮಾಯಿ ಮತ್ತು ಸತ್ಯಭಾಮಿನಿಯ ಮೂರ್ತಿಗಳನ್ನು ಸ್ಥಾಪಿಸಿದ್ದಾರೆ. ಮೂರ್ತಿಸ್ಥಾಪನೆಯ ಸ್ಮರಣಾರ್ಥ ಚತುರ್ಥಶಿಯ ದಿವಸ ಎಲ್ಲ ಸಂತರೂ ಭಕ್ತರೂ ಸೇರಿ ಜಾಗರಣೆ ಮಾಡಿ ಮರುದಿನದ ಹುಣ್ಣಿಮೆಯಂದು ದಿಂಡಿ ಉತ್ಸವ ಹೊರಟು ಮಧ್ಯಾನ್ಹ ಫಂಡರಪುರದ ಕಲಾತಿಥಿಯ ಸಂದರ್ಭದಲ್ಲೇ ಇಲ್ಲಿಯೂ ಸಂಗೀತೋತ್ಸವ ನೆರವೇರುವುದು.

ಗೌರಿ ಹುಣ್ಣಿಮೆಯ ಬೆಳಗಿನ ಜಾವ ಕಾಕಡಾರತಿಯಾದನಂತರ ದಿಂಡಿ ಉತ್ಸವ ಹೊರಡುವುದು. ದಾರಿಯ ನಡುವೆ ಅಲ್ಲಲ್ಲಿ ನಿಲ್ಲುವ ಸಂತರು ಮತ್ತು ಭಕ್ತರು ಭಜನೆ ಮತ್ತು ಜೋಹಾರಗಳನ್ನು ತನ್ಮಯತೆ ಮತ್ತು ಆವೇಶದಿಂದ ಹಾಡುತ್ತಾರೆ. ಹೀಗೆ ಹಾಡಿನ ಮೂಲಕ ವಿಠಲನ ನಾಮಸ್ಮರಣೆಯಿಂದ ದೈವಿಕತೆಯನ್ನು ಆಹ್ವಾನೆ ಮಾಡಿಕೊಂಡು ನಗರ ಪ್ರದಕ್ಷಿಣೆ ಮಾಡಿಕೊಂಡು ಗುಡಿಗೆ ಮಧ್ಯಾಹ್ನ ಬಂದು ಸಂತ ಪೂಜಾ ಹಾಗೂ ಕಾಲಾ ಗಡಿಗೆ ಒಡೆಯುವ ಕಾರ್ಯಕ್ರಮ ನಡೆಯುತ್ತದೆ. ಇದು ಕೃಷ್ಣನ ಬಾಲ್ಯಲೀಲೆಯನ್ನು ನಾದಮಯವಾಗಿ ಅಭಿನವಿಸುವ ಭಕ್ತಿ ಪ್ರಧಾನ ಪ್ರಸಂಗವಾಗಿದೆ.

ವಿಠಲ ಮಂದಿರದಲ್ಲಿ ಸಂಘಟಿಸಿದ ಭಜನಾ ಮಂಡಳಿಯನ್ನು ಸ್ಥಳೀಯ ಜಮೀನುದಾರರೂ ಸಂಗೀತ ಪ್ರಚಾರಕರೂ ಆಗಿರುವ ಶ್ರೀ ನಾನಾಸಾಹೇಬ ನಾಡಗೀರವರು ಪ್ರತಿಷ್ಠಾಪಿಸಿದ್ದರು. ನಾನಾ ಸಾಹೇಬರ ಮುಂದಾಳತ್ವದಲ್ಲಿ ವಿಠಲ ಮಂದಿರದ ದೈನಿಕ ವ್ರತಗಳು ಸಾಂಗವಾಗಿ ನಡೆಯುವದರೊಂದಿಗೆ ವರ್ಷದುದ್ದಕ್ಕೂ ತುಕಾರಾಮ, ಜ್ಞಾನೇಶ್ವರ ಮತ್ತು ಏಕನಾಥರ ಪುಣ್ಯತಿಥಿಗಳನ್ನು ವಿಜೃಂಭಣೆ ದೀಪೋತ್ಸವದ ಜೊತೆಗೆ ಹಾಗೂ ಸಂಗೀತೋತ್ಸವದೊಂದಿಗೆ ಆಚರಿಸುವ ಸಂಪ್ರದಾಯವನ್ನು ಹಾಕಿದರು. ಮಂದಿರದಲ್ಲಿ ನಡೆಯುವ ಸಂಗೀತ ಸೇವೆಯಲ್ಲಿ ಪಾಲ್ಗೊಳ್ಳಲು ನೆರೆಹೊರೆಯ ಜಿಲ್ಲೆಗಳಾದ ಬೆಳಗಾಂವ, ವಿಜಾಪೂರ, ಕಾರವಾರ, ಬಳ್ಳಾರಿಯಿಂದಲೂ ಹಾಡುಗಾರರು ಮತ್ತು ಶ್ರೋತೃಗಳು ಬಂದು ಹೋಗುವ ಪದ್ಧತಿಯನ್ನು ಪೋಷಿಸಿಕೊಂಡು ಬಂದರು. ಈ ಉತ್ಸವಗಳಲ್ಲಿ ಪ್ರಸಿದ್ಧ ಹಾಡುಗಾರರಾದಂತಾ ಶ್ರೀ ಕಾಶೀನಾಥ ಗುಜರ್, ಶ್ರೀಬಾಳಾ, ಬೆಳಗಾವಿಯಿಯ ಬೊಂದ್ರೆ ಮತ್ತು ಶ್ರೀಕಂಠಪ್ಪ ಹೂಗಾರರು ಭಾಗವಹಿಸುತ್ತಿದ್ದರು. ಈ ಪರಂಪರೆಯ ಮುಂದುವರಿಕೆಯಾಗಿ ಪ್ರಸಿದ್ಧ ಸಂಗೀತಗಾರರಾದ ಶ್ರೀಶ್ರೀಪತಿ ಪಾಡೀಗಾರ, ಶ್ರೀವಿಠಲ ಕಟ್ಟೆಣ್ಣವರ ಶ್ರೀನಾಗನಾಥ ಒಡೆಯರ್, ಶ್ರೀ ಅಶೋಕ ನಾಡಿಗೇರ, ಶ್ರೀಹನುಮಂತಪ್ಪ ಹೂಗಾರ, ಶ್ರೀ ಹುಸೇನಸಾಬ ನದಾಪ್, ಶ್ರೀ ಹನುಮಂತಪ್ಪ ಅಳಗವಾಡಿ ಇವರೆಲ್ಲ ಭಾಗವಹಿಸುತ್ತಾರೆ.

ಅನುಭಾವಿ ಸಂತರ ಪುಣ್ಯತಿಥಿಯ ಆಚರಣೆಯೊಂದಿಗೆ ಕಾಲಕಾಲಕ್ಕೆ ಬಂದು ಹೋಗುವ ನವರಾತ್ರಿ, ಗಣೇಶ ಚೌತಿ, ರಾಮನವಮಿ ಮುಂತಾದ ಹಬ್ಬದ ಸಂದರ್ಭಗಳಲ್ಲಿ ಸಂಗೀತ ಸೇವೆಯನ್ನು ಆಯೋಜಿಸಿಕೊಂಡು ಬಂದಿದ್ದರು. ಇಲ್ಲಿಯ ಭಜನಾ ಮಂಡಳಿಯು ಸ್ಥಳೀಯ ಮಂದಿರದಲ್ಲಷ್ಟೇ ಅಲ್ಲದೇ ಸುತ್ತಮುತ್ತಲಿನ ಧಾರ್ಮಿಕ ಕ್ಷೇತ್ರಗಳಿಗೂ ಭೇಟಿ ನೀಡಿ ಹಾಡಿನ ಸೇವೆಯ ಮೂಲಕ ಸಂಗೀತ ಪರಂಪರೆಯನ್ನು ತನ್ನ ಸಂಗೀತ ಪರಿಸರದಲ್ಲಿ ಜಾಗೃತವಾಗಿಸಿದೆ. ಪರೋಕ್ಷವಾಗಿ ಜನಸಾಮಾನ್ಯರಲ್ಲಿರುವ ಸಂಗೀತಾಭಿರುಚಿಯನ್ನು ಈ ದೈವೀ ಕ್ಷೇತ್ರಗಳು ರುಚಿಗೆಡದಂತೆ ಕಾಪಾಡಿಕೊಂಡು ಬಂದಿವೆ. ಮುಳ್ಳೊಳ್ಳಿ ಗ್ರಾಮದ ಸಂತರೊಬ್ಬರು ವಿಠಲಮಂದಿರದಿಂದ ಫಂಡರಪುರಕ್ಕೆ ಉರುಳು ಸೇವೆಯಿಂದಲೇ ಯಾತ್ರೆ ಕೈಕೊಂಡ ರೋಚಕ ಕಥೆಯು ಇದಕ್ಕೆ ಪೋಷಕವಾಗಿದೆ.

## ಬಸವಣ್ಣದೇವರ ದೇವಸ್ಥಾನ

ಕಾಳಿದಾಸ ನಗರದ ಕೂಟಸ್ಥಾನದ ವಿಶಾಲವಾದ ಪ್ರದೇಶದಲ್ಲಿ ಬಸವಣ್ಣದೇವರ ದೇವಸ್ಥಾನವನ್ನು ಸ್ಥಾಪಿಸಲಾಗಿದೆ. ಈ ದೇವಸ್ಥಾನದ ಸ್ಥಾಪನೆ ಕುರಿತು ಆಕರ್ಷಕ ದಂತ ಕಥೆಯೊಂದಿದೆ. ಸುಮಾರು ೨೦೦ ವರ್ಷಗಳ ಹಿಂದೆ ಸ್ಥಳೀಯ ಇಗಳ್ಳಿ ಮನೆತನದವರ ಪೂರ್ವಿಕರು ಮನೆಯ ಅಡಿಗೆಗೆ ಬೇಕಾಗುವ ಕಟ್ಟಿಗೆಯನ್ನು ತರಲು ಬಂಡಿಯೊಂದಿಗೆ ಮಲೆನಾಡಿಗೆ ಹೋದಾಗ ಒಂದು ಸ್ಥಳದಲ್ಲಿ ಬಂಡಿಗೆ ಕಟ್ಟಿದ ಜೋಡೆತ್ತುಗಳು ಮುಂದೆ ಚಲಿಸದೇ ಹಾಗೇ ನಿಂತುಬಿಟ್ಟವು. ಬಂಡಿಯು ಚಲಿಸಲು ಮಾಡಿದ ಎಲ್ಲ ಪ್ರಯತ್ನಗಳು ವ್ಯರ್ಥವಾಗಿ ಅದರ ಗಾಲಿಗಳು ಭೂಮಿ ಬಿಟ್ಟು ಮೇಲೆ ಉರಳೇ ಇಲ್ಲ ಬಂಡಿಯೊಳಗಿನ ಜನರು ಅಸಹಾಯಕರಾಗಿ ನಿಂತಾಗ ನಾನು ಇಲ್ಲಿ ವಾಸವಾಗಿ ಬಹಳ ವರ್ಷಗಳು ಗತಿಸಿದವು ನನ್ನನ್ನು ನಿಮ್ಮೊಂದಿಗೆ ಕರೆದೊಯ್ಯಿರಿ ಎಂಬ ನಾದಮಯವಾದ ಅಶೀರವಾಣಿಯು ನಿಶ್ಯಬ್ಧ ಕಾಡಿನಲ್ಲಿ ಧ್ವನಿಸಿತು. ಬಂಡಿಯಲ್ಲಿನ ಜನ ಆಶ್ಚರ್ಯಚಕಿತರಾಗಿ ಸುತ್ತಲೂ ನೋಡಲಾಗಿ ಅಲ್ಲೊಂದು ಬಸವಣ್ಣನ ಮೂರ್ತಿ ಗೋಚರಿಸಿತು. ಆ ಅಶರೀರ ನಾದವಾಣಿಯ ಆಗ್ರಹ ಪೂರಕ ಆದೇಶದಂತೆ ಕಟ್ಟಿಗೆಯೊಂದಿಗೆ ಬಂಡಿಯಲ್ಲಿ ಆ ಪ್ರಬಾವಲಯ ಮೂರ್ತಿಯನ್ನು ಊರಿಗೆ ತೆಗೆದುಕೊಂಡು ಬಂದರು. ಆಗಿನ್ನು ಕುಂದಗೋಳದ ಕುರಬಗೇರಿಯ ಪೂರ್ವದಿಕ್ಕಿನ ಮಧ್ಯದಲ್ಲಿ ಬಯಲು ಪ್ರದೇಶವಿತ್ತು. ಬಯಲು ಪ್ರವೇಶಿಸಿದ ಬಂಡಿ ದೈವೀಚ್ಛೆಯಂತೆ ಅಲ್ಲಿಯೇ ಸ್ಥಿರವಾಗಿ ನಿಂತಾಗ ಮೂರ್ತಿಯನ್ನು ಕೆಳಗಿಳಿಸಿ ಪ್ರತಿಷ್ಠಾಪನೆ ಮಾಡಿದರು. ಈ ದಂತ ಕಥೆಯ ವಿಷಯದಲ್ಲಿ ನಂಬಿಗೆ ಇಟ್ಟ ಸ್ಥಳೀಯರು ತಮ್ಮ ಹೊಸಮನೆಯನ್ನು ಕಟ್ಟುವ ಸಂದರ್ಭದಲ್ಲಿ ಸ್ಥಳೀಯರು ಈ ದೇವಸ್ಥಾನದ ಅಪ್ಪಣೆಯನ್ನು ಪಡೆಯುವ ಪದ್ಧತಿ ಇಟ್ಟುಕೊಂಡಿದ್ದಾರೆ.

ಸ್ಥಳೀಯ ಅಕ್ಕನ ಬಳಗದವರು ವರ್ಷದ ವಿಶೇಷ ಸಂದರ್ಭದಲ್ಲಿ ಆಚರಿಸುವ ಉತ್ಸವಗಳು ಸಾಂಸ್ಕೃತಿಕವಾಗಿ ವಿಶಿಷ್ಟವಾಗಿವೆ. ಬಸವ ಜಯಂತಿಯಂದು ಬಾಲ ಬಸವನನ್ನು ತೊಟ್ಟಿಲಲ್ಲಿ ಹಾಕಿ ವಚನಗಳನ್ನು ಜೋಗುಳವಾಗಿ ಹಾಡುತ್ತ ತೂಗುವ ಅರ್ಥಪೂರ್ಣ ಸಂಪ್ರದಾಯವಿದೆ. ಅಂದರೆ ಈ ಮಹಿಳೆಯರು ಬಸವಣ್ಣನನ್ನು ತೊಟ್ಟಿಲಲ್ಲಿ ಇಟ್ಟು ತೂಗುವದರ ಮೂಲಕ ೧೨ ನೇ ಶತಮಾನದ ಶಿವಶರಣ ವಚನಕಾರರ ತತ್ವಗಳನ್ನು ಸಾಂಕೇತಿಕವಾಗಿ ತಮ್ಮ ಊರು ಮನೆಗಳಲ್ಲಿ ಪುನಃಸೃಷ್ಟಿಸಿಕೊಳ್ಳುತ್ತಿದ್ದಾರೆ. ಹೀಗೆ ಬಸಣ್ಣನನ್ನು ತನ್ನ ಸ್ವಂತ ಮಗುವಾಗಿ ಪರಿಗ್ರಹಿಸಿ ತನ್ನನ್ನು

ಆ ಮಹಾಪುರುಷನ ತಾಯಿಯಾಗಿ ಕಲ್ಪಿಸುವ ಪುರಾಣದಲ್ಲೇ ಒಂದು ಜನಸಮುದಾಯದಲ್ಲಿ ಚರಿತ್ರೆಯ ಪುನರಾವರ್ತನೆಯಾಗುವುದನ್ನು ನೋಡಬಹುದಾಗಿದೆ. ಬಸವಣ್ಣನವರ ವಚನ ಗಾಯನದಲ್ಲೇ ಅವರ ಸಾಮಾಜಿಕ ತತ್ವಗಳನ್ನು ಜಾಗೃತಗೊಳಿಸುವ ಹಬ್ಬ ವಿಶೇಷವಾದುದು. ಈ ಆಚರಣೆಯನ್ನು ದೇವಸ್ಥಾನದಲ್ಲಿ ಹಮ್ಮಿಕೊಳ್ಳುವ ದಾಸೋಹ, ಧರ್ಮಕಲ್ಯಾಣ ಕಾರ್ಯಕ್ರಮ ಪ್ರಸಾದನಿಲಯ ಸೇವೆ ಸಾಮೂಹಿಕ ವಿವಾಹಗಳ ಏರ್ಪಾಡಿಗೆ ಆಧಾರವಾಗಿದೆ.

ಬಸವಣ್ಣನವರ ತೊಟ್ಟಿಲ ಕಾರ್ಯಕ್ರಮವನ್ನು ಅರ್ಥಪೂರ್ಣವಾಗಿ ನಡೆಸುವ ಅಕ್ಕನ ಬಳಗದವರು ಅಕ್ಕಮಹಾದೇವಿಯ ಮೂರ್ತಿಯನ್ನು ಸ್ಥಾಪಿಸಿರುವುದು ಮಾರ್ಮಿಕವಾಗಿದೆ. ಲೌಕಿಕ ಗಂಡನನ್ನು ತ್ಯಜಿಸಿ ಜಗತ್ತಿನ ಮಾಯೆಯನ್ನು ವಿರಕ್ತಿಯಿಂದ ದಾಟಿ ಚನ್ನಮಲ್ಲಿಕಾರ್ಜುನನೇ ತನ್ನ ನಿಜವಾದ ಗಂಡನೆಂದು ಬದುಕಿದ ಶರಣೆಯ ಅನುಭಾವಿ ಪರಂಪರೆಯೊಂದಿಗೆ ಧಾರ್ಮಿಕ ಸುಧಾರಣೆಯ ಪ್ರವರ್ತಕನಾದ ಬಸವಣ್ಣವರ ಜೀವನ ಶೈಲಿಯನ್ನು ಸೇರಿಸುವದರ ಮೂಲಕ ಹೊಸದೇ ಆದ ಜೀವನ ಶೈಲಿಯನ್ನು ಕಟ್ಟಿಕೊಳ್ಳುವ ಯತ್ನ ಈ ಗುಡಿಯ ಉತ್ಸವದಲ್ಲಿ ನಡೆಯುತ್ತದೆ. ಪ್ರತಿವರ್ಷವು ನಡೆಯುವ ಶರಣ ಕೀರ್ತನೆ ಸಪ್ತಾಹದಲ್ಲಿ ಬಸವಣ್ಣನವರ ಮತ್ತು ಅಕ್ಕಮಹಾದೇವಿಯವರ ವಚನ ಸಂಗೀತ ಕಾರ್ಯಕ್ರಮವನ್ನು ಹಮ್ಮಿಕೊಳ್ಳುತ್ತಾರೆ. ಹೀಗೆ ಜನಸಮೂದಾಯದ ಭಕ್ತಿಯ ಕೇಂದ್ರವಾದ ದೇವಸ್ಥಾನದಲ್ಲಿ ಇತಿಹಾಸದಲ್ಲಿ ಆಗಿ ಹೋದ ಬಸವಣ್ಣ ಮತ್ತು ಅಕ್ಕಮಹಾದೇವಿಯರ ಅನುಭಾವಿ ತತ್ವಗಳನ್ನು ವರ್ತಮಾನದ ಜಗತ್ತಿನಲ್ಲಿ ಸಂಗೀತದ ಮೂಲಕ ಪ್ರಚಾರ ಮಾಡುವ ವಿಶಿಷ್ಟ ವಿಧಾನ ಇಲ್ಲಿದೆ.

## ಶಂಭುಲಿಂಗೇಶ್ವರ ದೇವಸ್ಥಾನ

ಪ್ರಾಚೀನತೆಯಿಂದಲೂ ಕುಸುರಿನ ಶಿಲ್ಪಕಲೆಯಿಂದಲೂ ಇದಕ್ಕೆ ಪೂರಕ ಎನ್ನುವಂತೆ ನಡೆಯುವ ಸಂಗೀತೋತ್ಸವದಿಂದಲೂ ಈ ದೇವಸ್ಥಾನವು ಪ್ರಸಿದ್ಧವಾಗಿದೆ. ಕುಂದಗೋಳ ಊರಿನ ನಡುವೆ ವಿಶಿಷ್ಟ ವಾಸ್ತುಶಿಲ್ಪ ಶೈಲಿಯಲ್ಲಿ ನಿಂತಿರುವ ಈ ದೇವಸ್ಥಾನ ಧಾರ್ಮಿಕ ಆಚರಣೆ ಹಾಗೂ ಸಂಗೀತ ಸುಗ್ಗಿಯ ಸಂಗಮ ಸ್ಥಾನವಾಗಿದೆ. ಈ ಗುಡಿಯ ಸುತ್ತಲೂ ಅಚ್ಚುಕಟ್ಟಾದ ಪ್ರಾಂಗಣವಿದ್ದು ನಡುವೆ ಪೂರ್ವಾಭಿಮುಖವಾಗಿ ತನ್ನ ಶಿಲ್ಪ ಸೌಂದರ್ಯದಿಂದ ದೇವಸ್ಥಾನ ಆಕರ್ಷಕವಾಗಿ ನಿಂತಿದೆ. ಕ್ರಿ.ಶ. ೯೬೦-೭೦ರಲ್ಲಿ ಹೊಯ್ಸಳರ ಶೈಲಿಯಲ್ಲಿ ೬೪ ಸುಂದರ ಚಿತ್ತಾರದ ಕಂಬಗಳೊಂದಿಗೆ ಈ ಮಂದಿರವನ್ನು ನಿರ್ಮಿಸಿದ್ದಾರೆ. ಇದರ ವಾಸ್ತು ಶಿಲ್ಪವು ಸಾಕಾರಗೊಂಡ ಅದ್ಭುತ ಸಂಗೀತದಂತಿದೆ.

ಗುಡಿಯ ಎಡ ಬಲಕ್ಕೆ ಅಂದರೆ ದಕ್ಷಿಣಕ್ಕೂ ಮತ್ತು ಉತ್ತರಕ್ಕೂ ಆಗಮನ ಮತ್ತು ನಿರ್ಗಮನ ಮಹಾದ್ವಾರಗಳಿವೆ. ಗುಡಿಯ ಗೋಡೆಯ ಮೇಲೆ ಕೊರೆದ ಶಿಲ್ಪ ವಿಗ್ರಹಗಳು ರಾಮಾಯಣ ಮತ್ತು ಮಹಾಭಾರತ ಕಥೆಗಳನ್ನು ಸುಂದರ ವಿನ್ಯಾಸ ಲಯದಲ್ಲಿ ನಿರ್ಮಿಸುತ್ತದೆ. ವಿಷ್ಣು ಮೂರ್ತಿ ಮತ್ತು ಸಿಂಹದ ಚಪ್ಪಟೆ ಮೂರ್ತಿಗಳು

ಗುಡಿಯ ಮಹತ್ವವನ್ನು ಸಾರುತ್ತಿದೆ. ಚಂದ್ರಶಾಲೆ ಒಳಗೆ ರಂಗೋಲಿಯ ಚುಕ್ಕಿಗಳನ್ನಿಟ್ಟಂತೆ ನಾಲ್ಕು ಕಂಬಗಳ ಚೌಕಾಕಾರ ನಿರ್ಮಿಸಿ ಸಭಾಮಂಟಪವನ್ನು ನಿರ್ಮಿಸಲಾಗಿದೆ. ಈ ಸಭಾ ಮಂಟಪದ ಪೂರ್ವ ಮತ್ತು ಉತ್ತರ ಮತ್ತು ದಕ್ಷಿಣ ದಿಕ್ಕುಗಳಲ್ಲಿ ಪ್ರವೇಶ ಮಾರ್ಗವಿದೆ. ಹೊಯ್ಸಳರ ವಾಸ್ತುಶಿಲ್ಪಶೈಲಿಯಲ್ಲಿ ನಿರ್ಮಾಣಗೊಂಡ ಹಲವು ಸಾಲುಗಳ ದೇವಸ್ಥಾನದ ಒಳಗೆ೬೪ ಕಂಬಗಳಿವೆ. ಈ ಕಂಬದ ಸಾಲುಗಳು ಹಲವು ಬಗೆಯ ಜಾಮಿತಿಯ ಮಂಡಲಗಳ ಆಕಾರವನ್ನು ನೋಡುವವರ ನೋಟದಲ್ಲಿ ಮಾಯೆಯಂತೆ ಮೂಡುತ್ತದೆ. ಕಂಬಗಳಿಗೆ ಬಳ್ಳಿಗಳೋಪಾದಿಯಲ್ಲಿ ವೀಳ್ಯದೆಲೆಯ ಆಕಾರವಿದ್ದು ಅವುಗಳ ಬಳುಕಿನಲ್ಲಿ ಅತ್ಯಂತ ಸೂಕ್ಷ್ಮವಾದ ಲಾಲಿತ್ಯಪೂರ್ಣ ಬಿಂಕದ ಸುಳಿವಿನ ಕುಸುರಿ ಕೆಲಸವಿದೆ. ಒಂದೊಂದು ಕಂಬಗಳಲ್ಲಿ ಕೆತ್ತಿದ ವಿಶಿಷ್ಟವಾದ ಈ ಸುಳಿವುಗಳಲ್ಲಿ ವಿವಿಧ ಬಗೆಯ ರಾಗಗಳ ಗತಿಶೀಲತೆಯನ್ನು ಕಲ್ಪಿಸಿಕೊಳ್ಳಬಹುದಾಗಿದೆ. ಗರ್ಭಗುಡಿಯ ಎಡ ಮತ್ತು ಬಲ ಬದಿಗಳಲ್ಲಿ ಚೌಕಾಕಾರದ ಕೋಣೆಗಳನ್ನು ನಿರ್ಮಿಸಿರುವರು. ಗುಡಿಯ ಮುಂದೆ ಒಂದು ಮುಂಗಾಲನ್ನೆತ್ತಿ ಮುದ್ದಾಗಿ ಮಲಗಿರುವ ಬಸವ ಮೂರ್ತಿಯ ತನ್ನ ಅಸಾಧಾರಣ ಸರಪಳಿ ಹಾಗೂ ಗೆಜ್ಜೆಗಳ ನವಿರು ಹೆಣಿಕೆಯಿಂದ ನಿಶ್ಯಬ್ಧ ನಾದವನ್ನು ಕೇಳಬಹುದಾಗಿದೆ.

ಗರ್ಭಗುಡಿಯ ಮುಂದಿನ ಬಾಗಿಲ ಎಡ ಬಲಗಳಲ್ಲಿ ಆನಿಕೆಗಳಿದ್ದು ಚೌಕಾಕಾರದ ಕಮಾನುಗಳಿಂದಾಗಿ ಅಲ್ಲೊಂದು ಕಾಮನ ಬಿಲ್ಲಿನ ವಿನ್ಯಾಸವು ಸಂಗೀತದ ಲಯದ ನಡಿಗೆಯನ್ನು ತೋರಿಸುತ್ತದೆ.

ಪ್ರತಿ ಚೌಕಟ್ಟಿನೊಳಗಿರುವ ಹೂ ಲತೆಗಳ ಕುಸುರಿಗಳು ಘನಿಕೃತ ಸ್ವರಗಳಂತೆ ಮಿಡಿಯುತ್ತವೆ. ಮಂಟಪದ ರೀತಿಯಲ್ಲಿ ಕೆತ್ತಿದ ಮೇಲ್ಛಾವಣಿಯ ಮೇಲೆ ರಾಮ, ಲಕ್ಷ್ಮಣ, ಸೀತಾ ಹನುಮಂತರ ಚಿತ್ರಗಳನ್ನು ಕೆಳಗೆ ಗಣಪತಿಯ ಮೂರ್ತಿಯನ್ನು ಅದರ ಎಡಬದಿಗೆ ಪಾರ್ವತಿಯನ್ನು ಕೆತ್ತಿ ನಿಲ್ಲಿಸಿದ್ದಾರೆ. ಭಿನ್ನ ಧಾರ್ಮಿಕ ಶ್ರದ್ಧಾ ಗುಂಪಿಗೆ ಸೇರಿದ ಈ ದೇವತಾ ಪರಿವಾರಗಳು ದೇವಸ್ಥಾನದಲ್ಲಿ ಐಕ್ಯತೆಯನ್ನು ಒಂದಾದದ್ದು ಅಲ್ಲಿಯ ಶಿಲ್ಪಕಲೆಯ ಮೂಲಗಳು ಸಂಗೀತೋತ್ಸವ ಮೂಲಕವೂ ಪ್ರಕಟವಾಗಿದೆ. ಇದೊಂದು ಸಾಮರಸ್ಯದ ಸಂಕೇತವಾಗಿ ನಿಂತ ಗುಡಿಯಾಗಿದೆ.

ಗರ್ಭಗುಡಿಯ ಹೆಬ್ಬಾಗಿಲಿನ ಚೌಕಟ್ಟಿನ ಮೇಲೆ ತೇರಿನ ರೂಪದ ಸೂಕ್ಷ್ಮ ನಕ್ಷೆಗಳಿವೆ. ನಡುವೆ ಗಜಲಕ್ಷ್ಮಿಯ ಚಿತ್ರವಿದೆ. ಗರ್ಭಗುಡಿಯ ಮಧ್ಯೆ ಶಂಭುಲಿಂಗನ ಚಂದ್ರ ಶಿಲೆಯಿಂದ ಮಾಡಿದ ಲಿಂಗವಿದೆ. ಮೂರು ಸ್ತಂಭಗಳ ಮೇಲೆ ಕೆತ್ತಿದ ನವಗ್ರಹಗಳ ದರ್ಶನ ಪಡೆದೇ ಬಸವಣ್ಣನ ನಂತರ ಶಿವನ ಆಮೇಲೆ ಗಣಪತಿ ಪಾರ್ವತಿಯರ ದರ್ಶನ ಪಡೆಯುವದಾಗಿದೆ. ಚೂಪಾದ ಎರಡು ಕೋಡುಗಳ ದಪ್ಪ ಇಣಿಯ ಮುಂಗಾಲನ್ನು ಗದ್ದಿಗೆಯ ಮೇಲೆ ಎತ್ತಿಟ್ಟ ಬಸವಣ್ಣನ ವಿಗ್ರಹದ ಮೇಲೆ ಯುಗಾದಿಯಿಂದ ಸರಿಯಾಗಿ ಬೆಳಗಿನ ಜಾವ ಸೂರ್ಯನ ಕಿರಣಗಳು ಹರಿಯುತ್ತವೆ. ಈ ಎರಡೂ ಕೋಡುಗಳ ನಡಿವಿಂದ ಈಶ್ವರನ ತಲೆ ಮೇಲೆ ನಂದಿಯ ಛಾಯೆ ಬೀಳುವುದು ಈ ಅಪೂರ್ವ ಕ್ಷಣವನ್ನು ವರ್ಣಿಸುವಂತೆ ಗುಡಿಯಲ್ಲಿ ವಚನ ಗಾಯನ ನಡೆಯುತ್ತದೆ.

## ಮಾರುತಿ ದೇವಸ್ಥಾನ

ಕಾಳಿದಾಸನಗರದ ಕುರುಬಗೇರಿಯಲ್ಲಿರುವ ಈ ದೇವಸ್ಥಾನವನ್ನು ಭಜನೆ ಮತ್ತು ಏಕತಾರಿ ತತ್ವ ಪದಗಳ ಹಾಡುಗಳಿಂದ ಪ್ರಸಿದ್ಧವಾಗಿದೆ. ಇಲ್ಲಿಯ ಓಣಿಗಳಿಗೆ ಪ್ರಸಿದ್ಧ ಸಂಗೀತಗಾರರ ಮತ್ತು ವೀರ ಯೋಧರ ಹೆಸರುಗಳನ್ನು ಇಟ್ಟಿರುವುದು ವಿಶೇಷವಾಗಿದೆ.

ಮಾರುತಿ ದೇವಸ್ಥಾನದ ನಿರ್ಮಾಣಕ್ಕೆ ಸ್ಥಳೀಯ ಐತಿಹ್ಯವಿದೆ. ಕಾಳಿದಾಸನಗರದ ಪೂರ್ವಕ್ಕಿರುವ ತೋರುಣಗಟ್ಟಿಯನ್ನು ಮೊದಲು ವಿಷ್ಣುತೀರ್ಥವೆಂದು ಕರೆಯುತ್ತಿದ್ದರು. ಕಿಲ್ಲಾ ಕೋಟೆಯ ಸುತ್ತಲೂ ಇರುವ ದಿಬ್ಬಕ್ಕೆ ರೂಢಿಯಲ್ಲಿ ಹುಡೆಯೆಂದು ಕರೆಯುವರು. ಸುಮಾರು ೨೦೦ ವರ್ಷಗಳ ಹಿಂದೆ ಈ ಹುಡೆಯ ಮಣ್ಣನ್ನು ಅಗೆಯುವಾಗ ಮೂರ್ತಿಯೊಂದು ಸಿಕ್ಕಿತಂತೆ ಸ್ವಚ್ಛಗೊಳಿಸಿ ನೋಡಿದಾಗ ಅದು ಮಾರುತಿಯ ಮೂರ್ತಿಯಾಗಿತ್ತಂತೆ ಇದನ್ನು ಪೂಜಾರ ಮನೆತನದವರು ಭಕ್ತಿಯಿಂದ ಗುಡಿಯನ್ನು ಕಟ್ಟಿಸಿ ದವನದ ಹುಣ್ಣಿಮೆಯಂದು ಮೂರ್ತಿ ಪ್ರತಿಷ್ಠಾಪಿಸಿದರು. ಮಾರುತಿಯು ಒಬ್ಬ ಸಂಗೀತ ವಿದ್ವಾಂಸನೆಂಬ ಉಲ್ಲೇಖ ರಾಮಾಯಣದಲ್ಲಿ ಸಿಗುತ್ತದೆ. ರಾಮನ ಭಕ್ತನು ದೇವರನ್ನು ಸಂಗೀತದ ಮೂಲಕ ಭಜಿಸುತ್ತಿದ್ದನು ಎಂಬ ಪ್ರತೀತಿ ಇದೆ. ಈ ಪ್ರತೀತಿಯ ಸ್ಮರಣಾರ್ಥವಾಗಿ ದೇವಸ್ಥಾನದಲ್ಲಿ ಪ್ರತಿವರ್ಷವು ಮಾರುತಿ ದೇವರ ತೊಟ್ಟಿಲೋತ್ಸವ ನಡೆಯುತ್ತದೆ..ಇದೇ ಸಂದರ್ಭದಲ್ಲಿ ಊರ ಜನರಿಂದ ಭಜನೆ, ಡೊಳ್ಳಿನ ಮಜಲು, ಪಾರಿಜಾತ ನಾಟಕ ಮುಂತಾದ ಸಂಗೀತ ಪ್ರಧಾನ ಕಾರ್ಯಕ್ರಮಗಳು ನಡೆಯುತ್ತವೆ. ಈ ಎಲ್ಲ ಕಾರ್ಯಕ್ರಮಗಳಿಗೆ ಬೆನ್ನೆಲುಬಾಗಿ ನಿಂತವರು ಮಾರುತಿಯ ಪವಾಡಕ್ಕೆ ಒಲಿದ ಶ್ರೀ ಎಲ್ಲಪ್ಪ ಕುಮ್ಮಿ. ಮಳೆಯಿಲ್ಲದೇ ಬರಗಾಲ ಎರಗಿದ ಸಮಯದಲ್ಲಿ ನೀರಿನ ಭವಣೆಯನ್ನು ತಗ್ಗಿಸಿಕೊಳ್ಳಲು ಭಾವಿಗಳನ್ನು ತೆಗೆಸಿದರೂ ನೀರು ಚಿಮ್ಮಲಿಲ್ಲವಂತೆ ಹೀಗಾಗಿ ಯಲ್ಲಪ್ಪನವರು ಮಾರುತಿಗೆ ತೇರನ್ನು ಅರ್ಪಿಸಿ ಸಂಗೀತ ಸೇವೆಯನ್ನು ಮಾಡುವದಾಗಿ ಹರಕೆ ಹೊತ್ತರಂತೆ ಈ ಹರಕೆಯ ಫಲಶೃತಿ ಎನ್ನುವಂತೆ ಮಳೆ ಬಂದು ಪವಾಡವಾಯಿತಂತೆ ಮಾರುತಿ ದೇವಸ್ಥಾನದಲ್ಲಿ ಏಕತಾರಿ ತತ್ವಪದಗಳನ್ನು ಹಾಡುವ ಸಂಪ್ರದಾಯವಿದೆ. ಈ ತತ್ವಪದಗಳು ಪರಾಮತ್ಮನ ಸ್ವರೂಪವನ್ನು ಅರಿಯುವ ಅನುಭಾವದಿಂದ ಲೌಕಿಕ ಜಗತ್ತನ್ನು ಕುರಿತು ವಿರಕ್ತಿ ಹೊಂದಿ ಪರಮಾತ್ಮನಲ್ಲಿ ಐಕ್ಯವಾಗುವ ಮಾರ್ಗಗಳನ್ನು ತೋರಿಸುತ್ತವೆ. ಮುಖ್ಯವಾಗಿ ತತ್ವಪದಗಳನ್ನು ಹಾಡುವವರು ಭಕ್ತಿಯ ಭಾವಾವೇಷದಲ್ಲಿ ಮೈ ಮರೆಯಲು ಕಾರಣವಾಗುವುದು ಅವರು ಹಾಡುವ ಹಾಡುಗಳೇ ಆಗಿರುತ್ತವೆ. ಹೀಗೆ ಸಂಗೀತವು ಅನುಭಾವಿ ಪರಂಪರೆಯ ಮುಖ್ಯ ಮಾಧ್ಯಮವು ಆಗಿದೆ.

ಮಾರುತಿಯ ಪಲ್ಲಕ್ಕಿ ಉತ್ಸವ ದಿನದಂದು ಜನರು ತಮ್ಮ ಭಕ್ತಿಯನ್ನು ಕೀರ್ತನೆ ನಾಟಕ, ಕೃಷ್ಣಪಾರಿಜಾತ ದೊಡ್ಡಾಟ ಮುಂತಾದ ಕಾರ್ಯಕ್ರಮಗಳ ಮೂಲಕ ವ್ಯಕ್ತಪಡಿಸುತ್ತಾರೆ.

## ದತ್ತ ದೇವಸ್ಥಾನ

ಕುಂದಗೋಳ ಪರಿಸರದಲ್ಲಿರುವ ದೇವಸ್ಥಾನಗಳು ಹಲವು ವಾಸ್ತುಶಿಲ್ಪ ಶೈಲಿಯ ಸಮಾಗಮವನ್ನು ಅನೇಕ ಧರ್ಮ ಮತ್ತು ಮತಗಳ ಐಕ್ಯತೆಯನ್ನು ವಿಭಿನ್ನ ಸಂಗೀತ ಪರಂಪರೆಗಳ ಸಮನ್ವಯತೆಯನ್ನು ಸಾಧಿಸಿರುವುದಕ್ಕೆ ಸಾಕ್ಷಿಗಳಾಗಿರುತ್ತವೆ. ದತ್ತದೇವಸ್ಥಾನವು ಕರ್ನಾಟಕ ಸಂಗೀತ ಪದ್ಧತಿಯ ಕೀರ್ತನೆಯನ್ನು ಹಿಂದುಸ್ತಾನಿ ಸಂಗೀತ ಪದ್ಧತಿಯನ್ನು, ಜಾನಪದ ಸಂಗೀತ ಪದ್ಧತಿಯನ್ನು ನಡೆಸಿಕೊಂಡು ಬಂದಿರುವುದು ವಿಶಿಷ್ಟವಾಗಿದೆ. ಹೀಗೆ ದೇವಸ್ಥಾನದ ಸಾಂಸ್ಕೃತಿಕ ಪರಿಸರದಲ್ಲಿಯೇ ಪ್ರಜಾಪ್ರಭುತ್ವದ ಅನನ್ಯ ಮಾದರಿಯು ವ್ಯಕ್ತವಾಗಿದೆ.

ಸುಮಾರು ೪೦೦ ವರ್ಷಗಳ ಹಿಂದೆ ಈ ದೇವಸ್ಥಾನ ನಿರ್ಮಾಣವಾಯಿತೆಂಬುದರ ಬಗ್ಗೆ ಐತಿಹಾಸಿಕ ಉಲ್ಲೇಖವಿದೆ. ಅದರ ಸ್ಥಾಪನೆಯ ಕುರಿತು ದಂತ ಕಥೆಗೆ ಹೋಲುವ ಒಂದು ಕಥನವೂ ಇದೆ. ಒಮ್ಮೆ ಪ್ರಸಿದ್ಧ ಕೀರ್ತನಕಾರರಾದ ಶೇಷಭಟ್ಟರು ಬಾದಾಮಿಗೆ ಹೊರಟಿದ್ದರು. ದಾರಿಯ ನಡುವಿನ ಕುಂದಗೋಳದಲ್ಲಿ ಒಂದು ರಾತ್ರಿ ತಂಗಿದಾಗ ಸ್ಥಳೀಯರು ಕೀರ್ತನೆ ಮಾಡಬೇಕೆಂದು ಭಿನ್ನವಿಸಿಕೊಂಡರು. ಅವರ ಭಕ್ತಿಪೂರ್ವಕ ಆಗ್ರಹದ ಮೇರೆಗೆ ಶೇಷಭಟ್ಟರು ಏಳು ದಿನಗಳವರೆಗೆ ಕೀರ್ತನ ಸೇವೆ ಸಲ್ಲಿಸಿದರಂತೆ. ಅದರ ಫಲರೂಪವಾಗಿ ಗೌರವ ಕಾಣಿಕೆಯನ್ನು ನೀಡಲು ಬಂದಾಗ ಅದನ್ನು ನಿರಾಕರಿಸಿ ತಾನು ಗುಡಿಯನ್ನು ಕಟ್ಟುವ ಸಂಕಲ್ಪವನ್ನು ಹೊಂದಿರುವದಾಗಿಯೂ ಅದಕ್ಕೆ ಅಗತ್ಯವಿರುವ ಇಟ್ಟಿಗೆಗಳನ್ನು ಪೂರೈಸಬೇಕೆಂದು ವಿನಂತಿಸಿಕೊಂಡರು. ಅಂತೆಯೇ ಅಂದಿನ ಪ್ರಸಿದ್ಧ ಜಮೀನುದಾರರಾಗಿದ್ದ ರಂಗನಗೌಡ ನಾಡಿಗೇರ ಇವರ ಮಗ ನಾನಾಸಾಹೇಬರು ದೇವಸ್ಥಾನದ ಜೀರ್ಣೋದ್ಧಾರ ಕೈಕೊಂಡರು. ಇದು ಅವರ ಧಾರ್ಮಿಕ ಶ್ರದ್ಧೆಯೊಂದಿಗೆ ಸಂಗೀತದ ಕುರಿತಾದ ಒಲವನ್ನು ತೋರಿಸುತ್ತದೆ.

ನವರಾತ್ರಿ ಉತ್ಸವವನ್ನು ಆಚರಿಸುವ ಸಂದರ್ಭದಲ್ಲಿ ಒಂಬತ್ತು ದಿನಗಳವರೆಗೆ ಒಂಬತ್ತು ವಾಹನಗಳ ಉತ್ಸವ ನಿರಂತರವಾಗಿ ನಡೆಸುತ್ತಿದ್ದರು. ನವರಾತ್ರಿಯ ಸಂದರ್ಭದಲ್ಲಿ ಪ್ರತಿದಿನವೂ ದತ್ತ ದೇವಾಲಯವು ಕೀರ್ತನೆ ಮತ್ತು ಭಜನೆಯಿಂದ ಸಂಗೀತಮಯವಾಗಿರುತ್ತಿತ್ತು. ಇಲ್ಲಿ ದಿವಂಗತ ಸವಾಯಿಗಂಧರ್ವರು ಭಜನಾ ಸಂಘದ ನೇತೃತ್ವ ವಹಿಸಿ ಪ್ರತಿಗುರುವಾರ ರಾತ್ರಿ ಭಜನೆಯನ್ನು ನಡೆಸುತ್ತಿದ್ದರು. ಈ ಭಜನೆ ಗೋಷ್ಠಿಯಲ್ಲಿ ಫಕ್ಕೀರಪ್ಪ ಹೂಗಾರ ಇವರು ಭಾಗವಹಿಸುತ್ತಿದ್ದರು. ಸವಾಯಿಗಂಧರ್ವರ ನಂತರ ನಾನಾ ಸಾಹೇಬರು ಗುಡಿಯಲ್ಲಿ ಭಜನೆ ಸೇವೆಯನ್ನು ಮುಂದುವರೆಸಿಕೊಂಡು ಬಂದರು. ದತ್ತ ಜಯಂತಿ ವೇಳೆಯಲ್ಲಿ ಸಂಗೀತ ಸಪ್ತಾಹವನ್ನು ಇಡುತ್ತಿದ್ದರು. ದತ್ತದೇವರ ವೇಷವನ್ನು ಧರಿಸಿ ಊರಲ್ಲಿ ದಿಗಂಬರ ಶ್ರೀಪಾದ ವಲ್ಲಭ ದಿಗಂಬರ ಎಂದು ನಾಮಸ್ಮರಣೆ ಮಾಡುತ್ತ ಭಿಕ್ಷೆಯನ್ನು ಬೇಡುತ್ತಿದ್ದರು. ಭಿಕ್ಷಾವೃತ್ತಿಯಲ್ಲಿ ಸಂಗ್ರಹವಾದ ಧನ ಧಾನ್ಯದಲ್ಲಿ ಎಲ್ಲರಿಗೂ ಪಾಲು ಸಿಗುವಂತೆ ಅನ್ನ ಸಂತರ್ಪಣೆ ಮಾಡುತ್ತಿದ್ದರು. ಅನ್ನ ಸಂತರ್ಪಣೆಗೆ ಸೇರಿದವರ ಸಭೆಯಲ್ಲಿ ಭಜನೆ ಮತ್ತು ಕೀರ್ತನೆಗಳು ನಡೆಯುತ್ತಿದ್ದವು. ಹೀಗೆ ದತ್ತ ದೇವಸ್ಥಾನದ ಸಂಗೀತವು ಒಂದು ಜನ ಸಮುದಾಯದ ಆಶೋತ್ತರದ ಪ್ರತೀಕವಾಗಿದೆ.

## ೪.೩. ಕುಂದಗೋಳ ಪರಿಸರದ ಹಬ್ಬಗಳು ಮತ್ತು ಸಂಗೀತೋತ್ಸವಗಳು

### ಯುಗಾದಿ

ಯುಗಾದಿ ಹಿಂದು ಸಂಪ್ರದಾಯದಲ್ಲಿ ಹೊಸ ವರುಷದ ಆಗಮನದ ಸಂಕೇತವಾಗಿದೆ. ಹೊಸ ಸಂವತ್ಸರದ ರೂಪದಲ್ಲಿ ಪ್ರತ್ಯಕ್ಷವಾಗುವ ಈ ಹಬ್ಬ ಸಾಂಸ್ಕೃತಿಕವಾಗಿ ವಿಶಿಷ್ಟ ಸ್ಥಾನವನ್ನು ಪಡೆದಿದೆ. ಜೀವನದಲ್ಲಿ ಹೊಸ ತಿರುವನ್ನು ಪಡೆಯುವ ಸುಖ ದುಃಖದ ಪರಾಮರ್ಶೆಯ ಒಂದು ಘಟ್ಟವೂ ಹೌದು. ಪ್ರಾಕೃತಿಕವಾಗಿಯೂ ಇದೊಂದು ವಿಶೇಷ ಹಬ್ಬ ಏಕೆಂದರೆ ವಸಂತ ಋತುವಿನ ಮೊದಲನೆಯ ಸಂಭ್ರಮದ ಹಬ್ಬವೇ ಯುಗಾದಿಯಾಗಿದೆ.

ಹಳ್ಳಿಯ ಹೆಣ್ಣು ಮಕ್ಕಳಿಗೆ ಸಿಹಿ ಕಹಿಯ ನೆನಪಿನ ಈ ಹಬ್ಬ ಮಹತ್ವದ್ದಾಗಿದೆ. ಹೆಣ್ಣು ಮಕ್ಕಳನ್ನು ತವರಿಗೆ ಕರೆದುಕೊಂಡು ಬರುವ ಸಂಭ್ರಮ, ಗೆಳತಿಯರೊಂದಿಗೆ ನಕ್ಕುನಲಿಯುವ ಕ್ಷಣಗಳು, ಅತಿಥಿ ಸತ್ಕಾರ ಹೀಗೆ ಇದು ಊರಿನ ಪ್ರತಿಮನೆಯ ಎರಡು ದಿನಗಳ ಹಬ್ಬವಾಗಿದೆ. ಮೊದಲನೆಯ ದಿನ ಅಂದರೆ ಅಮವಾಸ್ಯೆಯಂದು ದೇವಿಗೆ ವಿಶೇಷ ಪೂಜೆಯೊಂದಿಗೆ ಸಂಗೀತ ಸೇವೆಯನ್ನು ಸಲ್ಲಿಸುತ್ತಾರೆ. ಮರುದಿನದ ಪ್ರತಿಪದೆಯಂದು ಊರು ಜಾನಪದ ಹಾಡಿನ ಸುಗ್ಗಿಯ ಸಂಭ್ರಮದಲ್ಲಿ ಮುಳುಗಿರುತ್ತವೆ. ಅಂದು ಮರಾಠಾ ಸಮಾಜದವರ ಬಿದಿರಿನ ಗಳಕ್ಕೆ ಬೇವಿನ ಸೊಪ್ಪಿನ ಟೊಂಗೆಯನ್ನು ಕಟ್ಟಿ ತುದಿಯಲ್ಲಿ ಗಿಂಡಿಯನ್ನು ಸಿಕ್ಕಿಸಿ ಅದರ ಸುತ್ತ ಕುಂಚಿಗೆಯಂಥ ಅರಿವೆಯನ್ನು ಸುತ್ತಿ ಕುಂಕುಮ ಗಂಧ ಹಚ್ಚಿ ಹೂಮಾಲೆಯಿಂದ ಅಲಂಕರಿಸುತ್ತಾರೆ. ಹಾಡಿನ ಮೂಲಕ ಹೊರಡುವ ಈ ಮೆರವಣಿಗೆ ಊರಿನವರ ಸಮೂಹ ಪ್ರಜ್ಞೆಯ ಪ್ರತೀಕವಾಗಿದೆ.

ಮೆರವಣಿಗೆ ನಂತರ ಪ್ರತಿ ಒಬ್ಬರೂ ತಮ್ಮ ತಮ್ಮ ಮನೆಯಿಂದ ನೈವೇದ್ಯಕ್ಕೆಂದು ಮಾಡಿತಂದ ಸೇವಿಗೆಯಂಥ ಸಿಹಿ ಪದಾರ್ಥಗಳನ್ನು ದೇವರಿಗೆ ಒಪ್ಪಿಸಿದ ಮೇಲೆ ಆರತಿ ಹಾಡಿನೊಂದಿಗೆ ಬೇವು ಬೆಲ್ಲವನ್ನು ಹಂಚುವ ಪದ್ಧತಿ ಕೂಡಾ ಇಲ್ಲಿದೆ. ಜೀವನದಲ್ಲಿ ಸುಖ ದುಃಖಃಗಳನ್ನು ಸಮನಾಗಿ ಹಂಚಿಕೊಳ್ಳಬೇಕೆಂಬ ಹಾಡುಗಳು ಈ ಹಬ್ಬಕ್ಕೆ ಮಹತ್ವವನ್ನು ತಂದಿದೆ. ಹೊಸ ವರ್ಷದ ಆರಂಭವಾದ ಯುಗಾದಿಯು ರೈತರಿಗೆ ಭೂಮಿಯನ್ನು ಹಸನು ಮಾಡುವ, ಬಿತ್ತನೆಗೆ ಸಜ್ಜುಗೊಳಿಸುವ ನಾಂದಿ ದಿನವೂ ಹೌದು. ಹೊಲದಲ್ಲಿ ಸುಗ್ಗಿಹಾಡಿನೊಂದಿಗೆ ಭೂಮಿಪೂಜೆಯನ್ನು ಕೈಗೊಳ್ಳುತ್ತಾರೆ. ಹೊಸ ಬೆಳೆ ಫಸಲುಗಳನ್ನು ಕನಸ್ಸಿನಂತೆ ಕಲ್ಪಿಸಿಕೊಳ್ಳುವ ಜಾನಪದ ಹಾಡು ಮತ್ತು ಕುಣಿತಗಳು ಈ ಸಂದರ್ಭದ ಸಾಂಸ್ಕೃತಿಕ ಸಂಗತಿಗಳಾಗಿವೆ. ಹೀಗೆ ಜನಸಮುದಾಯ ಧಾರ್ಮಿಕ ಕ್ಷೇತ್ರದಲ್ಲಿ ಪರಸ್ಪರ ಮುಖಾಮುಖಿಯಾಗುವ, ಸಂಗೀತದ ಮೂಲಕ ಕಹಿಯನ್ನು ದಾಟಿ ಸಿಹಿಯನ್ನು ಪಡೆಯುವ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುವುದು ಕುಂದಗೋಳ ಪರಿಸರದ ಯುಗಾದಿಯ ಆಚರಣೆಯ ಅನನ್ಯತೆಗೆ ಸಾಕ್ಷಿಯಾಗಿದೆ.

## ಚೌಕಿಮಠದ ರಥೋತ್ಸವ

ಇದು ಭಿಕ್ಷಾವೃತ್ತಿಯ ಮಠವೆಂದೇ ಪ್ರಸಿದ್ಧವಾಗಿದೆ. ಇಲ್ಲಿ ಕಾಲಕಾಲಕ್ಕೆ ಆಗಮಿಸುವ ಸಂತರು ಶರಣರು ಅನುಭಾವಿಗಳು ಮಠದ ಭಿಕ್ಷೆಯನ್ನು ಸ್ವೀಕರಿಸಿ ತಮಗೆ ತಿಳಿದ ತತ್ವಪದವನ್ನು, ವಚನವನ್ನು ಹಾಡಿ ಹೋಗುವ ಪದ್ಧತಿ ಇದೆ. ಇಲ್ಲಿ ಭವ್ಯವಾದ ಮಲ್ಲಿಕಾರ್ಜುನ ದೇವರ ಶಿವಲಿಂಗ ಮತ್ತು ಬಸವಣ್ಣನ ಸುಂದರ ಮೂರ್ತಿಗಳಿವೆ. ಲಿಂಗಕ್ಕೆ ಮಲ್ಲಿಕಾರ್ಜುನ ಸ್ವಾಮಿಯ ಹಿತ್ತಾಳೆಯ ದೊಡ್ಡ ಮುಖವಿದೆ. ಮೇಲೆ ಸರ್ಪದ ಹೆಡೆಯ ಪ್ರಭಾವಳಿ ಇದೆ. ಸುತ್ತಲೂ ಹಿತ್ತಾಳೆಯ ಸರಳುಗಳಿಂದ ಮಾಡಿದ ಸೊಗಸಾದ ಕಟಾಂಜನವಿದೆ. ಈ ಕಟಾಂಜನಕ್ಕೆ ಸಣ್ಣ ಚೌಕಟ್ಟುಗಳ ಮೂರು ಬಾಗಿಲುಗಳಿವೆ. ಮುಂದೆ ವಿಶಾಲವಾದ ಪಾತಾಳ ಅಂಕಣ. ಇದರ ಮೇಲೆ ಹೂ ಚಿತ್ತಾರದ ತಗಡಿನ ಮುಚ್ಚಳ ಬಲಗಡೆಗೆ ವಿಶಾಲವಾದ ನೆಳಲು ಬೆಳಕಿನ ಜಾಲರಿಯ ವಿವಿಧ ಬಗೆಯ ಹೂಕಂಪುಗಳ ತೋಟವಿದೆ. ಪಕ್ಕದ ಬಯಲಲ್ಲಿ ರಥೋತ್ಸವಕ್ಕೆ ಮೀಸಲಾದ ಸ್ಥಳವಿದೆ. ಉತ್ಸವಕ್ಕೆ ಹತ್ತು ದಿನಗಳ ಮುಂಚೆ ವೃತವೆಂಬಂತೆ ಧಾರ್ಮಿಕ ಗೀತೆಗಳನ್ನು ಹಾಡುತ್ತ ರಥವನ್ನು ಕಟ್ಟುವ ಕೆಲಸ ನಡೆಯುತ್ತದೆ. ಗಾಲಿಗಳನ್ನು ಜೋಡಿಸುವಾಗ ಕಳಸವಿಡುವಾಗ ಶೃಂಗಾರಮಯವಾಗಿ ಪತಾಕಿಗಳನ್ನು ಹಚ್ಚುವಾಗ ದೇವರ ನಾಮಸ್ಮರಣೆಯನ್ನು ಮಾಡುತ್ತಾರೆ. ರಥೋತ್ಸವ ನಡೆಯುವ ಐದು ದಿನಗಳವರೆಗೆ ಶ್ರೀ ಶೇಷಭಟ್ಟ ಹಾಗೂ ಹುಲಗೂರ ದತ್ತಭಟ್ಟರ ಕೀರ್ತನೆ ನಡೆಯುತ್ತದೆ. ನಿರಂತರ ನಡೆಯುವ ಈ ಐದು ದಿನಗಳ ಕೀರ್ತನೆ ಕೊನೆಯಲ್ಲಿ ದನದ ಹುಣ್ಣಿಮೆಯಂದು ತೇರನ್ನು ಎಳೆಯುತ್ತಾರೆ. ಮಧ್ಯಾನ್ಹ ಅನ್ನ ಸಂತರ್ಪಣೆ ಸಾಯಂಕಾಲ ಹೂವು ಮಾಲೆಗಳಿಂದ ತೇರಿನ ಶೃಂಗಾರ ಉತ್ಸವ ಮೂರ್ತಿಯನ್ನು ರಥದಲ್ಲಿ ಇಡಿಸಿ ಪೇಟೆಯ ಕೊನೆಯವರೆಗೂ ಎಳೆಯುವ ಉತ್ಸಾಹ ಈ ಎಲ್ಲವೂ ರಾತ್ರಿಯ ಕೀರ್ತನೆಯಲ್ಲಿ ಸಂಪನ್ನವಾಗುತ್ತದೆ. ಮರುದಿನದ ಕಡುಬಿನ ಕಾಳಗ ಮತ್ತು ಪಲ್ಲಕ್ಕಿ ಉತ್ಸವ ಆ ಸಂಜೆಯ ವಚನ ಗಾಯನ ಮತ್ತು ತತ್ವಪದಗಳೊಂದಿಗೆ ಮುಕ್ತಾಯವಾಗುತ್ತದೆ.

## ಬಸವ ಜಯಂತಿ

ಅಕ್ಷಯ ತೃತೀಯದಂದು ಆಚರಿಸುವ ಬಸವ ಜಯಂತಿಯು ಇಡೀ ಸಮುದಾಯವು ಪಾಲ್ಗೊಳ್ಳುವ ಹಬ್ಬವಾಗಿದೆ. ಹನ್ನೆರಡನೇ ಶತಮಾನದಲ್ಲಿ ಸಾಮಾಜಿಕ ಕ್ರಾಂತಿಗೆ ಕಾರಣರಾದ ಬಸವಣ್ಣನವರ ವಿಚಾರಗಳು ಹಲವು ಸಾಂಸ್ಕೃತಿಕ ರೂಪಗಳಲ್ಲಿ ವ್ಯಕ್ತಪಡಿಸುವದು ವಿಶೇಷವಾಗಿದೆ. ಬಸವಣ್ಣ ಪ್ರತಿಪಾದಿಸಿದ ಸಮಾನತೆ, ಅಹಿಂಸೆ, ವ್ಯಕ್ತಿತ್ವದ ಘನತೆ ಮುಂತಾದ ಮಾನವೀಯ ಮೌಲ್ಯಗಳು ಪ್ರತಿಮನೆಯ ದೀಪವಾಗಿ ಬೆಳಗುವುದು ಮಹತ್ವದ ವಿಷಯವಾಗಿದೆ.

ಬಸವ ಜಯಂತಿಯಂದು ಒಕ್ಕಲಿಗರು ಎತ್ತುಗಳನ್ನು ಶೃಂಗರಿಸಿ ಬಂಡಿಗಳಲ್ಲಿ ಬಸವೇಶ್ವರನ ಭಾವಚಿತ್ರವಿಟ್ಟು ಮೆರವಣಿಗೆ ಮಾಡುವರು ಮತ್ತು ಮೆರವಣಿಗೆಯ ಮುಂಚೂಣಿಯಲ್ಲಿರುವವರು ವಾದ್ಯ ಸಮೇತ ಹಾಡು ಮತ್ತು ನೃತ್ಯಗಳೊಂದಿಗೆ ಭಾವಾವೇಷವನ್ನು ಕಟ್ಟಿಕೊಡುವರು. ಈ ಮೆರವಣಿಗೆಯಲ್ಲಿ ಹನ್ನೆರಡನೇ ಶತಮಾನದ ಅನುಭವ

ಮಂಟಪದ ಕ್ರಿಯಾಶೀಲ ಸದಸ್ಯರುಗಳಾಗಿದ್ದ ಬಸವಣ್ಣ, ಅಲ್ಲಮಪ್ರಭು, ಅಕ್ಕಮಹಾದೇವಿ ಮುಂತಾದ ಅನುಭಾವಿಗಳ ವೇಷ ಧರಿಸಿ ಅವರು ರಚಿಸಿದ ವಚನಗಳನ್ನು ಹಾಡುವುದು, ಹನ್ನೆರಡನೆ ಶತಮಾನದ ಸಾಂಸ್ಕೃತಿಕ ವೈಭವವನ್ನು ನೆನಪಿಸಿಕೊಳ್ಳುವ ಯತ್ನವಾಗಿದೆ. ಊರಿನ ದೇವಸ್ಥಾನಗಳಲ್ಲಿ ಅಂದು ಇಡಿ ರಾತ್ರಿ ಆಮಂತ್ರಿತ ಗಾಯಕರಿಂದ ವಚನಗಾಯನ ಏರ್ಪಡಿಸಲಾಗುತ್ತದೆ. ಇದರಲ್ಲಿ ಸ್ಥಳೀಯ ಕಲಾವಿದರು ಭಾಗವಹಿಸುತ್ತಾರೆ.

**ಶಿವಾಜಿ ಜಯಂತಿ**

ಮರಾಠ ಸಾಮ್ರಾಜ್ಯದ ಮಹಾರಾಜನಾಗಿದ್ದ ಛತ್ರಪತಿ ಶಿವಾಜಿಯ ಹೋರಾಟದ ನೆನಪುಗಳು ಈ ಜಯಂತಿಯ ಆಚರಣೆಯ ಸಂದರ್ಭದಲ್ಲಿ ಆವೇಶಭರಿತವಾಗಿ ಪುನರ್‌ನಿರ್ಮಾಣವಾಗುತ್ತದೆ. ಆತನ ಸಾಹಸ ಹೋರಾಟ ವೀರತನ ಇವೆಲ್ಲವು ಮರಾಠಾ ಸಮಾಜದವರು ಹಾಡು, ನೃತ್ಯ ಮತ್ತು ಹಬ್ಬದ ಮೂಲಕ ಆಚರಿಸುತ್ತ ಬಂದಿದ್ದಾರೆ. ಅಂದಿನ ಜಮಖಂಡಿ ಸಂಸ್ಥಾನದ ಪಟವರ್ಧನ ಮಹಾರಾಜರ ಆಡಳಿತ ಕಾಲದಲ್ಲಿ ಕುಂದಗೋಳದ ಮೂರು ಶ್ರೀಮಂತ ಮನೆತನಗಳಾದ ನಾಡಿಗೇರ, ·ದೇಶಪಾಂಡೆ, ದೇಸಾಯಿ ಮನೆತನದವರು ಪಾಳೆಗಾರರಾಗಿದ್ದರು. ಪ್ರಾಯಶಃ ಪಾಳೆಗಾರಿಕೆಯ ಕಾಲದಲ್ಲಿ ಮರಾಠಾ ಸಮಾಜದವರು ಕುಂದಗೋಳ ಪರಿಸರದಲ್ಲಿ ನೆಲೆಸಲು ಸಾಧ್ಯವಾಗಿರಬಹುದು. ಇಟು ಕರ್ನಾಟಕ ಮತ್ತು ಮಹಾರಾಷ್ಟ್ರ ರಾಜ್ಯಗಳ ನಡುವಿನ ರಾಜಕೀಯ ಸಂಬಂಧವಾಗಿರದೇ ಸಾಂಸ್ಕೃತಿಕ ವಿದ್ಯಮಾನಗಳ ವಿನಿಮಯಕ್ಕೂ ಕಾರಣವಾಗಿದೆ.

ಪ್ರತಿಮನೆಯವರು ತಮ್ಮ ತಮ್ಮ ಮನೆಗಳಲ್ಲಿ ಶಿವಾಜಿ ಮಹಾರಾಜರ ಭಾವಚಿತ್ರವನ್ನಿಟ್ಟು ಪೂಜಿಸಿ ಮಧ್ಯಾಹ್ನ ಎಲ್ಲರೂ ಸಭೆ ಸೇರಿ ಮೆರವಣಿಗೆಯನ್ನು ಹೊರಡಿಸುವರು. ಸುಂದರ ಕುದುರೆಗಳನ್ನು ತರಿಸಿ ಅಲಂಕರಿಸಿ ಅದರ ಮೇಲೆ ಶಿವಾಜಿಯ ಪಾತ್ರಧಾರಿ ಒಬ್ಬ ಕುಳಿತುಕೊಳ್ಳುತ್ತಾನೆ. ಅವನ ಕೈಯಲ್ಲಿ ಶಿವಾಜಿಯು ಬಳಸುತ್ತಿದ್ದ ಯುದ್ಧಾಯುಧಗಳು ಇರುತ್ತವೆ. ಹೀಗೆ ಶಿವಾಜಿಯು ಠೀವಿಯಿಂದ ಕುಳಿತುಕೊಳ್ಳುವ ಮಹಾರಾಜನ ಜೊತೆಗೆ ಉಳಿದ ಸರದಾರರು, ಕಾಲಾಳುಗಳು ಜೊತೆಯಲ್ಲಿರುತ್ತಾರೆ. ಧಾರ್ಮಿಕ ಪುನರುಜ್ಜೀವನದ ಸಂಕೇತವಾಗಿ ಶಿವಾಜಿಯ ಬೃಹತ್ ಭಾವಚಿತ್ರಗಳೊಂದಿಗೆ ಶಂಕರಾಚಾರ್ಯ, ಮಧ್ವಾಚಾರ್ಯ, ಶರಣರ ಮತ್ತು ಸಂತರ ಭಾವಚಿತ್ರಗಳ ಚೌಕಟ್ಟುಗಳು ಮೆರವಣಿಗೆ ಮಾಡುವವರ ಹೆಗಲಮೇಲೆ ವಿರಾಜಿಸುತ್ತವೆ. ವಾದ್ಯ ವೈಭವದೊಂದಿಗೆ ಊರಿನ ಪ್ರಮುಖ ಬೀದಿಗಳಲ್ಲಿ ಮೆರವಣಿಗೆ ಹೊರಟು ಅಲ್ಲಲ್ಲಿಯ ಕೂಟಸ್ಥಾನಗಳಲ್ಲಿ ಮರಾಠಿಗರ ಶೌರ್ಯ ಸಾಹಸ ಪ್ರದರ್ಶಿಸುವ ಸಾಕ್ಷ್ಯಚಿತ್ರಗಳು ಪ್ರದರ್ಶನವಿರುತ್ತದೆ. ಶಿವಾಜಿಯ ಕಾಲದಲ್ಲಿದ್ದ ಡಾಲ್‌ಪಟ್ಟಿ ಎಂಬ ಯುದ್ಧದ ವೈಖರಿಯನ್ನು ಅಭಿನಯಿಸಿ ತೋರಿಸುತ್ತಾರೆ. ಮರಾಠಿಗರ ಸಾಮ್ರಾಜ್ಯದ ಪೂರಕವಾಗಿ ಅಭಂಗಗಳನ್ನು ಹಾಡುವ ಸತ್‌ಸಂಪ್ರದಾಯವಿದೆ.

**ಕರಿಬಂಡಿ ಉತ್ಸವ**

ಸುಮಾರು ಹತ್ತನೇ ಶತಮಾನದಲ್ಲಿ ಬ್ರಹ್ಮದೇವರ ದೇವಸ್ಥಾನ ನಿರ್ಮಾಣಗೊಂಡ ಉಲ್ಲೇಖವಿದೆ. ಕಾರಹುಣ್ಣಿಮೆಯ ದಿನ ಅತ್ಯಂತ ವೈವಿಧ್ಯಪೂರ್ಣವಾಗಿ ಈ ಉತ್ಸವವನ್ನು ಆಚರಿಸುತ್ತಾರೆ.

ವೀರಗಾರರು ಒಂಬತ್ತು ದಿನ ಉಪವಾಸ ವ್ರತ ಕೈಕೊಂಡು ಹುಣ್ಣಿಮೆ ರಾತ್ರಿ ವೀರಗಾರರು ಹೂರಣವನ್ನು ಉಣಿಸಿ ಉಳಿದದ್ದುನ್ನು ಪ್ರಸಾದವೆಂದು ಮನೆಗೆ ತೆಗೆದುಕೊಂಡು ಹೋಗಿ ಸೇವಿಸಿ ಉಪವಾಸ ಮುಗಿಸುವರು.

ಕಾರಹುಣ್ಣಿಮೆಯ ಮರುದಿನವೇ ಹೊನ್ನುಗ್ಗಿ ಪ್ರತಿ ಮನೆಯಲ್ಲೂ ಕಿಚಡಿಯನ್ನು ಮಾಡುವರು. ಎತ್ತುಗಳನ್ನು ಬಂಗಾರದ ಸರಗಳನ್ನು ಹಾಕಿ ಜೂಲ ಹಾಕಿ ಶೃಂಗರಿಸಿ ಪಡಸಾಲೆಯ ಕಟ್ಟೆಯ ಮುಂದೆ ನಿಲ್ಲಿಸಿ ಮುತ್ತೈದೆಯರು ಹಾಡಿನೊಂದಿಗೆ ಆರತಿಯನ್ನು ಮಾಡಿ ಕಿಚಡಿಯನ್ನು ತಿನ್ನಿಸುವರು. ಆ ಮೇಲೆ ಮನೆಯ ಜನರು ಹಬ್ಬದ ಊಟವನ್ನು ಮಾಡುವರು. ಮರುದಿನ ಎತ್ತಿನ ಮೈ ತೊಳೆದು ಕೋಡಿಗೆ ಬಣ್ಣ ಹಚ್ಚಿ ಜೂಲ ಹಾಕಿ ನೊಗಕ್ಕೆ ಕೇದಿಗೆಯ ಹೆಣಿಕೆ ಗರಿಗಳನ್ನು ಕಟ್ಟಿ ನೊಗಹೂಡಿ ಕೋಡುಗಳಿಗೆ ಕೋಡಬಳೆ, ಚಕ್ಕುಲಿ ಹಾಕುವರು. ತಾವೂ ಶೃಂಗರಿಸಿಕೊಂಡು ಎತ್ತುಗಳೊಂದಿಗೆ ಮೆರವಣಿಗೆಯಲ್ಲಿ ಬ್ರಹ್ಮದೇವರ ಗುಡಿಗೆ ಬರುವರು. ಗುರುತಿನ ಓಣಿಯ ಜನರು ಕೂಡಿ ಕರಡಿಮಜಲು ಇಲ್ಲವೆ ಬ್ಯಾಂಡಸೆಟ್ಟಿನ ಮೆರವಣಿಗೆಯನ್ನು ನಡೆಸುವರು. ಜಾತ್ರೆಯನ್ನು ಮುಗಿಸಿ ಎತ್ತುಗಳು ಮನೆಗೆ ಮರಳಿದಾಗ ಬಾಗಿಲಿಗೆ ಕಟ್ಟಿದ ಬೇವಿನ ಸರವ ಹರಿದು ಮನೆಯನ್ನು ಪ್ರವೇಶಿಸುವರು. ಈ ವಾಡಿಕೆಗೆ ಕರಿಹರಿಯುವದೆಂದು ಕರೆಯುತ್ತಾರೆ.

ಕರಿಬಂಡಿ ಉತ್ಸವದಲ್ಲಿ ವೀರಗಾರರು ಪ್ರಮುಖ ಪಾತ್ರ ವಹಿಸುವರು. ಇದರಲ್ಲಿ ಗೌಡರ ವೀರಗಾರರು ಏಳು ಜನ, ಶ್ಯಾನುಬೋಗರು ಏಳು ಜನ ಹೀಗೆ ಒಟ್ಟು ಹದಿನಾಲ್ಕು ಜನ ವೀರಗಾರಿರುತ್ತಾರೆ. ಗೌಡರ ವೀರಗಾರರಿಗೆ ಅಪ್ಲಾಪುರದ ಬಂಡಿ, ಶ್ಯಾನಬೋಗರ ವೀರಗಾರರ ಉಗರಗೋಳವರ ಬಂಡಿ, ಬಂಡಿಗಳನ್ನು ಬೇವಿನ ಟೊಂಗೆಗಳಿಂದ ಅಲಂಕರಿಸಿಕೊಂಡು ತಮ್ಮ ಮನೆಯಿಂದ ಓಡಿಸುತ್ತ ಗುಡಿಯ ಮುಂದೆ ತಂದು ನಿಲ್ಲಿಸುವರು. ನಂತರ ಗೌಡರು ಶ್ಯಾನಬೋಗರು ದೈವದೋಲೆಯಿಂದ ಅವರಿಗೆ ಸಲ್ಲಬೇಕಾದ ಪಾಲನ್ನು ಬಂಡಿಯ ಪೂಜೆಯ ನಂತರ ನೀಡುವರು. ನಂತರ ಬಂಡಿಗಳನ್ನು ಹೂಡಿಕೊಂಡು ಕರೋಗಲ್ಲ ಇವರ ಮನೆಯ ಮುಂದೆ ನಿಲ್ಲಿಸುತ್ತಾರೆ. ಎಲ್ಲ ವೀರಗಾರರು ತಮ್ಮ ತಮ್ಮ ಮನೆಗಳಿಂದ ಬಂದು ಇಲ್ಲಿ ಕೂಡುವರು. ವೀರಗಾರರು ಜರಿಪಿತಾಂಬರ ಉಟ್ಟು ರೇಶ್ಮೆ ಜರಿತಾರೆ ಶಲ್ಲೆ ಹಾಕಿ ಸಡುಬಿಗೆ ಪಟ್ಟಿ ಇಟ್ಟು ತಲೆ ಮೇಲೆ ಪಗಡೆಯನ್ನು ಧರಿಸಿ ಕೈಯಲ್ಲಿ ಬಿಚ್ಚುಗತ್ತಿ ಮತ್ತು ಗಜದಂಡ ಹಿಡಿದುಕೊಂಡು ಜೈಬ್ರಹ್ಮ ಲಕ್ಷ್ಮಿನರಸಿಂಹ ಎಂದು ವೀರಘೋಷ ಹಾಕುತ್ತ ಬಂಡಿ ಹತ್ತಿ ಹೋಗುವರು. ಗುಡಿಗೆ ಬಂದ ಮೇಲೆ ಅಂಗಳದಲ್ಲಿ ಸಣ್ಣ ಚೌಕ ತಗ್ಗನ್ನು ತೋಡಿ ಬೆಂಕಿಯನ್ನು ಹಾಕಿ ಅದರಲ್ಲಿ ಹಾಯ್ದು ಗುಡಿಯೊಳಗೆ ಪ್ರವೇಶಿಸುವರು.

ಐದು ದಿನಗಳವರೆಗೆ ನಿರಂತರವಾಗಿ ನಡೆಯುವ ಕಾರ ಹುಣ್ಣಿಮೆಯ ಉತ್ಸವದಲ್ಲಿ ಲಾವಣಿಗಳನ್ನು ದೇಶ ಭಕ್ತಿ ಗೀತೆಗಳನ್ನು ಹಾಡುವ ಪರಿಪಾಟವಿದೆ. ವೀರಗಾರರು ಹಾಡುವ ಹಾಡಿನಲ್ಲಿ ನಾಡು ನುಡಿಯ ಕುರಿತು ವೀರಾವೇಷವನ್ನು ಪ್ರಚೋದಿಸುವ ಗುಣವಿದೆ.

## ಮಣ್ಣೆತ್ತಿನ ಹಬ್ಬ

ಮಣ್ಣೆತ್ತಿನ ಹಬ್ಬವೂ ಭೂಮಿಯನ್ನು ಪೂಜಿಸುವ ಮತ್ತು ಪ್ರಕೃತಿಯಿಂದ ಪಡೆದ ಸುಖ ಸಮೃದ್ಧಿಗೆ ಋಣ ತೀರಿಸುವ ಜಾನಪದ ಆಚರಣೆಯಾಗಿದೆ. ಕಾಲಾಂತರದಿಂದ ಮಣ್ಣಿನೊಂದಿಗೆ ಭಾವನಾತ್ಮಕ ಸಂಬಂಧವನ್ನು ಹೊಂದಿದ ರೈತರಿಗೆ ಇದು ಅತ್ಯಂತ ಮುಖ್ಯವಾದ ಹಬ್ಬವಾಗಿದೆ. ಪಂಚಭೂತಗಳಲ್ಲಿ ಒಂದಾದ ಮಣ್ಣಿನಿಂದಲೇ ಮನುಷ್ಯನ ಸಾಂಸ್ಕೃತಿಕ ಬದುಕಿನ ಆರಂಭವಾಗುವುದನ್ನು ಇದು ಸಾಂಕೇತಿಕವಾಗಿ ನಿರೂಪಿಸುತ್ತದೆ. ಮನುಷ್ಯ, ಪ್ರಕೃತಿ ಮತ್ತು ಪ್ರಾಣಿಗಳ ನಡುವಿನ ಸಾಮರಸ್ಯವನ್ನು ದೈವಿಕ ಭಕ್ತಿ ಮತ್ತು ಸಂಗೀತದ ಮೂಲಕ ಇಲ್ಲಿ ವ್ಯಕ್ತವಾಗುವದನ್ನು ಗಮನಿಸಬಹುದಾಗಿದೆ. ಮಣ್ಣನ್ನು ಹಸನ ಮಾಡಿ ಬೀಜ ಬಿತ್ತುವ ನೀರು ಹನಿಸುವ ಕಾಯಕದಲ್ಲಿ ರೂಢಿಗತವಾದ ಒಂದು ಲಯವಿರುತ್ತದೆ. ಈ ಕಾಯಕದಲ್ಲಿ ತನ್ಮಯತೆಯಿಂದ ತೊಡಗಿಕೊಂಡಿರುವ ರೈತನು ಸುಖಸಮೃದ್ಧಿಯನ್ನು ಹಾಡಿನ ಮೂಲಕ ವ್ಯಕ್ತಪಡಿಸುವುದು ವಿಶಿಷ್ಟವಾಗಿದೆ. ಮಳೆಗಾಲದಲ್ಲಿ ಆಚರಿಸುವ ಈ ಹಬ್ಬದ ದಿನ ಶ್ರದ್ಧೆಯಿಂದ ಅನ್ನ ಕೊಡುವ ಮಣ್ಣನ್ನು ಉತ್ತಲು ಹೆಗಲು ಕೊಡುವ ಎತ್ತುಗಳನ್ನು ಪೂಜಿಸುವರು. ಸಾಂಕೇತಿಕವಾಗಿ ಮಣ್ಣಿನಿಂದ ಮಾಡಿದ ಎತ್ತುಗಳನ್ನು ಮತ್ತು ಗೋರಲೆಯನ್ನು ತಯಾರಿಸಿ ಪೂಜಿಸುತ್ತಾರೆ. ಹಿರಿಯರಂತೆ ಚಿಕ್ಕಮಕ್ಕಳಿಗೂ ಕೂಡಾ ಇದು ಕಲೆಯ ಆಟವಾಗಿದೆ. ತಮ್ಮ ಮನೆಯ ಅಂಗಳದಲ್ಲಿ ಹದ ಮಾಡಿದ ಮಣ್ಣಿನ ಮುದ್ದೆಯಿಂದ ಪುಟ್ಟ ಮಕ್ಕಳು ಎತ್ತಿನ ಮೂರ್ತಿಯನ್ನು ತಯಾರಿಸುವರು. ಮಣ್ಣಿನಿಂದಲೇ ಅದಕ್ಕೆ ಹುರಿಗೆಜ್ಜೆ, ಕೊಡಣಸು, ಸರಮಕಾಡಗಳನ್ನು ಮಾಡಿ ಶೃಂಗರಿಸುವರು. ಗೋದಲಿಯನ್ನು ಮಾಡಿ ಜಗಲಿ ಮೇಲೆ ಇಡುವರು. ಆಮೇಲೆ ದೇವರ ಪೂಜೆಯೊಂದಿಗೆ ವಿಭೂತಿ ಕುಂಕುಮ ಧಾರಣೆ ಮಾಡಿ ಹೂ ಪತ್ರಿ ಏರಿಸಿ ಧೂಪ ದೀಪ ಹಚ್ಚಿ ಕಡುಬಿನ ನೈವೇದ್ಯ ಮಾಡುವರು.

ಒಕ್ಕಲುತನಕ್ಕೆ ಸಂಬಂಧಿಸಿದ ಕೌಶಲ್ಯಗಳನ್ನು ಹಿರಿಯರು ತಮ್ಮ ಮುಂದಿನ ಜನಾಂಗಕ್ಕೆ ವರ್ಗಾಯಿಸುವ ಹಬ್ಬ ಇದಾಗಿದೆ. ಆದ್ದರಿಂದಲೇ ಮಕ್ಕಳು ಮಣ್ಣಿನಿಂದ ಬಂಡಿ ಒಕ್ಕಲುತನಕ್ಕೆ ಬೇಕಾದ ಸಾಮಗ್ರಿಗಳು ಎಲ್ಲ ತರಹದ ಹಣ್ಣು, ಕಾಯಿಪಲ್ಯೆಗಳನ್ನು, ಅಡುಗೆಗೆ ಬೇಕಾಗುವ ಗಡಿಗೆ, ಒಲೆ ಮುಂತಾದ ಮಾದರಿಗಳನ್ನು ವಾಹನಗಳನ್ನು ಸಾಕು ಮತ್ತು ವನ್ಯ ಪ್ರಾಣಿಗಳನ್ನು ತಯಾರಿಸುವರು. ಇದು ಎಳೆಯರಲ್ಲಿ ಮಣ್ಣಿನ ಕುರಿತು ಪ್ರೀತಿಯ ನಂಟನ್ನು ಬೆಳೆಸುವ, ಆ ಮೂಲಕ ಒಕ್ಕಲುತನದ ಬಗ್ಗೆ ಅಗತ್ಯ ಒಲವನ್ನು ಮೂಡಿಸುವ ಹಬ್ಬವಾಗಿದೆ. ಮಣ್ಣೆತ್ತಿನ ಅಮವಾಸ್ಯೆಯೆಂದು ಹೊಲದಲ್ಲಿ ಸುಗ್ಗಿಯ ಕಣದಲ್ಲಿ ಕಾಯಕ ಪದಗಳನ್ನು ಹಾಡುವ ಪದ್ಧತಿ ಇದೆ. ಹೀಗೆ ಮಣ್ಣೆತ್ತಿನ ಹಬ್ಬವು ಮನುಷ್ಯ ಸ್ಥಾಪಿಸಿಕೊಳ್ಳಬೇಕಾದ ಮತ್ತು ಮರೆಯಬಾರದ ಮಣ್ಣಿನ ನಂಟಿಗೆ ಸಂಗೀತವನ್ನು ಒಂದು ಸುವರ್ಣ ಸೇತುವೆಯಾಗಿ ಉಪಯೋಗಿಸಿಕೊಳ್ಳುತ್ತದೆ.

## ನಾಗರಪಂಚಮಿ

ಮಳೆಗಾಲದಲ್ಲಿ ಆಚರಿಸುವ ಐದು ದಿನಗಳ ನಾಗರಪಂಚಮಿ ಹಬ್ಬ ಫಲವಂತಿಕೆಯನ್ನು ಪ್ರತಿಪಾದಿಸುವ ಹಬ್ಬವಾಗಿದೆ. ಹಾವು ಸಂತಾನ ಅಥವಾ ವಂಶಾಭಿವೃದ್ಧಿಯ ದೇವತೆಯಾಗಿ ಪುರಾಣ ಶಾಸ್ತ್ರದಲ್ಲಿ ಉಲ್ಲೇಖಿಸಲ್ಪಟ್ಟಿದೆ.

ಆದ್ದರಿಂದಲೇ ಸ್ತ್ರೀಯರಿಗೆ ಇದು ಅತ್ಯಂತ ಮಹತ್ವದ ಹಬ್ಬವಾಗಿದೆ. ಕೊಟ್ಟ ಮನೆಗೆ ಸಮೃದ್ಧಿಯನ್ನು ತಂದು ಜೀವ ಒಡಲನ್ನು ತುಂಬಿಕೊಂಡು ತವರು ಮನೆಗೆ ಹೋಗಲು ಅಣ್ಣನ ದಾರಿ ಕಾಯುವ ಗರತಿಯರು ಪಂಚಮಿ ಬಂತು ಸನಿಹಾಕ ನಮ್ಮ ಅಣ್ಣ ಬರಲಿಲ್ಲ ಕರಿಯಾಕ ಎಂಬ ಜಾನಪದ ಹಾಡುಗಳಿಗೆ ಕಾರಣವಾಗಿದೆ. ನಾಗಪ್ಪನಿಗೆ ಹಾಲು ಎರಯುವ ಸಂದರ್ಭದಲ್ಲಿ ಹಾಡುವ ಹಾಡು ಕೂಡಾ ವಿಶಿಷ್ಟವಾಗಿದೆ.

ನಾಗರಪಂಚಮಿಯು ಶ್ರಾವಣಮಾಸದಲ್ಲಿ ಬರುತ್ತದೆ. ಶ್ರಾವಣ ಎಂದರೆ ಸುಶ್ರಾವ್ಯವಾದದ್ದನ್ನು ಆಲಿಸಿ ಆನಂದಿಸುವದೆಂಬರ್ಥ. ಭೂಮಿ ಮಳೆಯ ನಾದವನ್ನು ಆಲಿಸುವಂತೆ ಜನ ಸಮುದಾಯವು ಮನೆ ಮತ್ತು ದೇವಸ್ಥಾನಗಳಲ್ಲಿ ಸಂಗೀತವನ್ನು ಕೇಳುವ ಅವಕಾಶವನ್ನು ಒದಗಿಸುವ ಹಬ್ಬವಾಗಿದೆ. ಮನೆಯ ಮುಂದಿನ ಕಲ್ಲಿನ ಮೇಲೆ ಕೆತ್ತಿದ ನಾಗದೇವತೆಗೂ ಅಥವಾ ಬೆಳ್ಳಿಯ ನಾಗಪ್ಪನಿಗೂ ಹಾಲೆರೆಯುವ ಸಂಪ್ರದಾಯವಾಗಿದೆ. ನಾಗಪ್ಪನಿಗೆ ಹೆಣ್ಣು ಮಕ್ಕಳು ಹಾಲೆರೆಯುವದು, ಹಾಡುವುದು, ಸಂತಾನಾಪೇಕ್ಷೆಯನ್ನು ಪ್ರಕಟಿಸುವ ವ್ರತವಾಗಿದೆ. ಕೊಬ್ಬರಿ ಬಟ್ಟಲದಲ್ಲಿ ಹಾಲನ್ನು ಹಾಕಿ ಅದನ್ನು ಹುರಿಯುತ್ತ ನನ್ನ ಪಾಲಿನ, ದೇವರ ಪಾಲಿನ, ಬಂಧು ಬಳಗದ ಪಾಲಿನ, ಸರ್ವರ ಪಾಲಿನ ಹಾಲು ಎಂಬ ಸಂದೇಶವನ್ನು ಪ್ರಕಟಿಸುವ ಹಾಡಿನಲ್ಲಿ ಒಂದು ಜನಾಂಗದ ಪ್ರೀತಿಯ ಮುಂದುವರಿಕೆಗೆ ಸಾಕ್ಷಿಯಾಗಿದೆ. ಇದರೊಂದಿಗೆ ಶೃಂಗರಿಸಿದ ಜೋಕಾಲಿಯನ್ನು ಏರಿ ಹಾಡುತ್ತ ತೂಗಿಕೊಳ್ಳುತ್ತ ಹಾಡುವ ಸಡಗರವೇ ಬೇರೆ.

ಈ ಪ್ರಕಾರ ಐದು ದಿನಗಳವರೆಗೆ ಈ ಹಬ್ಬವನ್ನು ಆಚರಿಸುವುದಲ್ಲದೇ ಪಾಡ್ಯದಿಂದ ಶ್ರಾವಣಮಾಸದ ಕೊನೆಯವರೆಗೆ ಗುಡಿಗಳಲ್ಲಿ ಮತ್ತು ಮಠಗಳಲ್ಲಿ ಪುರಾಣ ಪ್ರವಚನ ಕೀರ್ತನೆ ಸಂಗೀತ ಕಾರ್ಯಕ್ರಮಗಳು ನಡೆಯುತ್ತವೆ. ಹೀಗೆ ಮನುಷ್ಯನ ಮೂಲಭೂತ ಪ್ರವೃತ್ತಿಗಳಲ್ಲಿ ಒಂದಾದ ಕಾಮ, ಅದರ ಫಲವಂತಿಕೆಯ ಮುಂದುವರಿಕೆಯನ್ನು ಮನುಕುಲದ ನಿರಂತರ ಲೀಲೆಯನ್ನಾಗಿ ಆಚರಿಸುವ ನಾಗರಪಂಚಮಿ ಸಾಂಸ್ಕೃತಿಕವಾಗಿ ವಿಶಿಷ್ಟವಾಗಿದೆ.

## ಕೃಷ್ಣಜನ್ಮಾಷ್ಟಮಿ

ಕುರುಕ್ಷೇತ್ರ ರಣರಂಗದಲ್ಲಿ ಬಂಧು ವ್ಯಾಮೋಹಕ್ಕೆ ಒಳಗಾಗಿ ವಿರಕ್ತಿ ತಾಳಿ ನಿಂತ ಅರ್ಜುನನಿಗೆ ಕೃಷ್ಣ ಉಪದೇಶ ಮಾಡಿ ಅವನಿಗೆ ಆತ್ಮಜ್ಞಾನ ಮಾಡಿಸಿದ ಸಾರವೇ ಇಂಥ ಭಗವದ್ಗೀತೆ ಸಾರವನ್ನು ಉಪದೇಶ ಮಾಡಿದ ಭಗವಾನ ಶ್ರೀಕೃಷ್ಣನ ಬಾಲ್ಯಲೀಲೆಯನ್ನು ಪ್ರತೀಮನೆಗಳಲ್ಲಿ ಆಚರಿಸುವ ಹಬ್ಬವೇ ಕೃಷ್ಣಾಷ್ಟಮಿ. ಜನರು ತಮ್ಮ ಸಂಸಾರದ ಸಂತೆಯ ನಡುವೆ ಕೃಷ್ಣನನ್ನು ಅವತರಿಸಿಕೊಳ್ಳುವ ಪರಂಪರೆ ಇದರಲ್ಲಿ ಹಾಸು ಹೊಕ್ಕಾಗಿದೆ.

ಕುಂದಗೋಳದ ಕಿಲ್ಲೆಯಲ್ಲಿ ಮುರಳಿ ದೇವರ ಪ್ರಾಚೀನ ಗುಡಿ ಇದೆ. ಪ್ರತಿವರ್ಷವೂ ಗುಡಿಯನ್ನು ಅಲಂಕರಿಸಿ ವೈಯ್ಯಾರದ ಕೃಷ್ಣನ ಮೂರ್ತಿಗೆ ಪಟ್ಟೆ ಪೀತಾಂಬರ ಶಲ್ಯ ಕಿರೀಟಧಾರಣ ಮಾಡಿಸಿ ಪೂಜಿಸಿದ್ದಾರೆ. ಹಿಂದೆಲ್ಲ

ಕುಲಕರ್ಣಿ ಓಣಿಯ ಹೆಣ್ಣು ಮಕ್ಕಳು ರಾಧಾ ಕೃಷ್ಣರ ವೇಷ ಧರಿಸಿ ಕೋಲಾಟವಾಡುತ್ತ ಹಾಡುತ್ತ ರಾಸಲೀಲೆಯ ಅಭಿನಯದಲ್ಲಿ ಗುಡಿಗೆ ಬರುತ್ತಾರೆ. ಗುಡಿಗೆ ಬಂದ ರಾಧಾಕೃಷ್ಣರ ಜೋಡಿ ದೇವರಿಗೆ ಹೂ ಕುಂಕುಮ ಸಮರ್ಪಿಸಿ ಕೃಷ್ಣಲೀಲಾ ನೃತ್ಯವನ್ನು ಕೋಲಾಟವನ್ನು ಆಡುತ್ತಾರೆ. ಕೃಷ್ಣ, ದ್ರೌಪದಿ, ಪಾಂಡವರಿಗೆ ಸಂಬಂಧಪಟ್ಟ ಗೀತೆಗಳನ್ನು ಹಾಡುತ್ತಾರೆ. ಗುಡಿಯ ನಡುವಿನ ಅಂಕಣದ ತೊಲೆಗೆ ಶೃಂಗರಿಸಿದ ತೊಟ್ಟಿಲವನ್ನು ಕಟ್ಟಿ ಅದರ ನಾಲ್ಕೂ ಕಂಬಗಳಿಗೆ ಪುಟ್ಟ ಮಗುವಿನ ನೆನಪಿಗೆ ಕುಂಚಿಗೆಯನ್ನು ಕಟ್ಟಿ ತೊಟ್ಟಿಲಲ್ಲಿ ಹಸಿ ತೆಂಗಿನಕಾಯಿಯನ್ನು ಇಟ್ಟು ಪೂಜಿಸಿ ಕೃಷ್ಣನ ಜನ್ಮ ಪೂರ್ವದ ಕಥೆಯನ್ನು ನಿರೂಪಿಸುತ್ತಾರೆ. ಮಧ್ಯರಾತ್ರಿಯ ಸರಿಯಾಗಿ ಕೃಷ್ಣನನ್ನು ತೊಟ್ಟಿಲಿಗೆ ಹಾಕಿ, ಸಾಮೂಹಿಕವಾಗಿ ಜೋಗುಳ ಹಾಡಿ ಮಂಗಳಾರತಿಯನ್ನು ಮಾಡುವರು.

ಈ ಸಂದರ್ಭದಲ್ಲಿ ಶ್ರೀಹರಿಹರೇಶ್ವರ ಭಜನಾ ಮಂಡಳದವರು, ಶ್ರೀ ಶಂಭುಲಿಂಗೇಶ್ವರ ಭಜನಾ ಮಂಡಳದವರು ಹಾಗೂ ವಿಠಲ ಭಜನಾ ಮಂಡಳದವರು ಕೃಷ್ಣನಿಗೆ ಸಂಗೀತ ಸೇವೆಯನ್ನು ಸಲ್ಲಿಸುತ್ತಾರೆ. ಮಹಾಭಾರತದ ಕಾಲದಿಂದಲೂ ಪ್ರತಿವರ್ಷ ನಿರಂತರವಾಗಿ ಸಾರ್ವತ್ರಿಕವಾಗಿ ಆಚರಿಸುತ್ತ ಬಂದ ಹಬ್ಬ ಇದಾಗಿದೆ. ಘಟ ಸ್ಥಾಪನೆಯಿಂದ ಪ್ರಾರಂಭವಾಗುವ ಈ ಹಬ್ಬವು ವಿಜಯದಶಮಿಯಂದು ಮುಕ್ತಾಯವಾಗುವುದು. ಅಶ್ವಿಜ ಮಾಸದಲ್ಲಿ ಆಚರಿಸುವ ಈ ಹಬ್ಬವನ್ನು ನವರಾತ್ರಿಯಂತಲೂ ಅಥವಾ ಮಹಾನವಮಿಯಂತಲೂ ಕರೆಯುತ್ತಾರೆ.

ಘಟ ಸ್ಥಾಪನೆಯ ದಿವಸ ಅನಾದಿಕಾಲದ ಪರಂಪರೆಯಂತೆ ದೇವಿಯನ್ನು ಸ್ಥಾಪಿಸುವರು ಇಲ್ಲವೇ ತಮ್ಮ ಮನೆ ದೇವರ ನಂದಾದೀಪವನ್ನು ಬೆಳಗಿ ಘಟೋತ್ಸವ ಮಾಡುವರು. ಕೆಲವು ಶೃದ್ಧಾವಂತರು ತಮ್ಮ ಮನೆಗಳಲ್ಲಿಯೇ ಮುಸ್ಸಂಜೆಯ ನಂದಾದೀಪದ ಬೆಳಕಿನಲ್ಲಿ ದೇವಿ ಪುರಾಣವನ್ನು ಸುಶ್ರಾವ್ಯವಾಗಿ ಪಠಿಸುವರು. ಮಠ ಮಂದಿರಗಳಲ್ಲಿ ದೇವಿ ಪುರಾಣವನ್ನು ಮಾಡಿಸುವರು. ಗ್ರಾಮದೇವತೆಗಳಾದ ದುರ್ಗಾದೇವಿ ಮತ್ತು ದ್ಯಾಮವ್ವ ಇವರಿಗೆ ಒಂಬತ್ತು ದಿನಗಳವರೆಗೆ ಬೇರೆ ಬೇರೆಯಾದ ಉಡುಗೆ ತೊಡಿಸಿ ಅಲಂಕರಿಸುವರು. ಒಂಬತ್ತನೆ ದಿವಸ ಬಂಡೆ ಪೂಜೆಯನ್ನು ಮಾಡುವರು ಅಂದು ತಮ್ಮ ತಮ್ಮ ಉದ್ಯೋಗಕ್ಕೆ ಉಪಯೋಗಿಸಿದ ಆಯುಧಗಳನ್ನು ಪ್ರದರ್ಶಿಸುವರು. ಒಕ್ಕಲುತನ ಮಾಡುವವರು ಗುದ್ದಲಿ ಕುಡಗೋಲು ಒನಕೆ, ಬಿತ್ತುವ ಶಡ್ಡಿ ಬಟ್ಟಲು ಮುಂತಾದವುಗಳನ್ನಿಟ್ಟು ಪೂಜಿಸಿದರೆ ನೌಕರರು ಪುಸ್ತಕ, ಪೆನ್ನು ಮುಂತಾದ ಸಾಮಗ್ರಿಗಳನ್ನು ಬಡಿಗರು ಮತ್ತು ಕಮ್ಮಾರರು ಉಳಿ ಕೊಡತೆಗಳನ್ನು ಮೇಸ್ತ್ರಿಯವರು ಎಂಜಿನ್ ಉಪಕರಣಗಳನ್ನು ಪೂಜಿಸುವರು.

ಮರುದಿನವೇ ವಿಜಯದಶಮಿ. ಈ ದಿನ ಸೀಮೋಲ್ಲಂಘನವೆಂದೇ ಪ್ರಸಿದ್ಧಿಯಾಗಿದೆ. ಮಹಾಭಾರತದ ಅರ್ಜುನನು ಬನ್ನಿ ಮಹಾಂಕಾಳಿ ಗಿಡದಲ್ಲಿಟ್ಟ ಬಿಲ್ಲು ಬಾಣಗಳಂಥ ಅಸ್ತ್ರಗಳನ್ನು ಹೊರತೆಗೆದು ಅಲ್ಲಿಯೇ ಆಯುಧ ಪೂಜೆ ಮಾಡಿ ಯುದ್ಧದಲ್ಲಿ ವಿಜಯ ಸಾಧಿಸಿದ ದಿನವೆಂದು ನೆನಪಿಸಿಕೊಳ್ಳುತ್ತಾರೆ.

ವಿಜಯದಶಮಿಯಂದು ಬನ್ನಿ ಮಹಾಂಕಾಳಿ ಮರದ ಬಳಿ ಹೋಗಿ ಪೂಜೆ ಸಲ್ಲಿಸಿ ಆಯುಧಗಳಿಂದ ಟೊಂಗೆಗಳನ್ನು ಕಡಿದು, ಬನ್ನಿಪತ್ರಿಯನ್ನು ತೆಗೆದುಕೊಂಡು ಮುಡಿದುಕೊಂಡು ಬರುವರು. ಎಲ್ಲಾ ಗುಡಿಯವರು

ಸಾರ್ವಜನಿಕವಾಗಿ ಡೊಳ್ಳುಬಾರಿಸಿ ಭಜನೆಗಳನ್ನು ಹಾಡಿಕೊಂಡು ಪಲ್ಲಕ್ಕಿ ಹೊತ್ತುಕೊಂಡು ಗುಡಿಗಳಲ್ಲಿ ದೇವರ ದರ್ಶನ ಮಾಡಿಕೊಂಡು ಬರುವರು. ಒಂದು ತಿಂಗಳದ ನಂತರ ಮಂಗಲಮೂರ್ತಿ ಗಣಪತಿಯನ್ನು ಬನ್ನಿ ಬಂಗಾರಗಳಿಂದ ಅಲಂಕರಿಸಿ ಭಜನೆ ಹಿಮ್ಮೇಳದೊಂದಿಗೆ ಮೆರವಣಿಗೆ ಹೊರಟು ಕೆರೆಯ ನೀರಲ್ಲಿ ವಿಸರ್ಜಿಸಿ ಬರುವರು.

**ದೀಪಾವಳಿ**

ದೀಪಾವಳಿಯು ಬೆಳಕಿನ ಹಬ್ಬವೆಂದೇ ಪ್ರಸಿದ್ಧಿಯಾಗಿದೆ. ಈ ಹಬ್ಬದ ಆಚರಣೆಯ ಹಿನ್ನೆಲೆಯಲ್ಲಿ ಪೌರಾಣಿಕ ಕಥೆಗಳು, ಐತಿಹಾಸಿಕ ತತ್ವಗಳು ಇವೆ. ಅಧ್ಯಾತ್ಮಿಕವಾಗಿ ಅವಲೋಕಿಸಿದರೆ ತಮಂದದ ಕೇಡನ್ನು ಹೋಗಲಾಡಿಸಲು ಜ್ಞಾನದ ಬೆಳಕನ್ನು ಹಚ್ಚುವ ಸಂಕೇತವನ್ನು ಒಡಗೊಂಡಿದೆ. ನರಕಾಸುರನು ಸೌಹಾರ್ದ ಮೂಲಕ ಮನುಕುಲದ ಅಹಂಕಾರವನ್ನು ತೊಡೆಯುವ ಆಚರಣೆಯೂ ಆಗಿದೆ.

ಬಲಿ ಚಕ್ರವರ್ತಿಯನ್ನು ವಾಮನರೂಪಿ ವಿಷ್ಣು ಪಾತಾಳಕ್ಕೆ ಕಳುಹಿಸಿದ ಕಥೆಯೂ ಇದರಲ್ಲಿದೆ. ಮೂರು ಹೆಜ್ಜೆಗಳಿಗೆ ಭೂಮಿಯನ್ನು ಬೇಡಿ ಎರಡನೆಯ ಪಾದಕ್ಕೆ ಅವು ಮುಗಿದು ವಚನದಂತೆ ಬಲಿ ಚಕ್ರವರ್ತಿಯು ತನ್ನ ತಲೆಯನ್ನು ಒಡ್ಡಿ ಪಾತಾಳಕ್ಕೆ ಹೋಗುವ ಕಥೆಯನ್ನು ಬಲಿಪಾಢ್ಯವಾಗಿ ಆಚರಿಸುವರು. ಇದರೊಂದಿಗೆ ಪಾಂಡವರು ವನವಾಸ ಮುಗಿಸಿ ಸೀಗೆ ಹುಣ್ಣಿಮೆಯ ದಿನ ಗಡಿಪರ್ವ ಮಾಡಿ ರಾಜ್ಯಕ್ಕೆ ಆಗಮಿಸಿ ಪಾಢ್ಯದ ದಿನ ಪಟ್ಟಕ್ಕೆ ಏರುವ ಕಥೆಯು ಸೇರಿಕೊಂಡಿದೆ.

ಮೊದಲನೆಯ ದಿನ ನರಕ ಚತುರ್ಧಶಿಯಂದು ಅಭ್ಯಂಗ ಸ್ನಾನ ಮಾಡಿ ಸುಚಿರ್ಭೂತರಾಗಿ ರಂಗೋಲಿಯಲ್ಲಿ ದೇವತೆಗಳ ಚಿತ್ರ ಬರೆದು ಕಥನವನ್ನು ಹಾಡುತ್ತ ಆರತಿಯನ್ನು ಎತ್ತುವುದು ವಿಶಿಷ್ಟ ಸಂಪ್ರದಾಯವಾಗಿದೆ. ಮರುದಿನ ಅಮವಾಸ್ಯೆ ನಗರದ ಅಂಗಡಿಗಳನ್ನು ಶೃಂಗರಿಸಿ ಮಂಟಪದ ಲಕ್ಷ್ಮಿಯನ್ನು ಸಂಭ್ರಮದಿಂದ ಪೂಜಿಸುತ್ತಾರೆ. ಹೊಸ ಲೆಕ್ಕದ ಪುಸ್ತಕವನ್ನಿಟ್ಟು ಪೂಜಿಸುತ್ತಾರೆ. ಇದು ಮೂರು ದಿನಗಳ ಹಬ್ಬವಾದರೂ ಒಂದು ತಿಂಗಳು ಪೂರ್ತಿ ಆಚರಿಸುವ ರೂಢಿಯೂ ಇದೆ. ಈ ದಿನಗಳಲ್ಲಿ ದೇವಸ್ಥಾನಗಳಲ್ಲಿ ದೀಪಾವಳಿಯ ಹಬ್ಬಕ್ಕೆ ಸಂಬಂಧಿಸಿದ ಕಥೆಗಳಾಧರಿತ ಭಜನೆ ಮತ್ತು ಕೀರ್ತನೆಗಳನ್ನು ಏರ್ಪಡಿಸುವರು.

**ಮೋಹರಂ ಹಾಗೂ ಅಲಾವಿ ಹಾಡುಗಳು**

ಮೋಹರಂ ಹಾಡುಗಳಿಗೆ ಅಲಾವಿ ಪದಗಳೆಂದೂ ಕರೆಯುವ ವಾಡಿಕೆ. ನಾಗರಪಂಚಮಿಯಲ್ಲಿ ಹೆಂಗಳೆಯರು ಹಾಡುವ ಜೋಕಾಲಿ ಪದಗಳಂತೆ, ಗೋಕುಲಾಷ್ಟಮಿಯಲ್ಲಿ ಕೇಳಬರುವ ಕೃಷ್ಣನ ಪದಗಳಂತೆ, ಹೋಳೀ ಹುಣ್ಣಿಮೆಯಲ್ಲಿ ಗಂಡಸರು ಹಾಡುವ ಲಾವಣಿಗಳಂತೆ ಈ ಮೋಹರಂ ಹಾಡುಗಳು ಕೂಡಾ ಮೋಹರಂ ಹಬ್ಬದಾಚರಣೆಯ ಸಂದರ್ಭದಲ್ಲಿ ಮಾತ್ರ ಬಯಲಿಗೆ ಬರುತ್ತವೆ. ಹಜರತ್ ಇಮಾಮ್ ಹಸನ್ ಮತ್ತು ಹುಸೇನರ ಪವಿತ್ರ ಜೀವನದ ಅಮರ ಸಂದೇಶವನ್ನು ಮನೆಮನೆಗೂ ಮನಮನಕ್ಕೂ ನೆನಪಿಸಿಕೊಡುತ್ತವೆ. ಈ ಮೋಹರಂ

ಉತ್ಸವದ ಕಾಲದಲ್ಲಿ ಹಳ್ಳಿಯ ಎಳೆಯ ಮಕ್ಕಳು ಸಲೀಸಾಗಿ ಸುಳಿದಾಡುತ್ತವೆ. ಈ ಹಾಡುಗಳು ಒಂದು ಜಾತಿಯ ಜನರ ಸೊತ್ತಲ್ಲ. ಮೋಹರಂ ಉತ್ಸವವೇ ಹಳ್ಳಿಯಲ್ಲಿರುವ ಹಿಂದು ಮುಸ್ಲೀಮರ ಮಧುರ ಮೈತ್ರಿಯ ಸಾಂಕೇತಿಕ ಉತ್ಸವವಾಗಿರುವಾಗ ಈ ಹಾಡುಗಳಿಗೆ ಯಾವ ಜಾತಿ-ಮತದಕಟ್ಟು ಬೀಳಲುಂಟು? ಮೋಹರಂ ಹಾಡುಗಳು ನಮ್ಮ ಗ್ರಾಮ ನಿವಾಸಿಗಳ ಭಾವೈಕ್ಯದ ಬೀಜ ಮಂತ್ರಗಳಾಗಿಯೇ ಇಂದಿಗೂ ಬಳಸಲ್ಪಡುತ್ತವೆ. ಈ ಜಾತ್ಯಾತೀತ ಉತ್ಸವದ ಬೆಡಗನ್ನು ಹಳ್ಳಿಯಲ್ಲಿ ಪ್ರತ್ಯಕ್ಷವಾಗಿ ಕಂಡುಂಡವರು ಕೊಂಡಾಡದಿರಲಾರರು.

ಮೋಹರಂ ಹಬ್ಬದಲ್ಲಿಯೇ ಹಾಡಲಾಗುವ ಈ ಪದಗಳಿಗೆ ಈ ಹಬ್ಬದಾಚಾರಣೆಯ ಕಥೆಯೇ ಹಿನ್ನೆಲೆ. ಮೋಹರಂ ಕಥಾನಕವೇ ಈ ಪದಗಳ ಜೀವಾಳ. ಅಂತೆಯೇ ಈ ಪದಗಳ ಸ್ವಾರಸ್ಯವನ್ನಾಸ್ವಾದಿಸಲು ಮೋಹರಂ ಕಥೆಯನ್ನರಿತಿರುವುದು ಅಗತ್ಯ.

ಅದೊಂದು ಸತ್ಯಸ್ಯ ಸತ್ಯಕಥನ. ಪ್ರಜಾಪ್ರಭುತ್ವದ ತಳಹದಿಯ ಮೇಲೆ ಇಸ್ಲಾಂ ಧರ್ಮದ ಪ್ರತಿಷ್ಠಾಪನೆಗೈದ ಹಜರತ್ ಮೊಹಮದ್ ಪೈಗಂಬರರ ಶಿಲಾಪಥದ ಕಲ್ಪನೆಯನ್ನು ಶಾಂತಿಪ್ರಿಯ ವಿಶ್ವಕ್ಕೆಲ್ಲ ನಿತ್ಯನೂತನವಾದ ಕಾಣಿಕೆಯಾಗಿ ಸಲ್ಲಿಸಿದರಷ್ಟೇ ? ಅವರ ತರುವಾಯ ಮಹಮ್ಮದೀಯರಿಂದ ಆರಿಸಲ್ಪಟ್ಟ ನಾಲ್ವರು ಜನಾನುರಾಗಿ ಖಲೀಫರು ಸಮಾಜಾಡಳಿತದ ಪವಿತ್ರ ಪೀಠವನ್ನೇರಿ ಅದರ ಹಿರಿಮೆಯನ್ನು ಹೆಚ್ಚಿಸಿದರು. ಹಜರತ್ ಮೊಹಮ್ಮದ ಪೈಗಂಬರರ ಅಳಿಯಂದಿರಾದ ಹಜರತ್ ಅಲಿ ಅವರೇ ನಾಲ್ಕನೆಯ ಖಲೀಫರು. ಅವರ ಕಾಲಕ್ಕೆ ಸಿರಿಯಾದ ಪ್ರಾಂತಾಧಿಕಾರಿಯಾಗಿದ್ದ ಹಜರತ್ ಮುಆವಿಯಾ ಅವರು ಈ ಖಲೀಪ ಪದದ ಮೇಲೆ ತಮ್ಮ ಗರುಡಗಣ್ಣು ಹಾಕಿ ಹಜರತ್ ಆಲಿಯವರ ಜೇಷ್ಠಪುತ್ರರಾದ ಹಜರತ್ ಹಸನರ ಕಾಲದಲ್ಲಿ ಆ ಸ್ಥಾನವನ್ನು ಆಕ್ರಮಿಸಿಕೊಂಡು ಬಿಟ್ಟರು. ತಮ್ಮ ತರುವಾಯ ತಮ್ಮ ಮಗನಾದ ಯಜೀದನೇ ಖಲೀಫ ಪದಕ್ಕೆ ಹಕ್ಕುದಾರನೆಂದು ಪ್ರಚಾರ ಬೇರೆ ನಡೆಸಿದರು. ತಂದೆಯದು ಕೇವಲ ಹಂಬಲವಾಗಿದ್ದರೆ ಮಗನಲ್ಲಿ ಅದು ಹಟವಾಗಿಯೇ ಬೆಳೆದು ನಿಂತಿತು. ತಂದೆಯ ನಂತರ ತಾನೇ ಖಲೀಫನೆಂದು ಆತ ಸಾರಿದ್ದಲ್ಲದೆ, ತನ್ನ ಆಳಿಕೆಯನ್ನು ಸಕಲರೂ ಮನ್ನಿಸಲೇಬೇಕೆಂದು ಒತ್ತಾಯವನ್ನು ಮಾಡಲಾರಂಭಿಸಿದರು. ಇಸ್ಲಾಂ ಧರ್ಮದ ಒಲುಮೆಯ ಸ್ಥಳದಲ್ಲಿ ಜೋರು ಜುಲುಮೆಗಳು ತಮ್ಮ ಕಸರತ್ತು ತೋರಿಸಲು ಕಾಲ್ಗೆದರಲಾರಂಭಿಸಿದವು. ಆದರೆ ಇಸ್ಲಾಂ ಧರ್ಮದ ಪವಿತ್ರ ರಕ್ತವೇ ಮೈವೆತ್ತು ಬಂದವರಾದ ಪೈಗಂಬರರ ಮೊಮ್ಮಕ್ಕಳಾದ ಹಜರತ್ ಹುಸೇನರಿಗೆ ಈ ಹುಸಿಯಾಟವನ್ನು ಸಹಿಸಿಕೊಂಡು ಸುಮ್ಮನಿರಲಾಗಲಿಲ್ಲ. ಖಿಲಾಫತದ ಸುಂದರ ಮಂದಿರಕ್ಕೆ ಗೆದ್ದಲ ಹುಳದಂತೆ ಗಂಟುಬಿದ್ದಿದ್ದ ಯಜೀದನ ಪ್ರಭುತ್ವವನ್ನು ಮನ್ನಿಸಲು ಅವರು ಖಡಾಖಂಡಿತವಾಗಿ ನಿರಾಕರಿಸಿದರು. ಅವರ ಈ ಪ್ರತಿಭಟನೆಯೇ ಮುಂದೆ ನಡೆದ ಕರ್ಬಲಾ ಕಾಳಗಕ್ಕೆ ಕಾರಣವಾಯಿತು.

**ಕರ್ಬಲಾ**

ಅಧರ್ಮ ಮತ್ತು ಧರ್ಮ, ಅಸತ್ಯ ಮತ್ತು ಸತ್ಯಗಳ ಸಜೀವ ಸಂಕೇತಗಳೆನಿಸಿದ ಯಜೀದ್ ಮತ್ತು ಹುಸೇನರಿಗೆ ನಡೆದ ಘೋರ ಸಂಗ್ರಾಮ. ಧರ್ಮ ರಕ್ಷಣೆಗೆಂದೇ ಯಜೀದನ ಉದ್ದಟತನವನ್ನು ವಿರೋಧಿಸಿ ನಿಂತ ಹುಸೇನರು ಜೀವದ ಹಂಗು ತೊರೆದು ಹೋರಾಡಿದರು. ಆದರೆ ಅವರದು ಸಾತ್ವಿಕ ಹೋರಾಟ, ಕಪಟವರಿಯದ ನೇರ ಸಂಗ್ರಾಮ. ಆದರೂ ಅದು ಯಜೀದನ ಪಕ್ಷದವರಿಗೆ ಒಡೆಯಲಾಗದ ಒಗಟವಾಗಿ ಪರಿಣಮಿಸಿತು. ಆಗ ಯಜೀದನ ಪಕ್ಷದವರು ಇವರನ್ನು ಸಮಕ್ಷಮ ಸಂಗ್ರಾಮಕ್ಕೆ ಆಹ್ವಾನಿಸಿ ಮೋಸದಿಂದ ಮರಣಕ್ಕೀಡುಮಾಡಿದರು ! ಹಿಜರಿ ಶಕ ೬೧ ರ ಮೋಹರಂ ಮಾಸದ ೧೦ ನೆಯ ದಿನ ನಡೆದ ಕರ್ಬಲಾ ಕಾಳಗದ ಕಣ್ಣೀರ ಕಥೆಯ ನಾಯಕರಾದ ಹಜರತ್ ಇಮಾಮ್ ಹುಸೇನರಂಥ ನ್ಯಾಯ ನಿಷ್ಠುರ ಧೀರ ಶರಣರು ಇತಿಹಾಸದ ಪುಟಗಳಲ್ಲೆಷ್ಟು ಜನ ಕಾಣುವರು?

ಇದನ್ನೇ ಹಳ್ಳಿಯ ಹಾಡುಗಾರನೊಬ್ಬನ ಮಾತಿನಲ್ಲಿ ಹೇಳುವುದಾದರೆ,

*ಧರಮಕ ಸತ್ತವರಾ ಸಿಗತಾರ ಕೋಟಿಗೊಬ್ಬ ಜನರಾ ।*

*ಮುಸಲಮಾನ ಮಂದ್ಯಾಗ ದೊರೀತಾರ ಹುಸೇನಸಾಹೇಬರಾ ॥*

ಹಾಗೆಯೇ ಮುಂದುವರಿದು ಹಾಡುಗಾರ ಕರ್ಬಲಾ ಕಾಳಗದ ಚಿತ್ರವನ್ನು ನಮ್ಮ ಕಣ್ಣೆದುರು ತಂದು ನಿಲ್ಲಿಸುತ್ತಾನೆ.

*ಯಜೀದನವತಾರಾ ನಡೆಸಿತೊ ಅಧಿಕಾರ ಭರಪೂರಾ ।*

*ನೋಡಲಗಾದ ಎದುರಾಗಿ ನಿಂತಾರೊ ಹಜರತ ಹುಸೇನರಾ ॥*

*ಲಡಾಯಿ ತಯ್ಯಾರಾ ಆದಾರ ಒಂಟೆ ಮ್ಯಾಲೆ ಸ್ವಾರಾ ।*

*ಹೊಂಟ ನಿಂತಾರೊ ಕರ್ಬಲಾ ಭೂಮಿಗೆ ಬಂಧು ಬಳಗ ಪೂರಾ ॥*

*ಆರಾಣ್ಯದಾಗವರಾ ಕಾಣದ ಮೂರ ದಿವಸ ನೀರಾ ।*

*ಕುಡದಾರೊ ಕಣ್ಣೀರಾ ಮಕ್ಕಳು ಹುಡುಗರು ಹೆಂಗಸರಾ ॥*

*ಜಂಗ ಎದರ ಬದರಾ ವೈರಿಯ ಮೋಸಕ ಜಯಕಾರಾ ।*

*ಶರಣು ಹೋಗದವರಾ ಸ್ವರ್ಗಕೆ ಮೋದಾರೊ ಹಜರತರಾ ॥*

ಹೀಗೆ ಧರ್ಮಕ್ಕಾಗಿ ಹೋರಾಡಿ ಲೌಕಿಕದಲ್ಲಿ ಸೋತಂತೆ ಕಂಡರೂ ವಿಶ್ವಕ್ಕೆ ಸತ್ಯದ ನಿತ್ಯತ್ವವನ್ನು ಮನಗಾಣಿಸಿ ಕೊಟ್ಟು ವೀರಮರಣವನ್ನಪ್ಪಿದ ಹಜರತ್ ಹುಸೇನರಂಥವರು ಈ ನಮ್ಮ ಹಳ್ಳಿಯ ಕವಿಬಂಧು ಹೇಳಿದಂತೆ ಸಿಗತಾರ ಕೋಟಿಗೊಬ್ಬ ಜನರಾ.

ಸ್ಥೂಲ ರೂಪದಲ್ಲಿ ವಿವರಿಸಿದ ಮೇಲಿನ ವೀರ ಚರಿತೆಯ ಥರ ಥರಗಳನ್ನು ತರ ತರವಾಗಿ ಬಿಡಿಸಿ ತೋರಿಸುವ, ಬಣ್ಣಿಸಿ ಹಾಡುವ ಆಲಾವಿ ಪದಗಳು ನಮ್ಮ ಹಳ್ಳಿಗಳಲ್ಲಿ ಸಾಕಷ್ಟು ಪ್ರಚಾರದಲ್ಲಿವೆ. ಮೋಹರಂ ಹಬ್ಬ ಪರಂಪರೆಯಿಂದ ಮುಸ್ಲೀಮರದಾದರೂ ಆಚರಣೆಯಿಂದ ಅದೊಂದು ಸಾಮೂಹಿಕ ಹಬ್ಬವಾಗಿ ಬೆಳೆದು ಬಂದು ಭಾರತೀಯರ ಭಾವೈಕ್ಯ ಪರಂಪರೆಗೊಂದು ಸಾಕ್ಷಿಯಾಗಿ ನಿಂದಿದೆ. ಹಿಂದು ಮುಸ್ಲಿಮರೆಲ್ಲ ಸೇರಿಯೇ ಈ ಹಬ್ಬದ ಹತ್ತು ದಿನಗಳನ್ನಾಚರಿಸುವಂತೆ, ಯಾವ ಭೇದ ಭಾವವಿಲ್ಲದ ರೀತಿಯಲ್ಲಿ ರೂಪಗೊಂಡ ಹಾಡುಗಾರರ ಮೇಳಗಳೂ ಈ ಅಲಾವಿ ಪದಗಳನ್ನು ಹಾಡುತ್ತ ಕುಣಿಯುತ್ತ ಮನೆಯಿಂದ ಮನೆಗೆ, ಓಣಿಯಿಂದ ಓಣಿಗೆ, ಊರಿಂದೂರಿಗೆ ಮೋಹರಂನ ಪವಿತ್ರ ಸಂದೇಶ ಬಿತ್ತರಿಸುತ್ತ ಸಂಚರಿಸುತ್ತವೆ. ಒಂದು ಹಾಡು ಮುಗಿಯುತ್ತಲೇ ಮತ್ತೊಂದರ ಹೊಳಹು ಹಾಕಿ ಮರುಗಳಿಗೆಯಲ್ಲಿ ಹೊಸ ಹಾಡನ್ನೇ ಹಾಡಿ ತೋರಿಸುವ ಚತುರ ಹಾಡುಗಾರರೂ ಈ ಮೇಳಗಳಲ್ಲಿರುತ್ತಾರೆ. ಒಂದಕ್ಕಿಂತ ಹೆಚ್ಚು ಮೇಳಗಳು ಒಂದೆಡೆ ಸಂಗಮಿಸಿದಾಗ, ಹಾಡುಗಳ ಮೂಲಕವೇ ಅನೇಕ ವಿಷಯಗಳ ಮೇಲೆ ನಡೆಸುವ ಪ್ರಶ್ನೋತ್ತರ ಮಾಲೆಯನ್ನು ಕೇಳುತ್ತ ನಿಲ್ಲುವುದೇ ಒಂದು ಮೋಜು! ಈ ಮೇಳದವರು ಸಮವಸ್ತ್ರ ಧರಿಸಿ ರಣಹಲಗೆಯ ಢಂಕಾರದೊಡನೆ ಕುಣಿಯುತ್ತ ಮಣಿಯುತ್ತ ಹಾಡುವ ಈ ಮೋಹರಂ ಪದಗಳು ಕಿವಿಗೆ ತುಂಬಾ ಆಹ್ಲಾದಕರವಾಗಿ ಕೇಳಿಸುತ್ತವೆ.

## ೪.೪. ಕನ್ನಡ ರಂಗಭೂಮಿ ಮತ್ತು ಸಂಗೀತ

ಭರತನ ನಾಟ್ಯಶಾಸ್ತ್ರದಲ್ಲಿ ನಾಟಕ ಮತ್ತು ಸಂಗೀತದ ನಡುವೆ ಇರುವ ಸಂಗೀತದ ಉಲ್ಲೇಖವಿದೆ. ನಾಟ್ಯಶಾಸ್ತ್ರದ ಮೂವತ್ತೆರಡನೆಯ ಅಧ್ಯಾಯದಲ್ಲಿ ದ್ರುವ ಗೀತ ಎಂಬ ಗೀತದ ಬಗೆಗೆ ವರ್ಣನೆ ಸಿಗುತ್ತದೆ. ದ್ರುವಗೀತಗಳು ನಾಟ್ಯ ಪ್ರಯೋಗಗಳಲ್ಲಿ ಮಹತ್ವಪೂರ್ಣ ಸ್ಥಾನ ಹೊಂದಿರುತ್ತಿದ್ದವು. ಇಂಥಹ ಗೀತಗಳಲ್ಲಿ ಸ್ವರ ಪದ ಹಾಗೂ ತಾಲ ಈ ಮೂರು ಸಂಯೋಗ ಹೊಂದಿರುತ್ತವೆ. ದ್ರುವ ಗೀತೆಗಳು ನಾಟಕಗಳಲ್ಲಿ ಬಳಕೆಯಾದ ಶಬ್ದ ಸಂಗೀತ ಅಥವಾ ಕಾವ್ಯ ಸಂಗೀತದ ಶ್ರೇಷ್ಠ ದರ್ಶನಗಳಾಗಿದೆ.

ವೃತ್ತಿ ರಂಗ ಭೂಮಿಗಳಲ್ಲಿ ರಂಗಸಂಗೀತವು ಇಂದಿಗೂ ತನ್ನ ಪ್ರಾಮುಖ್ಯತೆಯನ್ನು ಉಳಿಸಿಕೊಂಡಿದೆ. ಉತ್ತರ ಕರ್ನಾಟಕದ ರಂಗಭೂಮಿಯಲ್ಲಿ ಹಿಂದುಸ್ತಾನಿ ಸಂಗೀತ ಮಹತ್ವದ ಪಾತ್ರವನ್ನು ವಹಿಸಿದೆ. ಹಿಂದಿನ ಗಾಯಕರಿಗೆ ರಂಗಭೂಮಿಯ ಆಕರ್ಷಣೆಯಿತ್ತು. ಪ್ರಸಿದ್ಧ ಗಾಯಕರು ನಾಟಕ ಕಂಪನಿಗಳಲ್ಲಿ ಅಭಿನಯಿಸುತ್ತಿದ್ದರು. ಇದಕ್ಕೆ ಮುಖ್ಯವಾಗಿ ಮೂರು ಕಾರಣಗಳನ್ನು ಗುರ್ತಿಸಬಹುದಾಗಿದೆ ;

೧. ವೃತ್ತಿರಂಗಭೂಮಿಗಳು ಸಂಗೀತ ಪ್ರಧಾನವಾದ ನಾಟ್ಯವನ್ನು ಪ್ರದರ್ಶಿಸುತ್ತಿದ್ದವು. ಸಂಗೀತವೇ ಗಣ್ಯವಾಗಿ ನಾಟಕ ಗೌಣವಾಗಿರುತ್ತಿತ್ತು. ನಾಟಕದ ಕಥೆ ಪಾತ್ರಗಳ ರಸಾವೇಷಗಳು ಅಭಿನಯ ಎಲ್ಲವೂ ಸಂಗೀತಮಯವಾಗಿರುತ್ತಿತ್ತು. ಆದುದರಿಂದ ಗಾಯಕರು ಮಾತ್ರ ನಟರಾಗಬಲ್ಲವರಾಗಿದ್ದರು.

೨. ಪ್ರೇಕ್ಷಕರು ನಾಟಕ ನೋಡಲು ಹೆಚ್ಚಾಗಿ ಗಾಯನ ಕೇಳಲೇ ಬರುತ್ತಿದ್ದರು. ಪ್ರೇಕ್ಷಕರ ಸಂಗೀತದ ಕುರಿತಾದ ಅಭಿರುಚಿಯನ್ನು ಗಮನಿಸಿ ಹಾಡುವುದು ಅತ್ಯಂತ ಸಹಜವಾದ ರೂಢಿಯಾಗಿತ್ತು. ರಂಗಭೂಮಿಯಲ್ಲಿ ಗಾಯಕರಿಗೆ ಹೆಚ್ಚಿನ ಸಂಖ್ಯೆಯಲ್ಲಿ ಶ್ರೋತೃಗಳು ಸಿಗುತ್ತಿದ್ದರು.

೩. ಗಾಯಕನ ಆರ್ಥಿಕ ಸ್ಥಿತಿ ಸುಧಾರಿಸಲು ರಂಗಭೂಮಿಯ ಆಶ್ರಯ ಅನಿವಾರ್ಯವಾಗಿತ್ತು.

ಅಂದಿನ ದಿನಮಾನಗಳಲ್ಲಿ ಕುಂದಗೋಳ ಪರಿಸರದಲ್ಲಿ ಶಿರಹಟ್ಟಿಯ ಲಕ್ಷ್ಮೀ ಪ್ರಸಾದಿಕ ಮಂಡಳಿಯು ಶಾಲಾ ಮಕ್ಕಳ ಸಲುವಾಗಿ ಕೃಷ್ಣಲೀಲಾ ನಾಟಕವನ್ನು ಆಡುತ್ತಿದ್ದರು. ಆ ಕಾಲದ ಕೃಷ್ಣಲೀಲಾ ನಾಟಕದ ಕಾಲಿಯ ಮರ್ಧನದ ದೃಶ್ಯ ಹಾಗೂ ಗೋವಿಂದ ಬಾರಯ್ಯ ಬಾಬಾ /ಮುರಾರೆಗೋಪಾಲ ಕೇಶವ ಮುಕುಂದ ಬಾ / ಮಾಧವ ಬಾ ಮಧುಸೂಧನ ಬಾ ಎಂಬ ಸಮುಹ ಗೀತೆ ಅತ್ಯಂತ ಜನಪ್ರಿಯವಾಗಿತ್ತು.

ವಾಮನ್ ರಾವ್ ಮಾಸ್ತರರ ವಿಶ್ವಗುಣಾದರ್ಶ ಮಂಡಳಿ ಹುಬ್ಬಳ್ಳಿಯ ಮುಕ್ಕಾಂನಲ್ಲಿ ವೀರ ಅಭಿಮನ್ಯು ನಾಟಕದ ಎಂಬತ್ತನಾಲ್ಕು ಪ್ರಯೋಗಗಳನ್ನು ಮಾಡಿ ಇತಿಹಾಸ ನಿರ್ಮಿಸಿತು. ಆ ಕಾಲಕ್ಕೆ ಶ್ರೀ ಬಸವರಾಜರಾಜಗುರು ಬಾಲ ನಟ. ಈ ನಾಟಕ ಮಂಡಳಿಯು ಆಡುತ್ತಿದ್ದ ಮಹಾನಂದ ಭಕ್ತ ಪ್ರಲ್ಹಾದ ಬಾಜೀರಾವ್ ಪೇಶ್ವೆ ಸಂತಸಖೂ ಮೊದಲಾದ ನಾಟಕಗಳು ಜನಪ್ರಿಯವಾಗಿದ್ದವು. ಮಹಾನಂದಾ ನಾಟಕದಲ್ಲಿ ವೇಲುರುಗದಲ್ಲಿ 'ಇವನೇ ಗಿರಿಜಾ ರಮಣನೇ ಇವನೇ ಪಾಲಾಕ್ಷ ಶಿವನೇ' ಎಂಬ ಗೀತೆ ರೋಮಾಂಚನವನ್ನುಂಟು ಮಾಡುತ್ತಿತ್ತು. ಖ್ಯಾತ ರಂಗನಟಿ ಗಂಗೂಭಾಯಿ ಇವರು ಮಹಾನಂದ ಪಾತ್ರ ವಹಿಸುತ್ತಿದ್ದರು. ಈ ನಾಟಕದಲ್ಲಿ ಗಂಗೂಬಾಯಿ ಹಾಡುವ ಭೈರವೀ ರಾಗದ ಗೀತೆ ಜನಪ್ರಿಯವಾಗಿತ್ತು.

ಇದೇ ಸಂದರ್ಭದಲ್ಲಿ ರಂಗಭೂಮಿಯ ಸಂಗೀತಕ್ಕೊಸ್ಕರ ಶ್ರೀಗುರುರಾವದೇಶಪಾಂಡೆ, ನಲವಡಿ ಶ್ರೀಕಂಠಶಾಸ್ತ್ರಿಗಳು, ಗರುಡ ಸದಾಶಿವರಾಯರು, ಕಂದ್ಗಲ್ಲ ಹನುಮಂತರಾಯರು, ಅಚ್ಯುತ್ ರಾವ್ ಹೂಯಿಲ್‌ಗೋಳ, ನಾರಾಯಣರಾವ ಹೂಯಿಲ್‌ಗೊಳ್, ಬೆಳ್ಳಾವೆ ನರಹರಶಾಸ್ತ್ರಿ, ಬಿ.ಪುಟ್ಟಸೋಮಯ್ಯ ಮೊದಲಾದವರು ಸುಂದರ ಲಲಿತ ನಾಟ್ಯಗೀತೆಗಳನ್ನು ರಚಿಸುತ್ತಿದ್ದರು. ಈ ರಂಗಗೀತೆಗಳು ಮುಖ್ಯವಾಗಿ ಲಾಲಿತ್ಯಪೂರ್ಣವಾದ ಸಂಗೀತಯೋಗ್ಯವಾದ ಪದಗಳಿಂದ ಕೂಡಿರುತ್ತಿದ್ದವು.

ನಮ್ಮ ಕಂಪನಿ ನಾಟಕಕಾರರು ಹೆಚ್ಚಾಗಿ ಮರಾಠಿಯ ಅನುವಾದಗಳನ್ನೆ ಮಾಡಿದ್ದರಿಂದ ಆಯಾ ನಾಟಕದ ಕೆಲವೊಂದು ಗೀತೆಗಳು ಮೂಲ ಮರಾಠಿಯ ಅನುವಾದಗಳೇ ಆಗಿರುತ್ತಿದ್ದವು. ಉದಾಹರಣೆಗೆ ಸಂಗೀತ ಮಹಾನಂದ

ನಾಟಕವನ್ನು ಮೂಲ ಮರಾಠಿಯಲ್ಲಿ ಬರೆದವರು ವಾಸುದೇವ ನೀಲಕಂಠ. ಇದನ್ನು ಪಾರ್ವತಿ ಸತ್ವ ಪರೀಕ್ಷಾ ಎಂಬ ಶೀರ್ಷಿಕೆಯಲ್ಲಿ ಭಾವಾನುವಾದವನ್ನು ಮಾಡಿದವರು ವಾಮನ್‌ರಾವ್ ಮಾಸ್ತರ.

''ರಂಗ ಸಂಗೀತದ ಪರಂಪರೆ ನಮಗೆ ಮಹಾರಾಷ್ಟ್ರದ ನಾಟಕ ಕಂಪನಿಗಳ ಕೊಡುಗೆಯಾಗಿದೆ. ತದನಂತರದಲ್ಲಿ ಕರ್ನಾಟಕದ ರಂಗ ಸಂಗೀತ ಪರಂಪರೆಯು ಮಹಾರಾಷ್ಟ್ರದ ರಂಗಭೂಮಿಯ ಸಂಗೀತವನ್ನು ಪ್ರಭಾವಿಸಿದ ಬಗ್ಗೆ ಸಾಕ್ಷಿಗಳಿವೆ. ೧೮೬೨ ರಲ್ಲಿ ಉತ್ತರ ಕನ್ನಡ ಜಿಲ್ಲೆಯ ಕರ್ಕಿಯ ಯಕ್ಷಗಾನ ಮೇಳವು ಆಮಂತ್ರಣದ ಮೇರೆಗೆ ಮಹಾರಾಷ್ಟ್ರದ ಸಾಂಗ್ಲಿಗೆ ಹೋಗಿ ತನ್ನ ಪ್ರಯೋಗವನ್ನು ನಡೆಸಿದಾಗ ಅಲ್ಲಿಯ ಸಂಸ್ಥಾನಿಕರಾದ ಅಪ್ಪಾಸಾಹೇಬ ಪಟವರ್ಧನರವರು ಮರಾಠಿಯಲ್ಲಿಯೂ ಇಂಥಹ ಪ್ರಯೋಗಗಳಾಗಬೇಕೆಂದು ಅಪೇಕ್ಷಿಸಿದರು. ಆಗ ಸಂಸ್ಥಾನಿಕರ ನೌಕರರಾದ ವಿಷ್ಣುದಾಸ ಭಾವೆಯವರು ಸೀತಾ ಸ್ವಯಂವರ ಎಂಬ ನಾಟಕವನ್ನು ರಚಿಸಿದರಲ್ಲದೇ ಅದರಿಂದ ಒಂದು ನಾಟಕ ಕಂಪನಿಯ ಉದಯವಾಯಿತು. ಈ ಕಂಪನಿಯು ಯಕ್ಷಗಾನದ ಒಂದು ವಿಕಸಿತ ಸುಧಾರಣೆಯಾಗಿತ್ತು. ಈ ನಾಟಕ ಕಂಪನಿಯು ಕರ್ನಾಟಕದಲ್ಲೂ ಸಂಚರಿಸಿತು. ಮಹಾರಾಷ್ಟ್ರದ ರಂಗದ ಘನತೆಯನ್ನು ಕರ್ನಾಟಕದ ದೀಪ ಬೆಳಗಿದರೂ ಮುಂದೆ ಕರ್ನಾಟಕಕ್ಕೆ ರಂಗಭೂಮಿಯ ಗ್ಯಾಸ್‌ಲೈಟಿನ ಬೆಳಕನ್ನು ಮಹಾರಾಷ್ಟ್ರವೇ ಒದಗಿಸಿತ್ತು''[೨] ಎಂದು ಶ್ರೀಯುತ ಎನ್.ಕೆ.ಯವರು ನೆನಪಿಸಿಕೊಳ್ಳುತ್ತಾರೆ. ಇದನ್ನು ಶಾಂತ ಕವಿಗಳು ಸ್ವತಃ ನಾಟಕಗಳನ್ನು ರಚಿಸಿ ಕಂಪನಿಯನ್ನು ನಿರ್ಮಿಸಿ ಕನ್ನಡತನವನ್ನು ಉಳಿಸಲು ಪ್ರಯತ್ನಿಸಿದರು.

೧೮೭೦ ರ ದಶಕದಲ್ಲಿ ಪಾರ್ಸಿ ಹಾಗೂ ಮರಾಠಿ ನಾಟಕ ಕಂಪನಿಗಳು ಉತ್ತರ ಕರ್ನಾಟಕದ ಮುಖ್ಯ ನಗರಗಳನ್ನು ಪ್ರವೇಶಿಸಿ ಪ್ರದರ್ಶನ ನೀಡಲು ಆರಂಭಿಸಿದ್ದು ಕನ್ನಡ ರಂಗಭೂಮಿಯ ಉದಯ ಮತ್ತು ವಿಕಾಸ ದೃಷ್ಟಿಯಿಂದ ಮುಖ್ಯವಾದ ಐತಿಹಾಸಿಕ ಸಂಗತಿಯಾಗಿದೆ. ಈ ರಂಗಭೂಮಿಯ ಪ್ರದರ್ಶನಗಳಿಂದ ಪ್ರಭಾವಿತರಾದ ಶಾಂತಕವಿಗಳು ಮರಾಠಿ ರಂಗಭೂಮಿಯ ಮಾದರಿಯಲ್ಲಿ ಕನ್ನಡದ ನಾಟಕಗಳನ್ನು ಪುನರ್ ರಚಿಸಿ, ಪ್ರದರ್ಶಿಸಿ, ಹೊಸದೇ ಆದ ಪ್ರಯೋಗಕ್ಕೆ ನಾಂದಿ ಹಾಡಿದರು. ೧೮೭೭ ರಲ್ಲಿ ಗದುಗಿನಲ್ಲಿ ವೀರನಾರಾಯಣ ಪ್ರಸಾದಿತ ನಾಟಕ ಮಂಡಳಿಯನ್ನು ಸ್ಥಾಪಿಸಿದರು. 'ಉಷಾಹರಣ', 'ಕೀಚಕವಧೆ', 'ವತ್ಸಲಾ ಹರಣ' ಈ ಮೂರು ಅವರು ಪ್ರದರ್ಶಿಸಿದ ಮೊದಲ ನಾಟಕಗಳು. ಹೀಗೆ ಕರ್ನಾಟಕದ ರಂಗಭೂಮಿಯ ಪರಂಪರೆಯಲ್ಲಿ ಪ್ರಥಮ ಎನಿಸಿದರು. ಉತ್ತರ ಕರ್ನಾಟಕದಲ್ಲಿ ಹೀಗೆ ಆರಂಭಗೊಂಡ ರಂಗಪ್ರದರ್ಶನಗಳು ಮುಂದಿನ ದಿನಗಳಲ್ಲಿ ಅನೇಕ ಪ್ರತಿಭಾವಂತ ರಂಗಕರ್ಮಿಗಳನ್ನು ಪ್ರಭಾವಿಸಿತು.

ಶಿರಹಟ್ಟಿ ವೆಂಕೋಬ ರಾಯರ ಶ್ರೀ ಮಹಾಲಕ್ಷ್ಮೀ ಪ್ರಸಾದಿತ ನಾಟಕ ಮಂಡಳಿ (೧೯೦೬-೧೯೩೬), ಶಿವಮೂರ್ತಿಸ್ವಾಮಿ ಕಣಬರ್ಗಿಮಠ ಅವರ ಕೊಣ್ಣೂರ್‌ಕರ್ ಕಾಡಸಿದ್ದೇಶ್ವರ ಸಂಗೀತ ನಾಟಕ ಮಂಡಳಿ

೨. ಇಂಚರ್ : ಎನ್ಕೆ, ಪುಟ-೨೦೯

(೧೯೦೧-೧೯೨೨), ವಾಮನ್‌ರಾವ್ ಮಾಸ್ತರರ ವಿಶ್ವಗುಣಾದರ್ಶ ನಾಟಕ ಮಂಡಳಿ (೧೯೧೩-೧೯೩೫), ಹಲಗೇರಿ ಜಟ್ಟೆಪ್ಪನವರ ಶ್ರೀ ಹಾಲಸಿದ್ದೇಶ್ವರ ಪ್ರಸಾದಿತ ಸಂಗೀತ ನಾಟಕ ಮಂಡಳಿ (೧೯೧೩-೩೮), ಗರುಡ ಸದಾಶಿವರಾಯರ ಶ್ರೀದತ್ತಾತ್ರೇಯ ನಾಟಕ ಮಂಡಳಿ (೧೯೧೬-೫೨) ಮೊದಲಾದವು ಹಲವಾರು ಪ್ರದರ್ಶನಗಳನ್ನು ನೀಡಿದವು. ಈ ಎಲ್ಲ ವೃತ್ತಿರಂಗಭೂಮಿಯ ಸಂಘಟನೆಯ ಹಿನ್ನಲೆಯಲ್ಲಿ ಹಲವು ಕುತೂಹಲಕರ ಅಂಶಗಳು ಇರುವುದು ಗೋಚರಿಸುತ್ತದೆ. ಕಂಪನಿ ರಂಗಭೂಮಿಗಳು ಶ್ರೀಮಂತರಿಂದ ಪೋಷಿಸಲ್ಪಟ್ಟು ಹಿಂದುಸ್ತಾನಿ ಹಾಡುಗಾರರಿಂದ ಪ್ರದರ್ಶಿಸಲ್ಪಟ್ಟು ಪ್ರೇಕ್ಷಕರಲ್ಲಿ ನಾಟಕ ಮತ್ತು ಸಂಗೀತದ ಕುರಿತು ಅಭಿರುಚಿಯನ್ನು ಹುಟ್ಟು ಹಾಕಿತು. ಹೆಸರೇ ಸೂಚಿಸುವಂತೆ ಈ ನಾಟಕಗಳ ಜೀವಾಳ ಸಂಗೀತವಾಯಿತು. ನಾಟಕಗಳಲ್ಲಿ ಹಾಡುತ್ತಿದ್ದ ಕಲಾವಿದರು ಕುಂದಗೋಳ ಪರಿಸರದವರು ಆಗಿದ್ದರು ಎಂಬುದು ವಿಶೇಷವಾಗಿದೆ.

ಅಂದಿನ ದಿನಗಳಲ್ಲಿ ಅನೇಕ ನಾಟಕ ಕಂಪನಿಗಳ ನಡುವೆ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳುವ ನೆಲೆಯಲ್ಲಿ ಸ್ಪರ್ಧೆಗಳಿದ್ದವು. ಪ್ರಸಿದ್ಧ ನಟರನ್ನು ಸೆಳೆದುಕೊಳ್ಳಲು ಮಾಡಿದ ಉದಾಹರಣೆಗಳಿವೆ. ಈ ಸ್ಪರ್ಧೆ ಕಲಾವಿದರಿಗೆ ನೀಡುತ್ತಿದ್ದ ಸಂಭಾವನೆ, ಮಾಡಿಸಿಕೊಡುತ್ತಿದ್ದ ಬಂಗಾರದ ಆಭರಣ ಮತ್ತು ದಿನಚರಿಯಲ್ಲಿ ಅವರನ್ನು ವಿಶೇಷ ಉಪಚಾರಗಳಿಂದ ಗೌರವದಿಂದ ನೋಡಿಕೊಳ್ಳುವದರಲ್ಲಿ ಇರುತ್ತಿತ್ತು. ಕಲಾವಿದರಿಗೆ ಅವರ ಕೌಟುಂಬಿಕ ಸಮಸ್ಯೆಗಳನ್ನು ಆರ್ಥಿಕ ಸಹಾಯದಿಂದ ಬಗೆಹರಿಸಿದ ನಿದರ್ಶಗಳಿವೆ. ವಿಶೇಷವಾಗಿ ತಮ್ಮ ಕಂಪನಿ ನಟರಿಗೆ ಸಂಗೀತ ಶಿಕ್ಷಣ ಕೊಡಿಸಲು ಉತ್ತರ ಭಾರತದಿಂದ ಪ್ರಸಿದ್ಧ ಹಿಂದುಸ್ತಾನಿ ಹಾಡುಗಾರರನ್ನು ಕರೆಯಿಸುವ ಪರಿಪಾಠವಿತ್ತು. ವಾಣಿವಿಲಾಸ ನಾಟಕ ಕಂಪನಿಯ ಮಾಲೀಕರಾದ ಶ್ರೀ ಎರೇಶಿ ಭರಮಪ್ಪನವರು ತಮ್ಮ ಕಂಪನಿ ಕಲಾವಿದರಿಗೆ ಸಂಗೀತ ಶಿಕ್ಷಣ ಕೊಡಿಸಲು ಗ್ವಾಲಿಯರ್ ಘರಾಣೆಯ ಖ್ಯಾತ ಸಂಗೀತಗಾರರಾದ ನೀಲಕಂಠ ಬುವಾ ಮಿರಜರವರನ್ನು ಕರೆಯಿಸುತ್ತಿದ್ದರು. ಅಂದಿನ ನಾಟಕಗಳಲ್ಲಿ ಪಾತ್ರವಹಿಸುತ್ತಿದ್ದ ಪಂ. ಮಲ್ಲಿಕಾರ್ಜುನ ಮನ್ಸೂರ, ಲಿಂಗರಾಜ ಬುವಾ ಯರಗುಪ್ಪಿ, ಗದುಗಿನ ಪಂಚಾಕ್ಷರಿ ಗವಾಯಿಗಳು ಶಿಕ್ಷಣ ಪಡೆದವರಲ್ಲಿ ಪ್ರಮುಖರು. ಅಂತೆಯೇ ನಂತರದ ದಿನಗಳಲ್ಲಿ ಪಂ. ಬಸವರಾಜ ರಾಜಗುರು ಮತ್ತು ಪಂ. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿಯವರು ರಂಗಭೂಮಿಯ ಹಿನ್ನಲೆಯಿಂದಲೇ ಸಂಗೀತ ಕ್ಷೇತ್ರಕ್ಕೆ ಬಂದವರು ಕುಂದಗೋಳದ ಸವಾಯಿಗಂಧರ್ವರು ಕೂಡಾ ಮರಾಠಿ ರಂಗಭೂಮಿಯಲ್ಲಿ ಹೆಸರು ಮಾಡಿದರು. ಹೀಗೆ ರಂಗಭೂಮಿ ಮತ್ತು ಹಿಂದುಸ್ತಾನಿ ಸಂಗೀತದ ನಡುವೆ ಅನ್ಯೋನ್ಯ ಸಂಬಂಧವನ್ನು ಪೋಷಿಸಿದ ಕೀರ್ತಿ ಶ್ರೀ ಎರೇಶಿ ಭರಮಪ್ಪ ನವರಿಗೆ ಸಲ್ಲುತ್ತದೆ.

ಅಂದಿನ ಕಂಪನಿಗಳು ಮುಖ್ಯವಾಗಿ ಪೌರಾಣಿಕ ಮತ್ತು ಐತಿಹಾಸಿಕ ವಸ್ತುಗಳನ್ನು ಒಳಗೊಂಡ ನಾಟಕಗಳನ್ನು ಪ್ರದರ್ಶಿಸುತ್ತಿದ್ದವು. ಅಂದು ಜನಪ್ರಿಯವಾದ ನಾಟಕಗಳೆಂದರೆ 'ಲಂಕಾದಹನ', 'ವೀರಅಭಿಮನ್ಯು',

'ಶ್ರೀಕೃಷ್ಣಲೀಲಾ', 'ಚಿತ್ರಾಂಗಧಾ', 'ಅಕ್ಷಯಾಂಬರ', 'ರಕ್ತರಾತ್ರಿ', 'ಸೀತಾಸ್ವಯಂವರ', 'ಕಿತ್ತೂರ ಚನ್ನಮ್ಮ', 'ಹೇಮರಡ್ಡಿ ಮಲ್ಲಮ್ಮ' ಮುಂತಾದವುಗಳು. ಈ ಎಲ್ಲ ನಾಟಕಗಳ ಕೃತಿಕಾರರಾದ ಶ್ರೀಕಂದಗಲ ಹನುಮಂತರಾಯರು, ಶ್ರೀ ನಲವಡಿ ನೀಲಕಂಠ ಶಾಸ್ತ್ರಿಗಳು, ಶ್ರೀವಾಮನರಾವ್ ಮಾಸ್ತರರು ಹಾಡುಗಾರಿಕೆಗೆ ಪ್ರಾಧಾನ್ಯತೆ ನೀಡಿದ್ದು ಗಮನಾರ್ಹವಾಗಿದೆ.

ಕನ್ನಡ ರಂಗಗೀತೆಗಳಾಗಲಿ ಮರಾಠಿ ನಾಟ್ಯ ಗೀತೆಗಳಾಗಲಿ ಅವು ಹಿಂದುಸ್ತಾನಿ ಸಂಗೀತದ ನಿಯಮಗಳನ್ನು ಅಚ್ಚುಕಟ್ಟಾಗಿ ಪಾಲಿಸಿರುವುದನ್ನು ಕಂಡುಬರುತ್ತದೆ. ಅವುಗಳ ಸಂರಚನೆಗಳಲ್ಲಿ ಸಂಗೀತದ ಮೂಲ ಚಾಲಿಗಳನ್ನು ಕಾಯ್ದುಕೊಂಡದ್ದು ವಿಶೇಷವಾಗಿದೆ. ರಂಗಗೀತೆಗಳದೇ ಆದ ತಾನ ಬಾಜಿಗಳು, ಖಟಕಾ, ಮುರಕಿಗಳು ಅಂದು ಪ್ರಯೋಗದಲ್ಲಿದ್ದವು. ಇದೇ ಸಮಯದಲ್ಲಿ ಮರಾಠಿ ರಂಗಗೀತೆಗಳನ್ನು ಕನ್ನಡ ರಂಗಗೀತೆಗಳನ್ನಾಗಿಯೂ ಕನ್ನಡ ರಂಗಗೀತೆಗಳನ್ನು ಮರಾಠಿ ರಂಗಗೀತೆಗಳನ್ನಾಗಿಯೂ ಭಾಷಾಂತರಿಸಿ ಅಳವಡಿಸಿಕೊಂಡಿರುವುದು ಉಲ್ಲೇಖನಿಯ ಉದಾಹರಣೆಗೆ 'ಶುರಾಮೇ ವಂದಿಲೆ' ಎಂಬ ರಂಗಗೀತೆಯನ್ನು ಕನ್ನಡ ರಂಗಗೀತೆಯನ್ನು 'ಶ್ಯಾಮಾನೀ ಪ್ರೇಮಲೆ' ಎಂದು ಭಾಷಾಂತರಿಸಿರುವದನ್ನು ನೋಡಬಹುದು. ಇದು 'ಅಕ್ಷಯಾಂಬರ' ನಾಟಕದಲ್ಲಿ ಪ್ರಸಿದ್ಧ ಹಾಡಾಗಿದೆ. ಅಂತೆಯೇ 'ಸದಾಪಾಡಲು ಅಂಗನಾಪ್ರೇಮಗಾನಾ' ಎಂಬುದನ್ನು ಚಿತ್ರಾಂಗಧಾ ನಾಟಕದ ಮರಾಠಿ ಆವೃತ್ತಿಯಲ್ಲಿ 'ಪಹಾಗೋಕುಳಿ ರಂಗಲ್ಯಾ ಗೋಪಬಾಲ' ಎಂದು ಭಾಷಾಂತರಿಸಲಾಗಿದೆ.

ಕುಂದಗೋಳ ಪರಿಸರದಲ್ಲಿ ಪ್ರಚಲಿತದಲ್ಲಿರುವ ಕೆಲವು ರಂಗಗೀತೆಗಳು

**ನಾಟಕ ಚಿತ್ರಾಂಗದಾ** **ರಚನೆ : ಕಂದಗಲ್ಲ ಹನುಮಂತರಾಯರು**

**ರಾಗ -ಮಾಂಡ**

*ಸದಾ ಪಾಡಲಿ ಅಂಗನಾ ಪ್ರೇಮಗಾನಾ*

*ಪತಿ ಜಗದೊಳಾ ಪ್ರೇಮದಾ ಮೂರ್ತಿ ಕಾಣಾ*

*ಪತಿ ಪ್ರೇಮ ಪೂರ್ಣಮ*

*ಸುತಗಾಗಿ ಗಾನ*

*ಸದನ ಸದಾ ಕಾಣದಾ ಭಾಗ್ಯಮಾಲಾ*

*ಕ್ಷಮಾಗಾತ್ರಿ ಪೂರ್ಣ ಪರೀಭಾಯೆ ಕಾಣಾ*

ನಾಟಕ ಹೇಮರಡ್ಡಿ ಮಲ್ಲಮ್ಮ ರಚನೆ : ನಲವಡಿ ನೀಲಕಂಠಶಾಸ್ತ್ರಿ

ರಾಗ : ಪಟದೀಪ

*ಆಹಾ ಮಮತೆ ಮಾತೆ*

*ಕಾಣೆ ಮಹಾ ಪೂರ್ಣ*

*ವನದಿ ಮಹಾ ಘೋರ ತಪವನು ಗೈದೆ*

*ಅತಿ ಸಂತೋಷವು ಭಾವಪೂರ್ಣ*

ನಾಟಕ ಅಕ್ಷಯಾಂಬರ ರಚನೆ : ಕಂದಗಲ್ಲ ಹನುಮಂತರಾಯರು

ರಾಗ : ಹಮೀರ್

*ಕಲಿ ವೈರಿ ಕುಲಕೌರವ*

*ತಾ ನೊಲಿನ ಕುಲ ನಾಶವಾ*

*ಹುರಿಯುವೇ ಕುರುವಂಶವಾ*

*ಅರಿಯುವೇ ಹರಿ ಘರ್ವವಾ*

*ಸಾಧಿಸುವೇ ಕುಲ ನಾಶವಾ*

ನಾಟಕ : ಸತೀ ಸತ್ವಪರೀಕ್ಷೆ ರಚನೆ : ನಲವಡಿ ಶ್ರೀಕಂಠಶಾಸ್ತ್ರಿ

ರಾಗ : ಬಸಂತ

*ಗೌರಿ ರಮಣ । ನಾಗಾಭರಣ*

*ಪಾವನ ಚರಣ । ಪೊರೆ ಭವ ಚರಣ ॥*

*ಭಕ್ತೋದ್ಧಾರ । ದ[illegible] ನಿವಾರ*

*ಜಗದಾಧಾರ । ಜನಿಮೃತಿದೂರ*

ಉತ್ತರ ಕರ್ನಾಟಕವು ಹಿಂದುಸ್ತಾನಿ ಸಂಗೀತ ಪದ್ಧತಿಯ ಪ್ರಭಾವಕ್ಕೆ ಒಳಪಟ್ಟಿತ್ತು. ಖ್ಯಾತ ಹಿಂದುಸ್ತಾನಿ ಶಾಸ್ತ್ರೀಯ ಗಾಯಕ ಭಾಸ್ಕರಬುವಾ ಬಾಕಳೆ ಇವರು ಧಾರವಾಡ ಟ್ರೇನಿಂಗ್ ಕಾಲೇಜಿನಲ್ಲಿ ಸಂಗೀತ ಶಿಕ್ಷಕರಾಗಿದ್ದರು. ಪ್ರಸಿದ್ಧ ಪಿತ್ರೆ ವಕೀಲರಂತೂ ಧಾರವಾಡದವರಾಗಿದ್ದರು. ಇತ್ತ ಕುಂದಗೋಳದಲ್ಲಿ ಸವಾಯಿಗಂಧರ್ವರು ಅತ್ತ ಬೆಳಗಾವಿಯಲ್ಲಿ ರಾಮಕೃಷ್ಣಬುವಾ ವಜೆ ಹೀಗೆ ಉತ್ತರ ಕರ್ನಾಟಕವು ಹಿಂದುಸ್ತಾನಿ ಗಾಯಕರಿಂದ ಕೂಡಿತ್ತು.

ಆಗಾಗ ಮೈಸೂರು ದಸರಾ ಕಾರ್ಯಕ್ರಮಕ್ಕೆ ಆಮಂತ್ರಿತರಾಗುತ್ತಿದ್ದ ಅಬ್ದುಲ್ ಕರೀಮ್ ಖಾನ್ ರಂಥ ಶ್ರೇಷ್ಠ ಗಾಯಕರು ಧಾರವಾಡದಲ್ಲಿ ವಸತಿ ಮಾಡಿ ಜಲ್ಸಾ ಕಾರ್ಯಕ್ರಮ ಮುಗಿಸಿಕೊಂಡೇ ಹೋಗುತ್ತಿದ್ದರು. ಹೀಗಾಗಿ ಈ ಭಾಗದಲ್ಲಿ ಹಿಂದುಸ್ತಾನಿ ಸಂಗೀತ ಪ್ರಧಾನವಾಗಿ ಕರ್ನಾಟಕ ಸಂಗೀತವು ಗೌಣಸ್ಥಾನ ಪಡೆಯಿತು. ಸ್ವಾಭಾವಿಕವಾಗಿ ರಂಗ ಸಂಗೀತ ಪದ್ಧತಿಯು ಹಿಂದುಸ್ತಾನಿ ಮಾರ್ಗವನ್ನೇ ಅನುಸರಿಸಿತು. ಇಲ್ಲಿಯ ನಾಟಕ ಕಂಪನಿಗಳಲ್ಲಿ ಬಾಲಗಂಧರ್ವರು ಆಡುತ್ತಿದ್ದ ರಂಗಗೀತೆಗಳ ಚಾಲಿಗಳನ್ನೇ ಅನುಸರಿಸುತ್ತಿದ್ದವು.

ಮರಾಠಿ ನಾಟಕಕಾರಾದ ಅಣ್ಣಾಸಾಹೇಬ ಕಿರ್ಲೋಸ್ಕರ, ಕೆ.ಪಿ. ಕಾಡಿಲ್‌ಕರ ಮೊದಲಾದವರು ಕರ್ನಾಟಕೀ ಚಾಲೀ ಕಾನಡೀ ಚಾಲಿ ಎಂದುಕೊಂಡು ಕರ್ನಾಟಕ ಸಂಗೀತದ ಪ್ರಸಿದ್ಧ ವಾಗ್ಗೇಯಕಾರರ ಕೃತಿಗಳ ದಾಟಗಳನ್ನು ಅನುಸರಿಸಿದಾಗ ಕನ್ನಡ ನಾಟಕ ಕಂಪನಿ ಕವಿಗಳು ಈ ಚಾಲಿಗಳು ಕರ್ನಾಟಕ ಸಂಗೀತದವು ಎಂಬುದನ್ನು ಅರಿತುಕೊಳ್ಳದೇ ಮರಾಠಿ ಚಾಲಿಗಳೆಂದೇ ಅವನ್ನು ಎರವಲಾಗಿ ತೆಗೆದುಕೊಂಡರು. ಉದಾಹರಣೆಗಾಗಿ ಅಣ್ಣಾಕಿರ್ಲೋಸ್ಕರರ ಸುಭದ್ರಾ ನಾಟಕದ 'ಪಾಂಡು ನೃಪತಿ ಜನಕಜಯಾ ಮಾತಾ ಕುಂತಿ ಯದು ತನಯ' ಎಂಬ ಗೀತ ಇದನ್ನು ಚುರಮರಿ ಶೇಷಗಿರಿ ರಾಯರು ಕನ್ನಡ ಶಾಕುಂತಲದಲ್ಲಿ ಪ್ರಯೋಗಿಸಿದರು. ಇದನ್ನು ದಿವಂಗತ ಹುಯಿಲ್‌ಗೋಳ್ ನಾರಾಯಣರಾಯರು ತಮ್ಮ ಸ್ಮೃತಿಗಳಲ್ಲೂ ಈ ಸಂಗತಿಗಳನ್ನು ವಿವರಿಸಿದ್ದಾರೆ. ಕಿರ್ಲೋಸ್ಕರರು ಸವದತ್ತಿಯ ಗುರ್ಲಹೊಸೂರಿನವರು. ಅವರಿಗೂ ಶೇಷಗಿರಿ ರಾಯರಿಗೂ ಸ್ನೇಹ. ಶೇಷಗಿರಿರಾಯರು ತಮ್ಮ ಕನ್ನಡ ಶಾಕುಂತಲವನ್ನು ಅಣ್ಣಾಸಾಹೇಬರಿಗೆ ತೋರಿಸಿದಾಗ ಅದರೊಳಗಿನ ದೇಶೀಯ ಜಾನಪದ ದಾಟಿಗಳನ್ನು ಮೆಚ್ಚಿಕೊಂಡು ಅದೇ ಮಾದರಿಯಲ್ಲಿ ಮರಾಠಿ ರಚನೆಗಳನ್ನು ಕೈಕೊಂಡರಂತೆ.

''ಚುರಮರಿ ಶೇಷಗಿರಿರಾಯರು ತಮ್ಮ 'ಕನ್ನಡ ಶಾಕುಂತಲ'ದಲ್ಲಿ ಪಾರಿಜಾತ ಆಟದ ಧಾಟಿಗಳನ್ನು, ದಾಸರ ಪದಗಳ ಮಟ್ಟಗಳನ್ನು, ಹಿಂದೂಸ್ತಾನೀ ಲಘು ಸಂಗೀತದ ಕವಾಲಿ, ಟಪ್ಪಾ, ಠುಮರಿ ಧಾಟಿಗಳನ್ನು ಇನ್ನಿತರ ಜಾನಪದ ಧಾಟಿಗಳನ್ನು ಅಳವಡಿಸಿಕೊಂಡು ಮರಾಠಿ ರಂಗಗೀತೆಗಳಿಗೆ ಮಾದರಿ ಧಾಟಿಗಳನ್ನು ಒದಗಿಸಿದರು. ಇವರು ಬಳಸಿಕೊಂಡ ಎಷ್ಟೋ ಶೃಂಗಾರಿತ ಪದಗಳು ಯಾವ ಮೂಲ ಜಾನಪದ ರಂಗಗೀತಗಳು, ಅಥವಾ ಯಾವ ಜಾನಪದ ಧಾಟಿಗಳು ಎಂಬುದೆ ತಿಳಿಸಿರುವುದಿಲ್ಲ. 'ಒಲ್ಲದಿರುವ ಬಗೆಯೇನಮ್ಮಾ' 'ಯಾಕೆ ಪ್ರಾಯವು ಬಂತಮ್ಮ ಚಿಕ್ಕವಳು ನಾ ಹ್ಯಾಗೆ ತಾಳುವೆ ಹೆತ್ತಮ್ಮಾ''ಬೆಳಗಾಗಬಂತು ಬಿಡೆನ್ನಾ ನಾಳೆ ತಡೆಯದೆ ಬರುವೆನು ಕೇಳೋ ಮೋಹನಾ', 'ಯಾಕೆ ತಡೆದಾನು ಪೇಳೆ' ಎಂಬ ಕೆಲವಾರು ಪದಗಳನ್ನು ನೋಡಬಹುದು. ಹಲಗೇರಿ ಕಂಪನಿಯ ಸ್ತ್ರೀ ನಾಟಕದಲ್ಲಿ ಹಳ್ಳಿಯ ಮುಕ್ಕ ಸುಶಿಕ್ಷಿತೆಯ ಕೈ ಹಿಡಿಯಲು ಪಟ್ಟಣಕ್ಕೆ ಬಂದಾಗ 'ಇದು ಬಲು ದೊಡ್ಡ ಶಾರಾ ವ್ಯಾಪಾರ ಪೂರಾ' ಎಂದು ಬಯಲಾಟದ ಧಾಟಿಯಲ್ಲಿ ಹಾಡುವುದು ಸಾಮಾನ್ಯ ಜನಗಳಿಗೊಂದು ಅಪೂರ್ವ ಆಕರ್ಷಣೆ ಎನಿಸಿತ್ತು''[೨೮] ಎಂದು ಶ್ರೀ ಎನ್ಕೆ ಯವರು ಬರೆದಿದ್ದಾರೆ.

---

೨೮. ಇಂಚರ : ಎನ್ಕೆ, ಪುಟ-೨೧೨

ಮತ್ತೆ ಕೆಲವು ಮರಾಠಿ ರಂಗಗೀತೆಗಳಿಗೆ ಕರ್ನಾಟಕ ಸಂಗೀತದ ಕೃತಿಗಳು ಮಾತೃಕೆಯಾಗಿವೆ. ಉದಾಹರಣೆಗೆ ಖಾಡಿಲಕರರ 'ವಿದ್ಯಾಹರಣ ನಾಟಕದ 'ಸುರಸುಖಖಣಿ ತೂನಿಮಾಲಾ' ಎಂಬ ಪದವು 'ವರಕುಲಸಖಿ' ಎಂಬ ಕೀರ್ವಾಣಿ ರಾಗದ ಕೃತಿಯ ಧಾಟಿಯಲ್ಲಿ ಎಂದು ಮರಾಠಿಯಲ್ಲಿ ಕಾಣಿಸಿದ್ದಾರೆ. ಖಾಡಿಲಕರ 'ವಿದ್ಯಾಹರಣ' ನಾಟಕದದ್ದೇ ಆದ 'ಲೇಜಾನಭೀ ಜ್ಯಾ ಸಾಹನೇಗಾ' ಎಂಬ ಪದವು ಕರ್ನಾಟಕೀ ಪದ್ಧತಿಯ 'ಸಂಕಲ್ಪಮೇ ಮಾಡೂ ಮನಸಾ' ಎಂಬ ಕೃತಿಯ ಮೇರೆಗೆ ಎಂದಿದ್ದಾರೆ. ಆದರೆ ವಾಮನರಾವ್ ಮಾಸ್ತರು ಕೃಷ್ಣಾರ್ಜುನಯುದ್ಧ ದಲ್ಲಿ 'ನಾ ಪೇಳುವೆ ನಿನಗೊಂದುಪಾಯ' ಎಂಬ ಪದ 'ಲೇಜಾನಭಿ' ಧಾಟಿ ಎಂದಿದ್ದಾರೆ. ಖಾಡಿಲಕರರ 'ಮಾನಾಪಮಾನ' ನಾಟಕದ 'ದೇಹಾತಾಯಾ ಶರಣಾಗತಾ' ಎಂಬ ಪದವು 'ಯೇರಾ ನಾರಾಮೀ ಯಾಕಾನಡೀ ಜಾಲೀವರ' ಎಂದು ಕಾಣಿಸಿದ್ದು ಅದರ ಅರ್ಥವೇ ತಿಳಿಯುವಂತಿಲ್ಲ. ಕರ್ನಾಟಕೀ ಪದ್ಧತಿಯ ಕೃತಿಗಳೆಲ್ಲವು ಕನ್ನಡ ಗೀತೆಗಳೆಂದೆ ಅವರ ಕಲ್ಪನೆಯಾದಂತಿದೆ. ಹಂಸಧ್ವನಿ ರಾಗದ ತ್ಯಾಗರಾಜರ ಮನಸು ಕರಗದೇಮಿ ಎಂಬ ಕೃತಿಯ ಅನುಕರಣೆ ಯುವತಿಮನಾದಾರುಣ ರಣರುಚಿರ ಪ್ರೇಮಸೇ ಝಾಳೇ ಎಂಬ ಪದವಾಗಿದೆ. ಮುಂದೆ ಕನ್ನಡ ನಾಟ್ಯ ಗೀತೆಯಾದಾಗ ಚಾಲೀ ಝಾಲೆ ಯುವತಿಮನಾ ಎಂದು ಸೂಚಿಲ್ಪಟ್ಟಿತು.

ಮರಾಠಿ ಕಂಪನಿ ನಾಟಕಗಳು ಕನ್ನಡ ಜಾನಪದ, ಕರ್ನಾಟಕೀ ಕೃತಿಗಳ ಅನುಕರಣ ಮಾಡಿದರೂ ತಮ್ಮದೇ ಆದ ಒಂದು ವೈಭವದ ಶ್ರೀಮಂತ ಪರಂಪರೆಯನ್ನು ಬೆಳೆಸಿಕೊಂಡುಬಂದಿವೆ. ಬಾಲಗಂಧರ್ವರ ಕಾಲ ಮುಗಿದಾಗ ಕುಮಾರಗಂಧರ್ವರು ರಾಗ ಸಂಗೀತ ಪರಂಪರೆಯನ್ನು ಮುಂದುವರಿಸಿದರು. ಅಲ್ಲಾದಿಯಾಖಾನರ ಶಿಷ್ಯ ಭಾಸ್ಕರ ಬುವಾ ಬಾಲಗಂಧರ್ವರಿಗೆ ನೀಡಿದ ಶಾಸ್ತ್ರೀಯ ಶಿಕ್ಷಣವನ್ನು ಬಾಲಗಂಧರ್ವರ ರಂಗಸಂಗೀತಕ್ಕಾಗಿ ದುಡಿಸಿಕೊಂಡರು ಎಂಬುದನ್ನಿಲ್ಲಿ ನೆನೆಯಬೇಕು. ಸವಾಯಿ ಗಂಧರ್ವರು ತೆರೆಯ ಹಿಂದೆ ಸರಿದಾಗ ಛೋಟಾ ಗಂಧರ್ವರು ಪ್ರವೇಶ ಮಾಡಿದರು. ಇದಲ್ಲದೆ ಮಾಲತೀ ಪಾಂಡೆ, ಮಾಣಿಕವರ್ಮಾ, ಮೀನಾಕ್ಷಿ ದಿವಾಕರ, ಮಧುವಂತಿ ದಾಂಡೇಕರ ಹೀಗೆ ಹತ್ತು ಹಲವಾರು ಕಲಾವಿಟಯರು ಕೂಡ ಮುಂದೆ ಬಂದು ಮರಾಠಿ ರಂಗ ಸಂಗೀತ ಸಂಪದದ ಆರತಿಯ ನೀಲಾಂಜನ ಜ್ಯೋತಿನಂದದಂತೆ ಬೆಳಗಿಸಿಕೊಂಡು ಬಂದಿದ್ದಾರೆ.

ಕರ್ನಾಟಕದಲ್ಲಿ ಬಸವರಾಜ ಮನ್ಸೂರ ಅವರು ವಾಮನರಾವ್ ಮಾಸ್ತರರ ರಂಗಸಂಗೀತ ವಾಹಿನಿಯನ್ನು ಮುಂದರಿಸಿಕೊಂಡು ನಡೆದರು. ಬಸವರಾಜ ಮನ್ಸೂರ್ ಅವರು ಕಣ್ಮರೆಯಾದರೆ ಬಸವರಾಜ ರಾಜಗುರುಗಳು ಅವರನ್ನು ಮರೆಸುವಂತೆ ಮಧುರತಮ ನಾಟ್ಯ ಸಂಗೀತದಿಂದ ಮನರಂಜನೆ ನೀಡಿದ್ದಾರೆ. ಡಾ. ಮಲ್ಲಿಕಾರ್ಜುನ ಮನ್ಸೂರ್ ಅವರು ಒಂದು ಕಾಲಕ್ಕೆ ಉತ್ತಮ ಗಾಯಕ ನಟರಾಗಿದ್ದರು. ಕರ್ನಾಟಕೀ ಗೋಹರ್, ಗಂಗೂಬಾಯಿ ಗುಳೇದಗುಡ್ಡ, ಯಲ್ಲವ್ವ ಗುಳೇದಗುಡ್ಡ, ಮಧ್ವರಾವ ಉಮರ್ಜಿ, ನೀಲಕಂಠ ಬುಹಾಗಾಡಗೋಳಿ, ವೆಂಕಟರಾವ್

ರಾಮದುರ್ಗ, ಪಿ.ಕಾಳಿಂಗರಾವ, ಎ. ಎ. ವರದಾಚಾರ್, ಕೊಟ್ಟೂರು ಬಸಪ್ಪ, ಆರ್.ನಾಗೇಂದ್ರರಾವ್, ಗಂಗಾಧರಯ್ಯ, ವಿನೋದ ಗಾಯಕ, ಗುಬ್ಬಿ ವೀರಣ್ಣ ಮೊದಲಾದವರೆಲ್ಲ ಈಗ ಜೀವನ ರಂಗದಿಂದ ಅಸ್ತಮಿಸಿದ್ದಾರೆ. ಸೋನುಬಾಯಿ ದೊಡ್ಡಮನಿ, ಬಿ.ಜಯಮ್ಮ, ನೀಲಕಂಠಪ್ಪ ಹಮ್ಮಿಗಿ, ಏಣಗಿ ಬಾಳಪ್ಪ, ಹೊನ್ನಪ್ಪ ಭಾಗವತರ, ದೇಶಪಾಂಡೆ ವಾರ್ಧಿಕ್ಯದ ಮೂಲಕ ಮೊದಲಿನ ಹದಹೊಗರುಗಳನ್ನು ಕಳೆದುಕೊಂಡಿದ್ದಾರೆ. ಸುಭದ್ರಮ್ಮ ಮನ್ಸೂರ್, ಅರ್ಜುನಸಾ ನಾಕೋಡ, ಸೋಮನಾಥ ಮರಡೂರ, ಮುದ್ವೀರಾಚಾರ ಇವರೆ ಕೆಲವರು ಭರವಸೆ ಕಲಾವಿದರು. ಆದರೆ ಇಂದು ಜೀವ ಹಿಡಿದುಕೊಂಡು ಬದುಕಿರುವ ಕಂಪನಿ ನಾಟಕಗಳು ರಂಗ ಸಂಗೀತದಿಂದ ಬಹುದೂರ ಇವೆ ಎಂದ ಮೇಲೆ ಕರ್ನಾಟಕದ ರಂಗ ಸಂಗೀತ ಪರಂಪರೆ ಬದುಕುವುದು ಹೇಗೆ? ಊರ್ಜಿತಗೊಳ್ಳುವ ದಾರಿ ? ರಂಗನಾಟಕಗಳಲ್ಲಿ ಸಂಗೀತಕ್ಕೆ ಪ್ರವೇಶವೇ ಇಲ್ಲವೆಂದಾದರೆ ಪು.ತಿ.ನ., ಕಂಬಾರ, ಕಾರಂತ, ಗೌರೀಶ ಕಾಯ್ಕಿಣಿ ಮೊದಲಾದವರಂತೆ ರಂಗಪ್ರಯೋಗ ಯೋಗ್ಯವಾದ ಗೀತ ನಾಟಕಗಳು ನಿರ್ಮಾಣವಾಗಲಿ. ಇಂದು ಚಿತ್ರರಂಗದಲ್ಲಿ ನಮ್ಮ ಜಾನಪದ ಜೇನು ಸಂಗೀತವನ್ನು ಯಥೇಚ್ಛವಾಗಿ ಬಳಸಿಕೊಳ್ಳುವ ಸಂಗೀತ ನಿರ್ದೇಶಕರೂ, ಗಾನಕಲಾವಿದರೂ ತಯಾರಾಗಿದ್ದಾರೆ. ನಮ್ಮ ಪಾರಿಜಾತ, ನಮ್ಮ, ಸಂಗ್ಯಾಬಾಳ್ಯಾ, ನಮ್ಮ ಮೂಡಲಪಾಯ, ನಮ್ಮ ಯಕ್ಷಗಾನ, ನಮ್ಮ ಶಾಸ್ತ್ರೀಯ ಚೀಜುಗಳು ಸುಬದ್ಧ ಸಂಗೀತ, ರಂಗಗೀತ ಪರಂಪರೆ. ಇವುಗಳನ್ನೆಲ್ಲ ಮಾಡಿಕೊಂಡು ಹೊಸಬಗೆಯ ಗೀತ ರೂಪಗಳು, ಬ್ಯಾಲೆಗಳೂ, ಅಥವಾ ಸಂಗೀತ ನಾಟಕಗಳೂ ಮುಂದೆ ಬರಲಿ ಯಾವ ಯಕ್ಷಗಾನ ಮರಾಠೀ ರಂಗಭೂಮಿಯನ್ನು ಬೆಳಗಿತೊ ಅಂತಹ ಇನ್ನೂ ಅನೇಕ ಜಾನಪದ ಬಯಲಾಟ ಪ್ರಕಾರಗಳಿಂದ ಸ್ಫೂರ್ತಿಗೊಂಡು ಉತ್ತರ, ದಕ್ಷಿಣ ಕರ್ನಾಟಕ ಸಂಗೀತ ಪರಂಪರೆ ಜೀವಂತವಾಗಿ ಉಳಿದು ಬೆಳೆದುಕೊಂಡು ಬರಲಿ.

### ೪.೫. ಹಿಂದುಸ್ಥಾನಿ ಸಂಗೀತಗಾರರ ಬಣ್ಣದ ಬದುಕು

ಹಿಂದುಸ್ತಾನಿ ಸಂಗೀತ ಮತ್ತು ರಂಗಭೂಮಿಯ ನಡುವಿನ ನಂಟಿನ ಹಿನ್ನೆಲೆಯಲ್ಲಿ ಕೆಲವು ಪ್ರಮುಖ ಗಾಯಕರನ್ನು ಗಮನಿಸಬಹುದಾಗಿದೆ.

### ಸವಾಯಿಗಂಧರ್ವ

ಅಬ್ದುಲ್‌ಕರೀಮ್‌ಖಾನರ ಶಿಷ್ಯರಾಗಿದ್ದ ಸವಾಯಿಗಂಧರ್ವರು ರಂಗಭೂಮಿಯನ್ನು ಸೇರಿದ್ದು ಆಕಸ್ಮಿಕವೇನು ಅಲ್ಲ. ರಾಮಭಾವು ಅರ್ಥಾತ್ ಸವಾಯಿಗಂಧರ್ವರು ಸೊಲ್ಲಾಪುರದಲ್ಲಿ ಗುರುಗಳ ಜೊತೆಗಿದ್ದಾಗ ನಾಟ್ಯಕಲಾ ಪ್ರವರ್ತಕ ಮಂಡಳಿಯ ಗೋಪಾಲರಾವ್‌ರ ಪರಿಚಯವಾಯಿತು. ನಟರಿಗೆ ರಂಗಗೀತೆಯನ್ನು ಕಲಿಸುತ್ತಿದ್ದ ಸಖಾರಾಮ್ ಪಂತರವರು ಮಾರ್ಗದರ್ಶನಕ್ಕಾಗಿ ಆಗಾಗ ಬರುತ್ತಿದ್ದರು. ರಾಮಭಾವು ನಾಮಾಂಕಿತ ನಟರ ರಂಗಗೀತೆಗಳನ್ನು ಹಾಡುತ್ತಿದ್ದರು. ರಂಗಗೀತೆಯನ್ನು ಕೇಳಿದ ಗೋಪಾಲರಾಯರು ತಮ್ಮ ನಾಟಕ ಕಂಪನಿಗೆ ರಾಮಭಾವು ಅವರನ್ನು ಸೇರಿಸಿಕೊಳ್ಳಲು ತೀರ್ಮಾನಿಸಿದರು.

ರಾಮಭಾವು ಕುಂದಗೋಳಕ್ಕೆ ಹೋದಾಗ ಗೋಪಾಲರಾವ್ ತಮ್ಮ ನಿಕಟವರ್ತಿ ಒಬ್ಬರನ್ನು ರಾಮಭಾವುರ ಮನವೊಲಿಸಲು ಕಳುಹಿಸಿದರು. ಗವಾಯಿ ಆಗಬೇಕೆಂದಿದ್ದ ರಾಮಭಾವು ಇದಕ್ಕೆ ಒಪ್ಪಲಿಲ್ಲ. ನಾಟಕ ಕಂಪನಿ ಸೇರಲು ಇದಕ್ಕೆ ಗುರುಗಳ ಅನುಮತಿ ಇರಲಿಲ್ಲ. ಆದರೆ ಗೋಪಾಲರಾವ ಕುಂದಗೋಳದ ತಹಶೀಲ್ದಾರರ ಮತ್ತು ಜಮಖಂಡಿ ಸಂಸ್ಥಾನಿಕರ ವಶೀಲಿ ಹಚ್ಚಿದರು. ಮನೆಯ ಬಡತನ, ರಂಗಜೀವನದ ಮೋಹಕಥೆ ಪ್ರತಿಷ್ಠರ ಪ್ರಭಾವ ಇವುಗಳಿಂದಾಗಿ ರಾಮಭಾವು ನಾಟಕ ಕಂಪನಿಯನ್ನು ಸೇರಿದರು.

ರಾಮಭಾವು ಅಭಿನಯಿಸುತ್ತಿದ್ದ ಸೌಭದ್ರ ಅತ್ಯಂತ ಯಶಸ್ವಿ ಪ್ರಯೋಗವಾಗಿತ್ತು. ಸುಭದ್ರೆಯ ಪಾತ್ರಕ್ಕೆ ಹೇಳಿ ಮಾಡಿಸಿದಂತೆ ಸಹಜಕಂಠದಿಂದ ಹೊರಹೊಮ್ಮಿದ ಗಿರಡಿ ತಾನ್‌ಗಳುಳ್ಳ ರಂಗಗೀತೆಗಳು ತುಂಬಾ ಆಕರ್ಷಕವಾಗಿದ್ದವು.

೧೯೧೮ ರಲ್ಲಿ ರಾಮಭಾವು ಕುಂದಗೋಳಕರ್ ಮತ್ತು ಭಾವುರಾವ ಜೋಷಿ ಪಾಲುಗಾರಿಕೆಯಲ್ಲಿ ನೂತನ ಸಂಗೀತ ನಾಟಕ ಮಂಡಳಿ ಹುಟ್ಟಿಕೊಂಡಿತು. ಈ ಮಂಡಳಿಯು ಸೌಭದ್ರೆ, ಶಾರದಾ, ಮೂಕನಾಯಕ, ಮೃಚ್ಛಕಟಿಕ ಮುಂತಾದ ನಾಟಕಗಳನ್ನು ಪ್ರಯೋಗಿಸಿತು.

''ಸವಾಯಿಗಂಧರ್ವರು ರಂಗಸಂಗೀತಕ್ಕೆ ಗಟ್ಟಿಯಾದ ಶಾಸ್ತ್ರೀಯ ನೆಲಗಟ್ಟು ನೀಡಿದರು. ಇವರ ನಾಟ್ಯಗೀತೆ ಸವಿಯಲು ಸ್ವತಃ ಬಾಲಗಂಧರ್ವರು ಬರುತ್ತಿದ್ದರು. ರಂಗಗೀತೆಗಳ ಮೂಲಕ ಶಾಸ್ತ್ರೀಯ ಸಂಗೀತವನ್ನು ಜನಮನದಲ್ಲಿ ಬೇರೂರಿಸುವಲ್ಲಿ ಇವರದು ಪ್ರಮುಖ ಪಾತ್ರವಾಗಿದೆ. ಇಂದಿಗೂ ಮರಾಠಿ ನಾಟಕ ಪರಂಪರೆ ಮುಂದುವರಿಯಲು ಸವಾಯಿಗಂಧರ್ವರ ಕೊಡುಗೆ ಅಪಾರವಾಗಿದೆ. ಕರ್ನಾಟಕ ಮಹಾರಾಷ್ಟ್ರಗಳ ನಡುವಿನ ಸಾಂಸ್ಕೃತಿಕ ಕೊಂಡಿಯಾಗಿದ್ದರು''[೨೯] ಎಂದು ಡಾ. ಸದಾನಂದ ಕನವಳ್ಳಿಯವರು ಹೇಳುತ್ತಾರೆ. ನೂತನ ಸಂಗೀತ ನಾಟಕ ಮಂಡಳಿ ದಿವಾಳಿಯಾಗತೊಡಗಿತು. ನಂತರ ಸವಾಯಿಗಂಧರ್ವರು ಬಸವಳಿದು ಹುಟ್ಟೂರು ಕುಂದಗೋಳಕ್ಕೆ ಹಿಂದಿರುಗಿದರು. ರಂಗಭೂಮಿಯನ್ನು ಬಿಡಬೇಕೆಂದರೂ ರಂಗಭೂಮಿ ಅವರನ್ನು ಬಿಡಲಿಲ್ಲ. ಪುನಃ ಗಂಧರ್ವರು ಶಂಕರರಾವ್ ಸರ್ ನಾಯಕರ ಯಶವಂತ ನಾಟಕ ಮಂಡಳಿ ಸೇರಿದರು. ಕೆಲವೇ ತಿಂಗಳುಗಳಲ್ಲಿ ಆ ಕಂಪನಿಯೊಂದಿಗೆ ಭಿನ್ನಾಭಿಪ್ರಾಯ ತಲೆದೋರಿ ಗಂಧರ್ವರು ಅದರಿಂದ ಹೊರನಡೆದರು. ಇದರ ಹಿಂದೆಯೇ ಹೀರಾಬಾಯಿ ಬಡೋದೇಕರ ಅವರಿಂದ ನಾಟ್ಯಶಾಖೆ ಸೇರಲು ಆಮಂತ್ರಣ ಬಂದಿತು. ಹೀಗೆ ಗಂಧರ್ವರು ತಮ್ಮ ಜೀವನದುದ್ದಕ್ಕೂ ರಂಗಸಂಗೀತವನ್ನು ಹಾಡುತ್ತಲೇ ನಡೆದರು.

ಸವಾಯಿಗಂಧರ್ವರು ನಾಟಕ ಕಂಪನಿ ಸೇರುವ ಮೊದಲು ಗವಾಯಿಗಳಾಗಿದ್ದರು. ನಾಟಕ ಕಂಪನಿಗಳಲ್ಲೂ ಗವಾಯಿಗಳಾಗಿದ್ದರು. ಕಂಪನಿ ತೊರೆದ ಮೇಲು ಗವಾಯಿಗಳಾಗಿದ್ದರು. ರಂಗಾನುಭವದಿಂದ ಅವರ ಗಾಯನಕ್ಕೆ

---

೨೯. ಸವಾಯಿ ಗಂಧರ್ವ : ಡಾ. ಸದಾನಂದ ಕನವಳ್ಳಿ, ಪುಟ-೨೩

ಅಧಿಕ ಮೆರಗು ಪ್ರಾಪ್ತವಾಯಿತು. ೨೫ ವರ್ಷಗಳ ರಂಗಸೇವೆಯಿಂದ ಕುಂದಗೋಳ ಪರಿಸರದ ಹಿಂದುಸ್ತಾನಿ ಸಂಗೀತ ಪರಂಪರೆಯು ಇನ್ನಷ್ಟು ಗಟ್ಟಿಯಾಯಿತು. ಶ್ರೋತೃಗಳ ನಾಡಿ ಅರಿತು ಪಂಡಿತರಿರಲಿ, ಪಾಮರರಿರಲಿ ಎಲ್ಲರೂ ಅಹುದೆನ್ನುವಂತೆ ಹಾಡುವ ಕಲೆ ಕರಗತವಾಯಿತು.

## ಮಲ್ಲಿಕಾರ್ಜುನ ಮನ್ಸೂರ

ಮಲ್ಲಿಕಾರ್ಜುನ ಮನ್ಸೂರವರು ಧಾರವಾಡದ ಶಾಲೆಯಲ್ಲಿರಬೇಕಾದಾಗ ಹುಬ್ಬಳ್ಳಿಗೆ ವಾಮನರಾವ್ ಮಾಸ್ತರ ವಿಶ್ವಗುಣಾದರ್ಶ ನಾಟಕ ಕಂಪನಿ ಬಂದಿತ್ತು. ಕೆಲದಿನಗಳ ನಂತರ ಮಾಸ್ತರರ ಕಂಪನಿ ಧಾರವಾಡಕ್ಕೆ ಬಂದಾಗ ಅದು ಮನ್ಸೂರರನ್ನು ಸೆಳೆಯಿತು. ಅಣ್ಣನೊಂದಿಗೆ ಮನ್ಸೂರವರು ಕಂಪನಿಯನ್ನು ಸೇರಿದರು. ಭಕ್ತಪ್ರಲ್ಹಾದ, ಶ್ರೀಕೃಷ್ಣ ಮೊದಲಾದ ಬಾಲಪಾತ್ರಗಳಲ್ಲಿ ಮಲ್ಲಿಕಾರ್ಜುನರು ತಮ್ಮ ಅಸ್ಕಲಿತವಾದ ಮತ್ತು ಕಂಚಿನ ಕಂಠದ ಹಾಡುಗಾರಿಕೆಯಿಂದ ಪ್ರೇಕ್ಷಕರ ಮತ್ತು ವಾಮನ್‌ರಾವ್ ಮಾಸ್ತರರ ಗಮನ ಸೆಳೆದರು. ಮನ್ಸೂರರು ಆ ಕಂಪನಿಯೊಂದಿಗೆ ಅಥಣಿ, ಬಾಗಲಕೋಟೆ ಮುಂತಾದ ಕಡೆಗೆ ಹೋಗಿ ಬಂದರು.

ವಾಮನ್‌ರಾವ್ ಮಾಸ್ತರ ಕಂಪನಿ ಸೇರಿದ ಮೇಲೆ ವಾಮನ್‌ರಾವ್‌ರು ವೀರ ಅಭಿಮನ್ಯು ನಾಟಕಕ್ಕೆ ಪದಗಳನ್ನು ರಚಿಸಲು ಹೇಳಿದರು. ಮನ್ಸೂರರು ಚಾಲಿಗಳನ್ನು ಒದಗಿಸಿದರು. ಸಂಗೀತ ನಿರ್ದೇಶಕರಾಗಿ ಕೆಲಸ ಮಾಡುವುದರ ಜೊತೆಗೆ ವೀರ ಅಭಿಮನ್ಯು ನಾಟಕದಲ್ಲಿ ಶಕುನಿ ಪಾತ್ರವನ್ನು ವಹಿಸಿದರು. ಸಂಗೀತ ವೈವಿಧ್ಯದಿಂದಲೂ, ನಟನೆಯಿಂದಲೂ ವೀರ ಅಭಿಮನ್ಯು ವೃತ್ತಿ ನಾಟಕದಲ್ಲಿ ಒಂದು ದಾಖಲೆಯನ್ನು ನಿರ್ಮಿಸಿದ ಪ್ರಯೋಗ.

ಕಂಪನಿಯು ಹುಬ್ಬಳ್ಳಿಯಿಂದ ಧಾರವಾಡಕ್ಕೆ ಸ್ಥಳಾಂತರವಾದ ಮೇಲೆ ಮಲ್ಲಿಕಾರ್ಜುನರು ಕಂಪನಿಯಿಂದ ದೂರ ಉಳಿದರು. ಇದೇ ವೇಳೆಗೆ ಎರೇಶಿ ಭರಮಪ್ಪನವರ ನಾಟಕ ಕಂಪನಿ ಬಂದಿತು. ವಾಣಿವಿಲಾಸ ನಾಟಕ ಮಂಡಳಿಯು ಗಂಧರ್ವ ನಾಟಕ ಮಂಡಳಿಯ ಪ್ರತಿಬಿಂಬವಾಗಿತ್ತು. ಈ ಕಂಪನಿಯ ನಾಟಕದ ಮುಖ್ಯ ಪಾತ್ರಧಾರಿಯಾಗಿದ್ದ ಅಣ್ಣ ಬಸವರಾಜ ಮನ್ಸೂರ ತಮ್ಮ ಮಲ್ಲಿಕಾರ್ಜುನ ಮನ್ಸೂರರ ಮನಸ್ಸು ಒಲಿಸಿದರು.

ವಾಣಿವಿಲಾಸ ನಾಟಕ ಮಂಡಳಿ ಕರ್ನಾಟಕ ರಂಗಭೂಮಿಯ ಪರಂಪರೆಯಲ್ಲಿಯೇ ಒಂದು ಇತಿಹಾಸವನ್ನು ಮೆರೆಯಿತು. ವರಪ್ರಧಾನ ನಾಟಕದಲ್ಲಿ ಮಾಧವಾಚಾರ್ಯರ ಪಾತ್ರದಲ್ಲಿದ್ದ ಮನ್ಸೂರರು ಮಾಲಕಂಸರಾಗದ 'ಕಾಲಬೆದರಿ ಘಮಿಸುವಾ ಪಾಪಿಯೇ ಹರನ ಭಕುತಿಗೆ' ಎಂಬ ಗೀತೆಯನ್ನು ಹೇಳುತ್ತಾ ರಂಗಪ್ರವೇಶ ಮಾಡಿದಾಗ ಪ್ರೇಕ್ಷಕರು ಪುಲಕಿತರಾಗುತ್ತಿದ್ದರು. ಮಾಲಕಂಸರಾಗದ ಹಾಡುಗಾರಿಕೆ 'ದೇವಪಾಯಿ ಸದಯ' ಎಂಬ ಭೈರವ ಬಹಾರದ ಜೋಡು ರಾಗ ಮಲ್ಲಿಕಾರ್ಜುನರ ಹೆಸರನ್ನು ರಂಗ ಸಂಗೀತದಲ್ಲಿ ಶಾಶ್ವತಗೊಳಿಸಿದೆ.

## ಡಾ.ಬಸವರಾಜರಾಜಗುರು

### ರಂಗ ಸಂಗೀತ

ಆಗಿನ್ನೂ ಬಸವರಾಜನಿಗೆ ಒಂಬತ್ತು ವರ್ಷ. ಎಲಿವಾಳದಲ್ಲಿ ಶನಿಪ್ರಭಾವ ನಾಟಕ ಹಚ್ಚಿದ್ದರು. ನಾಟಕ ಕಲಿಸಲು ಪರ ಊರಿನ ಮಾಸ್ತರ ಬಂದಿದ್ದರು. ಹೊಡೆದು ಬಡಿದು ಕಲಿಸಿದರೂ ಪಾತ್ರ ಮಾಡುವ ಹುಡುಗರಿಗೆ ಪದ ಹಾಡಲು ಬರುತ್ತಿರಲಿಲ್ಲ. ತಾಲೀಮು ಮನೆಯೊಳಗೆ ಬೇರೆ ಯಾರನ್ನೂ ಬಿಡುತ್ತಿರಲಿಲ್ಲ. ಬಸವರಾಜ ಜಾಲಿ ಬಡ್ಡೆಯ ಮೇಲೆ ಪೀಪಾಯಿ ಇಟ್ಟು ಅದರ ಮೇಲೆ ಹತ್ತಿ ಕಿಡಕಿಯಲ್ಲಿ ಇಣಿಕಿಕ್ಕಿ ಕೇಳುತ್ತ ಒಂದೆರಡು ದಿನಗಳಲ್ಲಿಯೆ ಅವೆಲ್ಲ ಪದಗಳನ್ನು ಸರಾಗವಾಗಿ ಹಾಡಲು ಕಲಿತ. ಹಾರ್ಮೋನಿಯಂ ಜೊತೆಗೆ ಹಾಡುವಾಸೆ. ಇವನು ಕಿಡಕಿಯಲ್ಲಿ ಇಣುಕುವುದನ್ನು ಕಂಡು ನಾಟಕ ಮಾಸ್ತರರು ಕಿಡಕಿ ಮುಚ್ಚಿಸಿದರು. ಇದರಿಂದ ಬಸವರಾಜ ಕೋಪ ಬುಸ್ಸೆಂದಿತು. ಒಂದು ದಿನ ಮಧ್ಯಾಹ್ನ ಎಲ್ಲರೂ ಮಲಗಿರುವಾಗ ಅದ್ಹೇಗೋ ಒಳಗೆ ಹೋಗಿ ಚಾಕುವಿನಿಂದ ತಬಲಾ, ಡಗ್ಗಾ ತೂತು ಕೊರೆದು ಹಾರ್ಮೋನಿಯಂ ಪಟ್ಟಿ ಕಿತ್ತೆಸೆದು ಓಟ ಕಿತ್ತುವುದರಲ್ಲಿದ್ದ. ಮಾಸ್ತರರಿಗೆ ಎಚ್ಚರವಾಯಿತು. ಹಿಡಿದು ಎರಡು ಬಾರಿಸಿದರು. ಅಭಿಮಾನಧನರಾದ ಬಸವರಾಜನ ತಂದೆಗೆ ನಖಶಿಖಾಂತ ಕೋಪ. ಏ ಮಾಸ್ತರ ನಿನಗೆ ಲುಕ್ಸಾನ ಆಗಿದ್ದರೆ ಹೊಸ ತಬಲಾ, ಡಗ್ಗಾ ಮಾಡಿಸಿಕೊಡುತ್ತಿದ್ದೆ. ನಮ್ಮ ಹುಡುಗನನ್ನು ಏಕೆ ಹೊಡೆದೆ? ಎಂದು ಗದರಿಸಿದರು. ಮಾಸ್ತರರು ನಿಮ್ಮ ದಮ್ಮಯ್ಯ ತಪ್ಪಾಯಿತು ಕ್ಷಮಿಸಿರಿ ಎಂದು ಬೇಡಿಕೊಂಡರು.

ಮಹಾಂತಸ್ವಾಮಿ ಮಗನತ್ತ ಹೊರಳಿ ನಿನಗೆ ಸಂಗೀತ ಕಲಿಯುವ ಹುಚ್ಚಿದ್ದರೆ ಇಂಥ ಕ್ಷುಲ್ಲಕ ನಾಟಕ ಮಾಸ್ತರರಲ್ಲಿ ಏಕೆ, ದೊಡ್ಡ ನಾಟಕ ಕಂಪನಿಯಲ್ಲಿ ಎಂದರು. ಅದೇ ಸುಮಾರಿಗೆ ಅವರ ಬಾಲ್ಯ ಸ್ನೇಹಿತ ವಾಮನರಾವ ಮಾಸ್ತರರ ವಿಶ್ವಗುಣಾದರ್ಶ ನಾಟಕ ಮಂಡಳಿ ಹುಬ್ಬಳ್ಳಿಯಲ್ಲಿ ಕ್ಯಾಂಪ್ ಮಾಡಿತ್ತು. ಕರೆದುಕೊಂಡು ಹೋಗಿ ಮಗನನ್ನು ಸೇರಿಸಿಬಂದರು. ಬಸವರಾಜ ಬಾಲನಟನಾಗಿ ಬಾಲಕೃಷ್ಣ, ದಾಸಿ ಮುಂತಾದ ಪಾತ್ರಗಳಲ್ಲಿ ಮಿಂಚಿದ. ಕಂಚಿನ ಕಂಠ ಬೇರೆ. ಸ್ವತಃ ವಾಮನರಾವ ಮಾಸ್ತರರು ನಾಟಕದ ಹಾಡುಗಳನ್ನು ಅಭ್ಯಾಸ ಮಾಡಿಸುತ್ತಿದ್ದರು. ಹುಬ್ಬಳ್ಳಿ, ಧಾರವಾಡ, ಬೆಳಗಾವಿ, ಹೊಸಪೇಟೆ, ಬಳ್ಳಾರಿ, ಗದಗ, ಹರಿಹರ, ದಾವಣಗೆರೆ ಮುಂತಾದ ಊರುಗಳಿಗೆ ನಾಟಕ ಕಂಪನಿಯೊಂದಿಗೆ ಸುತ್ತಾಟ. ಒಮ್ಮೆ ಬಟ್ಟೆಗೆ ಸಾಬೂನು ಹಚ್ಚುತ್ತ ಬಾಜಿರಾವ ಪೇಶ್ವೆ ನಾಟಕದ ಕೊಟ್ಟ ಕಾಲಕೆ ದೇವರು ನಿನಗೆ, ಕೆಟ್ಟ ಕೃತಿಯ ಮಾಡಲು ಬೇಡ ಎಂಬ ಹಾಡು ಹೇಳುತ್ತಿದ್ದ. ವಾಮನರಾವ ಮಾಸ್ತರ ಹಿಂದೆ ಬಂದು ನಿಂತುದರ ಪರಿವೆಯೆ ಇಲ್ಲ. ಉಳಿದ ಹುಡುಗರು ತಿವಿದು ಎಚ್ಚರಿಸಿದಾಗಲೇ ತಿಳಿದದ್ದು. ಬಸವರಾಜನಿಗೆ ಗಾಬರಿ. ಆದರೆ ಮಾಸ್ತರರು ಇವನ ಹಾಂಗ ಹಾಡಿರಿ, ನೋಡೂಣು ಎಂದು ಮೆಚ್ಚುಗೆ ಸೂಸಿ ಹೊರಟು ಹೋದರು. ನಾಟಕ ಕಂಪನಿ ಸೇರಿ ಒಂದು ವರ್ಷವಾಗಿರಬಹುದು. ತಂದೆ ಮಹಾಂತಸ್ವಾಮಿ ಪ್ಲೇಗಿಗೆ ತುತ್ತಾದರು. ದಿಕ್ಕು ತೋಚದಾಯಿತು. ಆಗ ನೆರವಿತ್ತವರು ಕೆಳದಿ ಸಂಸ್ಥಾನ ಮಠಾಧಿಪತಿಗಳಾಗಿದ್ದ ಶ್ರೀ ರೇವಣಸಿದ್ಧ ಶಿವಾಚಾರ್ಯರು. ಅವರು ಬಸವರಾಜನ ದೊಡ್ಡಪ್ಪನ ಮಗ. ಮುಂದೆ ಬಸವರಾಜನನ್ನು ಮಠಕ್ಕೆ ಮರಿ

ಮಾಡಿಕೊಳ್ಳುವಾಸೆ ಅವರಿಗಿದ್ದಂತಿತ್ತು. ಆದುದರಿಂದ, ನಾಟಕ ಕಂಪನಿ ಬಿಡಿಸಿ ಹುಬ್ಬಳ್ಳಿಯ ಮೂರುಸಾವಿರ ಮಠದ ಸಂಸ್ಕೃತ ಪಾಠಶಾಲೆ ಸೇರಿಸಿದರು. ಒಂದು ದಿನ ಬೇರೆ ಊರಿಗೆ ಹೊರಟಿದ್ದ ಪಂಚಾಕ್ಷರಿ ಗವಾಯಿಗಳು ಬಸ್ ತಪ್ಪಿ ಮೂರುಸಾವಿರ ಮಠಕ್ಕೆ ಬಂದರು. ಗುರುಸಿದ್ಧ ಸ್ವಾಮಿಗಳು ಈ ಹುಡುಗ ಛಲೋ ಹಾಡತಾನ. ನಿಮ್ಮ ಸಂಗಡ ಕರಕೊಂಡು ಹೋಗಿರಿ ಎಂದು ಶಿಫಾರಸ್ಸು ಮಾಡಿದರು. ಪಂಚಾಕ್ಷರಿ ಗವಾಯಿಗಳೂ ಮಗೂ, ಒಂದು ಹಾಡ ಹೇಳಪಾ ಅಂದರು. ಬಸವರಾಜ ವೀರಅಭಿಮನ್ಯು ನಾಟಕದ 'ಭಕ್ತ ಜೀವನ ರಾಮಾ ಸುಜನ ಜೀವನ' ಎಂಬ ಪದ ಹಾಡಿದ. ಅಂಧರಾದ ಪಂಚಾಕ್ಷರಿ ಗವಾಯಿಗಳು ಬಸವರಾಜನನ್ನು ಕರೆದು ವೈದಡವಿ ಎಷ್ಟು ಛಂದ ಗಿರಡಿ ಹೊರಳಸತಿಯಲ್ಲೋ! ಎಲ್ಲಿ ನೋಡೋಣ, ಇನ್ನೊಂದು ಹಾಡು ಎಂದರು. ಬಸವರಾಜ ಅದೇ ನಾಟಕದ ಕರುಣ ಸಾಗರಾ ಪ್ರಭು ಪರಮಾತ್ಮಾ ಹಾಡಿದ. ಪಂಚಾಕ್ಷರಿ ಗವಾಯಿಗಳು ಗುರುಸಿದ್ಧ ಸ್ವಾಮಿಗಳನ್ನುದ್ದೇಶಿಸಿ ಬುದ್ಧೀ ನಮಗ ಹುಡುಗ ಒಪ್ಪಿಗೆ ಆಗ್ಯಾನ. ಇಂದೇ ಕರೆದೊಯ್ಯುವೆ ಎಂದರು. ಬಸವರಾಜನ ಅದೃಷ್ಟ ತೆರೆಯಿತು. ಇದು ನಡೆದದ್ದು ೧೯೩೦ ಜೂನ್ ತಿಂಗಳಲ್ಲಿ.



# ಅಧ್ಯಾಯ-ಐದು

# ಹಿಂದುಸ್ತಾನಿ ಸಂಗೀತಕ್ಕೆ ಕುಂದಗೋಳ ಪರಿಸರದ ಕಲಾವಿದರ ಕೊಡುಗೆಗಳು

## ೫.೧. ನಾಡಿಗೇರ ವಾಡೆ

ಕುಂದಗೋಳ ಪರಿಸರದ ಪ್ರಭಾವದಲ್ಲಿ ಸಾಧನೆಗೈದ ಹಿಂದುಸ್ತಾನಿ ಸಂಗೀತಗಾರರ ಸ್ಥೂಲ ಪರಿಚಯವು ಸಂಗೀತ ಪರಂಪರೆಯನ್ನು ಅರಿಯುವಲ್ಲಿ ಅಗತ್ಯವೆಂದನ್ನಿಸುತ್ತದೆ. ಕುಂದಗೋಳದ ನಾಡಿಗೇರವಾಡೆ ಸಂಗೀತಕ್ಕೆ ಅಗತ್ಯವಿರುವ ಪರಿಸರ ಒದಗಿಸಿ ಆ ಮೂಲಕ ಅದು ಪರಂಪರೆಯಾಗಿ ಮುಂದುವರಿಯುವಂತೆ ಮಾಡಿತು. ವಾಡೆಯ ಮೊದಲ ತಲೆಮಾರಿನ ರಂಗನಗೌಡರು, ಅನಂತರ ಎರಡನೇ ತಲೆಮಾರಿನ ನಾನಾಸಾಹೇಬರು ಅತ್ಯಂತ ಸಾಹಸದಿಂದ ಸಂಗೀತ ಯಜ್ಞಕ್ಕೆ ತೊಡಗಿದರು. ತಮಗಿರುವ ಸಂಪತ್ತಿನ ಆಶ್ರಯದಲ್ಲಿ ಸಂಗೀತವನ್ನು ಬೆಳೆಯಲು ಬಿಟ್ಟರು. ಕರೀಂಖಾನರನ್ನು ಉಳಿಸಿಕೊಂಡು ಸಂಗೀತದ ತೊಟ್ಟಿಲನ್ನು ತೂಗಲು ವ್ಯವಸ್ಥೆ ಮಾಡಿದರು. ಈ ತೊಟ್ಟಿಲಲ್ಲಿ ಸವಾಯಿಗಂಧರ್ವರು ಮೊದಲು ಬೆಳೆದರು. ಅನಂತರ ಅವರ ಶಿಷ್ಯ ಪರಂಪರೆಯಲ್ಲಿ ಪಂಡಿತ ಮಲ್ಲಿಕಾರ್ಜುನ ಮನ್ಸೂರ, ಡಾ.ಗಂಗೂಬಾಯಿ ಹಾನಗಲ್, ಪಂಡಿತ ಭೀಮಸೇನ ಜೋಶಿ, ಪಂಡಿತ ಬಸವರಾಜ ರಾಜಗುರು ಮುಂತಾದವರು ಸಂಗೀತ ಗಂಗೋತ್ರಿಯನ್ನು ಕುಂದಗೋಳದಲ್ಲಿ ಕಂಡುಕೊಂಡವರು. ಸಂಗೀತ ಸಾಧನೆಯ ದಾರಿಯಲ್ಲಿ ಇವರು ಅನುಭವಿಸಿದ ಸುಖ ದುಃಖದ ಕ್ಷಣಗಳು ರೋಚಕವಾಗಿದೆ.

## ೫.೨. ನಾನಾ ಸಾಹೇಬ ನಾಡಿಗೇರ (ಕೆಂಚನಗೌಡ)

ಕುಂದಗೋಳ ಹುಬ್ಬಳ್ಳಿಯ ದಕ್ಷಿಣಕ್ಕೆ ೧೯ ಕಿ.ಮೀ. ದೂರದಲ್ಲಿರುವ ಸಣ್ಣ ಊರು. ಭೌಗೋಳಿಕವಾಗಿ ಅದೊಂದು ಚಿಕ್ಕ ಪ್ರದೇಶವಾದರೂ ಭಾರತದ ಸಂಗೀತ ನಕ್ಷೆಯಲ್ಲಿ ಅದಕ್ಕೆ ಸಂಗೀತದ ಮಹತ್ವದ ಸ್ಥಾನವುಂಟು. ಈ ಮಹತ್ವದ ಸ್ಥಾನ ಪ್ರಾಪ್ತವಾಗಲು ಸ್ಥಳೀಯ ನಾಡಿಗೇರ ಮನೆತನವು ಬಹಳ ಮುಖ್ಯವಾದ ಪಾತ್ರವಹಿಸಿದೆ. ''ನಾಡಿಗೇರರದು ಅಗರ್ಭ ಶ್ರೀಮಂತ ಮನೆತನ. ದೊಡ್ಡ ಭೂಮಾಲೀಕರು ಅರಮನೆಯಂಥ ಭವ್ಯವಾದ ವಾಡೆಯಲ್ಲಿ ಸಮೃದ್ಧವಾದ ಜೀವನವನ್ನು ಸಾಗಿಸಿದವರು. ವಾಡೆಯಂದರೆ ರಾಜರ ಕಾಲದ ಸಂಸ್ಥಾನವಿದ್ದಂತೆ. ಐದಾರು ನೂರು ಜನ ಕುಳಿತುಕೊಳ್ಳಬಹುದಾದ ದಿವಾನಖಾನೆ ;ಅದಕ್ಕೆ ವಿಶೇಷ ವಿನ್ಯಾಸದ ಸುಂದರ ಗ್ಯಾಲರಿ, ವಿವಿಧ ಬಗೆಯ ಹೂ ಹಣ್ಣಿನ ಮರಗಳ ವಿಶಾಲವಾದ ಹಿತ್ತಲು, ಅದಕ್ಕೆ ಹೊಂದಿಕೊಂಡಿರುವ ದೊಡ್ಡದಾದ ದನಕರುಗಳ ಕೊಟ್ಟಿಗೆ, ಇದರಿಂದ ಲಭ್ಯವಾಗುವ ಹಾಲು ಹೈನಿನ ಸಮೃದ್ಧಿ, ನೂರಾರು ಜನ ಒಮ್ಮೆಲೆ

ಕುಳಿತುಕೊಳ್ಳಬಹುದಾದ ಭೋಜನಗೃಹ, ಇದರರ್ಥ ನಾಡಗೇರವರ ಮನೆತನ ಒಂದು ಸಂಸ್ಥಾನದಂತೆ ಇತ್ತು. ಸಹಜವಾಗಿ ಆ ಕಾಲದ ಆಸ್ಥಾನಿಕರಿಗೆ ಸಂಸ್ಥಾನಿಕರಿಗೆ ಇರಬೇಕಾದ ಸಂಗೀತದ ಶೋಕಿ ಮತ್ತು ರಸಿಕತನ ನಾಡಿಗೇರರ ಮನೆತನದಲ್ಲಿ ಹರಿದುಬಂತು''[೨೦] ಎಂದು ಸದಾನಂದ ಕನವಳ್ಳಿ ಬರೆಯುತ್ತಾರೆ.

ಕುಂದಗೋಳ ಆಗ ಜಮಖಂಡಿ ಸಂಸ್ಥಾನಕ್ಕೆ ಸೇರಿದ ಊರು. ಮರಾಠಿ ಆಡಳಿತದ ಪ್ರಾಬಲ್ಯದಿಂದಾಗಿ ಶಿಕ್ಷಣ ಮಾಧ್ಯಮ, ಆಡಳಿತ ಭಾಷೆ ಮರಾಠಿ. ಮಹಾರಾಷ್ಟ್ರದ ಸಂಪರ್ಕದಿಂದಾಗಿ ಈ ಊರಿಗೆ ನಾಟಕದ ಸಂಪರ್ಕ ದೊರಕಿತು. ಇದೇ ಸಂದರ್ಭದಲ್ಲಿ ಈ ಊರನ್ನು ಮೈಸೂರ ಸಂಸ್ಥಾನಕ್ಕೂ ಉತ್ತರ ಭಾರತದ ಮಹಾನಗರಗಳಿಗೂ ಸಂಪರ್ಕ ಜೋಡಿಸಿದ ರೈಲು ಮಾರ್ಗವು ಹರಿದು ಹೋದದ್ದು ಮುಂದಿನ ಸಂಗೀತ ಬೆಳವಣಿಗೆಗೆ ಮುಖ್ಯ ಕಾರಣವಾಯಿತು.

ಕಿರಾಣಾ ಘರಾಣೆಯ ಮುಖ್ಯ ಹಾಡುಗಾರರಾದ ಅಬ್ದುಲ್‌ಕರೀಮಖಾನ್‌ರು ಕರ್ನಾಟಕದ ತುಂಬಾ ಸುತ್ತಾಡುವ ಕಾಲವದು. ಮೈಸೂರ ಅರಸರ ಆಸ್ಥಾನದ ಆಮಂತ್ರಣದ ಮೇರೆಗೆ ಕರಿಂಖಾನ್‌ರು ಮೇಲಿಂದ ಮೇಲೆ ಹುಬ್ಬಳ್ಳಿ ಕುಂದಗೋಳಕ್ಕೆ ಬರುತ್ತಿದ್ದರು. ಹೀಗೆ ವಾಸ್ತವ್ಯ ಮಾಡಲು ಮುಖ್ಯವಾಗಿ ಕಾರಣರಾದವರು ನಾನಾಸಾಹೇಬರ ತಂದೆಯವರಾದ ನಾಡಿಗೇರ ರಂಗನಗೌಡರು. ರಂಗನಗೌಡರು ಕರೀಂಖಾನ್‌ರನ್ನು ತಮ್ಮ ವಾಡೆಯಲ್ಲಿ ಉಳಿಸಿಕೊಂಡು ತಿಂಗಳುಗಟ್ಟಲೆ ರಾಜೋಪಚಾರದಿಂದ ಸತ್ಕರಿಸಿ ಕರೀಂಖಾನ್‌ರಿಂದ ಹಾಡಿಸಿ ಸಂಗೀತ ಸುಗ್ಗಿಯನ್ನು ಮೆರೆಸುತ್ತಿದ್ದರು. ಸುತ್ತಮುತ್ತಲಿನ ಊರುಗಳ ಸಂಗೀತ ರಸಿಕರನ್ನು ವಾಡೆಗೆ ಆಮಂತ್ರಿಸುವ ಪರಂಪರೆಯನ್ನು ರಂಗನಗೌಡರು ಆರಂಭಿಸಿದರು. ಆಗಿನ್ನು ಕಲೆ ವಾಣಿಜ್ಯಕರಣರಗೊಂಡಿರಲಿಲ್ಲ. ಆಸಕ್ತ ಶ್ರೋತೃಗಳು ಸಿಕ್ಕರೆ ಅದೇ ಭಾಗ್ಯವೆಂದು ತಿಳಿದು ಬೈಟಕ್ ನೀಡುತ್ತಿದ್ದರು. ನಾಡಿಗೇರ ರಂಗನಗೌಡರು ಸಂಗೀತಗಾರರನ್ನು ಎಂದೂ ಬರಿಗೈಯಿಂದ ಕಳಿಸುತ್ತಿರಲಿಲ್ಲ. ಹಾಡುಗಾರರನ್ನು ಯಥೋಚಿತ ಸನ್ಮಾನಿಸಿ ಗೌರವದಿಂದ ನೋಡಿಕೊಳ್ಳುತ್ತಿದ್ದರು. ಹೀಗೆ ಕುಂದಗೋಳ ಪರಿಸರದಲ್ಲಿ ಸಂಗೀತ ಪರಂಪರೆಯೊಂದು ಆರಂಭಗೊಳ್ಳಲು ಜಮಿನ್ದಾರರಾಗಿದ್ದ ನಾಡಿಗೇರ ಮನೆತನವು ಕಾರಣವಾಯಿತು.

ಇಂದು ಕುಂದಗೋಳವು ಸವಾಯಿಗಂಧರ್ವರ ಹೆಸರಿನಿಂದಾಗಿ ಸಂಗೀತ ಜಗತ್ತಿನ ಲಕ್ಷ್ಯವನ್ನು ಸೆಳೆಯುತ್ತಿದೆ. ಇಂಥಹ ಮಹಾನ್ ಸಂಗೀತಗಾರರನ್ನು ಗುರುತಿಸಿ, ಬೆಳೆಸಿ ಆಶ್ರಯ ನೀಡಿದ ಕೀರ್ತಿ ನಾಡಿಗೇರ ಕುಟುಂಬಕ್ಕೆ ಸಲ್ಲಬೇಕು. ಸವಾಯಿಗಂಧರ್ವರ ತಂದೆ ಗಣೇಶ ಸಂಶಿ ಬಡವರು. ರಂಗನಗೌಡರು ಸಂಶಿಯವರನ್ನು ತಮ್ಮ ವಾಡೆಯಲ್ಲಿ ತಿಂಗಳಿಗೆ ನಾಲ್ಕು ರೂಪಾಯಿ ವೇತನದ ಗುಮಾಸ್ತ ನೌಕರಿ ನೀಡಿ ಉಳಿಸಿಕೊಂಡರು. ಮುಂದೆ ಅವರ ಮಧ್ಯಸ್ಥಿಕೆಯಲ್ಲಿ ಸವಾಯಿಗಂಧರ್ವರು ಕರೀಂಖಾನರ ಶಿಷ್ಯತ್ವವನ್ನು ಪಡೆಯಲು ಕಾರಣವಾಯಿತು.

---

೨೦. ಸವಾಯಿಗಂಧರ್ವ : ಡಾ.ಸದಾನಂದ ಕನವಳ್ಳಿ, ಪುಟ-೫

ಹೀಗೆ ತಮ್ಮ ಶ್ರೀಮಂತಿಕೆ ನಡುವೆಯೂ ಸಂಗೀತದ ಮೇಲಿನ ಅಪಾರ ಪ್ರೀತಿಯಿಂದಾಗಿ ಕುಂದಗೋಳದಂತಹ ಪ್ರದೇಶದಲ್ಲೂ ಸಂಗೀತ ಪ್ರತಿಭೆಯೊಂದು ಚಿಗುರಿ ಹೆಮ್ಮರವಾಗಲು ಕಾರಣವಾಯಿತು. ಈ ಉದಾರ ಪರಂಪರೆಯು ನಾಡಿಗೇರ ಮನೆತನದ ನಾನಾಸಾಹೇಬರ ಕಾಲದಲ್ಲಿಯೂ ಮುಂದುವರೆಯಿತು. ಸ್ವತಃ ಜಮೀನ್‌ದಾರರಾಗಿದ್ದರೂ ಕೂಡಾ ಸಂಗೀತದ ಪ್ರೀತಿಯಿಂದಾಗಿ ಬಡವ ಶ್ರೀಮಂತ ಭೇದಗಳನ್ನು ದಾಟಿದ ಅಪೂರ್ವ ಪ್ರಸಂಗ ಒಂದು ನಾನಾಸಾಹೇಬರ ಮನೆತನದಲ್ಲಿ ನಡೆಯಿತು. ಉದಾಹರಣೆಗೆ ಡಬ್ಬಿ ಅಂಗಡಿಯಲ್ಲಿ ಚುರುಮುರಿ ಮಾರಿ ಜೀವನ ಸಾಗಿಸುತ್ತಿರುವ ಹನಮಂತಪ್ಪ ಗುರುಶಿದ್ದಪ್ಪ ಅಳಗವಾಡಿಯವರ ನೆನಪಿನ ವೃತ್ತಾಂತ ಉತ್ತಮ ಸಾಕ್ಷಿಯಾಗಿದೆ. ''ಅಂದಿನ ದಿನಗಳಲ್ಲಿ ಕುಂದಗೋಳಕ್ಕೆ ಬರುತ್ತಿದ್ದ ಏಣಗಿ ಬಾಳಪ್ಪನವರ ನಾಟಕ ಕಂಪನಿಗಳು ಮತ್ತು ಪ್ರದರ್ಶನಗಳು ನಾನಾಸಾಹೇಬರನ್ನು ಪ್ರಭಾವಿಸಿರಬಹುದು. ವೇಷಗಾರರು ಬಂದಾಗ ನಾನಾಸಾಹೇಬರು ಅವರನ್ನು ಮನೆಗೆ ಕರೆದು ಸಂಗೀತವನ್ನು ಹಾಡಿಸುತ್ತಿದ್ದರು''[೩೧] ಎಂದು ಶ್ರೀಹನುಮಂತಪ್ಪ ನೆನಪಿಸಿಕೊಳ್ಳುತ್ತಾರೆ.

ವಾಡೆಯಲ್ಲಿ ಜೀತಕ್ಕಿದ್ದವರನ್ನು ಕೂಡಾ ಸಂಗೀತಕ್ಕೆ ಸೆಳೆದುಕೊಂಡಿದ್ದು ನಾನಾಸಾಹೇಬರವಾಡೆಯಲ್ಲಿ ನಡೆದ ಮತ್ತೊಂದು ಮಹತ್ವದ ಮಾನವೀಯ ಪ್ರಸಂಗವಾಗಿದೆ. ವಾಡೆಯಲ್ಲಿ ನಡೆಯುತ್ತಿದ್ದ ಭಜನಾ ಕಾರ್ಯಕ್ರಮವನ್ನು ಕೇಳಲು ಹೋಗುತ್ತಿದ್ದ ತಮ್ಮಣ್ಣ ಶಂಕ್ರಪ್ಪ ಸೋನಾರ ಅವರ ಅನುಭವ ನಾನಾಸಾಹೇಬರವರ ಜೀವನದ ಮತ್ತೊಂದು ಚಿತ್ರವನ್ನು ಪರಿಚಯಿಸುತ್ತದೆ. ತಮ್ಮಣ್ಣ ಬಡತನದಿಂದಾಗಿ ಪರರ ಮನೆಗೆ ದುಡಿಯಲು ಹೋಗಬೇಕಾಗಿತ್ತು. ನಾನಾಸಾಹೇಬರ ಮನೆಯಲ್ಲಿ ಜೀತದ ಕೆಲಸವನ್ನು ಕೇಳಿದಾಗ ಅವರು ನೀಡಿದರು. ಆದರೆ ತಮ್ಮಣ್ಣನಲ್ಲಿರುವ ಸಂಗೀತದ ಪ್ರೀತಿಯನ್ನು ಗಮನಿಸಿ ನಾನಾಸಾಹೇಬರು ಅವನಿಗೆ ಕಮತದ ಕೆಲಸವನ್ನು ಕಡಿಮೆಕೊಟ್ಟು ಹೆಚ್ಚು ಕಾಲ ತಮ್ಮ ಹತ್ತಿರ ವಾಡೆಯಲ್ಲಿಯೇ ಉಳಿಯುವ ಕೆಲಸವನ್ನು ನೀಡಿದರು. ಪ್ರಸಿದ್ಧ ಸಂಗೀತಗಾರರಾದ ಬಸವರಾಜರಾಜಗುರು ಸಂಗಮೇಶ್ವರ ಗುರವ್, ಸೋಮನಾಥ ಮರಡೂರ ಇವರ ಬಳಿಯಲ್ಲಿ ಸಂಗೀತ ಅಭ್ಯಾಸವನ್ನು ಮುಂದುವರಿಸುತ್ತಲೇ ವಾಡೆಯ ಜೀತದಾಳುಗಳಿಗೆ ಸಂಗೀತ ಪಾಠವನ್ನು ಮಾಡಲು ತೊಡಗಿದರು. ವಾಡೆಯು ದಿನಚರಿಯ ಕೆಲಸಗಳ ನಡುವೆ ಸಂಗೀತ ಸಾಗುತ್ತ ಬಂದಿದೆ. ಜೀತಕ್ಕಿದ್ದ ತಮ್ಮಣ್ಣ ನಂತವರು ಎಮ್ಮೆಯ ಹಸಿ ಹಾಲನ್ನ ಸಂಗೀತಗಾರರಿಗೆ ಕುಡಿಯಲು ನೀಡಬೇಕಾಗಿತ್ತು. ಸಂಗೀತದ ಮೇಲೆ ಎಷ್ಟು ಪ್ರೀತಿಯೊ ಅಷ್ಟೆ ಹಾಲು ಮತ್ತು ಹಾಲನ್ನು ತಂದುಕೊಡುವ ಆಳುಗಳ ಮೇಲೆ ಅವರಿಗೆ ಪ್ರೀತಿ. ನಾನಾಸಾಹೇಬರು ಆಳುಗಳಿಗೆ ತಮ್ಮ ವಾಡೆಯಲ್ಲಿ ಸಂಗೀತವನ್ನು ಆಲಿಸುವ ಅವಕಾಶವನ್ನು ನೀಡುತ್ತಿದ್ದರು. ಅಷ್ಟೇ ಅಲ್ಲದೇ ಈ ಆಳುಗಳಿಗೂ ಸಂಗೀತ ಕಲಿಸಲು ಪ್ರಯತ್ನಿಸುತ್ತಿದ್ದರು.

---

೩೧. ಮುದ್ರಿತ ಅವತರಣಿಕೆ : ಶ್ರೀ ಹನುಮಂತಪ್ಪ

ನಾಡಿಗೇರರ ವಾಡೆಯಲ್ಲಿ ಸೇವೆ ಮಾಡುತ್ತ ಸಂಗೀತವನ್ನು ಅನುಭವಿಸುತ್ತ ನಾನಾಸಾಹೇಬರ ವ್ಯಕ್ತಿತ್ವವನ್ನು ಪರಿಚಯಿಸಿಕೊಂಡವರ ಸಾಲಿನಲ್ಲಿ ಮಹಾದೇವಪ್ಪ ತಹಶೀಲ್ದಾರರ ಹೆಸರು ಮುಖ್ಯವಾದದ್ದು. ನಾನಾಸಾಹೇಬರು ಗುರುಗಳಾದ ಸವಾಯಿಗಂಧರ್ವ ಮತ್ತು ರಾಜಗುರುರವರ ಜೊತೆಯಲ್ಲಿ ಎಷ್ಟು ಸ್ನೇಹದಿಂದ ಇರಬಲ್ಲವರಾಗಿದ್ದರೂ ಅಷ್ಟೇ ಸ್ನೇಹ ಪ್ರೀತಿಯಿಂದ ವಾಡೆಯ ಕೆಲಸಗಾರರೊಂದಿಗೆ ಇರಬಲ್ಲವರಾಗಿದ್ದರು. ವಾಡೆಯಲ್ಲಿ ಸದಾ ಸಂಗೀತದ ರಿಯಾಜ ಇರುತ್ತಿತ್ತು. ಅದನ್ನು ಕೇಳುತ್ತಲೇ ಕೆಲಸದಾಳುಗಳು ಒಕ್ಕಲುತನದ ಕೆಲಸ ಮಾಡುತ್ತಿದ್ದರು. ಪ್ರತಿನಿತ್ಯ ಸಂಜೆ ವಾಡೆಯ ದೊಡ್ಡ ಪಡಸಾಲೆಯಲ್ಲಿ ದೀಪ ಬೆಳಗಿ ದೇವರಿಗೆ ಕೈಮುಗಿದು ನಾನಾಸಾಹೇಬರು ಬಂದು ಕುಳಿತುಕೊಳ್ಳುತ್ತಿದ್ದರು.

ಕೊಟ್ಟಿಗೆ ಕೆಲಸವನ್ನು ಬೇಗ ಮುಗಿಸಿ ಸಂಗೀತ ಆಲಿಸಲು ಕಲಿಸುತ್ತಿದ್ದರು. ಬಲು ಆಸ್ಥೆಯಿಂದ ಸಂಗೀತವನ್ನು ಆಲಿಸಿದವರನ್ನು ಮೆಚ್ಚಿಕೊಂಡ ನಾನಾಸಾಹೇಬರು ಒಂದು ದಿನ ಅವರ ಕೈಯಲ್ಲಿ ತಂಬೂರಿ ಇಟ್ಟರು. ಇದು ಮಹಾದೇವಪ್ಪನಂತವರ ಜೀವನದಲ್ಲಿ ನಡೆದ ಪವಾಡ ಸದೃಶ್ಯ ಘಟನೆಯಾಗಿದೆ. ನಾನಾಸಾಹೇಬರು ಉತ್ತರ ಹಿಂದುಸ್ತಾನದಿಂದ ಪಂಡಿತ ಬಸರಾಜರಂಥ ಸಂಗೀತಗಾರರನ್ನು ವಾಡೆಗೆ ಕರೆಯಿಸುತ್ತಿದ್ದರು. ವಾಡೆಯಲ್ಲಿ ವಾರಗಟ್ಟಲೇ ಉಳಿಸಿಕೊಳ್ಳುತ್ತಿದ್ದರು. ಹಗಲಿನಲ್ಲಿ ನಾನಾಸಾಹೇಬರು ಇಂಥ ಸಂಗೀತಗಾರ ಅತಿಥಿಗಳನ್ನು ಚಕ್ಕಡಿ ಮೇಲೆ ಹೊಲಕ್ಕೆ ಕರೆದುಕೊಂಡು ಹೋಗುತ್ತಿದ್ದರು. ಹೊಲದಲ್ಲಿ ದುಡಿಯುತ್ತಿದ್ದ ಆಳುಗಳೊಂದಿಗೆ ಪ್ರೀತಿಯಿಂದ ಬೆರೆತು ಮಾತನಾಡುತ್ತಿದ್ದರು. ಎತ್ತುಗಳೆಂದರೆ ಅವರಿಗೆ ತಾವು ಮೀಟುತ್ತಿದ್ದ ತಂಬೂರಿಯಷ್ಟೇ ಪ್ರೀತಿಪಾತ್ರವಾಗಿದ್ದವು. ಇಂಥ ಜೀವನ ಪ್ರೀತಿಯ ಸಾಮಾನ್ಯ ಮನುಷ್ಯರಂತಿರುವ ಅಸಾಧಾರಣ ಕಲಾವಿದರು ಸಂಜೆ ವಾಡೆಯಲ್ಲಿ ತಮ್ಮ ಹಾಡುಗಾರಿಕೆ ಮೂಲಕ ಅತೀಂದ್ರಿಯ ಜಗತ್ತನ್ನೇ ಸೃಷ್ಟಿಸಿ ಬಿಡುತ್ತಿದ್ದರು. ಅತೀಂದ್ರಿಯ ಅನುಭವವನ್ನು ನೀಡುವ ಸಂಗೀತ ಮಣ್ಣಿನ ಮಕ್ಕಳಿಗೂ ಸಿಗುವಂತೆ ಮಾಡಿದ ಕೀರ್ತಿ ಆ ಮೂಲಕ ಮನುಷ್ಯ ಮನುಷ್ಯರ ನಡುವಿನ ಕೃತ್ರಿಮ ಗೋಡೆಯನ್ನು ಉರುಳಿಸಿದ್ದು ಚಾರಿತ್ರಿಕವಾಗಿ ಅತ್ಯಂತ ಗಮನಾರ್ಹ ಸಂಗತಿಯಾಗಿದೆ.

ಸಂಗೀತವು ಆಸ್ಥಾನದ ಆಶ್ರಯದಿಂದ ಲೋಕಾಶ್ರಯಕ್ಕೆ ಪರಿವರ್ತನಗೊಳ್ಳುವ ಸಂಕ್ರಮಣ ಸ್ಥಿತಿಯಲ್ಲಿ ನಾನಾಸಾಹೇಬರು ವಹಿಸಿದ ಪಾತ್ರ ಮುಖ್ಯವಾದದ್ದು. ಕುಂದಗೋಳವು ಜಮಖಂಡಿ ಸಂಸ್ಥಾನದ ಪೇಶ್ವೆಯವರ ಆಡಳಿತದ ನಿಯಂತ್ರಣಕ್ಕೆ ಒಳಪಟ್ಟ ವಿಶಿಷ್ಟವಾದ ಪ್ರದೇಶವಾಗಿದೆ. ಸಂಗೀತ ನಾಟಕ, ಭಾಷೆ ಮತ್ತು ಪ್ರಭುತ್ವ ಈ ನಾಲ್ಕು ವಿಷಯಗಳಲ್ಲಿ ಮರಾಠಿಯ ಪ್ರಭಾವವನ್ನು ಗುರುತಿಸಬಹುದಾಗಿದೆ. ಜಮಖಂಡಿ ಸರಕಾರ ಸಂಗೀತವನ್ನು ಮತ್ತು ಅದನ್ನು ಪೋಷಿಸುವ ದೇವಸ್ಥಾನಗಳನ್ನು ರಕ್ಷಿಸುತ್ತ ಬಂದಿದೆ. ಜಮಖಂಡಿ ಸಂಸ್ಥಾನಿಕರ ಕಾಲದಲ್ಲೇ ಕುಂದಗೋಳದ ಶಂಭುಲಿಂಗೇಶ್ವರ ದೇವಸ್ಥಾನದ ಜೀರ್ಣೋದ್ಧಾರವಾಯಿತು. ದೇವಸ್ಥಾನದಲ್ಲಿ ಕೆಲಸ ಮಾಡುವವರಿಗೆ ಸೇವೆ ಸಲ್ಲಿಸುವವರಿಗೆ ನಿತ್ಯ ಪೂಜೆ ಮಾಡುವವರಿಗೆ ಸಂಸ್ಥಾನವು ಹಲವು ರೀತಿಯಿಂದ ಸಹಾಯ

ಮಾಡಿದೆ. ಇದಕ್ಕೆ ಸಾಕ್ಷಿಯಾಗಿ ಪ್ರತಿನಿತ್ಯ ಪೂಜೆ ಸಲ್ಲಿಸುತ್ತಿದ್ದ ಪ್ರಸಿದ್ಧ ಹಾಡುಗಾರರಾದ ಫಕ್ಕೀರಪ್ಪ ಹೂಗಾರರಿಗೆ ೪೮ ಎಕರೆ ಜಮೀನನ್ನು ದಾನರೂಪದಲ್ಲಿ ಮಂಜೂರಿ ಮಾಡಿದ್ದನ್ನು ಉಲ್ಲೇಖಿಸಬಹುದಾಗಿದೆ. ಅಷ್ಟಾವಧಾನ ಸೇವೆ ಮಾಡುವವರಿಗೆ, ನೃತ್ಯ ಸೇವೆಯನ್ನು ಸಲ್ಲಿಸುವವರಿಗೆ ೨೮ ಎಕರೆ ಜಮೀನನ್ನು ನೀಡಿದ ದಾಖಲೆಗಳಿವೆ. ಫಕ್ಕೀರಪ್ಪ ಹೂಗಾರವರ ಶಿಷ್ಯೆಯಾಗಿದ್ದ ಇಂದೂಬಾಯಿ ಕುಂದಗೋಳಕರ್ ಅವರ ನೃತ್ಯ ಮತ್ತು ಹಾಡುಗಾರಿಕೆಯನ್ನು ಶಂಭುಲಿಂಗೇಶ್ವರ ದೇವಸ್ಥಾನದಲ್ಲಿ ಏರ್ಪಡಿಸುತ್ತಿದ್ದರಲ್ಲದೇ ಅವರ ಜೀವನೋಪಾಯಕ್ಕೂ ಆಧಾರವಾಗಿ ನಿಂತಿದ್ದರು.

ಮರಾಠಿಯ ಪ್ರಭಾವದಿಂದ ಕುಂದಗೋಳ ಪರಿಸರದಲ್ಲಿ ಕನ್ನಡ ಮತ್ತು ಕನ್ನಡ ಶಾಲೆಗಳ ಪರಿಸ್ಥಿತಿ ಶೋಚನಿಯವಾಗಿದ್ದರೂ ಸಂಗೀತ ಮತ್ತು ನಾಟಕ ವಿಷಯದಲ್ಲಿ ಲಾಭವಾಗಿರುವದನ್ನು ಅಲ್ಲಗೆಳೆಯುವಂತಿಲ್ಲ. ಮರಾಠಿ ಸಂಪರ್ಕದಿಂದಾಗಿಯೇ ಕುಂದಗೋಳಕ್ಕೆ ಅಭಂಗಗಳ ಪ್ರವೇಶವಾಯಿತು. ಇಲ್ಲಿನ ದೇವಸ್ಥಾನಗಳಲ್ಲಿ ಭಜನಾ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳುವ ಸಂಗೀತ ಸಂಘಗಳು ಹುಟ್ಟಿಕೊಂಡವು. ಅಂದರೆ ಮಹಾರಾಷ್ಟ್ರದಲ್ಲಿ ಪೇಶ್ವೆಯರಿಗೆ ಸಂಗೀತ ನಾಟಕ ನೃತ್ಯ ಮತ್ತು ಧಾರ್ಮಿಕ ಆಚರಣೆಗಳಲ್ಲಿದ್ದ ಶ್ರದ್ಧೆಯು ಸಹಜವಾಗಿಯೇ ಇಲ್ಲಿ ವಿಸ್ತಾರಗೊಂಡಿತು. ಹೀಗೆ ಸಂಗೀತ ಪರಂಪರೆಯ ವಿಸ್ತರಣೆಗೆ ವಾಡೆಯ ನಾಡಿಗೇರ ಮನೆತನವು ಕಾರಣವಾಯಿತು. ''ಜಮಖಂಡಿಯ ಪಟವರ್ಧನ ಮಹಾರಾಜರು ರಂಗನಗೌಡರಿಗೆ ಅಬ್ದುಲ್‌ಕರೀಂಖಾನರನ್ನು ಪರಿಚಯಿಸಿದರು. ಇದಕ್ಕೆ ಪ್ರತಿಯಾಗಿ ರಂಗನಗೌಡರು ಸವಾಯಿಗಂಧರ್ವರಲ್ಲಿದ್ದ ಅಭಿಜಾತ ಸಂಗೀತ ಪ್ರತಿಭೆಯನ್ನು ಗುರುತಿಸಿ ಅಬ್ದುಲ್‌ಕರೀಂಖಾನ್‌ರ ಸಂಗೀತ ಸನ್ನಿಧಿಗೆ ಶಿಷ್ಯರನ್ನಾಗಿ ಕಳುಹಿಸಿದರು. ಈ ಸಂಪರ್ಕವನ್ನು ಸ್ಥಾಪಿಸಿದ ಫಲವಾಗಿ ನಾಡಿಗೇರ ಮನೆತನವು ಮುಖ್ಯವಾಗಿ ರಂಗನಗೌಡರು ಮತ್ತು ನಾನಾಸಾಹೇಬರು ಸಂಗೀತ ಪರಂಪರೆಯನ್ನು ಉಳಿಸಿ ಬೆಳೆಸಲು ಕಾರಣಕರ್ತರಾದರು. ಇದರಿಂದ ಪರೋಕ್ಷವಾಗಿ ಕರ್ನಾಟಕ ಮತ್ತು ಮಹಾರಾಷ್ಟ್ರ ನಡುವಿನ ಸಾಂಸ್ಕೃತಿಕ ಬಾಂಧವ್ಯಕ್ಕೆ ಹೆಚ್ಚಿನ ಶಕ್ತಿ ದೊರಕುವಂತಾಯಿತು. ಸಂಗೀತವು ಭೌಗೋಳಿಕ ವಿಸ್ತಾರವನ್ನು ಸುಲಭವಾಗಿ ದಾಟಿಸಬಲ್ಲ ಒಂದು ಸುವರ್ಣ ಸಂವಹನ ಮಾಧ್ಯಮವಾಯಿತು''[೩೨] ಎಂದು ಡಾ. ಸದಾನಂದ ಕನವಳ್ಳಿಯವರು ಅಭಿಪ್ರಾಯಪಡುತ್ತಾರೆ.

ನಾನಾಸಾಹೇಬರು ಸ್ವತಃ ಜಮೀನುದಾರರಾಗಿದ್ದರೂ ಸಂಗೀತದ ಸಂಸ್ಕಾರದಿಂದಾಗಿ ಜಮಿನ್ದಾರಿಕೆಯ ಜೀವ ವಿರೋಧಿ ಗುಣಗಳನ್ನು ಪಡೆದುಕೊಂಡಿರಲಿಲ್ಲವೆಂಬುದು ಬಹಳ ಮಹತ್ವದ ವಿಷಯವಾಗಿದೆ. ವಾಡೆಯ ಜೀತದಾಳುಗಳನ್ನು ಕುಟುಂಬದ ಸಹ ಸದಸ್ಯರಂತೆ ಮಾನವೀಯತೆಯಿಂದ ಕಾಣಲು ಸಂಗೀತವೇ ಅವರನ್ನು ಪ್ರೇರೇಪಿಸಿರಬೇಕು. ಬಡವಬಲ್ಲಿದನೆಂಬ ವ್ಯತ್ಯಾಸ, ಜಾತಿ, ಮತಗಳ ಭೇದ ಪ್ರಾಂತೀಯ ಸಂಕುಚಿತತೆ ಈ ಎಲ್ಲ ಅನಿಷ್ಟಗಳನ್ನು ಮೆಟ್ಟಿನಿಂತ ಅಪರೂಪದ ಆದರ್ಶ ಮಾದರಿಯಾಗಿ ನಾನಾಸಾಹೇಬರು ನಮಗೆ ಕಾಣುತ್ತಾರೆ.

---

೩೨. ಸವಾಯಿ ಗಂಧರ್ವ : ಡಾ. ಸದಾನಂದ ಕನವಳ್ಳಿ, ಪುಟ-೭

ಸವಾಯಿಗಂಧರ್ವರ ಚಿರಸ್ಮರಣೆಯ ಅಂಗವಾಗಿ ಕುಂದಗೋಳದಲ್ಲಿ ಪ್ರತಿವರ್ಷವೂ ಸಂಗೀತೋತ್ಸವ ನಡೆಯುವ ಸತ್ ಸಂಪ್ರದಾಯವನ್ನು ಹಾಕಿದವರು ನಾನಾಸಾಹೇಬರು. ಇಂಥ ಪರಂಪರೆಯ ಅವಿರತ ಮುಂದುವರಿಕೆಗಾಗಿ ವಿಶ್ವಸ್ಥ ಮಂಡಳಿಯನ್ನು ಸ್ಥಾಪಿಸಲಾಯಿತು. ಈ ಮಂಡಳಿಯ ಮುಖ್ಯ ಟ್ರಸ್ಟಿಯಾಗಿ ನಾನಾಸಾಹೇಬರು ತಮ್ಮ ಆಯುಷ್ಯದ ಕೊನೆಯವರೆಗೂ ಕಾರ್ಯನಿರ್ವಹಿಸಿದರು. ಇದರಿಂದಾಗಿ ಕುಂದಗೋಳದ ಸವಾಯಿಗಂಧರ್ವ ಸಂಗೀತೋತ್ಸವಕ್ಕೆ ದೇಶದ ನಾನಾ ಭಾಗಗಳಿಂದ ಸಂಗೀತ ದಿಗ್ಗಜರು ಆಗಮಿಸಿ ತಮ್ಮ ಸಂಗೀತ ಸೇವೆಯನ್ನು ನೀಡಿ ಹೋಗುವಂತಾಯಿತು.

ಹೀಗೆ ನಾನಾಸಾಹೇಬರಿಂದ ಪೋಷಿಸಲ್ಪಟ್ಟ ಕುಂದಗೋಳ ಸಂಗೀತ ಪರಂಪರೆಗೆ ಭಾವೈಕ್ಯತೆಯು ಇದೇ ಸಂದರ್ಭದಲ್ಲಿ ಸೇರಿಕೊಂಡಿರುವದನ್ನು ಉಲ್ಲೇಖಿಸಬಹುದಾಗಿದೆ. ಭಕ್ತಿ ಪ್ರಧಾನವಾದ ಮಹಾರಾಷ್ಟ್ರದ ವಾರಕರಿ ಪಂಥವು ಸಂಗೀತವನ್ನು ಪ್ರಭಾವಿಸಿದಂತೆ ಸ್ಥಳೀಯರಾದ ಅನುಭಾವಿ ಸಂತ ಶಿಶುನಾಳ ಶರೀಫರ ಜೀವನ ದರ್ಶನ ಕುಂದಗೋಳ ಪರಿಸರದ ಭಾಗವಾಗಿ ಪರಿಣಮಿಸಿರುವದು ನಿಜವಾಗಿದೆ. ಶರೀಫರು ಕುಂದಗೋಳದ ನಾಡಿಗೇರ ವಾಡೆಯ ರಂಗನಗೌಡರ ಸಮಕಾಲೀನವರಾಗಿರಬಹುದು. ಶರೀಫರು ಹುಟ್ಟಿದ್ದು ಕುಂದಗೋಳ ಸಮೀಪದ ಶಿಗ್ಗಾಂವ ತಾಲೂಕಿನ ಶಿಶುನಾಳ ಎಂಬ ಊರಲ್ಲಿ ಕೃಷಿ ಮತ್ತು ಜೀವನೋಪಯೋಗಿ ಕಸಬುಗಳನ್ನು ನೆಚ್ಚಿಕೊಂಡ ಗ್ರಾಮಸ್ಥರು ಹೆಚ್ಚಿನ ಸಂಖ್ಯೆಯಲ್ಲಿ ಲಿಂಗಾಯತ ಮುಸಲ್ಮಾನ ಜನಾಂಗಗಳಲ್ಲಿ ಹಂಚಿಹೋಗಿದ್ದಾರೆ.

ಹತ್ತೊಂಬತ್ತನೆ ಶತಮಾನದಲ್ಲಿ ದೇಶದಲ್ಲಿ ಅದರಲ್ಲೂ ಮುಖ್ಯವಾಗಿ ಕರ್ನಾಟಕದಲ್ಲಿ ನಡೆದ ಎರಡು ಮುಖ್ಯ ಚಾರಿತ್ರಿಕ ಘಟನೆಗಳೆಂದರೆ ಆಧುನಿಕತೆಯ ಪ್ರವೇಶ ಮತ್ತು ಸ್ಥಳೀಯ ಸಂಸ್ಥಾನಗಳಿಂದ ದೇಶಿ ಸಂಸ್ಕೃತಿಗಳ ಪೋಷಣೆ. ಅಚ್ಚರಿ ಎಂದರೆ ಈ ಎರಡೂ ಸಾಂಸ್ಕೃತಿಕ ಪರಂಪರೆಗಳನ್ನು ಹೊಸ ಸಂಯೋಗದಲ್ಲಿ ಪುನರ್ ರಚಿಸುವ ವಿಷಯದಲ್ಲಿ ಪರೋಕ್ಷವಾಗಿ ಹಾಗೂ ಆಕಸ್ಮಿಕವಾಗಿ ಕೈಜೋಡಿಸಿರುವದು ಆಧುನಿಕತೆಯ ಪ್ರವೇಶಕ್ಕೆ ಸಾಕ್ಷಿಯಾದ ರೇಲ್ವೆ ಇಂಜಿನ್‌ಗಳು ಭಾರತದ ಉತ್ತರ ಮತ್ತು ದಕ್ಷಿಣ ಪ್ರಾಂತಗಳನ್ನು ಭೌಗೋಳಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಜೋಡಿಸಿದ್ದಷ್ಟೇ ಅಲ್ಲದೇ ಈ ನಡುವೆ ಕುಂದಗೋಳದಂತಹ ಸಣ್ಣ ಹಳ್ಳಿಯ ಮೂಲಕ ಇವು ಹರಿದು ಹೋಗುತ್ತ ಸಂಗೀತಕ್ಕೆ ಪುನರುಜ್ಜೀವನಕ್ಕೆ ಕಾರಣವಾದುದು. ಮೈಸೂರು ಮಹಾರಾಜರು ಉತ್ತರ ಭಾರತದಿಂದ ಹಿಂದುಸ್ತಾನಿ ಸಂಗೀತದ ದಿಗ್ಗಜ್ಜರನ್ನು ತಮ್ಮ ಆಸ್ಥಾನಕ್ಕೆ ಆಹ್ವಾನಿಸಿ ಸಂಗೀತ ಕಾರ್ಯಕ್ರಮಗಳನ್ನು ಹಮ್ಮಿಕೊಂಡು ಹೊಸ ಬಗೆಯ ಭಾವೈಕ್ಯತೆಗೆ ಕಲಾತ್ಮಕತೆಯ ವಿನಿಮಯಕ್ಕೆ ನಾಂದಿಯಾದರು. ಆಸ್ಥಾನದ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಸಂಗೀತಗಾರರನ್ನು ರೈಲಿನಲ್ಲಿ ಪ್ರಯಾಣದ ನಡುವೆ ಆದರದಿಂದ ಬರಮಾಡಿಕೊಳ್ಳುತ್ತಿದ್ದ ಕುಂದಗೋಳದಂತಹ ಊರುಗಳಲ್ಲಿ ಕೆಲಕಾಲ ತಂಗಿ ಹಾಡಿ ಹೋಗುವ ಸಂಪ್ರದಾಯವನ್ನು ಆರಂಭಿಸಿದರು. ಭಾರತದ ಬೇರೆ ಬೇರೆ ಭಾಗಗಳಿಂದ ಇಂಗ್ಲೆಂಡಿಗೆ ಕಚ್ಚಾವಸ್ತುಗಳನ್ನು ಸಾಗಿಸಲು, ಸ್ಥಳೀಯ ರಾಜರ ವಿರುದ್ಧ ಯುದ್ಧ ಮಾಡಲು ಅಗತ್ಯವಿರುವ ಆಯುಧಗಳನ್ನು ಸಾಗಿಸಲು ಬ್ರಿಟೀಷ ಸರಕಾರ ರೈಲು ಮಾರ್ಗಗಳನ್ನು ನಿರ್ಮಿಸಿದ್ದು, ದೇಶದ ಇತರ ಭಾಗಗಳಂತೆಯೇ ಹುಬ್ಬಳ್ಳಿಯಲ್ಲಿಯೇ ಜವಳಿ ಗಿರಣಿಯನ್ನು ಸ್ಥಾಪಿಸಿದ್ದು ಶರೀಫರ ಕಾವ್ಯಕ್ಕೆ ವಸ್ತುವಾಯಿತು.

ಕುಂದಗೋಳ ಪ್ರದೇಶದಲ್ಲಿ ಜರಗುತ್ತಿದ್ದ ಜಾತ್ರೋತ್ಸವ ಸಂದರ್ಭದಲ್ಲಿ ಪ್ರದರ್ಶಿಸಲ್ಪಡುತ್ತಿದ್ದ ದೊಡ್ಡಾಟಗಳ ಭಾಗವತರಾಗಿಯೊ, ಅವುಗಳಲ್ಲಿ ವೇಷಧಾರಿಯಾಗಿ ನಡಿಸುತ್ತಲೊ ಮತ್ತು ಮೊಹರಂ ಹಬ್ಬದ ಸಂದರ್ಭದಲ್ಲಿ ಏರ್ಪಾಟಾಗುತ್ತಿದ್ದ ಹೆಜ್ಜೆ ಮೇಳದ ಹಿನ್ನೆಲೆ ಹಾಡುಗಾರರಾಗಿಯೊ ತನ್ನನ್ನು ತಾನು ಸಕ್ರಿಯವಾಗಿ ತೊಡಗಿಸಿಕೊಂಡು ಆ ಪರಿಸರದಲ್ಲಿ ಸಂಗೀತದ ಬಗ್ಗೆ ಅಭಿರುಚಿಯನ್ನು ಜಾಗ್ರತಗೊಳಿಸಿದರು.

"ಸ್ಮಾರ್ತ ಬ್ರಾಹ್ಮಣರಾದ ಗೋವಿಂದಭಟ್ಟರ ಮೂಲಕವೇ ಶರೀಫರಿಗೆ ವೈದಿಕ ಮತದ ಪರಿಚಯವಾಯಿತು. ಮುಸ್ಲಿಂ ಧರ್ಮದಲ್ಲಿ ಜನಿಸಿದ ಶರೀಫ ಗೋವಿಂಧ ಬಟ್ಟರಿಂದ ಜನಿವಾರ ಹಾಕಿಸಿಕೊಂಡರು. ಏಕಾದಶಿ ಮುಂತಾದ ವ್ರತಾಚರಣೆಗಳನ್ನು ಕೀರ್ತಿಸುವದು, ಅವತಾರವನ್ನು ಸಮರ್ಥಿಸುವ ಪದ್ಯಗಳನ್ನು ರಚಿಸಿದರು. ಹನುಮಂತ ವಿಷ್ಣು, ರಾಮಕೃಷ್ಣ ಮುಂತಾದ ದೇವರುಗಳ ಅವತಾರಗಳನ್ನು ಹಾಡಿ ಹೊಗಳಿದರು. ಈ ಎಲ್ಲ ಸಂಗತಿಗಳು ಕುಂದಗೋಳ ಪರಿಸರದಲ್ಲಿ ನಾಡಿಗೇರ ಮನೆತನದವರು ನೆಪ ಮಾತ್ರವಾಗಿ ಆರಂಭಿಸಿದ ಮಾನವೀಯ ಪರಂಪರೆಯನ್ನು ಪುಷ್ಠೀಕರಿಸಲು ಸಹಾಯಕಾರಿಯಾದವು"[೩೪] ಎಂದು ಡಾ. ಆರ್.ಪಿ.ಹೆಗಡೆ ಹೇಳುತ್ತಾರೆ.

### ೫.೩. ಸವಾಯಿ ಗಂಧರ್ವ

ಕುಂದಗೋಳ ಹುಬ್ಬಳ್ಳಿಯ ದಕ್ಷಿಣಕ್ಕೆ ೧೯ ಕಿ.ಮೀ. ದೂರವಿರುವ ಸಣ್ಣ ಊರು. ಭಾರತದ ಸಂಗೀತ ನಕ್ಷೆಯಲ್ಲಿ ಅದಕ್ಕೆ ಮಹತ್ವದ ಸ್ಥಾನ. ಪ್ರಖ್ಯಾತ ಹಿಂದೂಸ್ತಾನಿ ಗಾಯಕ ಸವಾಯಿ ಗಂಧರ್ವರ ಹುಟ್ಟೂರು ಅದು. ಅವರ ನಿಜನಾಮ ರಾಮಚಂದ್ರ. ಹುಟ್ಟಿದ್ದು ಜನವರಿ೧೯, ೧೮೮೬. ತಂದೆ ಗಣೇಶ ಸಂಶಿ. ಬೆನಕನಹಳ್ಳಿಯ ಗೌಡರ ಮನೆತನವೇನೊ ನಿಜ. ತಿಂಗಳಿಗೆ ನಾಲ್ಕು ರೂಪಾಯಿ ವೇತನ. ಬಡತನದ ಕುಟುಂಬ. ಸಮೀಪದ ಕುಂದಗೋಳದ ಧಣಿಯರಾದ ನಾಡಿಗೇರ ರಂಗನಗೌಡರಲ್ಲಿ ಗುಮಾಸ್ತ ನೌಕರಿ ಸೇರಿದ್ದರು. ಆದುದರಿಂದ ಕುಂದಗೋಳದಲ್ಲಿ ನೆಲೆಸಿದ್ದರು.

ಕುಂದಗೋಳ ಆಗ ಜಮಖಂಡಿ ಸಂಸ್ಥಾನಕ್ಕೆ ಸೇರಿದ ಊರು. ಶಿಕ್ಷಣ ಮಾಧ್ಯಮ, ಆಡಳಿತ ಭಾಷೆ ಮರಾಠಿ. ಗಣೇಶರಾಯರಿಗೆ ತಾವು ಬಡವರಾಗಿದ್ದರೂ ಚಿಂತೆಯಿಲ್ಲ. ಮಗ ಕಲಿತು ದೊಡ್ಡ ಅಧಿಕಾರಿಯಾಗಬೇಕೆಂಬ ಹಿರಿಯಾಸೆ. ಯಾವ ತಂದೆಗೆ ತಾನೆ ಮಕ್ಕಳ ಭವಿಷ್ಯದ ಬಗೆಗೆ ಕನಸು ಇರುವುದಿಲ್ಲ. ಮಗನನ್ನು ಶಾಲೆಗೆ ಸೇರಿಸಿದರು. ಆದರೆ, ಶಾಲಾಶಿಕ್ಷಣ ರಾಮಚಂದ್ರನ ಚಿತ್ತವನ್ನು ಆಕರ್ಷಿಸಲಿಲ್ಲ. ದೇವರಗುಡಿಯಲ್ಲಿ ಪಲ್ಲಕ್ಕಿಸೇವೆ ನಡೆಯುತ್ತಿದ್ದರೂ ಸಾಕು. ಭಜನೆ, ಕೀರ್ತನೆ ಕೇಳುತ್ತ ನಿಂತು ಬಿಡುವನು.

ರಾಮಚಂದ್ರ ಕವಿತೆಗಳನ್ನು ಇಂಪಾಗಿ ಹಾಡುತಿದ್ದ. ಶಾಲೆಯಲ್ಲಿ ಯಾವುದೇ ಸಮಾರಂಭವಿರಲಿ ರಾಮಚಂದ್ರನ ಹಾಡು ಇರುತ್ತಿತ್ತು. ಇನ್ಸ್‌ಪೆಕ್ಟರ್ ಬಂದಾಗ ಮಾಸ್ತರರು ರಾಮಚಂದ್ರನ ಹಾಡು ಕೇಳಿಸಿ ಅವರನ್ನು

೩೪. ಶಿಶುನಾಳ ಶರೀಪ್ ಮತ್ತು ಸಂತ ಕಬೀರ : ಡಾ. ಆರ್.ಪಿ.ಹೆಗಡೆ, ಪುಟ-೩೧

ಕರೀಮಖಾನರು ಬಂದರೆ ಬೈಠಕಗಳ ಸುಗ್ಗಿ. ಸುತ್ತಮುತ್ತಲಿನ ಊರುಗಳ ರಸಿಕರೆಲ್ಲ ಜಮಾಯಿಸುತ್ತಿದ್ದರು. ಕಲೆ ಇನ್ನೂ ವಾಣಿಜ್ಯೀಕರಣವಾಗಿರದ ಕಾಲವದು. ಈಗಿನಂತೆ ಎಷ್ಟು ದುಡ್ಡು ಕೊಡುತ್ತೀರಿ ಎಂದು ಚೌಕಸಿ ಮಾಡಿ ಕಛೇರಿ ನಿರ್ಧರಿತವಾಗುತ್ತಿದ್ದಿಲ್ಲ. ಆಸಕ್ತ ಶ್ರೋತೃಗಳು ಸಿಕ್ಕರೆ ಅದೇ ಭಾಗ್ಯವೆಂದು ಬಗೆದು ಬೈಠಕ ನೀಡುತ್ತಿದ್ದರು. ನಾಡಿಗೇರ ರಂಗನಗೌಡರೂ ಸಂಗೀತಗಾರರನ್ನು ಬರಿಗೈಯಿಂದ ಕಳಿಸುತ್ತಿರಲಿಲ್ಲ. ಯಥೋಚಿತ ಮನ್ನಣೆ ಮಾಡುತ್ತಿದ್ದರು.

ಹೀಗೊಂದು ಸಲ ಅಬ್ದುಲ್ ಕರೀಮಖಾನರು ಕುಂದಗೋಳಕ್ಕೆ ಆಗಮಿಸಿದ್ದರು. ರಾಮಚಂದ್ರ ಹುಬ್ಬಳ್ಳಿಯಲ್ಲಿ ಹೈಸ್ಕೂಲಿಗೆ ಹೋಗುತ್ತಿದ್ದಾಗ ಒಮ್ಮೆ ಹುಬ್ಬಳ್ಳಿಯ ರೇಲ್ವೆ ಕ್ಲಬ್ಬಿನಲ್ಲಿ ಅಬ್ದುಲ್ ಕರೀಮಖಾನ ಮತ್ತು ಸೋದರ ಅಬ್ದುಲ್ ಹಕ್‌ರ ಗಾಯನವೇರ್ಪಟ್ಟಿತ್ತು. ಚಿಕ್ಕ ವಯಸ್ಸಿನಲ್ಲಿಯೇ ಕೀರ್ತಿಶಿಖರವೇರಿದ ಸಂಗೀತಗಾರರು. ಕುಂದಗೋಳದಿಂದಲೂ ಅನೇಕರು ಆ ಕಚೇರಿ ಕೇಳಲು ಹೋಗಿದ್ದರು. ಹೇಗಿದ್ದರೂ ರಾಮಚಂದ್ರ ದಿನಾಲೂ ಹುಬ್ಬಳ್ಳಿಗೆ ಹೋಗುತ್ತಿದ್ದ. ಸರಿ, ಶಾಲೆಗೆ ಚಕ್ಕರ್ ಹೊಡೆದು ಕಚೇರಿಗೆ ಹೋದ. ಚಿಕ್ಕಬಾಲಕನನ್ನು ಒಳಗೆ ಯಾರು ಬಿಟ್ಟಾರು ದೂರ ನಿಂತುಕೊಂಡು ದಿವ್ಯ ಸಂಗೀತವನ್ನು ಆಲಿಸಿದ. ಮನ ತುಂಬಿತು. ಇವರೇ ಗುರುಗಳಾಗಿ ದೊರತರೆ ! ಎಂದು ಕನಸು ಕಂಡ. ಆಗ ಅದು ಗಗನ ಕುಸುಮವೇ.

ಆಗ ಅಬ್ದುಲ್ ಕರೀಮಖಾನರು ನಾಡಿಗೇರ ವಾಡೆಯಲ್ಲಿಯೇ ಇದ್ದರು. ರಾಮಚಂದ್ರ ವಾಡೆ ಬಿಟ್ಟು ಕದಲುತ್ತಿರಲಿಲ್ಲ. ಅಬ್ದುಲ್ ಕರೀಮಖಾನರ ಭೈರವಿ ಚೀಜು 'ಜಮುನಾ ಕೇ ತೀರ' ಗುನಗುನಿಸುತ್ತ ಭ್ರಮರದಂತೆ ಅವರ ಸುತ್ತ ಸುತ್ತುತ್ತಿದ್ದ ರಾಮಚಂದ್ರ. ಒಂದು ದಿನ ಊಟ ಮಾಡಿ ತಾಂಬೂಲ ಮೆಲ್ಲುತ್ತ ಪ್ರಸನ್ನಚಿತ್ತರಾಗಿ ಅಬ್ದುಲ್ ಕರೀಮಖಾನರು ಕುಳಿತಿರುವಾಗ ರಾಮಚಂದ್ರನ ಗುನುಗುನ ಕಿವಿಗೆ ಬಿತ್ತು. 'ಕೌನ ಹೈ ಏ ಲಡಕಾ, ಅಚ್ಚಾ ಗಾತಾ ಹೈ. ಗಾವೊ ಬೇಟಾ ಗಾವೋ' (ಯಾರೀ ಹುಡುಗ, ಚೆನ್ನಾಗಿ ಹಾಡತಾನ, ಹಾಡು ಮಗಾ, ಹಾಡು) ಎಂದು ಪ್ರೋತ್ಸಾಹಿಸಿದರು. ರಾಮಚಂದ್ರನಿಗೆ ಅದೇ ಬೇಕಾಗಿತ್ತು. ಜಮುನಾ ಕೇ ತೀರ ಹಾಡಿದ. ಆಗಲೇ ಬಾಲಗವಾಯಿ ಎಂದು ಸುತ್ತಮುತ್ತ ಹೆಸರು ಮಾಡಿದ್ದ. ಅಬ್ದುಲ್ ಕರೀಮಖಾನರಿಗೆ ಬಾಲಕನ ಹಾಡು ಹಿಡಿಸಿತು. 'ಗಲಾ ಅಚ್ಚಾ ಹೈ, ರಿಯಾಜ ಕರೋ' (ಕಂಠ ಚೆನ್ನಾಗಿದೆ ಅಭ್ಯಾಸ ಮಾಡು) ಎಂದು ಹರಸಿದರು.

ನಾಡಿಗೇರ ರಂಗನಗೌಡರು ಇದೇ ಸಮಯಕ್ಕೆ ಕಾಯುತ್ತಿದ್ದಂತಿತ್ತು. ಕಬ್ಬಿಣ ಕಾದಾಗಲೇ ಪೆಟ್ಟು ಹಾಕಬೇಕಲ್ಲವೇ! ಇವನು ನಮ್ಮ ಗುಮಾಸ್ತ ಗಣೇಶರಾಯರ ಕುವರ. ನಿಮ್ಮಿಂದಲೆ ಸಂಗೀತ ಕಲಿಯಬಯಸಿದ್ದಾನೆ. ತಾವು ದೊಡ್ಡ ಮನಸ್ಸು ಮಾಡಬೇಕು ಎಂದು ಅರಿಕೆ ಮಾಡಿಕೊಂಡರು. ಅಬ್ದುಲ್ ಕರೀಮಖಾನರು ಅಷ್ಟೇ ಸಹಜವಾಗಿ ಯೆ ಬಾತ್ ಹೈ ತೊ ಚಲೋ ಹಮಾರೆ ಸಾಥ (ಹೀಗೋ, ಹಾಗಾದರೆ ನಡೆ ನಮ್ಮೊಂದಿಗೆ) ಅಂದರು. ಕಾರಣವಶಾತ್ ಆಗ ಅವನನ್ನು ತಮ್ಮೊಂದಿಗೆ ಕರೆದೊಯ್ಯುವುದು ಕೈಗೂಡಲಿಲ್ಲ. ರಾಮಚಂದ್ರನಿಗೆ ಹೇಳತೀರದ

ನಿರಾಶೆ. ಕೈಗೆ ಬಂದ ತುತ್ತು ಬಾಯಿಗೆ ಬರಲಿಲ್ಲವಲ್ಲ ಎಂದು ಹಳಹಳಿ. ತನಗೆ ಬರುತ್ತಿದ್ದ ಹಾಡುಗಳನ್ನು ಗುನಗುನಿಸುತ್ತ ಉಂಡಾಡಿಯಾಗಿ ತಿರುಗಾಡಿದ. ಎರಡು ವರ್ಷಗಳ ನಂತರ ಅಬ್ದುಲ್ ಕರೀಮಖಾನರು ಪುನಃ ಕುಂದಗೋಳಕ್ಕೆ ಆಗಮಿಸಿದಾಗ ರಂಗನಗೌಡರು ರಾಮಚಂದ್ರನಿಗೆ ಕಲಿಸುವುದಾಗಿ ಮಾತು ಕೊಟ್ಟದ್ದಿರಿ ಎಂದು ನೆನಪಿಸಿದರು. ಅಬ್ದುಲ್ ಕರೀಮಖಾನರು ಹೌದಲ್ಲ, ಈ ಸಲ ನಮ್ಮೊಂದಿಗೆ ಅವನು ಬಂದು ಬಿಡಲಿ ಅಂದರು. ರಾಮಚಂದ್ರನಿಗೆ ಆಕಾಶ ನಾಲ್ಕೇ ಗೇಣು. ಅವನ ಭಾಗ್ಯದ ಬಾಗಿಲು ತೆರೆಯಿತು. ಇದು ಆದುದು ೧೯೦೧ ರಲ್ಲಿ ಅಬ್ದುಲ್ ಕರೀಮಖಾನರು ಗಂಡಾ ಕಟ್ಟಲು ಸಿದ್ಧನಿರುವೆಯಾ ? ಎಂದು ಕೇಳಿದರು. ರಾಮಚಂದ್ರ ಹಿಗ್ಗಿ ಹೂಂ ಎಂದ.

ಅಬ್ದುಲ್ ಕರೀಮಖಾನರು ಕಿರಾಣಾ ಘರಾಣೆಯ ಪ್ರವರ್ತಕರು. ಅವರ ಹುಟ್ಟೂರು ಉತ್ತರ ಪ್ರದೇಶದ ಕರ್ಣನಗರಿ ಎಂಬ ಹಳ್ಳಿ ಅದು ಅಪಭ್ರಂಶಗೊಂಡು ಕಿರಾಣಾ ಆಗಿದೆ. ಸಂಸ್ಥಾಪಕನ ಊರಿನಿಂದಲೇ ಘರಾಣೆಗೆ ಹೆಸರು ಬಂದಿರುವುದು ವಾಡಿಕೆ. ಜಯಪುರ ಘರಾಣಾ, ಗ್ವಾಲಿಯರ ಘರಾಣಾ, ಆಗ್ರಾ ಘರಾಣಾ ಇತ್ಯಾದಿ. ಘರಾನಾ ಎಂದರೆ ಮನೆತನ, ಕುಟುಂಬ ಹೇಗೆ ಒಂದು ಕುಟುಂಬದ ಸದಸ್ಯರಲ್ಲಿ ಊಟ ಉಡುಗೆ, ಆಚಾರ, ವಿಚಾರ, ಸಂಸ್ಕಾರಗಳಲ್ಲಿ ಸಾಮಾನ್ಯ ಅಂಶಗಳಿರುತ್ತವೆಯೊ ಹಾಗೆಯೆ ಒಂದು ಸಂಗೀತ ಘರಾಣೆಯಲ್ಲಿ ಗಾಯನ ಯಾ ವಾದನದ ಸಾಮಾನ್ಯ ಅಂಶಗಳಿರುತ್ತವೆ. ಒಂದೊಂದು ಘರಾಣಾ ತನ್ನದೇ ವಿಶಿಷ್ಟವಾದ ಗಾಯನ ಶೈಲಿಯನ್ನು ಹೊಂದಿರುತ್ತದೆ.

## ೫.೪. ಪಂ. ಪಂಚಾಕ್ಷರಿ ಗವಾಯಿಗಳು

ಹಿಂದೂಸ್ತಾನಿ ಸಂಗೀತಕ್ಕೆ ಕೊಡ ಮಾಡಿದ ಅಮೋಘ ಸಂಗೀತ ರತ್ನಗಳಲ್ಲಿ ಪಂ. ಪಂಚಾಕ್ಷರ ಗವಾಯಿಗಳು ಒಬ್ಬರು. ಅವರ ತೊಟ್ಟಿಲ ಹೆಸರು ಗದಿಗಯ್ಯ. ಅವರು ಹುಟ್ಟಿದ್ದು (೧೮೯೨ ಫೆಬ್ರುವರಿ ೨) ಹಾನಗಲ್ಲ ತಾಲೂಕಿನ ಕಾಡಶೆಟ್ಟಿ ಹಳ್ಳಿಯಲ್ಲಿ. ಅಲ್ಲಿಯ ಚರಂತಿಮಠ ಗುರುಪಾದಯ್ಯ ನೀಲಮ್ಮ ದಂಪತಿಗಳ ಎರಡನೇ ಮಗನಾಗಿ. ಮೊದಲ ಮಗ ಗುರುಬಸವ ಜನ್ಮಾಂಧ; ಎರಡನೆಯವನೂ ಹಾಗೆಯೆ. ಹೆತ್ತವರಿಗೆ ಚಿಂತೆಯಾಯಿತು. ಬೆಳೆಯುತ್ತಿರುವ ಬಾಲಕದ್ವಯರು ಜನ್ಮವಿತ್ತವರಿಗೆ ಹೊರೆಯಾದರು; ಆದರೆ ಸಮಾಜಕ್ಕೆ ಮಾತ್ರ ವರವಾದರು.

ಗುರುಬಸವ ಗದಿಗಯ್ಯ ಸಹೋದರರು ತಮ್ಮ ಕಣ್ಣನ್ನು ಭಗವಂತನಿಗೆ ಕೊಟ್ಟು ಸುಮಧುರ ಕಂಠ ಪಡೆದುಕೊಂಡು ಬಂದಿದ್ದರು. ಸಂಗೀತ ಕಲೆ ಅವರಿಗೆ ಜನ್ಮತಃ ಒಲಿದಿತ್ತು. ಬಾಲಕರ ಯುಗಳಗೀತೆ ಕೇಳಿದ ಯಾರಾದರೂ ಮಂತ್ರಮುಗ್ಧರಾಗುತ್ತಿದ್ದರು. ಊರಲ್ಲಿ ನಡೆವ ಯಾವುದೇ ಮಂಗಲ ಕಾರ್ಯಗಳಲ್ಲಿ ಬಾಲಕರ ಸಂಗೀತ ಇದ್ದದ್ದೇ. ಯಾವುದೇ ಹಾಡನ್ನು ಕೇಳಿದಾಕ್ಷಣ ತದ್ರೂಪವಾಗಿ ಅದನ್ನು ಹಾಡಿ ತೋರಿಸುತ್ತಿದ್ದರು. ಮದ್ದಳೆ, ತಬಲಾ, ಸಂಬಾಳ, ಕರಡಿ ನುಡಿಸುವುದರಲ್ಲಿ ಸಹೋದರರು ಚುರುಕುಮತಿಗಳಾಗಿದ್ದರು. ಈ ಬಾಲಕರಿಗೆ

ಸಂಗೀತ ವಿದ್ಯೆ ದೈವದತ್ತವಾಗಿ ಒಲಿದುಬಂದಿತ್ತು. ಮಕ್ಕಳಿಗೆ ಯೋಗ್ಯ ಗುರುಗಳಿಂದ ಸಂಗೀತ ಕಲಿಸಬೇಕೆಂದು ಊರಿನ ಅನೇಕ ಹಿರಯರು ಗುರುಪಾದಯ್ಯನವರಿಗೆ ಸಲಹೆ ಮಾಡಿದರು. ಗುರುಪಾದಯ್ಯನವರು ಅಂತಹ ಸ್ಥಿತಿವಂತರೇನಲ್ಲ. ಬಡತನವೇ ಅವರ ಬಂಡವಾಳವಾಗಿತ್ತು. ಹೊಟ್ಟೆ ತುಂಬಿಕೊಳ್ಳುವುದೇ ಕಷ್ಟವಿರುವಾಗ ಮಕ್ಕಳಿಗೆ ಸಂಗೀತ ಕಲಿಸುವುದು ನಿಲುಕದ ಮಾತಾಗಿತ್ತು.

ಶಿಷ್ಯ ಗುರುವನ್ನರಿಸಕೊಂಡು ಬರುವುದು ಸಹಜ. ಆದರೆ ಗುರುವೇ ಶಿಷ್ಯನ ಬಳಿ ಬರುವುದು ಅಪರೂಪ. ಅಂತಹ ಅಪರೂಪದ ಘಟನೆ ಬಾಲಕದ್ವಯರ ಬಾಳಿನಲ್ಲೊಮ್ಮೆ ನಡೆಯಿತು.

ಹಾನಗಲ್ಲ ಶ್ರೀ ಕುಮಾರ ಸ್ವಾಮಿಗಳು ಶ್ರೀ ಹಕ್ಕಲ ಬಸವೇಶ್ವರ ಜಾತ್ರೆ ನಿಮಿತ್ತ ಕಾಡಶೆಟ್ಟಿ ಹಳ್ಳಿಗೆ ದಯಮಾಡಿಸಿದ್ದರು. ಅಂದಿನ ಸಮಾರಂಭದಲ್ಲಿ ಬಾಲಕರು ಸೊಗಸಾಗಿ ಹಾಡಿದರು. ಅವರ ಮಧುರ ಕಂಠ ಕುಮಾರಸ್ವಾಮಿಗಳನ್ನು ಸಂತುಷ್ಟಗೊಳಿಸಿತು. ಬಾಲಕರ ಪ್ರತಿಭೆ ಕಂಡು ಸ್ವಾಮಿಗಳು ಗುರುಪಾದಯ್ಯನನ್ನು ಕರೆದು, 'ಈ ಮಕ್ಕಳನ್ನು ನನ್ನ ಉಡಿಯಲ್ಲಿ ಹಾಕು, ನಾನು ಅವರಿಗೆ ಸಂಗೀತ ಕಲಿಸುವ ವ್ಯವಸ್ಥೆ ಮಾಡುತ್ತೇನೆ' ಎಂದರು. ಸ್ವಾಮಿಗಳ ಮಾತುಗಳನ್ನು ಕೇಳಿ ಗುರುಪಾದಯ್ಯನವರಿಗೆ ಒಂದೆಡೆ ಸಂತೋಷ, ಇನ್ನೊಂದೆಡೆ ದುಃಖ ಆವರಿಸಿತು. ಸ್ವಾಮಿಗಳ ಆಶೀರ್ವಾದದಿಂದ ಮಕ್ಕಳ ಭವಿಷ್ಯ ಬೆಳಗೀತಲ್ಲವೆಂಬುದು ಸಂತಸವಾದರೆ, ಮಕ್ಕಳನ್ನು ಬಿಟ್ಟು ಅಗಲುವ ದುಃಖ ಇನ್ನೊಂದೆಡೆ. ಮರುಮಾತನಾಡದೆ ಗುರುಪಾದಯ್ಯ ಮಕ್ಕಳನ್ನು ಸ್ವಾಮಿಗಳ ಪಾದಕ್ಕರ್ಪಿಸಿದ. ಕುಮಾರಸ್ವಾಮಿಗಳು ಬಾಲಕರನ್ನು ತಮ್ಮೊಂದಿಗೆ ಹಾನಗಲ್ಲ ಮಠಕ್ಕೆ ಕರೆದುಕೊಂಡು ಬಂದರು.

ಆಗಿನದು ದಕ್ಷಿಣಾದಿ ಸಂಗೀತದ ಕಾಲ. ಉತ್ತರ ಕರ್ನಾಟಕ ಭಾಗದಲ್ಲಿ ಅದರ ಪ್ರಭಾವವೇ ಜಾಸ್ತಿಯಾಗಿತ್ತು. ಬಾಲಕರಿಗೆ ಸಂಗೀತ ಕಲಿಸುವ ಹೊಣೆ ಹೊತ್ತಿದ್ದ ಕುಮಾರಸ್ವಾಮಿಗಳು ಯೋಗ್ಯ ಸಂಗೀತ ಗುರುವನ್ನು ಹುಡುಕಾಡಹತ್ತಿದರು. ಅದೇ ವೇಳೆಗೆ ತಂಜಾವೂರಿನ ಕರ್ನಾಟಕೀ ಸಂಗೀತಗಾರರೊಬ್ಬರು ಹಾನಗಲ್ಲಿಗೆ ಬಂದಿದ್ದರು. ಸ್ವಾಮಿಗಳು ಅವರಿಂದ ಬಾಲಕರಿಗೆ ಸಂಗೀತ ಹೇಳಿಕೊಡುವ ವ್ಯವಸ್ಥೆ ಮಾಡಿದರು. ಮಕ್ಕಳ ಮಧುರಕಂಠ ಕಂಡು ತಂಜಾವೂರಿನ ಸಂಗೀತಗಾರರು ಬಹು ಶ್ರದ್ಧೆಯಿಂದ ಮಕ್ಕಳಿಗೆ ಸಂಗೀತ ಪಾಠ ಹೇಳಿಕೊಟ್ಟರು. ಕೃತಿ, ವರ್ಣಗಳ ಅಭ್ಯಾಸ ಮಾಡಿಸಿದರು. ಆದರೆ ಅವರಿಗೆ ಹಾನಗಲ್ಲದ ಹವಾಮಾನ ಒಗ್ಗಲಿಲ್ಲ. ಅವರು ಮರಳಿ ತಂಜಾವೂರಿಗೆ ಹೋಗಿಬಿಟ್ಟರು. ಮಕ್ಕಳ ಸಂಗೀತ ಪಾಠ ಅಲ್ಲಿಗೆ ನಿಂತಿತು. ಸ್ವಾಮಿಗಳಿಗೆ ಚಿಂತೆ ಆಯಿತು.

ಸಂಗೀತ ಗುರುವಿಗಾಗಿ ಸ್ವಾಮಿಗಳು ಶೋಧ ನಡೆಸಿದರು. ಹರಪನಹಳ್ಳಿ ಭೀಮರಾಯಪ್ಪನೆಂಬ ಸಂಗೀತಗಾರರನ್ನು ಕರೆಸಿದರು. ಅವರಿಂದ ಮಕ್ಕಳಿಗೆ ಸಂಗೀತ ಪಾಠ ಮುಂದುವರೆಯುವಂತೆ ಮಾಡಿದರು. ಆದರೆ ಅವರಿಗೂ ಸಹ ಅಲ್ಲಿಯ ವಾತಾವರಣ ಹೊಂದಲಿಲ್ಲ. ಹಾಗಾಗಿ ಅವರು ಮರಳಿ ತಮ್ಮೂರಿಗೆ ಹೋದರು. ಮಕ್ಕಳ ಶಿಕ್ಷಣ ಮತ್ತೆ ಕುಂಠಿತಗೊಂಡಿತು. ಕುಮಾರಸ್ವಾಮಿಗಳ ಶೋಧ ಮತ್ತೆ ಮುಂದುವರಿಯಿತು. ಅವರ ಪ್ರಯತ್ನಕ್ಕೆ

ಶಿರಾಳಕೊಪ್ಪದ ಗದಿಗೆಯ್ಯ ಎಂಬ ಸಂಗೀತ ವಿದ್ವಾಂಸರು ದೊರೆತರು. ಅವರಲ್ಲಿ ಮಕ್ಕಳನ್ನು ಕಳಿಸಿಕೊಟ್ಟರು. ಸಹೋದರರು ಶಿರಾಳಕೊಪ್ಪದಲ್ಲಿ ಸಂಗೀತ ಪಾಠ ಮುಂದುವರೆಸಿದರು. ಎಂಟು ವರ್ಷ ನಿರಂತರವಾಗಿ ಬಾಲಕರು ಸಂಗೀತ ವಿದ್ಯೆ ಸಂಪಾದಿಸಿದರು. ಹುಟ್ಟು ಪ್ರತಿಭಾವಂತರಾಗಿದ್ದ ಬಾಲಕರು ನಿಷ್ಠೆಯಿಂದ ಸಂಗೀತ ಸಾಧನೆ ಮಾಡಿ ಆಗಲೆ ಪ್ರಬುದ್ಧರೆನಿಸಿದ್ದರು. ಅವರ ಸಾಧನೆ ಕಂಡು ಕುಮಾರಸ್ವಾಮಿಗಳಿಗೆ ಸಂತೋಷವೆನಿಸಿತು. ಮಕ್ಕಳು ಶಿರಾಳಕೊಪ್ಪದಿಂದ ಸಂಗೀತ ವಿದ್ಯೆ ಕಲಿತು ಹಾನಗಲ್ಲಿಗೆ ಮರಳಿದರು.

ಬಾಲಕರ ಸಂಗೀತ ಪ್ರಗತಿ ಕಂಡು ಕುಮಾರಸ್ವಾಮಿಗಳಿಗೆ ಅತ್ಯಾನಂದವಾಯಿತು. ಆದರೆ ಬಾಲಕರಿಗೆ ಇನ್ನೂ ಕಲಿಯಬೇಕೆಂಬ ಹಂಬಲವಿತ್ತು. ಮಕ್ಕಳ ಇಚ್ಛೆಯಂತು ಶಿರಾಳಕೊಪ್ಪದ ಗವಾಯಿಗಳ ಸಲಹೆಯಂತೆ ಹೆಚ್ಚಿನ ವಿದ್ಯೆ ಕಲಿಯಲು ಸ್ವಾಮಿಗಳು ಮಕ್ಕಳನ್ನು ಮೈಸೂರಿಗೆ ಕಳಿಸಲು ಸಿದ್ಧತೆ ನಡೆಸಿದರು. ಅದೇ ಅವಧಿಯಲ್ಲಿ ಒಂದು ಅನಾಹುತ ಸಂಭವಿಸಿತು. ಗದಿಗಯ್ಯನ ಅಣ್ಣ ಗುರುಬಸವ ಕಾಲರಾ ಬೇನೆಗೆ ಬಲಿಯಾದ. ಗದಿಗಯ್ಯನಿಗೆ ಬಲಗೈಯೇ ಹೋದಂತಾಯಿತು. ಗುರುಬಸವನ ಅಕಾಲಿಕ ಮೃತ್ಯು ಸ್ವಾಮಿಗಳಿಗೂ ಆಘಾತ ತಂದಿತು. ಅಣ್ಣನ ಆಸರೆಯೊಂದಿಗೆ ಬೆಳೆದಿದ್ದ ಗದಿಗಯ್ಯನಿಗೆ ಆಕಾಶವೇ ಕಳಚಿ ಬಿದ್ದಂತಾಯಿತು. ಸ್ವಾಮಿಗಳು ಸಮಾಧಾನ ಹೇಳಿದರು. ತನ್ನ ಗುರಿಯತ್ತ ಸಾಗಲು ಸಲಹೆ ಮಾಡಿದರು.

ಮೈಸೂರು ದಕ್ಷಿಣಾದಿ ಸಂಗೀತದ ಬಹುದೊಡ್ಡ ಕೇಂದ್ರ. ಅನೇಕ ಸಂಗೀತಗಾರರಿಗೆ ಅಲ್ಲಿ ರಾಜಾಶ್ರಯ ದೊರೆತಿತ್ತು. ಗದಿಗಯ್ಯ ಹೆಚ್ಚಿನ ಸಂಗೀತ ಕಲಿಯಲು ಮೈಸೂರಿಗೆ ಬಂದ. ಗೌರಿಶಂಕರ ಮಹಾಸ್ವಾಮಿಗಳು ಗದಿಗಯ್ಯನಿಗೆ ತಮ್ಮ ಮಠದಲ್ಲಿ ಆಶ್ರಯ ನೀಡಿದರು. ಗದಿಗಯ್ಯನಿಗೆ ಪ್ರಸಿದ್ಧ ಸಂಗೀತ ವಿದ್ವಾಂಸ ಬಿಡಾರಂ ಕೃಷ್ಣಪ್ಪನವರಲ್ಲಿ ಸಂಗೀತ ಕಲಿಯಬೇಕೆಂಬುದಾಗಿತ್ತು. ಆದರೆ ಅದು ಕೈಗೂಡಲಿಲ್ಲ. ಗದಿಗಯ್ಯನ ಅಸಾಧಾರಣ ಸಂಗೀತ ಪ್ರತಿಭೆ ಗುರುತಿಸಿದ ಕೃಷ್ಣಪ್ಪನವರು ಮೈಸೂರಿನ ಅಂಧರ ಸಂಗೀತ ಶಾಲೆಯ ಪಿಟೀಲು ವಿದ್ವಾನ್ ವೆಂಕಟರಮಣಯ್ಯರಲ್ಲಿ ಸಂಗೀತ ಕಲಿಕೆಗೆ ಸಲಹೆ ಮಾಡಿದರು. ಗದಿಗಯ್ಯ ನಾಲ್ಕು ವರ್ಷ ವೆಂಕಟರಮಣಯ್ಯನವರಲ್ಲಿ ಸಂಗೀತ ಸಾಧನೆ ಮಾಡಿದ. ಆಗಲೇ ದಕ್ಷಿಣಾದಿ ಸಂಗೀತದ ಭದ್ರ ಬುನಾದಿ ಹಾಕಿಕೊಂಡಿದ್ದ ಗದಿಗಯ್ಯನಿಗೆ ಮುಂದಿನ ಸಾಧನೆ ಬಹುಬೇಗ ಕರಗತವಾಯಿತು.

ಗದಿಗಯ್ಯನ ಪ್ರತಿಭೆ ಮೈಸೂರಿನ ಅನೇಕ ಸಂಗೀತ ವಿದ್ವಾಂಸರವರೆಗೂ ಹಬ್ಬಿತು. ವೀಣೆ ಶೇಷಣ್ಣನವರು ಗದಿಗಯ್ಯನ ಸಂಗೀತ ಕೇಳಿ ತುಂಬ ಮೆಚ್ಚಿಕೊಂಡರು. ಗೌರಿಶಂಕರ ಸ್ವಾಮಿಗಳಿಗಂತೂ ಗದಿಗಯ್ಯನ ಪಾಂಡಿತ್ಯ ತುಂಬ ಪರಿಣಾಮ ಬೀರಿತು. ಗದಿಗಯ್ಯನ ಬಾಯಿಂದ ಅನೇಕ ತತ್ತ್ವಪದಗಳನ್ನು, ವಚನಗಳನ್ನು ಕೇಳಿ ಸಂತೋಷಪಡುತ್ತಿದ್ದರು. ಒಂದು ದಿನ ಇದ್ದಕ್ಕಿದ್ದಂತೆ ಗೌರಿಶಂಕರ ಸ್ವಾಮಿಗಳು ಗದಿಗಯ್ಯನನ್ನು ಹತ್ತಿರ ಕರೆದು, ಗದಿಗಯ್ಯಾ ನಿನ್ನ ಹೆಸರು ನನಗೇಕೋ ಪ್ರಿಯವಾಗುತ್ತಿಲ್ಲ. ಪಂಚಾಕ್ಷರ ಎನ್ನುವ ಹೆಸರನ್ನು ನಿನಗೆ ಇಡಬೇಕೆಂದು ನನ್ನ ಮನ ಬಯಸಿದೆ ಎಂದರು. ಗದಿಗಯ್ಯನಿಗೆ ಪಂಚಾಕ್ಷರ ಎಂದು ಹೆಸರಿಟ್ಟರು. ಅದೇ ಹೊತ್ತಿಗೆ

ಬಾಗಲಕೋಟೆಯಲ್ಲಿ ಅಖಿಲ ಭಾರತ ನಾಲ್ಕನೇ ವೀರಶೈವ ಮಹಾಧಿವೇಶನದಲ್ಲಿ ಮನತುಂಬಿ ಹಾಡಿದ. ಜನಸತೋಮ ಅಪಾರ ಮೆಚ್ಚುಗೆ ವ್ಯಕ್ತಪಡಿಸಿತು. ಗೌರಿಶಂಕರ ಸ್ವಾಮಿಗಳು ಇಟ್ಟ ಹೆಸನ್ನು ಕುಮಾರಸ್ವಾಮಿಗಳು ಅಂದಿನ ಅಧಿವೇಶನದಲ್ಲಿ ಗದಿಗಯ್ಯನಿಗೆ ಇಟ್ಟರು. ಅಂದಿನಿಂದ ಗದಿಗಯ್ಯ 'ಪಂಚಾಕ್ಷರ ಗವಾಯಿ' ಆದ.

ಪಂಚಾಕ್ಷರಿ ಗವಾಯಿಗಳು ಮೈಸೂರಿನಿಂದ ದಕ್ಷಿಣಾದಿ ಸಂಗೀತ ಕಲಿತುಬರುವ ದಿನಗಳಲ್ಲಿ ಉತ್ತರ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತದ ಗಾಳಿ ಬೀಸಲಾರಂಬಿಸಿತ್ತು. ಅಬ್ದುಲ್‌ಕರೀಮ್‌ಖಾನ, ಸವಾಯ್‌ಗಂಧರ್ವರಂತಹ ಮಹಾನ್ ಹಿಂದುಸ್ತಾನಿ ಸಂಗೀತಗಾರರು ತಮ್ಮ ಹಾಡುಗಾರಿಕೆಯಿಂದ ಉತ್ತರ ಕರ್ನಾಟಕದ ಜನರನ್ನು ಆಕರ್ಷಿಸಿದ್ದರು. ಅವರು ಹಾಡಿದ ಅನೇಕ ಗ್ರಾಮ್‌ಫೋನ್ ರಿಕಾರ್ಡುಗಳು ಮಾರುಕಟ್ಟೆಯಲ್ಲಿ ಅಪಾರ ಜನಪ್ರಿಯತೆ ಗಳಿಸಿದ್ದವು. ಅವುಗಳನ್ನು ಕೇಳಿದ ಪಂಚಾಕ್ಷರಿ ಗವಾಯಿಗಳಿಗೆ ತಾವೂ ಹಿಂದೂಸ್ತಾನಿ ಸಂಗೀತ ಕಲಿಯಬೇಕೆನಿಸಿತು. ಕುಮಾರಸ್ವಾಮಿಗಳಿಗೆ ತಮ್ಮ ಇಂಗಿತವನ್ನರುಹಿದರು. ಕುಮಾರಸ್ವಾಮಿಗಳೂ ಒಪ್ಪಿದರು.

ಕುಮಾರಸ್ವಾಮಿಗಳು ಪಂಚಾಕ್ಷರಿ ಗವಾಯಿಗಳಿಗೆ ಹಿಂದುಸ್ತಾನಿ ಸಂಗೀತ ಕಲಿಸಲು ಹಿಂದುಸ್ತಾನಿ ಸಂಗೀತ ಶ್ರೇಷ್ಠ ಸಂಗೀತಗಾರ ಉಸ್ತಾದ ಅಬ್ದುಲ್‌ವಹೀದಖಾನರನ್ನು ನೇಮಿಸಿದರು. ಸಂಗೀತ ಸಾಧನೆಗೆ ಶಿವಯೋಗಮಂದಿರದಲ್ಲಿಯೇ ವ್ಯವಸ್ಥೆ ಮಾಡಿದರು. ಆಗಿನ ದಿನಗಳಲ್ಲಿ ಖಾನರಿಗೆ ಪ್ರತಿತಿಂಗಳು ನೂರಾಐವತ್ತು ರೂಪಾಯಿ ವೇತನ ಕೊಡಲಾಗುತ್ತಿತ್ತು. ಖಾನರು ಪಂಚಾಕ್ಷರಿ ಗವಾಯಿಗಳ ಹಿಂದುಸ್ತಾನಿ ಸಂಗೀತದ ಪ್ರಥಮ ಗುರುಗಳಾದರು. ಖಾನರು ಕಿರಾನಾ ಘರಾಣೆಯ ಹೆಸರಾಂತ ಗಾಯಕರಾಗಿದ್ದರು. ಅಬ್ದುಲ್ ವಹೀದಖಾನರ ಶಿಷ್ಯರೆಂದು ಹೇಳಿಕೊಳ್ಳುವುದೇ ಒಂದು ಅಭಿಮಾನದ ಸಂಗೀತ ಆಗಿತ್ತು.

ವಹೀದಖಾನರು ಲಾಹೋರಿನವರು. ಇಲ್ಲಿಯ ಹವಾಮಾನ ಅವರಿಗೆ ಒಗ್ಗಲಿಲ್ಲ. ಹೀಗಾಗಿ ಕೆಲದಿನಗಳ ನಂತರ ಅವರು ತಮ್ಮೂರಿಗೆ ಮರಳಬೇಕಾಯಿತು. ಗವಾಯಿಗಳ ಸಾಧನೆ ಅಷ್ಟಕ್ಕೆ ನಿಂತಿತು. ಅದನ್ನು ಮುಂದುವರೆಸುವುದಕ್ಕಾಗಿ ಕುಮಾರಸ್ವಾಮಿಗಳು ಮತ್ತೆ ಶ್ರಮವಹಿಸಬೇಕಾಯಿತು.

ನೀಲಕಂಠ ಬುವಾರು ಆ ಕಾಲದ ಬಹುದೊಡ್ಡ ಸಂಗೀತಗಾರರು. ಅವರು ಮೂಲತಃ ಕರ್ನಾಟಕದ ಹೊಳೆ ಆಲೂರಿನವರಾಗಿದ್ದು, ಅನೇಕ ವರ್ಷಗಳಿಂದ ಮಿರಜದಲ್ಲಿ ನೆಲೆಸಿದ್ದರಿಂದ ಅವರಿಗೆ ಮಿರಜಿ ಎಂದೇ ಕರೆಯುತ್ತಿದ್ದರು. ಹಾವೇರಿಯ ಹುಕ್ಕೇರಿ ಮಠದ ಶ್ರೀ ಶಿವಬಸವಸ್ವಾಮಿಗಳು ನೀಲಕಂಠ ಬುವಾರ ಆತ್ಮೀಯ ಮಿತ್ರರು. ನೀಲಕಂಠ ಬುವಾರ ಸಂಗೀತ ಪಾಂಡಿತ್ಯವನ್ನು ತಿಳಿದಿದ್ದ ಶಿವಬಸವಸ್ವಾಮಿಗಳು ನೀಲಕಂಠ ಬುವಾರ ಸಂಗೀತ ಖ್ಯಾತಿಯನ್ನು ಕುಮಾರಸ್ವಾಮಿಗಳಿಗೆ ತಿಳಿಸಿದರು. ಹಿಂದುಸ್ತಾನಿ ಸಂಗೀತ ಗುರುವಿಗಾಗಿ ಹುಡುಕುತ್ತಿದ್ದ ಕುಮಾರಸ್ವಾಮಿಗಳಿಗೆ ನೀಲಕಂಠ ಬುವಾರ ಪರಿಚಯ ಅನುಕೂಲ ತಂದಿತು.

ಕುಮಾರಸ್ವಾಮಿಗಳು ನೀಲಕಂಠ ಬುವಾರನ್ನು ಶಿವಯೋಗಮಂದಿರಕ್ಕೆ ಕರೆಸಿ, ಪಂಚಾಕ್ಷರಿ ಗವಾಯಿಗಳಿಗೆ ಸಂಗೀತ ಕಲಿಸುವ ಏರ್ಪಾಡು ಮಾಡಿದರು. ಬುವಾ ಅವರು ಗವಾಯಿಗಳಿಗೆ ಮೂರು ವರ್ಷ ಅಭ್ಯಾಸ ಹೇಳಿದರು. ವಹೀದ್‌ಖಾನರಿಂದ ಹಿಂದುಸ್ತಾನಿ ಸಂಗೀತದ ಭದ್ರ ಬುನಾದಿ ಹಾಕಿಕೊಂಡಿದ್ದ ಗವಾಯಿಗಳಿಗೆ ನೀಲಕಂಠ ಬುವಾರ ಪಾಠ ತುಂಬ ಉಪಯುಕ್ತವಾಯಿತು. ಗುರುಗಳ ಸಮರ್ಥ ಮಾರ್ಗದರ್ಶನದಲ್ಲಿ ಗವಾಯಿಗಳು ಕಠಿಣತಮ ಸಾಧನೆಗೈದರು. ಅವರ ಕೀರ್ತಿ ಪರಿಮಳದಂತೆ ಸುತ್ತೆಲ್ಲ ಹರಡಿತು. ಗವಾಯಿಗಳು ಪ್ರಬುದ್ಧ ಗಾಯಕರೆನಿಸಿದರು. ನಾಡಿನಲ್ಲೆಲ್ಲ ಅವರು ಖ್ಯಾತರಾದರು. ಅನೇಕ ಸಂಗೀತ ಸಮಾರಂಭಗಳು ಏರ್ಪಟ್ಟವು. ಬಾಗಲಕೋಟೆಯ ರಾಜಾಸಾಬ ಹಾಗೂ ಜೇಕಿನಕಟ್ಟಿ ಶಿವಯ್ಯನವರಿಂದ ಗವಾಯಿಗಳು ತಬಲಾ ಕಲಿತರು.

ಬೆಳಗಾವಿಯಲ್ಲಿ ರಾಮಕೃಷ್ಣ ಬುವಾ ವಝೆ, ಬಾಬುರಾವ ರಾಣೆ ಮುಂತಾದ ಸಂಗೀತ ದಿಗ್ಗಜರಿಂದ ಪಂಚಾಕ್ಷರಿ ಗವಾಯಿಗಳಿಗೆ ಸಂಗೀತ ಪಾಠ ದೊರೆಯಿತು. ಗವಾಯಿಗಳು ಸಂಗೀತದ ಮೇರುಪರ್ವತದಂತಾದರು. ಆದರೆ ಕೊನೆತನಕ ಅವರು ತಾವೊಬ್ಬ ಸಂಗೀತ ವಿದ್ಯಾರ್ಥಿ ಎಂದೇ ಭಾವಿಸಿದ್ದರು.

ಪಂಚಾಕ್ಷರಿ ಗವಾಯಿಗಳು ಆರಂಭದಲ್ಲಿ ಕರ್ನಾಟಕೀ ಸಂಗೀತವನ್ನು ನಂತರ ಹಿಂದುಸ್ತಾನಿ ಸಂಗೀತವನ್ನು ಅಭ್ಯಸಿಸಿ ಉಭಯ ಗಾಯನಾಚಾರ್ಯರೆನಿಸಿದರು. ಶ್ರೇಷ್ಠ ಗುರುಗಳ ಗರಡಿಯಲ್ಲಿ ತರಬೇತಿ ಪಡೆದು ಪಂಡಿತರೆನಿಸಿದರು, ಗಾನಯೋಗಿಗಳಾದರು.

''ಪಂಚಾಕ್ಷರಿ ಗವಾಯಿಗಳು ಪ್ರಬುದ್ಧ ಗಾಯಕರೆನಿಸಿದಾಗ ಅವರಿಗೆ ಆಗ ಇಪ್ಪತ್ತೈದು ವರ್ಷ ವಯಸ್ಸು. ತಾವು ಎಲ್ಲರಂತೆ ಮದುವೆ ಮಾಡಿಕೊಳ್ಳಬೇಕೆಂದು ಇಚ್ಛಿಸಿದರು. ಈ ವಿಷಯ ಕುಮಾರಸ್ವಾಮಿಗಳ ಕಿವಿಗೂ ಮುಟ್ಟಿತು. ಕುಮಾರಸ್ವಾಮಿಗಳು ಅದನ್ನು ವಿರೋಧಿಸಿದರು. 'ನೀನು ಆಜನ್ಮ ಬ್ರಹ್ಮಚಾರಿಯಾಗಿರು, ನಿನ್ನಿಂದ ಸಮಾಜ ಉದ್ಧಾರವಾಗಬೇಕಾಗಿದೆ. ಅಂಧ ಅನಾಥ ಅನಕ್ಷರಸ್ಥ ಮಕ್ಕಳಿಗೆ ಸಂಗೀತ ವಿದ್ಯೆ ಹೇಳಿಕೊಡಬೇಕು. ಅದುವೇ ನಿನ್ನ ಜೀವನದ ಧ್ಯೇಯವಾಗಬೇಕು' ಎಂದು ಕುಮಾರಸ್ವಾಮಿಗಳು ಅಪ್ಪಣೆ ಕೊಡಿಸಿದರು. ಗುರುಗಳ ವಾಣಿಯಂತೆ ಪಂಚಾಕ್ಷರಿ ಗವಾಯಿಗಳು ತಮ್ಮ ಮನಸ್ಸನ್ನು ಬದಲಾಯಿಸಿಕೊಂಡರು. ಮಕ್ಕಳಿಗೆ ಸಂಗೀತ ಪಾಠ ಹೇಳಲು ಮುಂದಾದರು''[೩೫] ಎಂದು ಶ್ರೀ ಸಿದ್ಧರಾಮಯ್ಯ ಮಠಪತಿಯವರು ಅಭಿಪ್ರಾಯಪಡುತ್ತಾರೆ.

ಸಮಾಜದ ಕಣ್ಣಲ್ಲಿ ಹೊರೆ ಎನಿಸಿದ, ಹೆತ್ತವರಿಗೆ ಭಾರವೆನಿಸಿದ ಅನೇಕ ಜನ ಅಂಧ ಅನಾಥ ಮಕ್ಕಳು ಗವಾಯಿಗಳಲ್ಲಿ ಸಂಗೀತ ಕಲಿಯಲು ಬಂದರು. ಗವಾಯಿಗಳು ವಿದ್ಯಾರ್ಥಿಗಳಿಗೆ ಸಂಗೀತದ ಜೊತೆಗೆ ಕೀರ್ತನ, ಪ್ರವಚನ, ನಾಟಕಾಭಿನಯದ ಕಲೆಯನ್ನು ಕಲಿಸಿದರು. ವಿದ್ಯಾರ್ಥಿಗಳ ಸಂಖ್ಯೆ ನೂರಕ್ಕೂ ಮಿರಿತು. ಎಲ್ಲ ಮಕ್ಕಳನ್ನು ಕಟ್ಟಿಕೊಂಡು ಗವಾಯಿಗಳು ಊರಿಂದೂರಿಗೆ ಸಂಚರಿಸುತ್ತ ಸಂಚಾರಿ ಸಂಗೀತ ಪಾಠ ಶಾಲೆ ಆರಂಭಿಸಿದರು.

---

೩೫ ಹಿಂದುಸ್ತಾನಿ ಸಂಗೀತಗಾರರು - ಎರಡು : ಸಿದ್ಧರಾಮಯ್ಯ ಮಠಪತಿ, ಪುಟ-೫೮

ಕುಮಾರಸ್ವಾಮಿಗಳು ೧೯೧೪ ರಲ್ಲಿ ಬಸವ ಜಯಂತಿಯ ಶುಭದಿನದಂದು ಧಾರವಾಡ ಜಿಲ್ಲೆ ರೋಣ ತಾಲೂಕಿನ ನಿಡಗುಂದಿಕೊಪ್ಪದ ಶಾಖಾ ಶಿವಯೋಗ ಮಂದಿರದಲ್ಲಿ 'ಕುಮಾರೇಶ್ವರ ಕೃಪಾಪೋಷಿತ ಸಂಗೀತ ಸಾಹಿತ್ಯ ಮಹಾವಿದ್ಯಾಲಯ' ಸ್ಥಾಪಿಸಿದರು. ಪಂಚಾಕ್ಷರಿ ಗವಾಯಿಗಳನ್ನು ಅದರ ಮುಖ್ಯಸ್ಥರನ್ನಾಗಿ ಮಾಡಿದರು. ಈ ವಿದ್ಯಾಲಯದಲ್ಲಿ ಕಮತಗಿಯ ಗವಾಯಿ ಸಂಗೀತ ಶಿಕ್ಷಕರಾಗಿ. ದ್ಯಾಂಪುರದ ಶ್ರೀಮಹಾಲಿಂಗಯ್ಯನವರು ಸಾಹಿತ್ಯ ಶಿಕ್ಷಕರಾಗಿ, ಶ್ರೀಪುಟ್ಟ ರಾಜ ಗವಾಯಿಗಳು ಕನ್ನಡ, ಸಂಸ್ಕೃತ ಶಿಕ್ಷಕರಾಗಿ ಕೆಲಸ ಮಾಡಿದರು. ಈ ವಿದ್ಯಾಲಯ ೧೯೩೯ ರಲ್ಲಿ ರಜತಮಹೋತ್ಸವ ಕಂಡಿತು.

ಪಂಚಾಕ್ಷರಿ ಗವಾಯಿಗಳ ಕೀರ್ತಿ ಸುತ್ತೆಲ್ಲ ಹರಡಿತು. ಅಪಾರ ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಸೇರಿದರು. ಸಂಸ್ಥೆಗೆ ಆರ್ಥಿಕ ಮುಗ್ಗಟ್ಟು ತಲೆದೋರಿತು. ಅದನ್ನು ನೀಗಿಸಲು ಗವಾಯಿಗಳು ಶ್ರೀಕುಮಾರೇಶ್ವರ ಕೃಪಾಪೋಷಿತ ಸಂಗೀತ ನಾಟಕ ಮಂಡಳಿ ಸ್ಥಾಪಿಸಿ ತನ್ಮೂಲಕ ನಾಟಕ ಅಭಿನಯಿಸಲು ಆರಂಭಿಸಿ, ಆರ್ಥಿಕ ಭಾರ ಕಡಿಮೆ ಮಾಡಿದರು. ೧೯೪೦ ರಲ್ಲಿ ನರಗುಂದದಲ್ಲಿ ಸೊನ್ನಲಾಪುರ ಸಿದ್ಧರಾಮೇಶ್ವರ ನಾಟಕ ಆಡಿದರು. ನಂತರ ಶ್ರೀ ಪುಟ್ಟರಾಜ ಗವಾಯಿಗಳು ಬರೆದ ಹೇಮರಡ್ಡಿ ಮಲ್ಲಮ್ಮ ಹೀಗೆ ಅನೇಕ ನಾಟಕ ಆಡಿ ಹಣ ಸಂಪಾದಿಸದರು. ಆರ್ಥಿಕ ತೊಂದರೆಯಿಂದ ಪಾರಾದರು.

ವಿದ್ಯಾರ್ಥಿಗಳನ್ನು ಕಟ್ಟಿಕೊಂಡು ಗವಾಯಿಗಳು ಸಲ್ಲಿಸುತ್ತಿರುವ ಸೇವೆಯನ್ನು ಕಂಡು ಶ್ರೀ ದ.ರಾ.ಬೇಂದ್ರೆ, ಶ್ರೀ ಫ.ಗು.ಹಳಕಟ್ಟಿ, ಶ್ರೀ ಗರೂಡ ಸದಾಶಿವ ರಾಯರು ಅಪಾರ ಮೆಚ್ಚುಗೆ ವ್ಯಕ್ತಪಡಿಸಿದರು.

ಶಿಷ್ಯರನ್ನು ಕರೆದುಕೊಂಡು ಗವಾಯಿಗಳು ಸಂಗೀತ ಸಂಚಾರಿಗಳಾಗಿ ಬಳ್ಳಾರಿ, ಬೆಂಗಳೂರಿನಿಂದ ಮೈಸೂರಿಗೆ ಬಂದರು. ಮೈಸೂರಿನ ಮಹಾರಾಜರಿಗೆ ತಮ್ಮ ಶಿಷ್ಯರ ಸಂಗೀತ ಪ್ರತಿಭೆ ತೋರಿಸಬೇಕು ಮತ್ತು ಮಹಾರಾಜರಿಂದ ತಮ್ಮ ಮಹಾವಿದ್ಯಾಲಯಕ್ಕೆ ಆರ್ಥಿಕ ಸಹಾಯ ಪಡೆಯಬೇಕೆಂಬುದು ಅವರ ಉದ್ದೇಶವಾಗಿತ್ತು. ಮಹಾರಾಜರಿಗೆ ಶಿವಯೋಗ ಮಂದಿರದ ಶಿಫಾರಸು ಪತ್ರ ಬೇಕಾಯಿತು. ಅದನ್ನು ಪಡೆಯುವಲ್ಲಿ ಗವಾಯಿಗಳು ವಿಫಲರಾದರು. ಯಾರದೋ ಕುಹಕಿಗಳ ಕೈವಾಡದಿಂದ ಅದು ತಪ್ಪಿ ಹೋಯಿತು. ಹಾಗಾಗಿ ಗವಾಯಿಗಳು ನಿರಾಶರಾಗಿ ಮೈಸೂರಿನಿಂದ ಮರಳಬೇಕಾಯಿತು.

೧೯೪೦ ರಲ್ಲಿ ಧಾರವಾಡ ಗದಗ ಭಾಗದಲ್ಲಿ ಭೀಕರ ಬರಗಾಲ ಬಿದ್ದಿತು. ಈ ಸ್ಥಿತಿಯಲ್ಲಿ ವಿದ್ಯಾರ್ಥಿಗಳನ್ನು ತಮ್ಮ ತಮ್ಮ ಊರಿಗೆ ಕಳಿಸಬೇಕೆಂಬುದು ಕೆಲ ಹಿರಿಯರ ಸಲಹೆಯಾಗಿತ್ತು. ಆದರೆ ಗವಾಯಿಗಳು ಅದಕ್ಕೆ ಒಪ್ಪಲಿಲ್ಲ. ತಂಬೂರಿ ತಂತಿ ಮಾರಿಯಾದರೂ ಮಕ್ಕಳನ್ನು ಸಲಹುತ್ತೇನೆ ಎಂದು ಹೇಳಿದರು. ಗವಾಯಿಗಳ ತಾಪತ್ರಯ ಕಂಡು ಗದುಗಿನ ಶ್ರೀಮಂತ ಭಕ್ತ ಶ್ರೀ ಬಸರೀಗಿಡದ ವೀರಪ್ಪನವರು ಗವಾಯಿಗಳಿಗೆ ಊಟ ವಸತಿ ವ್ಯವಸ್ಥೆ ಮಾಡಿದರು. ಗವಾಯಿಗಳು ಖಾಯಂ ಆಗಿ ಗದುಗಿನಲ್ಲಿಯೇ ನೆಲೆ ನಿಲ್ಲಲು ವೀರಪ್ಪನವರು ತಮ್ಮ ಭೂಮಿಯನ್ನು ಗವಾಯಿಗಳಿಗೆ ದಾನವಾಗಿ ನೀಡಿ ಅಲ್ಲಿ ಅವರಿಗೆ ಆಶ್ರಮ ಕಟ್ಟಿಸಿಕೊಟ್ಟರು. ಅದು ಇಂದು 'ಶ್ರೀ ವೀರೇಶ್ವರ ಪುಣ್ಯಾಶ್ರಮ' ಎಂಬ ಹೆಸರಿನಲ್ಲಿ ತಲೆಯೆತ್ತಿ ನಿಂತಿದೆ.

ತಮ್ಮ ಜೀವಮಾನವಿಡೀ ಪಂಚಾಕ್ಷರಿ ಗವಾಯಿಗಳು ಸಮಾಜಕ್ಕಾಗಿ, ಸಂಗೀತಕ್ಕಾಗಿ, ದೀನ ದಲಿತ, ಅಂಧ-ಅನಾಥ-ಅನಕ್ಷರಸ್ಥರಿಗಾಗಿ ದುಡಿದು ದುಡಿದು ಹಣ್ಣಾದರು. ಕಾಯಿಲೆಯಿಂದ ಹಾಸಿಗೆ ಹಿಡಿದರು. ಸೂಜಿಮದ್ದು ಅವರಿಗೆ ವರ್ಜವಾಗಿತ್ತು. ಉದರ ರೋಗ ಹೆಚ್ಚಾಯಿತು. ಶಸ್ತ್ರ ಚಿಕಿತ್ಸೆಯೊಂದೇ ಅದಕ್ಕೆ ಉಪಾಯವೆಂಬುದು ವೈದ್ಯರ ಸಲಹೆಯಾಗಿತ್ತು. ಗವಾಯಿಗಳು ಅದಕ್ಕೆ ಒಪ್ಪಲಿಲ್ಲ. ಕೊನೆಗೆ ಹಾಲಕೆರೆ ಶ್ರೀ ಅನ್ನದಾನೀಶ್ವರಸ್ವಾಮಿಗಳ ಒತ್ತಾಯಕ್ಕೆ ಮಣಿದು ಒಪ್ಪಿದರಾದರೂ ಅಷ್ಟೊತ್ತಿಗೆ ಕಾಯಿಲೆ ಇಡೀ ಶರೀರವನ್ನು ವ್ಯಾಪಿಸಿತ್ತು. ಶಸ್ತ್ರಕ್ರಿಯೆ ಪ್ರಯೋಜನವೆನಿಸಲಿಲ್ಲ. ಹಾಗಾಗಿ ಪಂಚಾಕ್ಷರಿ ಗವಾಯಿಗಳು ೧೯೪೪ ರ ಜೂನ್ ೧೧ ರಂದು (ಜೇಷ್ಠ ಬಹುಳ ಪಂಚಮಿ) ಲಿಂಗೈಕ್ಯರಾದರು. ಪುಣ್ಯಾಶ್ರಮದಲ್ಲಿ ಅವರ ಸಮಾಧಿ ಮಾಡಲಾಯಿತು. ಈಗ ಅಲ್ಲಿ ಬೃಹತ್ ಪ್ರಮಾಣದಲ್ಲಿ ಗುಡಿ ಕಟ್ಟಲಾಗಿದೆ. ಪಂಚಾಕ್ಷರಿ ಗವಾಯಿಗಳ ಮೂರ್ತಿ ಸ್ಥಾಪಿಸಲಾಗಿದೆ. ಅಲ್ಲಿ ಪ್ರತಿವರ್ಷ ಜೇಷ್ಠ ಬಹುಳ ಪಂಚಮಿಯಂದು ಗವಾಯಿಗಳ ಪುಣ್ಯತಿಥಿ ನಿಮಿತ್ತ ಸಂಗೀತ ಶ್ರದ್ಧಾಂಜಲಿ ಕಾರ್ಯಕ್ರಮ ಅದ್ದೂರಿಯಾಗಿ ನಡೆಯುತ್ತದೆ. ನಾಡಿನ ಅನೇಕ ಹಿರಿಕಿರಿ ಸಂಗೀತಗಾರರು, ಶಿಷ್ಯರು, ಅಭಿಮಾನಿಗಳು, ಗಾನಯೋಗಿಗೆ ನಾದ ಶ್ರದ್ಧಾಂಜಲಿ ಅರ್ಪಿಸುತ್ತಾರೆ. ಬೆಂಗಳೂರು, ಮೈಸೂರು, ಮದ್ರಾಸ, ಬಸವಕಲ್ಯಾಣ, ಗುಲಬುರ್ಗಾ, ಬಳ್ಳಾರಿ, ರಾಯಚೂರು, ವಿಜಾಪೂರ, ಬಾಗಲಕೋಟ, ಧಾರವಾಡ, ಭೂಪಾಲ ಇನ್ನು ಅನೇಕ ಕಡೆಗಳಲ್ಲಿ ಗವಾಯಿಗಳ ಪುಣ್ಯತಿಥಿ ನಡೆಯುತ್ತದೆ.

ಪಂಚಾಕ್ಷರಿ ಗವಾಯಿಗಳು ಧ್ರುಪದ, ಖಯಾಲ, ಠುಮರಿ, ಟಪ್ಪಾ, ಗಝಲ, ಭಜನಾ ಹಾಡುಗಾರಿಕೆಯಲ್ಲಿ ಪ್ರಬುದ್ಧರಾಗಿದ್ದರು. ಪ್ರಪ್ರಥಮವಾಗಿ ಕನ್ನಡ ವಚನಗಳನ್ನು, ತತ್ತ್ವಪದಗಳನ್ನು ಮುಂಬೈ ಎಚ್.ಎಮ್.ವಿ. ಕಂಪನಿಯಲ್ಲಿ ಹಾಡಿದರು.

ಪಂಚಾಕ್ಷರಿ ಗವಾಯಿಗಳ ಹಾಡುಗಾರಿಕೆ ಕಿರಾನಾ, ಗ್ವಾಲ್ಹೇರ ಘರಾಣೆಗಳ ಸಂಗಮ. ಗವಾಯಿಗಳ ಶಿಷ್ಯಸಂಪತ್ತು ಅತ್ಯಂತ ಸಮೃದ್ಧ, ಅವರಲ್ಲಿ ಪುಟ್ಟರಾಜ ಗವಾಯಿ, ಬಸವರಾಜ ರಾಜಗುರು, ಸಿದ್ಧರಾಮ ಜಂಬಲದಿನ್ನಿ, ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ, ಅರ್ಜುನ ಸಾ ನಾಕೋಡ, ಶೇಷಾದ್ರಿ ಗವಾಯಿ, ಶಂಕರರಾವ ದೀಕ್ಷಿತ, ಮೃತ್ಯುಂಜಯ, ಚಂದ್ರಶೇಖರ ಮತ್ತು ಬಸವರಾಜ ಪುರಾಣಿಕ ಬಂಧುಗಳು ಮುಂತಾದವರು ಉಲ್ಲೇಖನೀಯರಾಗಿದ್ದಾರೆ.

ಪಂಚಾಕ್ಷರಿ ಗವಾಯಿಗಳಿಗೆ ದೊರೆತ ಪ್ರಶಸ್ತಿಗಳು ಅನೇಕ. 'ಪಂಡಿತ', 'ಉಭಯಗಾನ ವಿಶಾರದ', 'ಗಾನಕಲಾನಿಧಿ', 'ಸಂಗೀತ ಸಾಗರ', 'ಸಂಗೀತ ಸುಧಾನಿಧಿ', 'ಗಾಯನಾಚಾರ್ಯ', 'ಸಂಗೀತ ಸಾಮ್ರಾಟ', ' ಉಭಯ ಗಾಯನಾಚಾರ್ಯ', 'ಲಲಿತಕಲಾ ಪಿತಾಮಹ', 'ಗಾನಯೋಗಿ', 'ಭೂಗಂಧರ್ವ ಚಂದ್ರ' ಅಂಥವುಗಳಲ್ಲಿ ಕೆಲವು. ಅನೇಕ ಮಠ ಮಾನ್ಯಗಳು ಅವರನ್ನು ಸತ್ಕರಿಸಿ, ಸನ್ಮಾನಿಸಿ ಗೌರವಿಸಿವೆ. ೧೯೩೮ ರಲ್ಲಿ ಜರುಗಿದ ವೀರಶೈವ ಮಹಾಸಭೆ ಸಂಗೀತ ಸಮ್ಮೇಳನಕ್ಕೆ ಪಂಚಾಕ್ಷರಿ ಗವಾಯಿಗಳನ್ನು ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿತು.

ಗವಾಯಿಗಳ ದೇಶಾಭಿಮಾನ ಅಪ್ರತಿಮವಾದುದು. ಅವರು ಮೊದಲು ವಿದೇಶಿ ಬಟ್ಟೆಗಳನ್ನು ಧರಿಸುತ್ತಿದ್ದರು. ಮಹಾತ್ಮಾ ಗಾಂಧೀಜಿಯವರ ಸಂಪರ್ಕದಿಂದ ವಿದೇಶಿ ವಸ್ತ್ರಗಳನ್ನು ಧಿಕ್ಕರಿಸಿದರು, ಖಾದಿ ಬಟ್ಟೆಯನ್ನು ಧರಿಸಿದರು. ತಮ್ಮ ಶಿಷ್ಯರಿಗೂ ಅದನ್ನು ಉಪದೇಶಿಸಿದರು. ಗಡಿನಾಡ ಸಿಂಹವೆಂದು ಪ್ರಖ್ಯಾತರಾಗಿದ್ದ ಸೊಲ್ಲಾಪುರದ ಧನಶೆಟ್ಟಿ ಮಲ್ಲಪ್ಪನವರ ಪ್ರೇರಣೆಯಿಂದ ಗವಾಯಿಗಳು ತುಂಬ ಪ್ರಭಾವಿತರಾಗಿದ್ದರು.

ಪಂಡಿತ ಪಂಚಾಕ್ಷರಿ ಗವಾಯಿಗಳು ಒಬ್ಬ ಯುಗ ಪ್ರವರ್ತಕರು. ಭಾರತದ ಉದ್ದಗಲಕ್ಕೂ ಅವರ ಅಭಿಮಾನಿಗಳಿದ್ದಾರೆ. ಅವರ ಹೆಸರಿನಲ್ಲಿ ಗದುಗಿನಲ್ಲಿ ಅವರ ಪಟ್ಟದ ಶಿಷ್ಯ ಡಾ. ಪುಟ್ಟರಾಜ ಕವಿ ಗವಾಯಿಗಳ ನೇತೃತ್ವದಲ್ಲಿ 'ಪಂಚಾಕ್ಷರ ಸಂಗೀತ ಮಹಾವಿದ್ಯಾಲಯ' ಅಸ್ತಿತ್ವಕ್ಕೆ ಬಂದಿದೆ.

**೫.೫. ಪಂ. ಫಕೀರಪ್ಪ ಹೂಗಾರ**

ಸುಪ್ರಸಿದ್ಧ ಹಿಂದುಸ್ತಾನಿ ಸಂಗೀತಗಾರರು. ಧಾರವಾಡ ಜಿಲ್ಲೆಯ ಕುಂದಗೋಳದಲ್ಲಿ ಮಧ್ಯಮ ದರ್ಜೆಯ ವೀರಶೈವ ಕುಟುಂಬದಲ್ಲಿ ಜನಿಸಿದರು. ಇವರ ಹಿರಯರು ತಾಳವಾದ್ಯದಲ್ಲಿ ಪ್ರಕಾಂಡ ಪಾಂಡಿತ್ಯ ಹೊಂದಿದವರು. ಫಕ್ಕೀರಪ್ಪನವರು ಸಹ ಸುಪ್ರಸಿದ್ಧ ಕಿರಾಣಾ ಘರಾಣೆಯ ಪ್ರಸಿದ್ಧ ಹಾಡುಗಾರರು ಅಲ್ಲದೇ ತಬಲಾವಾದನದಲ್ಲಿ ನಿಪುಣರಾದವರು.

ಕುಂದಗೋಳದ ನಾಡಿಗೇರ ಮನೆತನದ ಸಂಪರ್ಕದಲ್ಲಿ ಇದ್ದ ಇವರನ್ನು ಅಬ್ದುಲ್ ಕರೀಮಖಾನ್‌ರು ಗಮನಿಸಿ ತಮ್ಮ ಶಿಷ್ಯರನ್ನಾಗಿ ಸ್ವೀಕರಿಸಿ ಗಾಯನ ಕಲಿಸಿದರು. ಸವಾಯಿ ಗಂಧರ್ವ ಹಾಗೂ ಫಕ್ಕೀರಪ್ಪ ಹೂಗಾರ ಗುರುಗಳೊಂದಿಗೆ ಮಹಾರಾಷ್ಟ್ರದ ಮಿರಜನಲ್ಲಿದ್ದು ಸಂಗೀತಾಭ್ಯಾಸ ಮಾಡಿದರು.

ಅಬ್ದುಲ್‌ಕರೀಮ್‌ಖಾನ್ ಸಾಹೇಬರೊಡನೆ ತಬಲಾ ನುಡಿಸುವುದರ ಜೊತೆಗೆ ಹಾಡುಗಾರರಾಗಿ ಇಡೀ ಭಾರತವನ್ನೆಲ್ಲ ಸಂಚರಿಸಿ ಗಾಯನ ವಾದನಗಳೆರಡರಲ್ಲಿಯೂ ಮಹಾ ಆಚಾರ್ಯರೆನಿಸಿಕೊಂಡವರು. ಮುಂದೆ ತಮ್ಮ ಸ್ವಂತ ಸ್ಥಳವಾದ ಕುಂದಗೋಳಕ್ಕೆ ಮರಳಿ ಸ್ವರ ಪ್ರಕಾಶ ಸಂಗೀತ ವಿದ್ಯಾಲಯವೆಂಬ ಸಂಗೀತ ಶಾಲೆಯನ್ನು ಸ್ಥಾಪಿಸಿದರು. ಅನೇಕ ಶಿಷ್ಯರನ್ನು ತಯಾರು ಮಾಡಿ ಸಂಗೀತ ಕಲೆಗೆ ಉತ್ತಮ ಸೇವೆ ಸಲ್ಲಿಸಿದರು. ಇವರ ಗಾಯನವನ್ನು ಮುಂಬೈ ಮತ್ತು ಧಾರವಾಡ ಆಕಾಶವಾಣಿ ಕೇಂದ್ರಗಳು ಬಿತ್ತರಿಸುತ್ತಿದ್ದವು. ೧೯೬೫ ರಲ್ಲಿ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಇವರಿಗೆ ಪ್ರಶಸ್ತಿಯನ್ನಿತ್ತು ಗೌರವಿಸಿತು. ೫೦ ವರ್ಷಕ್ಕೂ ಹೆಚ್ಚು ಕಾಲ ಕನ್ನಡನಾಡಿನ ಸಂಗೀತ ಪ್ರಪಂಚಕ್ಕೆ ಸೇವೆ ಸಲ್ಲಿಸಿದ ಫಕ್ಕೀರಪ್ಪನವರು ಕುಂದಗೋಳದಲ್ಲಿ ೭-೩-೧೯೬೬ ರಂದು ತೀರಿಕೊಂಡರು. ಇವರು ಸ್ಥಾಪಿಸಿದ ಸಂಗೀತ ಸಂಸ್ಥೆ ಕುಂದಗೋಳದಲ್ಲಿ ಈಗಲೂ ಇದೆ.

ಇವರ ಶಿಷ್ಯ ಪರಂಪರೆ ಅಪಾರ. ಹುಸೇನಸಾಬ ನದಾಫ್, ಆರ್.ಜಿ. ದೇಸಾಯಿ, ಹನುಮಂತಪ್ಪ ಹೂಗಾರ, ಶ್ರೀಮತಿ ತಾರಾಬಾಯಿ ತೇರದಾಳ, ಶ್ರೀಮತಿ ಸೋನುಬಾಯಿ ದೊಡ್ಮನಿ, ಮೆಹಬೂಬಾಯಿ ಜಮಖಂಡಿ, ಇಂಧೂಮತಿ ತಾಮಣಕರ್, ರಾಮಣ್ಣ ಯಾಳಗಿ ಇವರು ಪ್ರಮುಖರು.

## ೫.೬. ಡಾ. ಪುಟ್ಟರಾಜ ಗವಾಯಿಗಳು

''ಓರ್ವ ವಿದ್ವಾಂಸನ ಉದಾತ್ತ ಚಾರಿತ್ರ್ಯದ, ವ್ಯಕ್ತಿತ್ವದ ಬಗೆಗೆ ನಿರೂಪಣೆ ಮಾಡಬೇಕಾದರೆ ಅದಕ್ಕೆ ಮಹಾನತೆ ಹಾಗೂ ಅವರ ಜೀವನ, ಸಾಧನೆ ಹಾಗೂ ಸೇವೆ ಮುಂತಾದವುಗಳ ಬಗೆಗೆ ಹೇಳುವುದಾದರೆ, ಅವುಗಳಿಗೆ ವಿಶೇಷವಾಗಿ ತಮ್ಮದೇ ಆದ ಅಳತೆಗೋಲುಗಳಿರುತ್ತವೆ. ಅವುಗಳು ಯಾವುವೆಂದರೆ ವಿದ್ವತ್, ಕ್ಷಮಾ ದಯಾಶೀಲತೆ, ವಿವೇಕ ಮುಂತಾದವುಗಳು. ಡಾ.ಪುಟ್ಟರಾಜ ಗವಾಯಿಗಳು ನಿಜವಾದ ಅರ್ಥದಲ್ಲಿ ಸುಶಿಕ್ಷಿತ ಹಾಗೂ ಮಹಾನ ಪಂಡಿತರಾಗಿದ್ದಾರೆ. ಇಂತಹ ವ್ಯಕ್ತಿ ದೇಶದ ಸಂಸ್ಕೃತಿ, ಆಧ್ಯಾತ್ಮ, ಕಲೆ ಮುಂತಾದವುಗಳ ಬಗೆಗೆ ಶ್ರೇಷ್ಠ ಪ್ರಬೋಧಕರಾಗಿದ್ದಾರೆ''[೩೬] ಎಂದು ಡಾ. ಬಿಂದುಮಾಧವ ಪಾಠಕ ಹೇಳುತ್ತಾರೆ.

ನಮ್ಮ ಕನ್ನಡ ನಾಡು, ನುಡಿ, ಧರ್ಮ, ಕಲೆ ಇವುಗಳ ಸರ್ವತೋಮುಖ ಏಳಿಗೆಗಾಗಿ ಅಷ್ಟೇ ಅಲ್ಲದೇ ಇಡೀ ವಿಶ್ವಮಾನವನ ಕಣ್ಮಣಿಯಾಗಿರುವ ಪ್ರಾತಃಸ್ಮರಣಿ ಪುಣ್ಯ ಪುರುಷರಲ್ಲಿ ಪಂ. ಪಂಚಾಕ್ಷರ ಗವಾಯಿಗಳ ಪಟ್ಟಶಿಷ್ಯರಾದ ಡಾ.ಪುಟ್ಟರಾಜ ಗವಾಯಿ ಅವರ ಜೀವನ, ಅವರ ಸಂಗೀತ, ಸಾಹಿತ್ಯ ಮತ್ತು ಆಧ್ಯಾತ್ಮ ಸಾಧನೆಗಳು ಅತ್ಯಂತ ರೋಚಕ ಹಾಗೂ ಮಾನವೀಯವಾಗಿದೆ.

ಡಾ.ಪುಟ್ಟರಾಜ ಗವಾಯಿಗಳ ಜನನ ಮಾರ್ಚ್ ೩, ೧೯೧೪ ರಂದು ಧಾರವಾಡ ಜಿಲ್ಲೆಯ ಹಾವೇರಿ ತಾಲೂಕು ಕರ್ಜಗಿ ಹತ್ತಿರದ ದೇವಗಿರಿ ಎಂಬ ಊರಲ್ಲಾಯಿತು. ಇವರ ತಂದೆಯವರ ಹೆಸರು ರೇವಣಯ್ಯ, ತಾಯಿ ಸಿದ್ದಮ್ಮ. ಅತಿ ಸಾತ್ವಿಕ ಪ್ರವೃತ್ತಿಯವರಾದ ಅವರ ಮಾತಾಪಿತರು ಮೂಲತಃ ಹಾನಗಲ್ ತಾಲೂಕಿನ ಹೊಸಪೇಟೆ ಎಂಬ ಊರಿನವರು. ಸಿದ್ದಮ್ಮ ಇವರ ಸೋದರರಾದ ಚಂದ್ರಶೇಖರಯ್ಯ ಸಿದ್ದಮ್ಮ ಅವರನ್ನು ಹೆರಿಗೆಗಾಗಿ ಕರೆದೊಯ್ದರು. ಅಲ್ಲಿಯೇ ಪುಟ್ಟಯ್ಯನವರ ಜನನ.

ಕಣ್ಣು ಗುಡ್ಡೆಗಳನ್ನೇ ಕಳೆದುಕೊಂಡ ಪುಟ್ಟಯ್ಯ ಯಾವ ತಜ್ಞರ ಬಳಿಯೂ ಸರಿಪಡಿಸಲು ಹೋಗಲಿಲ್ಲ. ಈ ಪ್ರಕಾರ ಪುಟ್ಟಯ್ಯನವರಿಗೆ ಬಾಲ್ಯಾವಸ್ಥೆಯಲ್ಲೇ ಅಂಧತ್ವ ಪ್ರಾಪ್ತವಾಯಿತು.

ಚಿಕ್ಕಂದಿನಲ್ಲೇ ಅಂಧತ್ವ ಪ್ರಾಪ್ತವಾದದ್ದು ಮತ್ತು ತಂದೆಯವರನ್ನು ಕಳೆದುಕೊಂಡಂಥ ಪುಟ್ಟಯ್ಯನವರಿಗೆ ಅವರ ಸೋದರಮಾವ ದೇವಗಿರಿಯ ಚಂದ್ರಶೇಖರಯ್ಯನವರು ಪಾಲನೆಯ ಭಾರವಹಿಸಿಕೊಂಡರು. ಚಂದ್ರಶೇಖರಯ್ಯನವರು ಆಧ್ಯಾತ್ಮವಾದಿ. ಸ್ವತಃ ಸಂಗೀತ ಮತ್ತು ಸಾಹಿತ್ಯದಲ್ಲಿ ಅಪಾರ ಆಸಕ್ತಿ ಉಳ್ಳವರು. ಪುಣ್ಯ ಪುರುಷ ಪಂ. ಪಂಚಾಕ್ಷರಿ ಗವಾಯಿಗಳ ಶಿಷ್ಯಂದಿರು. ಆದ್ದರಿಂದ ಬಾಲಕ ಪುಟ್ಟಯ್ಯನವರಿಗೆ ಪ್ರಾಥಮಿಕ ಪಾಠ ಇವರಿಂದಲೇ ಪ್ರಾರಂಭ. ಸಾಹಿತ್ಯ ಮತ್ತು ಸಂಗೀತದಲ್ಲಿ ಅವರ ಮಾವಂದಿರಾದ ಶ್ರೀ ಚಂದ್ರಶೇಖರ

೩೬. ಡಾ.ಪುಟ್ಟರಾಜ ಗವಾಯಿಗಳು : ಡಾ. ಬಿಂದುಮಾಧವ ಪಾಠಕ, ಪುಟ-೧

ಸ್ವಾಮಿಗಳೇ ಅವರಿಗೆ ಮೊಟ್ಟ ಮೊದಲ ಗುರು. ಚಿಕ್ಕ ವಯಸ್ಸು, ಅಂಧತ್ವ ಪಡೆದ ಪುಟ್ಟಯ್ಯನವರು ತಮ್ಮ ೮ ನೇ ವಯಸ್ಸಿನ ಅವಧಿಯಲ್ಲೆ ಎಲ್ಲ ತತ್ವಪದಗಳು ಹಾಗೂ ಸಂಗೀತದಲ್ಲಿ ತಮ್ಮ ಪ್ರತಿಭೆಯನ್ನು ತೋರಲು ಪ್ರಾರಂಭಿಸಿದರು. ಕಂಠಮಾಧುರ್ಯ ಹಾಗೂ ಹಾರ್ಮೋನಿಯಂ ವಾದನದಲ್ಲಿ ಇವರ ಪ್ರತಿಭೆಯನ್ನು ಅರಿತು ಶ್ರೀಚಂದ್ರಶೇಖರ ಶಾಸ್ತ್ರಿಗಳು ಸಂಗೀತವೇ ಈ ಬಾಲಕನಿಗಾಗಿ ಮೂಡಿಬಂದಿದೆಯೆಂದು ಭಾವಿಸಿ ಅವರನ್ನು ಓರ್ವ ಶ್ರೇಷ್ಠ ಸಂಗೀತಗಾರನನ್ನಾಗಿಸಬೇಕೆಂದು ತಮ್ಮ ಗುರು ಪಂ. ಪಂಚಾಕ್ಷರಿ ಗವಾಯಿಗಳವರ ಸಮರ್ಥ ಮಾರ್ಗದರ್ಶನ ದೊರಕಿಸಬೇಕೆಂದು ಸಂಕಲ್ಪಿಸಿದರು.

ಪುಟ್ಟಯ್ಯನವರನ್ನು ಪಂಚಾಕ್ಷರಿ ಗವಾಯಿಗಳ ಬಳಿ ಪ್ರಥಮ ಬಾರಿಗೆ ಕರೆದುಕೊಂಡು ಹೋದಾಗ ಪುಟ್ಟಯ್ಯನವರಿಗೆ ಕೇವಲ ೮. ವರ್ಷ ಮತ್ತು ಆಗ ಪಂ. ಪಂಚಾಕ್ಷರಿ ಗವಾಯಿಗಳ ಸಂಚಾರ ನವಲಗುಂದ ತಾಲೂಕಿನಲ್ಲಿತ್ತು.

ಪುಟ್ಟಯ್ಯನವರಿಗೆ ಶಿಷ್ಯರೆಂದು ಒಪ್ಪುವ ಪೂರ್ವದಲ್ಲಿ ಪಂ. ಪಂಚಾಕ್ಷರಿ ಗವಾಯಿಗಳು ಕೇಳಿದ ಪ್ರಶ್ನೆಗಳಿಗೆ ದಿಟ್ಟತನದ ಉತ್ತರವನ್ನಿತ್ತಾಗ ಪಂಚಾಕ್ಷರಿ ಗವಾಯಿಗಳು ಗದ್ಗದಿತರಾಗಿ ಅವರ ಕಣ್ಣುಗಳಿಂದ ಆನಂದ ಭಾಷ್ಪಗಳು ಹರಿಯಲು ಪ್ರಾರಂಭಿಸಿದವು ಬಾಲಕ ಪುಟ್ಟಯ್ಯನವರ ಆಗಾಧ ಸತ್ವ, ಆದರ್ಶ, ಜಿಗುಟುತನ, ಕಲ್ಪನಾಶಕ್ತಿಗಳಿಂದ ಪ್ರಭಾವಿತರಾಗಿ ಪಂ. ಗವಾಯಿಗಳವರು ಅವರಿಗೆ ಸಂಗೀತದ ಜ್ಞಾನಧಾರೆ ನೀಡಲು ಪ್ರಾರಂಭಿಸಿದರು. ಸಂಗೀತದ ಜೊತೆಗೆ ಪುಟ್ಟಯ್ಯನವರಿಗೆ ಕನ್ನಡ, ಹಿಂದಿ, ಮತ್ತು ಸಂಸ್ಕೃತ ಸಾಹಿತ್ಯವನ್ನು ಕಲಿಸುವ ಏರ್ಪಾಟನ್ನೂ ಕೂಡಾ ಮಾಡಿಕೊಟ್ಟರು.

ಪುಟ್ಟಯ್ಯನವರು ಮೊದಲು ಕಲಿತಿದ್ದು ಸಂಸ್ಕೃತ ಭಾಷೆ. ಬಂಕಾಪುರದಲ್ಲಿದ್ದಾಗ ರೋಣದ ಪುಟ್ಟದೇವರು ಎಂಬ ಗುರುಗಳು ಸಂಸ್ಕೃತ ಭಾಷೆಯ ಪ್ರಾರಂಭಿಕ ಶಿಕ್ಷಣವನ್ನು ಹೇಳಿಕೊಟ್ಟರು. ನಂತರ ಗದಗಿನಲ್ಲಿ ಪಂ.ಪಂಚಾಕ್ಷರಿ ಗವಾಯಿಗಳ ಜತೆ ಬಂದಾಗ ನಂದೀಗವಾಡ ಮಠದ ರಾಜಶೇಖರ ಶಾಸ್ತ್ರೀಗಳ ಪುತ್ರರಾದ ಅಪ್ಪಯ್ಯನವರು ಸಂಸ್ಕೃತದ ಪ್ರಥಮ ಪುಸ್ತಕದ ಹತ್ತು ಪಾಠಗಳನ್ನು ಕಲಿಸಿದರು. ಮುಂದೆ ಸಂಸ್ಕೃತದ ಶಿಕ್ಷಣವನ್ನು ಜರಟಗಿಯ ಸದಾಶಿವಶಾಸ್ತ್ರಿಗಳು ಕಲಿಸಿದರು. ಅವರು ಪಂ.ಪಂಚಾಕ್ಷರಿ ಗವಾಯಿಗಳವರಿಗೆ ಕೀರ್ತನೆ ಮತ್ತು ಪುರಾಣಗಳನ್ನು ಕಲಿಸಲು ಬರುತ್ತಿದ್ದರು. ಸದಾಶಿವ ಶಾಸ್ತ್ರಿಗಳು ಪುಟ್ಟಯ್ಯನವರಿಗೆ ಪುರಾಣ ಕೀರ್ತನೆಗಳ ಜೊತೆಗೆ ಪಂಚಕಾವ್ಯಗಳನ್ನು ಕೂಡ ಕಲಿಸಿದರು. ಪುಟ್ಟಯ್ಯನವರು ಪಂ.ಪಂಚಾಕ್ಷರಿ ಗವಾಯಿಗಳು ಅಂಧರಾಗಿದ್ದರಿಂದ ಈ ಎಲ್ಲ ಶಿಕ್ಷಣವನ್ನು ಮೌಖಿಕವಾಗಿಯೇ ಕಲಿತಿದ್ದರು. ದೃಷ್ಟಿ ಚಕ್ಷುಗಳು ಇಲ್ಲದಿದ್ದರೂ ಅವರ ಜ್ಞಾನ ಚಕ್ಷುಗಳು ಅತಿ ಪ್ರಬಲವಾಗಿದ್ದವು.

ಮುಂದೆ ಪಗಡಿದಿನ್ನಿ ಚಂದ್ರಶೇಖರ ಶಾಸ್ತ್ರಿಗಳು ಪುಟ್ಟಯ್ಯನವರಿಗೆ ಸಂಸ್ಕೃತದ ಉದ್ಗ್ರಂಥಗಳನ್ನು ಕಲಿಸಿ ಕನ್ನಡ ಭಾಷೆಯ ಶಬ್ದಮಣಿದರ್ಪಣ, ಅಲಂಕಾರಶಾಸ್ತ್ರ ಹಾಗೂ ಅಪ್ರತಿಮ ವೀರಚರಿತ್ರೆಯ ಪರಿಚಯ

ಮಾಡಿಕೊಟ್ಟರು. ಹಿಂದಿ ಭಾಷೆಯನ್ನು ಕೂಡಾ ಅವರು ಗದಗಿನಲ್ಲಿದ್ದಾಗಲೇ ಕಲಿತರು. ಹಿಂದಿ ಭಾಷೆಯನ್ನು ಹಿಂದಿ ರಾಷ್ಟ್ರಭಾಷೆ ಎಂಬ ಪಠ್ಯಕ್ರಮದವರೆಗೆ ಕಲಿತರು.

ಈ ಪ್ರಕಾರ ಪಂ. ಪುಟ್ಟಯ್ಯನವರು ತ್ರಿಭಾಷಾ ಪಂಡಿತರಾದರು. ಈ ಎಲ್ಲಾ ಭಾಷೆಗಳನ್ನು ಅವರು ಮೌಖಿಕವಾಗಿಯೇ ಕಲಿತಿರುವದು ಒಂದು ದೈವೀ ಚಮತ್ಕಾರ ಹಾಗೂ ಅವರ ಜ್ಞಾನಪಿಪಾಸೆಯು ಕಾರಣವೆಂದು ಹೇಳಬಹುದು. ಮುಂದೆ ಅಂಧ ಜನರಿಗಾಗಿ ತಯಾರಿಸಲ್ಪಟ್ಟ ಬ್ರೈಲ್ ಲಿಪಿ ಕೂಡ ಅವರು ಕಲಿತುಕೊಂಡರು.

ಬಳ್ಳಾರಿಯಲ್ಲಿ ಗುರುಗಳ ಜೊತೆಗೆ ವಾಸ್ತವ್ಯದಲ್ಲಿದ್ದಾಗ ಮೈಸೂರಿನವರಾದ ಶ್ರೀ ವೆಂಕಟಪ್ಪನವರು ಅವರಿಗೆ ಮೈಸೂರು ಪದ್ಧತಿಯ ಬ್ರೈಲ್ ಲಿಪಿ ಕಲಿಸಿದರು.

ಈ ಲಿಪಿ ಕಲಿತಾದ ಮೇಲೆ ಪುಟ್ಟಯ್ಯನವರು ಬ್ರೈಲ್ ಲಿಪಿ ಪದ್ಧತಿಯಲ್ಲಿ ಶ್ರೀ ರುದ್ರ ಉಪನಿಷತ್ತು, ಭಗವದ್ಗೀತೆ ಹಾಗೂ ಸಂಗೀತದ ಬಗೆಗೆ ಹಲವಾರು ಗ್ರಂಥಗಳನ್ನು ರಚಿಸಿದರು. ಅವರು ಹಿಂದಿ ಭಾಷೆಯಲ್ಲಿ ರಚಿಸಿದ ಕೃತಿಗಳು ಇಂತಿವೆ; ೧.ಶ್ರೀಕಾರಣಿಕ ಕುಮಾರ ಮಹಾಶಿವಯೋಗಿ, ೨. ಸಿದ್ಧಾಂತ ಶಿಖಾಮಣಿ, ೩. ಶ್ರೀ ಬಸವೇಶ್ವರ ಪುರಾಣ, ೪. ಶ್ರೀಸಿದ್ಧಲಿಂಗ ಪುರಾಣ. ಈ ಕೃತಿಗಳಲ್ಲಿ ಶ್ರೀ ಬಸವೇಶ್ವರ ಪುರಾಣವೆಂಬ ಕೃತಿಗೆ೧೯೬೧ ರಲ್ಲಿ ಮಾಜಿ ರಾಷ್ಟ್ರಪತಿಗಳಾದ ಡಾ.ರಾಜೇಂದ್ರ ಪ್ರಸಾದ ಅವರು ಡಾ.ಪುಟ್ಟಯ್ಯನವರಿಗೆ ಪುರಸ್ಕಾರವನ್ನು ನೀಡಿದರು. ಡಾ.ಪುಟ್ಟಯ್ಯನವರು ವಿವಿಧ ಭಾಷೆಯಲ್ಲಿ ರಚಿಸಿದ ಕೃತಿಗಳು ಇಂತಿವೆ.

ಡಾ. ಪುಟ್ಟಯ್ಯನವರು ಸಂಸ್ಕೃತ ಭಾಷೆಯಲ್ಲಿ ಪ್ರವೀಣರಾಗಿದ್ದರು. ಅವರು ಸಂಸ್ಕೃತ ಭಾಷೆಯಲ್ಲಿ ಪಂಚಾಕ್ಷರ ಸುಪ್ರಭಾತ, ಶ್ರೀಮತಕುಮಾರ ಗೀತ, ಲಿಂಗಸೂಕ್ತಂ ಮುಂತಾದ ಕೃತಿಗಳನ್ನು ರಚಿಸಿದ್ದಾರೆ. ಹಾಗೆಯೇ ಕನ್ನಡದಲ್ಲಿ ಶಿವಬಸವೇಶ್ವರ ಪುರಾಣ, ಅಕ್ಕಮಹಾದೇವಿ ಪುರಾಣ, ಶರಣಬಸವೇಶ್ವರ ಪುರಾಣ, ವೀರೇಶ್ವರ ಪುರಾಣ ಮುಂತಾದವುಗಳು.

ಮೇಲೆ ಹೇಳಿದ ಕೃತಿಗಳ ಜೊತೆಗೆ ಡಾ.ಪುಟ್ಟಯ್ಯನವರು ರಚಿಸಿದ ನಾಟಕಗಳ ಸಂಖ್ಯೆ ಕೂಡಾ ವಿಪುಲವಾಗಿವೆ. ಅವರು ರಚಿಸಿದ ನಾಟಕಗಳು ಭಗವಾನ್ ಬಸವೇಶ್ವರ, ಶಿವಶರಣ ಚೆನ್ನಯ್ಯ, ಶಿರಹಟ್ಟಿ ಫಕೀರಸ್ವಾಮಿ, ನೆಲ್ಲೂರು ನೆಂಬಕ್ಕ, ಕೊಟ್ಟೂರು ಬಸವೇಶ್ವರ, ದೇವರ ದುಡ್ಡು, ಸತಿ ಸುಕನ್ಯೆ, ಮಹಾರಥಿ ಭೀಷ್ಮ, ದಾನವೀರ ಶಿರಸಂಗಿಲಿಂಗರಾಜರು, ಸಿದ್ಧರಾಮೇಶ್ವರ ಗುರುದರ್ಶನ ಮುಂತಾದವುಗಳು ಪ್ರಸಿದ್ಧಿ.

ಸಂಗೀತದ ಪ್ರಾರಂಭಿಕ ಶಿಕ್ಷಣವು ಡಾ.ಪುಟ್ಟರಾಜ ಅವರಿಗೆ ಬಾಲ್ಯದಿಂದಲೇ ಅವರ ಸೋದರ ಮಾವ ಶ್ರೀ ಚಂದ್ರಶೇಖರಯ್ಯನವರಿಂದ ಪ್ರಾರಂಭವಾಯಿತು. ಅವರ ಬಳಿ ಹಾರ್ಮೋನಿಯಂ, ತಬಲಾ, ವಾಯಲಿನ ಈ ವಾದ್ಯಗಳನ್ನು ಕಲಿತರು. ಮುಂದೆ ಮಹಾವಿಭೂತಿಗಳಿಂದ ಪಂ.ಪಂಚಾಕ್ಷರಿ ಗವಾಯಿಗಳ ಶಿಷ್ಯತ್ವವನ್ನು ಪಡೆದು ಹಿಂದುಸ್ತಾನಿ ಹಾಗೂ ಕರ್ನಾಟಕ ಸಂಗೀತ ಕಲಿತರು.

ಈ ಎರಡು ಸಂಗೀತ ಪದ್ಧತಿಗಳನ್ನು ಕಲಿತು ಉಭಯಗಾನ ವಿಶಾರದ ಎಂಬ ಬಿರುದನ್ನು ಕೂಡಾ ಅವರು ಪಡೆದರು. ವಾದ್ಯಗಳಲ್ಲಿ ವಾಯಲಿನ ಅವರಿಗೆ ವಿಶೇಷ ಪ್ರಿಯವಾದ್ಯವಾಗಿದೆ.

ತಮ್ಮ ಗುರುಗಳಾದ ಪಂ. ಪಂಚಾಕ್ಷರಿ ಗವಾಯಿಗಳ ಜೊತೆಗೆ ದೇಶದ ನಾನಾ ಭಾಗಗಳಲ್ಲಿ ಸಂಚರಿಸಿ ಅವರು ತಮ್ಮ ಗಾಯನ, ವಾದನದ ಪ್ರತಿಭೆಯನ್ನು ತೋರಿಸಿಕೊಟ್ಟಿದ್ದಾರೆ.

ಪಂ. ಪಂಚಾಕ್ಷರಿ ಗವಾಯಿಗಳ ಹಿಂದೂಸ್ಥಾನಿ ಗಾಯನ ಗ್ವಾಲಿಯರ ಘರಾಣೆ ಶೈಲಿಯಾಗಿದೆ. ಗ್ವಾಲಿಯರ್ ಘರಾಣೆಯ ಎಲ್ಲ ವಿಶೇಷತೆಗಳು ಡಾ.ಪುಟ್ಟಯ್ಯನವರ ಗಾಯನದಲ್ಲಿ ಗೋಚರವಾಗುತ್ತದೆ. ಅವರ ಗಾಯನ ಕಚೇರಿ ನಡೆದಾಗ ಅವರ ಗುರುಗಳೇ ತಬಲಾಸಾಥಿ ನೀಡಿದ್ದುಂಟು.

ಮದ್ರಾಸ್, ಮೈಸೂರು ಹಾಗೂ ಸೊಂಡೂರುಗಳಲ್ಲಿ ಪಂ. ಡಾ. ಪುಟ್ಟರಾಜ ಗವಾಯಿಗಳ ಕಾರ್ಯಕ್ರಮಗಳು ಅವರಿಗೆ ಹಾಗೂ ಅಲ್ಲಿಯ ಶ್ರೋತೃಗಳಿಗೆ ತೃಪ್ತಿ ನೀಡಿದೆ ಎಂದು ಸ್ವತಃ ಹೇಳಿದ್ದುಂಟು.

ಸಾಹಿತ್ಯ ಮತ್ತು ಸಂಗೀತದ ಜೊತೆಗೆ ನಾಟಕಗಳನ್ನು ಪ್ರದರ್ಶಿಸುವುದು ಕೂಡಾ ಅವರ ಒಂದು ಹವ್ಯಾಸ. ಪಂ. ಪಂಚಾಕ್ಷರಿ ಗವಾಯಿಗಳವರು ಶಿವಯೋಗ ಮಂದಿರ ಎಂಬ ಸಂಚಾರಿ ಪಾಠಶಾಲೆ ಪ್ರಾರಂಭಿಸಿದರು. ಇದರ ಪೂರ್ವದಲ್ಲಿ ಗದಗದಲ್ಲಿ ಇನ್ನೂ ಸ್ಥಾಯಿ ರೂಪದಲ್ಲಿ ಪಾಠಶಾಲೆ ಇದ್ದಿರಲಿಲ್ಲ.

ನರಗುಂದದಲ್ಲಿ ಶ್ರೀಕುಮಾರೇಶ್ವರ ಕೃಪಾಪೋಷಿತ ನಾಟ್ಯ ಸಂಘವು ಸೊಲ್ಲಾಪುರದ ಸಿದ್ಧರಾಮೇಶ್ವರ ನಾಟಕದೊಂದಿಗೆ ಪ್ರಾರಂಭವಾಯಿತು. ಗದಗಿನಲ್ಲಿ ಈ ನಾಟಕ ಸಂಘವು ಹೇಮರೆಡ್ಡಿ ಮಲ್ಲಮ್ಮ ಎಂಬ ನಾಟಕದ ೩೭೬ ಪ್ರಯೋಗಗಳನ್ನು ಪ್ರದರ್ಶಿಸಿತು. ಈ ನಾಟಕ ಸಂಘಕ್ಕೆ ಪಂ. ಡಾ. ಪುಟ್ಟರಾಜ ಗವಾಯಿಗಳವರೇ ನಾಟಕ ಸಂಘದ ನೈತಿಕತೆ ಹಾಗೂ ವ್ಯವಸ್ಥಾಪನಾ ಕಾರ್ಯ ನೋಡಿಕೊಳ್ಳುತ್ತಿದ್ದರು.

ಒಟ್ಟಾರೆ ಹೇಳುವುದಾದರೆ ಡಾ.ಪುಟ್ಟರಾಜರ ಪ್ರೇರಣೆಯಿಂದ ಸ್ಥಾಪಿತವಾದ ನಾಟಕ ಸಂಘವು ಕನ್ನಡ ರಂಗಭೂಮಿಗೆ ತನ್ನದೇ ಆದ ಒಂದು ವಿಶಿಷ್ಟ ಕೊಡುಗೆಯನ್ನು ನೀಡಿದೆ. ಇದಕ್ಕೆ ಡಾ.ಪಂ. ಪುಟ್ಟರಾಜ ಗವಾಯಿಗಳು ತಾವೇ ರಚಿಸಿದ ನಾಟಕಗಳನ್ನು ಆರಿಸುತ್ತಿದ್ದರು. ಕನ್ನಡ ನಾಟ್ಯರಂಗದಲ್ಲಿ ಪಂ. ಪುಟ್ಟರಾಜ ಗವಾಯಿಗಳ ಕೊಡುಗೆ ಅತ್ಯಂತ ಶ್ಲಾಘನೀಯ.

ಡಾ. ಪುಟ್ಟರಾಜ ಗವಾಯಿ ಅವರು ರಚಿಸಿ ಆಡಿಸಿದ ನಾಟಕಗಳಿಗೆ ಹಿರಿಯ ನಾಟಕಕಾರರಿಂದ ಹಾಗೂ ಉಚ್ಚ ಅಧಿಕಾರಿಗಳಿಂದ ಪ್ರಶಂಸೆಗಳು ದೊರೆತಿವೆ.

ಡಾ. ಪುಟ್ಟರಾಜ ಗವಾಯಿಗಳು ರೋಣದ ವಾಸ್ತವದಲ್ಲಿದ್ದಾಗ ಸತಿಸುಕನ್ಯ ಎಂಬ ನಾಟಕ ಕೂಡಿಸಿದರು. ಆಗ ಯುದ್ಧದ ದಿನಗಳು ಇದ್ದುದರಿಂದ ಯುದ್ಧದ ವೆಚ್ಚಕ್ಕಾಗಿ ಹಣವನ್ನು ಸಂಗ್ರಹಿಸಲು ಪ್ರತಿ ತಾಲೂಕಿನಲ್ಲಿ ಮಾಮ್ಲೆದಾರರಿಗೆ ಆದೇಶಗಳು ಬಂದವು. ಅಂಥಹ ಸಂಕಷ್ಟ ಸಮಯದಲ್ಲಿ ಕುಶಾಗ್ರ ಬುದ್ಧಿಯುಳ್ಳ ಡಾ.ಪುಟ್ಟರಾಜ

ಗವಾಯಿಯವರು ಸತಿಸುಕನ್ಯ ನಾಟಕವನ್ನು ಪ್ರದರ್ಶಿಸಿ ರೋಣದ ಮಾಮ್ಲೆದಾರರಿಗೆ ಯುದ್ಧದ ಫಂಡಿಗೆ ಹಣ ಕೊಡುತ್ತೇವೆ ಎಂದರು. ಈ ಮಾತುಗಳಿಂದ ಹರ್ಷಿತರಾದ ಮಾಮ್ಲೆದಾರರು ನಾಟಕದ ಪ್ರದರ್ಶನವನ್ನು ಏರ್ಪಡಿಸಿದರು. ಸತಿ ಸುಕನ್ಯನಾಟಕವನ್ನು ನೋಡಲು ಅಂದು ಜನ ಕಿಕ್ಕಿರಿದಿದ್ದರು. ಶ್ರೇಷ್ಠ ನಾಟಕಗಾರರಾದ ಸಿದ್ಧರಾಮಪ್ಪನವರು ಬಂದಿದ್ದರು. ಅವರು ಈ ನಾಟಕವನ್ನು ನೋಡಿ ಬಹಳ ಮೆಚ್ಚಿದರಲ್ಲದೇ೧೦೦ ರೂಪಾಯಿ ಬಹುಮಾನವನ್ನು ಕೂಡಾ ನೀಡಿದರು.

ಸಂಗೀತ ಕ್ಷೇತ್ರದಲ್ಲಿಯೂ ಕೂಡಾ ಡಾ.ಪುಟ್ಟರಾಜ ಗವಾಯಿಯವರ ಕೊಡುಗೆ ಅಪಾರ. ಸಂಗೀತ ಶಾಸ್ತ್ರದ ಬಗೆಗೆ ಪರಿಪೂರ್ಣ ಜ್ಞಾನ ನೀಡುವ ಸಂಗೀತಶಾಸ್ತ್ರ ಜ್ಞಾನ ಎಂದು ಕನ್ನಡದಲ್ಲಿ ಒಂದು ಗ್ರಂಥವನ್ನು ಕೂಡಾ ರಚಿಸಿದ್ದಾರೆ. ಇದು ೧೯೬೦ ರಲ್ಲಿ ಮುದ್ರಿತ. ಈ ಗ್ರಂಥದಲ್ಲಿ ಕೇವಲ ಸಂಗೀತ ಜ್ಞಾನ ಅಷ್ಟೇ ಅಲ್ಲದೆ ಸಂಗೀತ ಮತ್ತು ಅದರಲ್ಲಿಯ ಆಧ್ಯಾತ್ಮ ತತ್ವಗಳ ಅನೇಕ ಅಂಶಗಳನ್ನು ಪ್ರಸ್ತಾಪಿಸಿದ್ದಾರೆ. ಸಾರಾಂಶದಲ್ಲಿ ಅದನ್ನು ಇಲ್ಲಿ ಹೇಳಬೇಕೆಂದರೆ,

ನಾದೋತ್ಪತ್ತಿ ಎಂಬ ಅಧ್ಯಾಯದಲ್ಲಿ ನಾದದ ಉತ್ಪತ್ತಿ ಬಗೆಗೆ ನಿರೂಪಿಸುವಾಗ ಡಾ.ಪುಟ್ಟರಾಜ ಗವಾಯಿಯವರು ನಾದದ ಆಧ್ಯಾತ್ಮದ ತತ್ವಗಳ ಬಗೆಗೆ ವಿಸ್ತಾರವಾಗಿ ಹೇಳಿದ್ದಾರೆ.

ನಾದವು ಸಂಗೀತಕ್ಕೆ ಬುನಾದಿಯಾಗಿದೆ. ಈ ಸಮಸ್ತ ವಿಶ್ವಕ್ಕೇ ಮೂಲವಾಗಿದೆ. ನಾದ ಶರೀರವಾಗಿರತಕ್ಕಂತಹ ಶಂಕರನು ಆನಂದ ಸ್ವರಾಲಾಪನೂ, ಸಾಮದೇವಸಾರನೂ, ಶ್ರೇಷ್ಠನೂ ಆಗಿರುವನು. ತನ್ನ ಸದ್ಯೋಜಾತಾದಿ ಪಂಚಮುಖಗಳಿಂದ ಹುಟ್ಟಿದ ಸಾ, ರೆ, ಗ, ಮ, ಪ, ದ, ನಿ ಎಂಬ ಸಪ್ತಸ್ವರಗಳ ವಿದ್ಯೆಯಾದ ಸಂಗೀತದಲ್ಲಿ ಆಸಕ್ತನಾಗಿ ಇರುವನು. ಇಂತಹ ಶಿವನನ್ನು ಮನಸ್ಸಿನಿಂದಲೂ ಸ್ಮರಿಸುತ್ತೇನೆ.

ಸೃಷ್ಟಿಯ ಆದಿಯಲ್ಲಿ ಶಿವನ ಮುಖದಿಂದ ಉತ್ಪನ್ನವಾದ ಓಂಕಾರವೇ ಶಿವನ ಕಾರಣ ಶರೀರವಾಯಿತು. ಅದುವೇ ನಾದವಿಸ್ತಾರಕ್ಕೆ ಮೂಲವಾಯಿತು.

ಓಂಕಾರ ವಿಶಿಷ್ಟವಾದ ಪಂಚಾಕ್ಷರ ಮಹಾಮಂತ್ರವೇ ಅಂದರೆ ಶರಾಕ್ಷರ ಮಂತ್ರವೇ ಜಗತ್ತಿನ ಮೂಲವಾದ ಆರು ತತ್ವಗಳಿಗೆ ಮುಖ್ಯ ಕಾರಣವಾಯಿತು. ಅಂತೆಯೇ ಜಗತ್ತೆಲ್ಲವೂ ನಾದಸ್ವರೂಪವಾಯಿತು.

ಶಿವಶಕ್ತಿ ಸ್ವರೂಪವಾದಂತಹ ಓಂಕಾರ, ಉಕಾರ, ಆಕಾರಗಳಿವೆ. 'ಆ' ಕಾರ, 'ಉ'ಕಾರಗಳೇ ನಾದಬಿಂದು ಕಲೆಗಳು, ಆ ನಾದ ಬಿಂದು ಕಲೆಗಳು ಬ್ರಹ್ಮಾಂಡದೊಳಗಿರುವಂತಹ ಶರೀರದಲ್ಲಿ ಪಿಂಡಾಣದಲ್ಲಿವೆ.

ಶೃತಿ ಸ್ವರೋತ್ಪತ್ತಿ ಜ್ಞಾನ ಎಂಬ ಎರಡನೇ ಅಧ್ಯಾಯದಲ್ಲಿ ಡಾ.ಪುಟ್ಟರಾಜ ಗವಾಯಿಯವರು ಈ ಪ್ರಕಾರ ಹೇಳಿದ್ದಾರೆ.

"ಶೃತಿ ಎಂದರೆ ಸ್ವರದ ಶಕ್ತಿ. ಶೃತಿಗಳಿಂದಲೇ ಸ್ವರಗಳ ಉತ್ಪತ್ತಿ. ಈ ಶೃತಿಗಳಿಗೆ ಆಧಾರವಿಲ್ಲದೇ ಸ್ಥಿತಿ ಇಲ್ಲವಾದ ಕಾರಣ ಇದಕ್ಕೆ ಶಕ್ತಿ ಎಂಬ ಹೆಸರು ಬಂದಿದೆ. ಹೇಗೆ ನಮ್ಮ ಆತ್ಮಶಕ್ತಿಗೆ ಆತ್ಮವೇ ಹೇಗೆ ಆಧಾರವಾಗಿದೆಯೋ ಹಾಗೆ ಅಂತಃಕರಣ ಶಕ್ತಿಗೆ ಹಾಗೂ ನಾದದ ಶಕ್ತಿಯಾದ ಶೃತಿಗೆ ನಾದವೇ ಆಧಾರವಾಗಿದೆ. ನಾದವೇ ಬ್ರಹ್ಮ, ಬ್ರಹ್ಮದಿಂದ ಉತ್ಪತ್ತಿ ಆದ ಸ್ವರವೇ ಪ್ರತಿಯೊಂದು ತತ್ವಗಳಲ್ಲಿ ಆಧ್ಯಾತ್ಮಿಕ ತತ್ವಗಳನ್ನು ಮೂಡಿಸಿ, ಸಂಗೀತದ ಮಾಧ್ಯಮದಿಂದ ಸಹಜವಾಗಿ ಪ್ರಾಪ್ತವಾಗುವಂತಹ ಮೋಕ್ಷ ಮಾರ್ಗದ ಹಾದಿಯನ್ನು ತೋರಿಸಿಕೊಟ್ಟಿವೆ."[೩೭]

ಸಂಗೀತದ ಶಾಸ್ತ್ರದ ಜೊತೆಗೆ ಡಾ. ಪುಟ್ಟರಾಜ ಗವಾಯಿಯವರು, ಸಂಗೀತದ ಕಲಾಪಕ್ಷದಲ್ಲಿಯೂ ಕೂಡಾ ಸಾಕಷ್ಟು ಕೊಡುಗೆಯನ್ನು ನೀಡಿದ್ದಾರೆ. ಇವರು ರಚಿಸಿದ ಹಿಂದೂಸ್ತಾನಿ ಗಾನಸುಧಾ ಎಂಬ ಗ್ರಂಥ ಎರಡು ಭಾಗಗಳಲ್ಲಿ ಪ್ರಕಟವಾಗಿದೆ. ಮೊದಲನೆಯ ಹಾಗೂ ಎರಡನೆಯ ಭಾಗ ಕೂಡಿ ಒಟ್ಟು ೬೬ ರಾಗಗಳಲ್ಲಿ ತಾವೇ ಹೊಸಕೃತಿಗಳನ್ನು ರಚಿಸಿ ತಮ್ಮದೇ ಆದ ವೈಶಿಷ್ಟ್ಯ ಪೂರ್ಣ ಸ್ವರಪದ್ಧತಿಯಲ್ಲಿ ಅವುಗಳನ್ನು ಸ್ವರಾಂಶವನ್ನು ಮಾಡಿದ್ದಾರೆ. ಈ ಹೊಸ ಸ್ವರಲಿಪಿ ಪದ್ದತಿಗೆ ಅವರು ಪಂಚಾಕ್ಷರಿ ಸ್ವರ ಲಿಪಿ ಎಂದು ನಾಮಕರಣ ಮಾಡಿದ್ದಾರೆ.

ಶ್ರೀಹಾನಗಲ್ ಕುಮಾರ ಸ್ವಾಮಿಗಳ ಪ್ರೇರಣೆಯಿಂದ ಪಂ. ಪಂಚಾಕ್ಷರಿ ಗವಾಯಿಗಳು ೧೯೧೪ ನೇ ಇಸ್ವಿಯಲ್ಲಿ ಬಸವ ಜಯಂತಿಯ ದಿನದಂದು ರೋಣ ತಾಲೂಕಿನ ನಿಡುಗುಂದಿ ಕೊಪ್ಪದ ಶಿವಯೋಗಮಂದಿರದಲ್ಲಿ ಸಂಗೀತ ಶಾಲೆ ಸ್ಥಾಪನೆ ಮಾಡಿದರು.

ಪ್ರಾರಂಭದಲ್ಲಿ ಈ ಶಾಲೆಯಲ್ಲಿ ೯-೧೦ ಜನ ವಿದ್ಯಾರ್ಥಿಗಳು ಸಂಗೀತ ಶಿಕ್ಷಣಕ್ಕಾಗಿ ಬರುತ್ತಿದ್ದರು. ಮುಂದೆ ಈ ಶಾಲೆ ಮಲಯಹಾರ ತೀರಕ್ಕೆ ಬಂದು ಅಲ್ಲಿಯ ಶಿವಯೋಗಿ ಮಂದಿರದಲ್ಲಿ ಸಂಗೀತ ಶಿಕ್ಷಣವನ್ನು ನೀಡಲು ಪ್ರಾರಂಭಿಸಿತು. ಆಗ ಇನ್ನೂ ಹೆಚ್ಚಿನ ಸಂಖ್ಯೆಯಲ್ಲಿ ಸಂಗೀತ ವಿದ್ಯಾರ್ಥಿಗಳು ಬರುತ್ತಿದ್ದರು.

ಮುಂದೆ ಶ್ರೀ ಕುಮಾರಸ್ವಾಮಿಗಳ ಆದೇಶದ ಮೇರೆಗೆ ಪಂ. ಪಂಚಾಕ್ಷರಿ ಗವಾಯಿಗಳು ಸಂಚಾರಿ ಸಂಗೀತ ಪಾಠಶಾಲೆಯನ್ನು ಸ್ಥಾಪಿಸಿ ಕನ್ನಡ ನಾಡಿನಲ್ಲೆಲ್ಲಾ ಸಂಚರಿಸಿ ತಮ್ಮ ಸಂಗೀತದ ಜ್ಞಾನ ನೀಡಲು ಪ್ರಾರಂಭಿಸಿದರು. ಅವರ ಜೊತೆ ಪಂ. ಪುಟ್ಟಯ್ಯನವರು ಕೂಡಾ ಸಂಗೀತ ವಿದ್ಯಾದಾನವನ್ನು ಮಾಡುತ್ತಿದ್ದರು. ಅನೇಕ ಭಕ್ತರು ಹಾಗೂ ದಾನಿಗಳೂ ಈ ಸಂಚಾರಿ ಪಾಠಶಾಲೆಗೆ ಸಹಾಯವನ್ನು ನೀಡುತ್ತಿದ್ದರು.

ಸಂಗೀತ ಪಾಠಶಾಲೆಗೆ ಬರುವ ಬಡ ವಿದ್ಯಾರ್ಥಿಗಳು ವಾರದ ಮನೆಯಲ್ಲಿ ಊಟದ ವ್ಯವಸ್ಥೆ ಮಾಡಿಕೊಂಡು ಸಂಗೀತ ಶಿಕ್ಷಣವನ್ನು ಪಡೆಯುತ್ತಿದ್ದರು. ಇಂಥ ಈ ಸಂಗೀತ ಪಾಠಶಾಲೆ ಒಂದು ಊರಿನಲ್ಲಿ ೨-೩ ವರ್ಷಗಳ ಕಾಲ ಇದ್ದು ಮುಂದೆ ತಮ್ಮ ಸಂಚಾರವನ್ನು ಕೈಕೊಳ್ಳುತ್ತಿತ್ತು. ಕರ್ನಾಟಕದ ನಾನಾ ಭಾಗಗಳಲ್ಲಿ ೨೨-೨೩ ವರ್ಷಗಳವರೆಗೆ ಸಂಚರಿಸಿ ಸಂಗೀತ ವಿದ್ಯಾದಾನ ಮಾಡಿತು.

---

೩೭. ಶೃತಿ ಸ್ವರೋತ್ಪತ್ತಿ ಜ್ಞಾನ: ಡಾ. ಪುಟ್ಟರಾಜ ಗವಾಯಿಗಳು, ಪುಟ-೧೮

ಮುಂದೆ ಈ ಸಂಚಾರ ಪಾಠಶಾಲೆಗೆ ಹಣದ ಕೊರತೆ ಉಂಟಾಯಿತು. ಸಂಗೀತ ಶಿಕ್ಷಣದ ದೃಷ್ಟಿಯಿಂದ ಈ ಪಾಠಶಾಲೆಯ ೨ ಶಾಖೆಗಳು ನಿರ್ಮಿತವಾದವು. ಮೊದಲನೆಯದು ಸ್ಥಾಯಿ ಸಂಗೀತ ಪಾಠ ಶಾಲೆ ಹಾಗೂ ಎರಡನೆಯದು ಸಂಚಾರಿ ಸಂಗೀತ ಪಾಠಶಾಲೆ.

ಮೊದಲಿಗೆ ಈ ಶಾಲೆ ಕೇವಲ ಅಂಧರ ಸಲುವಾಗಿಯೇ ಪ್ರಾರಂಭವಾಯಿತು. ಆದರೆ ಮುಂದೆ ಕಾಲಾಂತರದಿಂದ ಪಂ.ಪಂಚಾಕ್ಷರಿ ಗವಾಯಿಗಳಿಗೆ ವಯಸ್ಸಾದ ಮೇಲೆ ಹಾಗೂ ನಾಟಕದ ಕಂಪನಿ ಪ್ರಾರಂಭವಾದ ಮೇಲೆ ಕೇವಲ ಅಂಧರ ಮೇಳದಿಂದ ತೊಂದರೆ ಆಗಲು ಪ್ರಾರಂಭವಾಯಿತು. ಆದ್ದರಿಂದ ಆಶ್ರಮದ ಶಾಲೆಯಲ್ಲಿ ಕಣ್ಣಿದ್ದವರು ಹಾಗೂ ದೀನ ಅನಾಥರಿಗೆ ಕೂಡ ಪ್ರವೇಶ ನೀಡಲು ಪ್ರಾರಂಭಿಸಿದರು. ವೀರೇಶ್ವರ ಪುಣ್ಯಾಶ್ರಮಕ್ಕೆ ಕನಿಷ್ಠ ಪಕ್ಷ ಎಸ್. ಎಸ್. ಎಲ್.ಸಿ. ಪರೀಕ್ಷೆ ಪಾಸಾಗಬೇಕು ಎಂದಿತ್ತು. ಆದರೆ ಮುಂದೆ ಕೇವಲ ಓದು ಬರಹ ಬರುವಂಥ ವಿದ್ಯಾರ್ಥಿ, ವಿದ್ಯಾರ್ಥಿನಿಯರಿಗೂ ಕೂಡ ಪ್ರವೇಶ ನೀಡಲು ಪ್ರಾರಂಭವಾಯಿತು.

ವೀರೇಶ್ವರ ಪುಣ್ಯಾಶ್ರಮ ಸಂಗೀತ ಪಾಠಶಾಲೆಯಲ್ಲಿ ಕಲಿಯಲು ಬರುವ ವಿದ್ಯಾರ್ಥಿಗಳಿಗೆ ಕಟ್ಟುಪಾಡು ನಿಯಮಗಳನ್ನು ನಿರ್ಮಿಸಲಾಯಿತು. ಅವುಗಳು ಯಾವುವೆಂದರೆ ವಿದ್ಯಾರ್ಥಿಗಳು ನಿರವೇಸನೆ ಇರಬೇಕು. ಆಶ್ರಮದಲ್ಲಿ ಬೇಕಾಗುವ ಸೇವೆಗಳನ್ನು ಮಾಡಿ ಕನಿಷ್ಠ ಆರು ವರ್ಷಗಳವರೆಗೆ ಇದ್ದು ವಿದ್ಯಾವಂತರಾದ ಮೇಲೆ ಹೋಗಬಹುದು. ಈ ಪಾಠಶಾಲೆಯಲ್ಲಿ ಪ್ರವೇಶ ಪಡೆಯಬೇಕಾದರೆ ಜಾತಿ ಬೇಧವಿಲ್ಲದೇ ಪ್ರವೇಶ ದೊರೆಯುತ್ತದೆ. ವಿದ್ಯಾರ್ಥಿಗಳು ಪ್ರವೇಶ ಪಡೆಯುವ ಸಂಖ್ಯೆಯ ಮಿತಿ ನೂರು ಇದ್ದರೂ ಸುಮಾರು ನೂರ ಐವತ್ತು ವಿದ್ಯಾರ್ಥಿಗಳು ಪ್ರವೇಶ ಪಡೆಯುತ್ತಾರೆ. ಮತ್ತು ಒಳ್ಳೆಯ ಸಂಗೀತಗಾರರಾಗಿ, ಕೀರ್ತನಗಾರರಾಗಿ ಹಾಗೂ ಪ್ರವಚನಗಾರರಾಗಿ ಹೊರಬೀಳುತ್ತಾರೆ.

ಈ ಪಾಠಶಾಲೆಗೆ ಅನೇಕ ಉದಾರ ದಾನಿಗಳು ಹಾಗೂ ಭಕ್ತರು ಕಾಳು, ಕಡಿ, ಧನ ಸಹಾಯ ನೀಡುತ್ತಾರೆ. ಇದರಿಂದಲೇ ಇದರ ಸರ್ವತೋಮುಖ ವ್ಯವಸ್ಥೆ ನಡೆಯುತ್ತದೆ.

ಡಾ. ಪುಟ್ಟರಾಜ ಗವಾಯಿಗಳವರಿಗೆ ಅವರು ಮಾಡಿದಂತಹ ಸಂಗೀತ ಸೇವೆ, ಸಮಾಜ ಸೇವೆ, ಆಧ್ಯಾತ್ಮ, ಸಾಹಿತ್ಯಸೇವೆ, ನಿಷ್ಕಳಂಕ ಜೀವನ, ದೀನ, ಅಂಧ ಅನಾಥರಿಗೆ ತೋರಿದ ಮಮತೆಯನ್ನು ಪರಿಗಣಿಸಿ ದೊರೆತಂತಹ ಸನ್ಮಾನ ಹಾಗೂ ಪ್ರಶಸ್ತಿಗಳ ಸಂಖ್ಯೆ ಅಪಾರ. ಶಿಷ್ಯವೃಂದ, ಭಕ್ತಜನರು, ವಿದ್ವಾಂಸರು, ದೇಶದ ಅಧಿಕಾರಿಗಳು, ಸಂಘ ಸಂಸ್ಥೆಗಳು ಡಾ.ಪುಟ್ಟರಾಜ ಗವಾಯಿಯವರಿಗೆ ನೀಡಿದ ನಮನಯುಕ್ತ ಸನ್ಮಾನಗಳು ಹಾಗೂ ಪ್ರಶಸ್ತಿಗಳು ಇಂತಿವೆ :

ಭಾರತದ ಪ್ರಥಮ ರಾಷ್ಟ್ರಪತಿಯಾದ ಡಾ.ಬಾಬುರಾಜೇಂದ್ರ ಪ್ರಸಾದ್ ಇವರಿಂದ ಪುಟ್ಟರಾಜ ಗವಾಯಿಯವರು ಹಿಂದಿಯಲ್ಲಿ ಬರೆದ ಬಸವಪುರಾಣ ಎಂಬ ಗ್ರಂಥಕ್ಕೆ ಪ್ರಶಸ್ತಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್ ಪದವಿ. ಅಷ್ಟೇ ಅಲ್ಲದೇ ಅನೇಕ ಸಂಘ ಸಂಸ್ಥೆಗಳಿಂದ ಸಿಕ್ಕಿದ ಅಪಾರ

ಪ್ರಶಸ್ತಿಗಳು ಹಾಗೂ ಬಿರುದುಗಳು : ಸಮಾಜ ಸೇವಾ ದುರೀಣ, ತ್ರಿಭಾಷಾ ಕವಿರತ್ನ, ಗಂಧರ್ವ, ಗಾನಯೋಗಿ, ನಾದಬ್ರಹ್ಮ, ಸಂಗೀತಸಾಹಿತ್ಯ ಸಾರ್ವಭೌಮ, ಸಮಾಜ ಸೇವಾ ಧುರೀಣ, ಕನ್ನಡ ವರಪುತ್ರ, ಸಂಗೀತ ಸಾಹಿತ್ಯ ಕಲಾಸಿದ್ಧರು, ಜ್ಞಾನಯೋಗಿ ಮುಂತಾದವು.

ಒಟ್ಟಾರೆ ಹೇಳುವುದಾದರೆ ಪಂ. ಡಾ.ಪುಟ್ಟರಾಜ ಗವಾಯಿಯವರು ಸಂಗೀತ ಪ್ರಪಂಚಕ್ಕೆ ಅಂದರೆ ಶಾಸ್ತ್ರ ಮತ್ತು ಕ್ರಿಯಾತ್ಮಕ ಸಂಗೀತ ಕಲೆಗೆ ನೀಡಿದ ಕೊಡುಗೆ ಅಪೂರ್ವವಾಗಿದೆ. ಅವರ ನಡೆ ನುಡಿ ಆಶ್ರಯ ಹಾಗೂ ಸಂಗೀತವನ್ನು ಆಲಿಸಿದ ಜನರು ಧನ್ಯರು.

### ೫.೭. ಡಾ. ಗಂಗೂಬಾಯಿ ಹಾನಗಲ್

ಮೂರ್ತಿ ಸಣ್ಣದು, ಕೀರ್ತಿ ದೊಡ್ಡದು ಎಂಬ ನಾಣ್ನುಡಿ ಗಂಗೂಬಾಯಿ ಹಾನಗಲ್ ಅವರ ನಿದರ್ಶನದಿಂದಲೇ ನಿರ್ಮಾಣವಾಯಿತೇನೋ ಎನ್ನುವಂತಿದೆ. ಪ್ರಥಮ ಸಲ ದಿಲ್ಲಿ, ಕಲಕತ್ತಾಗಳಲ್ಲಿ ಸಂಗೀತ ಬೈಠಕಿಗೆಂದು ಆಮಂತ್ರಿಸಲ್ಪಟ್ಟಾಗ ಇವರ ಪುಟ್ಟ ಆಕೃತಿ, ಸರಳ ನಡೆ, ಸಾದಾವೇಷ ನೋಡಿ ಇಂತಹ ಅಖಿಲ ಭಾರತ ಖ್ಯಾತಿಯ ಕಲಾವಿದೆ ಇವರೇಯೆ? ಎಂದು ಜನ ಅಚ್ಚರಿಪಟ್ಟುಕೊಂಡಿದ್ದಿದೆ.

ಅವರು ಜನಿಸಿದ್ದು ಮಾರ್ಚ್ ೫, ೧೯೧೩ ಧಾರವಾಡದಲ್ಲಿನ ಶುಕ್ರವಾರ ಪೇಟೆಯಲ್ಲಿ. ನಡೆಯಂತೆ ನುಡಿ ಸರಳ ಇದು ಗಂಗೂಬಾಯಿ ಹಾನಗಲ್ ಅವರ ಇರವು. ಅವರ ಮನೆ ಅವರ ಮಟ್ಟಕ್ಕೆ ಚಿಕ್ಕದೆ. ಆದರೆ ಅವರ ಮನ ದೊಡ್ಡದು. ಮನೆ ತುಂಬಾ ಚಿಕ್ಕ ಮಕ್ಕಳು. ದೊಡ್ಡ ಮಕ್ಕಳು. ಚಿಕ್ಕಮಕ್ಕಳಿಗೆ ಅಜ್ಜಿಯಾಗಿ, ದೊಡ್ಡಮಕ್ಕಳಿಗೆ ತಾಯಿಯಾಗಿ, ಮನೆಗೆ ಬಂದ ಅತಿಥಿಗಳಿಗೆ ಉದಾರ ಅತಿಥೇಯರಾಗಿ ಅಚ್ಚೆ, ಅಕ್ಕರೆ ಅಂತಃಕರಣಗಳ ಸಾಕಾರ ಮೂರ್ತಿಯಾಗಿ ಕಂಡುಬರುತ್ತಾರೆ ಗಂಗೂಬಾಯಿ.

ಊರುದಾಟಿ, ಗಡಿದಾಟಿ, ದೇಶದಾಟಿ ತಮ್ಮ ಹೆಸರನ್ನು ಹಸಿರಾಗಿ ನಿಲ್ಲಿಸಿದ ಪ್ರಖ್ಯಾತಿಯುಳ್ಳ ಈ ಭಾರತೀಕಂಠವನ್ನು ಯಾರಾದರೂ ಮೊದಲ ಬಾರಿಗೆ ಪರಿಚಯ ಮಾಡಿಕೊಳ್ಳಲಪೇಕ್ಷಿಸಿದರೆ ಈ ಮಹಾ ವ್ಯಕ್ತಿಯನ್ನು ಹೇಗೆ ಕಾಣುವುದು, ಹೇಗೆ ಮಾತನಾಡಿಸುವುದು, ಏನು ಆಡಿದರೆ ಏನು ಅಪಚಾರವಾದೀತೊ ಎಂದೆಲ್ಲ ದಿಗಿಲುಗೊಳ್ಳಬೇಕಿಲ್ಲ. ಸಣ್ಣವರನ್ನು ತಮ್ಮನಂತೆ ದೊಡ್ಡವರನ್ನು ಅಣ್ಣನಂತೆ ಆತ್ಮೀಯವಾಗಿ ಮಾತನಾಡಿಸುವ ನಿರಾಡಂಬರದ ನಿರಹಂಕಾರದ ಹೃದಯವಂತಿಕೆ ಅಕ್ಕನದು. ಈ ಸ್ವರ ಶಿರೋಮಣಿ ದೇಶ-ವಿದೇಶಗಳನ್ನು ಸುತ್ತಾಡಿ ಬಂದರೂ ದೇಶಸ್ಥ ಮಹಿಳೆಯಂತೆ ಹೊಟ್ಟೆ ತುಂಬ ಮಾತನಾಡುತ್ತಾರೆ. ಅದರಲ್ಲಿ ಕೃತ್ರಿಮದ ಕಸರು ಸಿಗದು, ಹೃದಯದಾಳದಿಂದ ಹೊರ ಹೊಮ್ಮಿ ಬರುವ ಅವರ ಸಪ್ತ ಸ್ವರಗಳಂತೆ ಅವರ ಮಾತೂ ಎರಡಿಲ್ಲದ ಭಾವದಿಂದ ಎದ್ದು ಬರುತ್ತದೆ. ಈ ಪ್ರಾಂಜಲಪಣದಿಂದ ನಮ್ಮ ಪ್ರಾಣಸ್ಥಾನವನ್ನು ಮುಟ್ಟುತ್ತವೆ.

ಗಂಗೂಬಾಯಿ ಅವರ ಮನೆಯಲ್ಲಿ ಎಲ್ಲರೂ ಅಷ್ಟೇ ಹಿರಿಯ ಅಕ್ಕನ ಹಾಗೆಯೇ. ಮಗಳು ದಿವಂಗತೆ ಕೃಷ್ಣೆ ತನ್ನ ಪ್ರತಿಭೆ, ಪರಿಣತಿಗಳಿಂದ ತಾಯಿಯ ಸಂಗೀತ ಸಾಧನೆಯ ಸ್ಥಾನಮಾನಗಳನ್ನು ಸಮೀಪಿಸುವ ಪ್ರಗತಿ ಇದ್ದರೂ ಸಾಮಾಜಿಕ ರೀತ್ಯಾ ತಾಯಿಯಷ್ಟೇ ಸರಳ, ತಾಯಿಯಷ್ಟೇ ಸೋಶಿಯಲ್. ಎರಡನೆಯವರು ನಾನಿ ಸರಕಾರಿ ಪಿಡಬ್ಲುಡಿ. ಅಧಿಕಾರಿ. ಈಗ ನಿವೃತ್ತರಾಗಿದ್ದಾರೆ. ಹಿರಿಯ ಮಗ ಬಾಬಣ್ಣ ಖಾಸಗಿ ದಂಧೆಯಾದುದರಿಂದ ಸಾಮಾನ್ಯವಾಗಿ ಮನೆಯಲ್ಲಿ ಸಿಗುತ್ತಾರೆ. ಏನಾದರೊಂದು ಸಾರ್ವಜನಿಕ, ಸಾಂಸ್ಕೃತಿಕ ಚಟುವಟಿಕೆಯಲ್ಲಿ ತಮ್ಮನ್ನು ತಾವೇ ತೊಡಗಿಸಿಕೊಂಡಿರುತ್ತಾರೆ.

''ಇವರ ಮನೆ ಒಳಹೋಗುತ್ತಿದ್ದಂತೆ ಎಡಗಡೆ ಒಂದು ಸಿಟಿಂಗ ರೂಂ ಇದೆ ಅಷ್ಟೆ. ಈ ಕೋಣೆಯಲ್ಲೆ ಗುರು ಸವಾಯಿಗಂಧರ್ವರು ತಮ್ಮ ಆಯುಷ್ಯದ ಕೊನೆಯ ಭಾಗದಲ್ಲಿ ಪಾರ್ಶ್ವವಾಯುಬಾಧಿತರಾಗಿ ಶಿಷ್ಯೆಯ ಶುಶ್ರೂಷೆಯಲ್ಲಿದ್ದರು. ಈಗ ಅವರ ಸುಂದರ ಮುಖಮುದ್ರೆಯ ದೊಡ್ಡ ಫೋಟೋ ಇದೆ ಅಲ್ಲಿ. ಒಳಗಡೆ ನಡುಮನೆಯಲ್ಲಿ ಒಂದು ಗೋಡೆಗೆ ಹಿರಿಯ ಗುರುಗಳಾದ ಖಾನ್ ಸಾಹೇಬ ಅಬ್ದುಲ್ ಕರೀಮಖಾನರ ಫೋಟು. ಇನ್ನೊಂದು ಗೋಡೆಗೆ ಯಾರ ತೊಡೆಯ ಮೇಲೆ, ಯಾರ ಎದೆಯ ಸಂಗೀತ ಸುಧೆಯನ್ನು ಸವಿದು ಈ ಕೋಗಿಲೆಯ ಮರಿ ಬೆಳದುದೋ ಆ ತಾಯಿ ಅಂಬಾಬಾಯಿಯ ಫೋಟೋ. ಈ ಮೂರು ಮೂರ್ತಿಗಳೆ ಗಂಗೂಬಾಯಿ ಅವರ ಪೂಜನೀಯ ದತ್ತಾತ್ರಯ ಅವತಾರ. ಈ ಮೂರು ಮಹಾವ್ಯಕ್ತಿಗಳು ಯಾವ ಮನೆಯಲ್ಲಿ ತಾಯಿ ಮಕ್ಕಳಿಂದ ಪೂಜಿಸಲ್ಪಡುತ್ತಾರೊ ಆ ಮನೆಯೆ ಹುಬ್ಬಳ್ಳಿಯ ಸ್ಥಾನಿಕ ಕಿರಾನಾ ಘರಾಣೆ''[೩೮] ಎಂದು ಶ್ರೀ ಎನ್ಕೆಯವರು ಬರೆಯುತ್ತಾರೆ.

ಗಂಗೂಬಾಯಿ ಅವರ ಮನೆಯ ಎಡಗಡೆಗಿರುವುದು ಸೋದರಮಾವ ರಾಮಣ್ಣನವರ ಮನೆ ! ಇಂದು ಆ ಮನೆಯಲ್ಲಿ ಆ ಮನೆಯೊಡೆಯನಿಲ್ಲ. ತಾಯಿಯ ತರುವಾಯ ಈ ಸೋದರಮಾವನೆ ಈ ಸೋದರಸೊಸೆಯಲ್ಲಿ ಅಂಕುರಿಸಿ ಮೊಳೆತು ಚಿಗಿಯುತ್ತಿದ್ದ ಸಂಗೀತ ವೃಕ್ಷಕ್ಕೆ ನೀರೆರೆದು ಬೆಳೆಯಿಸಿದ ಮಾತೃಶಕ್ತಿ.

ಈ ವಯಸ್ಸಿನಲ್ಲೂ ಗಂಗೂಬಾಯಿಯವರಿಗೆ ಒಂಟಿತನದ ನೋವು ಬಾಧೆ ಕೊಡುತ್ತದೆ. ತನಗಾಗಿ ಈ ಮನೆಯ ನೆರಳು ಮಾಡಿಕೊಟ್ಟವರು ಕೈ ಹಿಡಿದ ಯಜಮಾನರು ಗುರುರಾವ ಕೌಲಗಿ ಅವರು! ಆ ಮನೆ ಅವರ ನೆರಳು. ಈ ಪರಿವಾರ ಅವರ ತಿರುಳು. ಈ ವಾತ್ಸಲ್ಯ ಪಾರಿಜಾತದ ಮರ ಅವರ ಕರುಳು. ಇಂದು ಅವರು ಇಲ್ಲ. ತಾಯಿ, ಗುರು, ಮಾಮಾ, ಯಜಮಾನರು ಯಾರು ಇಲ್ಲದ ಅನಾಥ ಪ್ರಜ್ಞೆ ಗಂಗೂಬಾಯಿ ಅವರಿಗೆ ಯಾವುದೇ ಪ್ರಶಸ್ತಿ ದೇವಪ್ರೇತವಾಗಿ ಬಂದಾಗ ಅವರನ್ನು ಕಾಡುತ್ತದೆ. ಸಂತೋಷದ ಸಮಯದಲ್ಲೂ ಕಂಬನಿ ಚೆಲ್ಲುವಂತೆ ಮಾಡುತ್ತದೆ. ೧೯೭೧ ರ ಮಾತು ಜನವರಿ ೨೫ ರ ರಾತ್ರಿ ಸೋದರಮಾವ ರಾಮಣ್ಣನೊಡನೆ ಗಂಗೂಬಾಯಿ

---

೩೮. ಕಲಾಚೇತನ : ಶ್ರೀ ಎನ್ಕೆ, ಪುಟ-೨೬೨

ರೇಡಿಯೋ ಕೇಳುತ್ತ ಕುಳಿತ್ತಿದ್ದರು. ಗಣರಾಜ್ಯದ ಪ್ರಶಸ್ತಿ ಘೋಷಣೆ ಬರಲಿಲ್ಲ. ಬಹುಶಃ ತಮಗೆ ಅದು ಸಿಕ್ಕಿರಲಿಲ್ಲವೆಂದೇ ಗಂಗೂಬಾಯಿ ಕಲ್ಪನೆ. ಜನ ಏನಾದರೊಂದು ವದಂತಿ ಹಬ್ಬಿಸುತ್ತಾರೆ ಎಂದು ಸ್ವಲ್ಪ ಬೈದುಕೊಂಡು ನಿದ್ದೆ ಹೋದರು. ರಾತ್ರಿ ಹನ್ನೆರಡುವರೆ! ಹೊರಗೆ ಸೈಕಲ್ ಗಂಟೆಯ ಶಬ್ಧ. ಟೆಲಿಗ್ರಾಂ! ಅಡ್ಡ ಬರಸಿ ಬಾಗಿಲು ತೆರೆದರು. ರಾಮಣ್ಣ ತಮ್ಮ ಮನೆಯಿಂದ ಧಾವಿಸಿ ಬಂದರು. ಸ್ವತಃ ಪ್ರಧಾನಿ ಇಂದಿರಾಗಾಂಧಿ ಅವರಿಂದ ತಂತಿ! ಪದ್ಮ ಭೂಷಣ ಪ್ರಶಸ್ತಿಗಾಗಿ ಅಭಿನಂದನೆಗಳು ಎಂದಿತ್ತು! ಇಬ್ಬರಿಗೂ ಸಂತೋಷವಾಗಿ ಹಬ್ಬದ ನಗೆ ಉಬ್ಬಿ ಬರಬೇಡವೆ ? ಇಲ್ಲ. ಇಬ್ಬರೂ ಕಣ್ಮರೆಯಾದ ಹಿರಿಯ ಜೀವಗಳನ್ನು ನೆನೆದು ಕಣ್ಣೀರು ಹಾಕತೊಡಗಿದರು. ತಾಯಿ ಅಂಬಾಬಾಯಿ ಜೀವಂತ ಮೂರ್ತಿ ಕಣ್ಣೆದುರಿಗೆ ಬಂದು ಕಣ್ಣೀರಧಾರೆ ಧಾರಾಕಾರವಾಗಿ ಹರಿಯಿತು. ಇದು, ಸಂವೇದನೆಗಳ ಮೂರ್ತಿ, ಗಂಗೂಬಾಯಿ ಅವರ ಸ್ವಭಾವ.

೧೯೫೨ ನವೆಂಬರ ೯! ಆಕಾಶವಾಣಿಯಲ್ಲಿ ಗಂಗೂಬಾಯಿ ಅವರ ಪ್ರಥಮ ರಾಷ್ಟ್ರೀಯ ಸಂಗೀತ ಕಾರ್ಯಕ್ರಮ. ಅಭಿಮಾನ, ಆನಂದಗಳ ಮಧ್ಯದಲ್ಲಿಯೂ ದುಃಖದ ಆವೇಗ ಉಮ್ಮಳಿಸಿ ಬಂತು. ಗುರು ಸವಾಯಿ ಗಂಧರ್ವರು ಈ ಶಿಷ್ಯೆಯನ್ನು, ಇತರ ಶಿಷ್ಯ ಪರಿವಾರವನ್ನೂ ತ್ಯಜಿಸಿ ತಮ್ಮ ಬದುಕಿನ ಭೈರವಿ ಹೇಳಿ ಸುರಗಂಧರ್ವಲೋಕಕ್ಕೆ ತೆರಳಿದ್ದರು. ಅಂದಿನ ರಾಷ್ಟ್ರೀಯ ಕಾರ್ಯಕ್ರಮ ಗಂಗೂಬಾಯಿ ಅವರ ಪಾಲಿಗೆ ಗುರುಗಳಿಗೆ ಸಲ್ಲಿಸಿದ ಬಾಷ್ಪಾಂಜಲಿಯಾಗಿತ್ತು.

ಗಂಗೂಬಾಯಿ ಯಾವುದೇ ಕಚೇರಿ ಕಾರ್ಯಕ್ರಮದಲ್ಲಿ ಭಾವ ಸಮಾಧಿ ಹೊಂದಿ ತಂಬೂರಿಯ ಸಾ.ಪ.ಸಾ. ಸ್ವರಗಳಲ್ಲಿ ಲೀನರಾಗಿ ತಂಬೂರಿಯ ಷಡ್ಜಸ್ವರವನ್ನು ನಾದಲೀನಗೊಳಿಸಿದಾಗ ಅವರು ಗಂಗೂಬಾಯಿ ಅಲ್ಲ, ಸಂಗೀತ ಗಂಗಾಸ್ರೋತ. ಹೃದಯ, ಆತ್ಮ, ಜೀವಗಳು ಕರಗಿ ಏಕಪ್ರವಾಹವಾಗಿ ಒಂದೇ ಘನೀಭೂತ ಸ್ವರವಾಗಿ ಪ್ರವಹಿಸುತ್ತಿರುವಂತೆ ಭಾಸವಾಗಿ ಕೇಳುಗರ ಕಿವಿ ನಿಮಿರಿ ನಿಲ್ಲುತ್ತವೆ.

ಸಂಗೀತವು ಬುದ್ಧಿ ಚಾತುರ್ಯದಿಂದ ಭಾತಖಾಂಡೆ ಅವರ ಸಂಗೀತದ ಸಂಪುಟಗಳನ್ನು ಓದಿ, ಕರಗತ ಮಾಡಿಕೊಳ್ಳುವ ಕಲೆಯಲ್ಲ. ಬರಿ ಶಾಸ್ತ್ರ ಜ್ಞಾನ ಬೆಳೆಸಿಕೊಂಡ ಮಾತ್ರಕ್ಕೆ ಬರುವಂಥದ್ದೂ ಅಲ್ಲ. ಗುರುವಿನ ಗುಲಾಮನಾಗಿ ಹಲವು ವರ್ಷ ಕಾಲ ನಿಷ್ಠೆಯಿಂದ ಸಾಧನೆ ಮಾಡಿದರೆ ಮಾತ್ರ ಅದರ ಸಿದ್ಧಿ ಸಾಧ್ಯ.

ಗುರುಗಳ ಬಳಿ ತಮ್ಮ ಶಿಕ್ಷಣ ಮುಗಿದ ಮೇಲೂ ಕೆಲವೊಂದು ಕಚೇರಿಗಳಲ್ಲಿ ಗುರುಗಳು ಹಾಜರ ಇದ್ದರೆ ಸಣ್ಣ ಸಣ್ಣ ದೋಷಗಳನ್ನು ಎತ್ತಿ ಹೇಳುತ್ತಿದ್ದರೆಂದೂ ಹೀಗೆ ಹೇಳಿದರೆ ಅದು ಯಾವುದೇ ಕಡಿಮೆ ತನವಲ್ಲವೆಂದು ಪ್ರಾಮಾಣಿಕವಾಗಿ ಗಂಗೂಬಾಯಿಯವರು ಇಂದಿಗೂ ತೆರೆದ ಮನದಿಂದ ತೋಡಿಕೊಳ್ಳುತ್ತಾರೆ. ಮೊದಲ ಬಾರಿಗೆ ತಾಳ ಕಚ್ಚಾ ಇದ್ದಿತ್ತು ಎಂಬ ಪ್ರಾಮಾಣಿಕ ಒಪ್ಪಿಗೆ ಅವರದು. ಕೋಮಲ-ತೀವ್ರ ಸ್ವರಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಆದಾಗ ಗುರುಗಳಿಂದ ಬೈಸಿಕೊಂಡುದಕ್ಕೆಯೆ ತಮಗೆ ಸಂಗೀತ ಶಾರದೆ ಅನುಗ್ರಹಿಸಿದಳೆಂಬ ಪ್ರಾಂಜಲಶ್ರದ್ಧೆ ಗಂಗೂಬಾಯಿ ಅವರದು. ಈ ಶ್ರದ್ಧಾ ಸಾಮರ್ಥ್ಯದಿಂದಲೇ ದಿಲ್ಲಿ, ಆಗ್ರಾ, ಲಖನೊ, ಬಡೋದ್ರೆ, ಹೈದರಾಬಾದ,

ಗ್ವಾಲ್ಹೇರ, ಪ್ರಯಾಗ, ಅಮೃತಸರ, ಕರಾಚಿ, ಗಯಾ, ಡೆಹರಾಡೂನ್, ಮದ್ರಾಸ್, ಮೈಸೂರು, ತ್ರಿವೇಂಡ್ರಂ ಹೀಗೆ ಭಾರತದ ಉದ್ದಗಲವನ್ನೆಲ್ಲಾ ಭೈರವ ಭೈರವಿಗಳ ಧ್ವಜ ಹಿಡಿದು, ಕಲ್ಯಾಣ ಕಲ್ಯಾಣಿಗಳ ಶೃತಿ ಹಿಡಿದು ಸ್ವರ ಸಂಚಾರ ಮಾಡಿದರು. ಕಿರಾನಾ ಕಿರಣ ಸಹಸ್ರವನ್ನು ಅಜಸ್ರವಾಗಿ ಪಸರಿಸುತ್ತ ಜಯ ಜಯವಂತಿಯನ್ನು ಗೀತಿಸಿ ಬಂದವರು. ಮುಂದೆ ಸಾಗರದಾಚೆ ವಿದೇಶಗಳನ್ನೂ ಸುತ್ತಿ ಬಂದರು. ವಿದೇಶಿ ರಸಿಕರನ್ನು ಮುಗ್ಧಗೊಳಿಸಿದರು.

ಸ್ವಾತಂತ್ರ್ಯಪೂರ್ವದ ಕಾಲ ಸವಾಯಿಗಂಧರ್ವರ ಘನತೆಯ ಕಾಲವಾದರೆ ಸ್ವಾತಂತ್ರ್ಯೋತ್ತರ ಕಾಲ ಗಂಗೂಬಾಯಿಯವರದು. ಸ್ವಾತಂತ್ರ್ಯೋತ್ತರ ಕಾಲದ ಗಂಗೂಬಾಯಿ ಅವರಿಗೆ ದೊರೆತ ಪದವಿ, ಪ್ರಶಸ್ತಿ, ಪುರಸ್ಕಾರಗಳನ್ನು ನೋಡಿದರೆ ಸವಾಯಿಗಂಧರ್ವರಿಗೆ ದೊರೆತ ಗೌರವಗಳು ಕಡಿಮೆ ಎನಿಸಬಹುದು.

ಆದರೆ ಸವಾಯಿ ಗಂಧರ್ವರ ಶಿಷ್ಯೆ ಗಂಗೂಬಾಯಿ ಅವರು, ಒಮ್ಮೆ ಹೇಳಿದಂತೆ ಸವಾಯಿ ಗಂಧರ್ವರು ಒಂದು ವೇಳೆ ಈಗಿನ ಕಾಲದಲ್ಲಿರುತ್ತಿದ್ದರೆ ತಮಗೆ ದೊರೆತ ಪ್ರಶಸ್ತಿಗಳಿಗಿಂತ ಎಷ್ಟೋ ಪಟ್ಟು ಜಾಸ್ತಿ ಅವರಿಗೆ ದೊರೆಯಬಹುದಾಗಿತ್ತು.

ಸ್ವಾತಂತ್ರ್ಯೋತ್ತರದ ಖ್ಯಾತಿಯ ಗಂಗೂಬಾಯಿ ಅವರನ್ನು ಗೌರವಿಸಿದ ಪ್ರಶಸ್ತಿ ಪುರಸ್ಕಾರಗಳಲ್ಲಿ ಕೆಲವು ಹೀಗಿವೆ :

೧೯೪೮ ಭಾರತೀಕಂಠ ಬಿರುದು ಬನಾರಸ ಹಿಂದೀ ನಾಗರಿಕ ಪ್ರಚಾರ ಸಭಾ ಇವರಿಂದ, ೧೯೬೨ ಮೈಸೂರು ರಾಜ್ಯ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ೧೯೬೯ ಸ್ವರಶಿರೋಮಣಿ ಬಿರುದು ಪ್ರಯಾಗ ಸಂಗೀತ ಸಮಿತಿಯಿಂದ, ೧೯೭೦-ನವೆಂಬರ೧ ರಾಜ್ಯ ಪ್ರಶಸ್ತಿ, ೧೯೭೧- ಕೇಂದ್ರ ಸರಕಾರದಿಂದ ಪದ್ಮಭೂಷಣ ಪ್ರಶಸ್ತಿ, ೧೯೭೩ ಕೇಂದ್ರಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ೧೯೭೫ ರೂ-ಇ-ಗಜಲ್ ಬೇಗಂ ಅಖ್ತಾರ್ ಅವಾರ್ಡ (ನಗದು ಹತ್ತು ಸಾವಿರ) ದಿಲ್ಲಿ, ೧೯೭೭ ಆಕಾಶವಾಣಿ ಸ್ವರ್ಣ ಮಹೋತ್ಸವದ ಮೆಮೆಂಟೊ, ಪ್ರಧಾನಿ ಮೊರಾರ್ಜಿ ದೇಸಾಯಿ ಅವರಿಂದ ೧೯೭೮-ಕರ್ನಾಟಕ ವಿಶ್ವವಿದ್ಯಾಲಯ ಗೌರವ ಡಾಕ್ಟರೇಟ್ ಪದವಿ, ೧೯೭೮ ಕರ್ನಾಟಕ ರಾಜ್ಯ ಸಂಗೀತ ಅಕಾಡೆಮಿ ಸದಸ್ಯತ್ವ ೧೯೮೦- ಕರ್ನಾಟಕ ವಿಶ್ವವಿದ್ಯಾಲಯದ ನಾಮಿನೇಟೆಡ್ ಸದಸ್ಯತ್ವ, ೧೯೮೧ ರಾಜ್ಯ ಸಂಗೀತ ನೃತ್ಯ ಅಕಾಡೆಮಿ ಅಧ್ಯಕ್ಷ ಪದವಿ, ೧೯೮೨ ಇಂಡಿಯನ್ ಟೊಬ್ಯಾಕೊ ಕಂಪನಿಯಿಂದ ಹತ್ತು ಸಾವಿರ ನಗದು ಬಹುಮಾನ, ೧೯೮೪ ತಾನಸೇನ್ ಪ್ರಶಸ್ತಿ, ೧೯೯೦ ರ ಕನಕ ಪುರಂದರ ಪ್ರಶಸ್ತಿ ವಿಧಾನಪರಿಷತ್ ದಶಕದಲ್ಲಿ ಗೌರವ ಸದಸ್ಯತ್ವ (ಕರ್ನಾಟಕ ರಾಜ್ಯ) ೨೦೦೧ ಪದ್ಮವಿಭೂಷಣ ಪ್ರಶಸ್ತಿ.

ಇಷ್ಟೆಲ್ಲ ಬಿರುದಾವಳಿ, ಪ್ರಶಸ್ತಿ, ಪದವಿಗಳು ಗಂಗೂಬಾಯಿ ಅವರ ಮೇಲೆ ಪ್ರಶಂಸೆಯ ಮಳೆಗರೆದರೂ ಅವರು ತಮ್ಮ ವಿದ್ಯಾಸಾಧನೆಯ ಬಗ್ಗೆ ಹೇಳುವುದೆಂದರೆ 'ನಮ್ಮ ಗುರುಗಳ ವಿದ್ಯೆಯ ಎರಡಾಣೆಯ ಪ್ರಮಾಣವೂ ನನ್ನದಾಗಿಲ್ಲ' ಇದರಲ್ಲಿ ಅವರ ವಿನಯವೂ ಕೂಡಿರಬೇಕು. ವಿದ್ಯಾವಿನಯೇನ ಶೋಭಿತೆ ಆದರೂ ಗುರು ಸವಾಯಿಗಂಧರ್ವರ ಯೋಗ್ಯತೆಯ ಪ್ರಮಾಣವನ್ನು ನಾವು ಈ ಮಾನದಿಂದ ಊಹಿಸಿಕೊಳ್ಳಬಹುದಾಗಿದೆ.

ಗುರುವಿನ ಗುಲಾಮನಾಗುವ ತನಕ ದೊರೆಯದಣ್ಣ ಮುಕುತಿ ಎಂದಿದ್ದಾರೆ. ಅಲ್ಲದೆ ನಮ್ಮ ಪುರಂದರದಾಸರು ಈ ಮುಕ್ತಿಯೆಂದರೆ ಪೂರ್ಣತೆ, ವಿದ್ಯಾ ಪರಿಣತಿ ಎಂದು ನಾವು ಅರ್ಥೈಸಬೇಕು. ಡಾ. ಗಂಗೂಬಾಯಿ ಅವರು ೧೯೩೮ ರಿಂದ ಸವಾಯಿ ಗಂಧರ್ವರ ಅಡಿಯಲ್ಲಿ ಆರಂಭಿಸಿದ ಸಂಗೀತ ಶಿಕ್ಷಣ, ಸಾಧನೆಗಳು ಒಂದು ನಾಲ್ಕುವರ್ಷ ಸಹ ಪೂರ್ತಿಯಾಗಿ ನಡೆಯಲಿಲ್ಲ. ೧೯೪೨ ರಲ್ಲಿ ಗುರುಗಳು ಪಾರ್ಶ್ವವಾಯುವಿಗೆ ತುತ್ತಾಗಿ ಅಸಹಾಯಕ ಸ್ಥಿತಿಯನ್ನು ಹೊಂದಿದರು. ಗಂಗೂಬಾಯಿ ಅವರು ಗುರುಗಳ ಷಷ್ಠ್ಯಬ್ದಿ ಪೂರ್ತಿಯ ನಂತರ ತಮ್ಮ ಹುಬ್ಬಳ್ಳಿಯ ಮನೆಯಲ್ಲೆ ಗುರುಗಳನ್ನೇ ಕರೆಯಿಸಿಕೊಂಡು ಉಪಚರಿಸಿದರು. ಸ್ವಲ್ಪ ನೆಮ್ಮದಿಯೆನಿಸಿದಾಗ ಗುರುಗಳು ತಮ್ಮ ಶಿಷ್ಯೆಗೆ ಸಂಗೀತ ವಿದ್ಯಾದಾನ ಮುಂದುವರಿಸುತ್ತಿದ್ದರು.

ಮೊದಮೊದಲು ಪದ, ಭಜನೆ, ಠುಮರಿ, ಗಝಲ್‌ಗಳನ್ನು ತಾವೇ ರೂಢಿಸಿಕೊಂಡು ಹಾಡುತ್ತಿದ್ದ ಗಂಗೂಬಾಯಿ ಅವರು ಮುಂದೆ ಕೇವಲ ಶಾಸ್ತ್ರೀಯ ಸಂಗೀತಕ್ಕೆ ಅಂಟಿಕೊಂಡರು. ೧೯೨೪ ರ ಬೆಳಗಾವಿ ಕಾಂಗ್ರೆಸ್‌ನಲ್ಲಿ ಕನ್ನಡ ಸ್ವಾಗತಗೀತೆ ಹೇಳಿದರು.

ಆದರೆ ಒಂದು ಮಾತು ನಿಜ. ಕೇವಲ ಶಾಸ್ತ್ರೀಯ ಸಂಗೀತದಲ್ಲಿಯೇ ಸ್ಪೆಶಲೈಜೇಶನ್ ಮಾಡಿಕೊಂಡ ಡಾ.ಗಂಗೂಬಾಯಿ ಹಾನಗಲ್ ಅವರು ಇಂದು ಕಿರಾನಾ ಘರಾಣೆಯ ಶ್ರೇಷ್ಠ ಗಾಯಕಿ ಎಂಬ ಮನ್ನಣೆಗೆ ಪಾತ್ರರಾಗಿದ್ದಾರೆ. ಮಗಳು ಕೃಷ್ಣಹಾನಗಲ್ ತಾಯಿಗೆ ಕಳೆದ ಎರಡು ಮೂರು ದಶಕಗಳಿಂದ ಸಹ ಗಾಯಕಿಯಾಗಿ ಸಾಥ್ ನೀಡುತ್ತ ಬಂದು ತಾಯಿಯ ಖಾಸಾ ಶಿಷ್ಯೆಯಾಗಿ ಸ್ವತಂತ್ರ ಹಾಡುಗಾರಿಕೆಯ ಕಚೇರಿಗಳನ್ನು ಮಾಡುತ್ತಿದ್ದರು.

ಗಂಗೂಬಾಯಿ ಅವರು ತಮ್ಮ ಸಂಗೀತ ಕಚೇರಿಗಳ ಅನುಭವಗಳನ್ನು ಹೇಳತೊಡಗಿದರೆ ಕೇಳುಗರಿಗೆ ಕೌತುಕ, ಕುತೂಹಲ, ನಗೆ, ವಿಷಾದ ಎಲ್ಲ ಬಗೆಯ ಸಂವೇದನೆಗಳೂ ಸುಳಿದು ಹೋಗುತ್ತವೆ. ಅಮೆರಿಕೆಯಲ್ಲಿ ಸುಹಾಸನೀ ಮುಳಗಾಂವಕರ ತಮ್ಮ ಒಂದು ಸಂಗೀತ ಸಭೆಯಲ್ಲಿ ಎದುರಿಗೆ ಗಂಗೂಬಾಯಿ ಕುಳಿತದ್ದನ್ನು ನೋಡಿ ಗಂಗೂಬಾಯಿ ಅವರಂಥವರು ಎದುರಿಗೆ ಕುಳಿತಾಗ ನಾ ಹೇಗೆ ಹಾಡಲಿ ಎಂದು ಭಯ, ಭಕ್ತಿ ತೋರಿದಾಗ ಹುಬ್ಬಳ್ಳಿಯಲ್ಲಿ ಇಮ್ರತ್‌ಖಾನರ ಸಿತಾರವಾದನ ನಡೆದಾಗ ಗಂಗೂಬಾಯಿ ಬಂದು ಕೂತರೆ ನನ್ನ ಹಿರಿಯರ ಸಿತಾರ ಕೇಳಿದ ನಿಮ್ಮ ಮುಂದೆ ನಾನೇನು ಬಾರಿಸಲಿ ಎಂದು ಉದ್ಗಾರ ತೆಗೆದಾಗ ಅವರು ಗಂಗೂಬಾಯಿ ಅವರ ಬಗ್ಗೆ ತಾಳಿದ ಅಭಿಮಾನವನ್ನು ನಾವು ಅನುಭವಿಸುತ್ತೇವೆ.

ಗಂಗೂಬಾಯಿ ಅವರು ತಮ್ಮ ಶಿಷ್ಯ ಪರಂಪರೆಯನ್ನು ನಿರ್ಮಿಸುತ್ತಿದ್ದಾರೆ. ಮಗಳು ದಿವಂಗತೆ ಕೃಷ್ಣಾ ಅವರನ್ನು ಬಿಟ್ಟರೆ ಸೀತಾ ಹಿರೇಬೆಟ್ಟ, ನಾಗನಾಥ ಒಡೆಯರ್ ಅವರ ಹೆಮ್ಮೆಯ ಶಿಷ್ಯರು. ನಾಗನಾಥ ಒಡೆಯರು ಗಂಗೂಬಾಯಿಯವರಿಗೆ ಆಗಾಗ ಪೇಟೀ ಸಾಥ ಒದಗಿಸುತ್ತಾರೆ. ಅವರು ಹಾಡತೊಡಗಿದರೆಂದರೆ ನಿಜವಾಗಿಯೂ

ಗಂಗೂಬಾಯಿ ಅವರು ಹಾಡಿದಂತೆ ಭಾಸವಾಗುತ್ತದೆ. ಇದನ್ನು ನೆನೆದಾಗ ಗಂಗೂಬಾಯಿಯವರದು ನಿಜವಾಗಿಯೂ ಗಂಡು ಧ್ವನಿಯೇ ಎಂಬುದಕ್ಕೆ ಅವರ ಹಿಂದಿನ ಒಂದು ಸಂಗತಿಯನ್ನು ಇಲ್ಲಿ ಉಲ್ಲೇಖಿಸಬೇಕು. ಅವರ ಹಿತಚಿಂತಕ ಡಾಕ್ಟರ್ ಜೋಶಿ ಅವರು ಟಾನ್ಸಿಲ್ ಆಪರೇಷನ್ ಅನಿವಾರ್ಯ ಎಂದು ತಿಳಿದು ಚಿಕಿತ್ಸೆ ಮಾಡಿದನಂತರ ಅವರ ಧ್ವನಿ ಪಟಲವೆ ಬದಲಾಗಿ ಗಂಡು ಧ್ವನಿ ಆಯಿತು. ಒಮ್ಮೆ ಕಲಕತ್ತಾ ಕೇಂದ್ರದಿಂದ ಪ್ರಸಾರ ಮಾಡಲಿಕ್ಕೆ ಹೋದಾಗ ಇವರ ಅತಿಥೇಯರ ಮಗಳು ಇವರ ಪ್ರಸಾರ ಕಾರ್ಯಕ್ರಮವನ್ನು ಕೇಳಿ ನಿರಾಶೆಗೊಂಡರಂತೆ. ಕಾರಣವೆಂದರೆ ಗಂಗೂಬಾಯಿಯವರ ಬದಲು ಯಾರೋ ಗಂಡಸರು ಹಾಡಿದರು ಎಂದು ಆಕೆ ಭಾವಿಸಿದ್ದರು. ಮನೆಗೆ ಬಂದ ಗಂಗೂಬಾಯಿ ಆಕೆಗೆ ನನ್ನ ಕಾರ್ಯಕ್ರಮ ಕೇಳಿದೆಯಾ ಎಂದಾಗ ಕೇಳಿದೆ ಆದರೆ ನಿಮ್ಮ ಬದಲು ಯಾರೋ- ಗಂಡಸರು ಹಾಡಿದರು ಎಂದು ತನ್ನ ನಿರಾಶೆಯನ್ನು ಹೇಳಿಕೊಂಡಳಂತೆ. ಗಂಗೂಬಾಯಿ ಅವರು ನಕ್ಕು ಇಲ್ಲಾ ಹಾಡಿದ್ದು ನಾನೇ ನನ್ನ ಧ್ವನಿ ಹಾಗೆ ಕೇಳಿಸಿರಬೇಕು ಎಂದು ಅದಕ್ಕೆ ಕಾರಣವನ್ನು ಹೇಳಿದರಂತೆ.

ಗಂಗೂಬಾಯಿ ಚಿಕ್ಕಂದಿನಲ್ಲಿಯೇ ಎಂದರೆ ತಮ್ಮ ಹದಿವಯದಲ್ಲಿ ಧ್ವನಿ ಇನ್ನೂ ಎಳಕವಾಗಿದ್ದಾಗ ಹಾಡಿದ ಮರಾಠಿ ಗೀತಗಳು, ಶಾಸ್ತ್ರೀಯ ಸಂಗೀತದ ಚೀಜುಗಳನ್ನು ಮತ್ತೆ ಮತ್ತೆ ಕೇಳಬೇಕು ಎನಿಸುವಷ್ಟು ಸೊಗಸಾಗಿವೆ. ಅದರಲ್ಲಿಯೂ ರಾಮಹರೀಕಾ ಭೇದನ ಪಾಯೋ ಎಂಬ ಜೋಗಿಯಾ ಚೀಜೂ ಮರೆಯುವಂತಿಲ್ಲಾ. ಅದರಂತೆಯೆ ಮಿಯಾಮಲ್ಹಾರದ ಕಹೆಲಾಡಲೀ ಎಂಬ ಚೀಜ್‌ನ ಧ್ವನಿಮುದ್ರಿಕೆಯು ಸೆಡವಿನ ತಾನಬಾಜಿಯ ಬಿಗುವನ್ನು ಕೇಳಿ, ಕಂಡುಕೊಳ್ಳಬೇಕು.

ಗಯಾದಲ್ಲಿ ನಡೆದ ಮ್ಯೂಸಿಕ್ ಕಾನ್‌ಫರೆನ್ಸ್‌ನಲ್ಲಿ ಫಯಾಜ್‌ಖಾನ್, ಓಂಕಾರನಾಥರಂಥ ಹಳೆಯ ಹುಲಿಗಳು. ಆಗ ಗಂಗೂಬಾಯಿ ಅವರು ಬಹಳ ಚಿಕ್ಕವರು. ಈ ಚಿಕ್ಕ ಗಾಯಕಿಗೆ ಹದಿನೈದು ನಿಮಿಷಗಳ ಕಾಲ ಮಾತ್ರ ನಿಗದಿ ಆಗಿತ್ತು. ರಾಮಹರೀ ಕಾ ಭೇದನ ಪಾಯೋ ಜೋಗಿಯಾ ರಾಗದ ಚೀಜ್ ಹಾಡಿದರು. ಕಿರಾನಾದ ಸ್ವರ ಸಿದ್ಧಿ ಗಂಗೂಬಾಯಿ ಗಾಯಿಕೆಯಲ್ಲಿ ಸ್ಫುಟವಾಗಿ ಸ್ಫುರಿಸಿತ್ತು. ಖಾನ್ ಸಾಹೇಬರ ಈ ಶಿಷ್ಯೆಯ ಲಹರಿಯಿಂದ ಫಯಾಜ್ ಖಾನ್ ಖುಷಿ ಪಟ್ಟರು. ಹಿರಿಯ ಓಂಕಾರನಾಥ್ ಬುವಾ ಅವರು ವಾಹವಾ ಎಂದರು. ಕಲಕತ್ತಾ ಕಾನ್‌ಫರೆನ್ಸಿಗೆ ಹೋದಾಗಲೆಲ್ಲಾ ನ್ಯೂಥಿಯೇಟರ್ಸ್‌ನ ಸೈಗಲ್, ಕಾನನಬಾಲಾ, ಪಹಾರಿ ಸನ್ಯಾಲರು ಈ ಭಾರತೀಕಂಠವನ್ನು ಚಾತಕದಂತೆ ಎದುರು ನೋಡುತ್ತಿದ್ದು ತಮ್ಮ ತಮ್ಮಲ್ಲಿಗೆ ಸ್ವಾಗತಿಸುತ್ತಿದ್ದರು. ಪ್ರಥಮ ಸಲ ಕಲಕತ್ತೆಗೆ ಹೋದಾಗ ದೇವದಾಸ ಚಿತ್ರದಲ್ಲಿ ಅಬ್ದುಲ್‌ಕರಿಂಖಾನರ ಪಿಯಾ ಬಿನ ನಾಹಿ ಆವತ ಚೈನ್ ಎಂಬ ಗೀತೆ ಹಾಡಿ ಖಾನ್‌ಸಾಹೇಬರ ಬಗ್ಗೆ ತಮ್ಮ ಮಮತೆ ಗೌರವಗಳನ್ನೂ ಪ್ರಕಟಿಸಿದ್ದ ಸೈಗಲರನ್ನು ನೋಡಿ ಗಂಗೂಬಾಯಿ ಅವರಿಗೆ ವಿಶೇಷ ಅಭಿಮಾನವೆನಿಸಿತ್ತು.

ಗಂಗೂಬಾಯಿ ಅವರು ಈಗ ತೊಂಬತ್ತರಲ್ಲಿ ಕಾಲಿರಿಸಿದ್ದಾರೆ. ಕೀರ್ತಿಯ ಶಿಖರವನ್ನು ಮುಟ್ಟಿದ ಈ ಪದ್ಮ ವಿಭೂಷಣೆ ಇನ್ನೇನು ಸಾಧಿಸಬೇಕಾಗಿದೆ?

## ೫.೮. ಪಂ. ಮಲ್ಲಿಕಾರ್ಜುನ ಮನಸೂರ

ಧಾರವಾಡ ನಗರದಿಂದ ಎರಡು ಮೈಲಿ ದೂರವಿರುವ ಮನಸೂರ ಎಂಬ ಹಳ್ಳಿಯಲ್ಲಿ ಡಿಸೆಂಬರ್ ೩೧, ೧೯೧೦ ರಂದು, ಅಮಾವಾಸ್ಯೆಯ ದಿನ ಮೂಲಾ ನಕ್ಷತ್ರದಲ್ಲಿ ಮಲ್ಲಿಕಾರ್ಜುನ ಮನಸೂರರ ಜನನವಾದಾಗ ಅವರ ತಂದೆ ಭೀಮರಾಯಪ್ಪ ಹಾಗೂ ನೀಲಮ್ಮನವರಿಗೆ ತಮಗೆ ಹುಟ್ಟಿದ ಮಗ ಮುಂದೊಮ್ಮೆ ವಿಖ್ಯಾತ ವ್ಯಕ್ತಿಯಾಗುತ್ತಾನೆಂಬ ಕಲ್ಪನೆಯೂ ಪ್ರಾಯಶಃ ಇದ್ದಿರಲಿಲ್ಲ. ಹಾಗೆ ನೋಡಿದರೆ ಹುಟ್ಟುತ್ತಿದ್ದ ಹಾಗೇ ಮಲ್ಲಿಕಾರ್ಜುನರಿಗೆ ಮನೆಯಲ್ಲಿ ಅಪಶೃತಿಯೇ ಎದುರಾಗಿತ್ತು. ಮೂಲಾ ನಕ್ಷತ್ರದ ಈ ಹುಡುಗ ಅಶುಭ ತರುತ್ತಾನೆಂದು ಭೀತಿಗೊಂಡ ಹಿರಿಯರು ಮಗುವನ್ನು ಅಲಕ್ಷಿಸಿ ಅದನ್ನು ಮಠಕ್ಕೆ ಕೊಟ್ಟು ಬಿಡಲೆಂದು ಸ್ವಾಮಿಗಳೊಬ್ಬರ ಬಳಿಗೆ ಕೊಂಡೊಯ್ದರು. ಕೂಸಿನ ಜತೆಯಲ್ಲೇ ಹೊರಟ ನೀಲಮ್ಮ ಮಗುವನ್ನು ಬಿಟ್ಟಿರಲಾರದೆ ದುಃಖದಿಂದ ಕುಸಿದಾಗ ನೊಂದ ಸ್ವಾಮಿಗಳು ಮಗುವನ್ನು ನಮ್ಮ ಶಿಷ್ಯನಾಗಿ ನಿಮ್ಮ ಮನೆಯಲ್ಲೇ ಬೆಳೆಸಿ ಎಂದು ಆಕೆಗೆ ಸಮಾಧಾನ ಮಾಡಿ ಕಳಿಸಿಕೊಟ್ಟರು. ಸ್ವಾಮಿಗಳ ಹಿತವಚನದಿಂದಾಗಿ ಮಠದ ಪಾಲಾಗಬೇಕಾಗಿದ್ದ ಮಲ್ಲಿಕಾರ್ಜುನರು ಮನೆಯಲ್ಲೇ ಉಳಿದುಕೊಂಡರು.

ಮಲ್ಲಿಕಾರ್ಜುನ ಮನಸೂರರ ತಂದೆ ಭೀಮರಾಯಪ್ಪ ಆ ಸ್ಥಳದಗೌಡರು. ಅವರ ಪೂರ್ವಿಕರು ಬೆಳಗಾವಿ ಜಿಲ್ಲೆಯ ಪಾಚ್ಚಾಪುರದಿಂದ ಮನಸೂರಿಗೆ ಸುಮಾರು ಒಂದೂವರೆ ಶತಮಾನದ ಹಿಂದೆಯೇ ವಲಸೆ ಬಂದಿದ್ದು ಕೃಷಿಕಾರರಾಗಿ ದುಡಿಯುತ್ತ ತಾವು ಬೆಳೆದಿದ್ದ ಬಹುಪಾಲನ್ನು ಇನಾಮದಾರರಿಗೆ ಒಪ್ಪಿಸುತ್ತ ಶ್ರೀಮಂತಿಕೆಯನ್ನು ಕಾಣದಿದ್ದರೂ ಇದ್ದುದರಲ್ಲೇ ತೃಪ್ತಿಯನ್ನು ಕಂಡುಕೊಂಡಿದ್ದರು. ಸಣ್ಣದೊಂದು ಓಣಿಯಲ್ಲಿದ್ದ ಮನೆಯನ್ನು ಮಲ್ಲಿಕಾರ್ಜುನರ ನಾಲ್ವರು ಅಜ್ಜಂದಿರು ನಾಲ್ಕು ಭಾಗಗಳಾಗಿ ಹಂಚಿಕೊಂಡು ಬದುಕನ್ನು ಸಾಗಿಸಿದ್ದರು. ಭೀಮರಾಯಪ್ಪನವರದ್ದು ದೊಡ್ಡ ಕುಟುಂಬ. ಮಲ್ಲಿಕಾರ್ಜುನರಲ್ಲದೆ ಅವರಿಗೆ ಬಸವರಾಜ, ಪಾರ್ವತಮ್ಮ, ಕಲ್ಲಪ್ಪ, ಲಿಂಗಮ್ಮ, ನಾಗಮ್ಮ, ಶಂಕರಪ್ಪ, ಶಕುಂತಲಾ, ಹೀಗೆ ಮಕ್ಕಳು. ಮಲ್ಲಿಕಾರ್ಜುನರಿಗೆ ಅವರ ಮೂರನೇ ಅಜ್ಜನ ಹೆಸರನ್ನಿಟ್ಟ ಭೀಮರಾಯಪ್ಪನವರಿಗೆ ಮಗ ಸರ್ಕಾರದ ಅಧಿಕಾರಿಯಾಗಬೇಕು ಎಂಬ ಹಂಬಲವನ್ನು ಅವರು ಹುಟ್ಟಿದಾಗಿನಿಂದಲೇ ಬೆಳೆಸಿಕೊಂಡಿದ್ದರು. ಅವರು ಶಾಲೆಗೆ ಸೇರುವ ವಯಸ್ಸಿಗೆ ಬರುತ್ತಿದ್ದಂತೆಯೇ ಹಳ್ಳಿಯ ಗಾಂವಟಿ ಸ್ಕೂಲಿಗೆ ಸೇರಿಸಿದರು.

ಸಣ್ಣ ಬಾಲಕನಾಗಿದ್ದಾಲೇ ಮಲ್ಲಿಕಾರ್ಜುನರದು ಸಂಗೀತದತ್ತ ಒಲಿದಿದ್ದ ಮನಸ್ಸು. ತಾಯಿ ನೀಲಮ್ಮ ಮನೆಗೆಲಸಗಳ ಜಂಜಾಟದ ಮಧ್ಯೆಯೂ ಹಿಟ್ಟು ಬೀಸುವಾಗ, ಧಾನ್ಯ ಕುಟ್ಟುವಾಗ ಹಾಡಿಕೊಳ್ಳುತ್ತಿದ್ದ ಪದಗಳು ಆಕೆಯನ್ನೇ ಮುಗ್ಧತೆಯಿಂದ ದಿಟ್ಟಿಸುತ್ತ ಕೂಡುತ್ತಿದ್ದ ಮಲ್ಲಿಕಾರ್ಜುನರಲ್ಲಿ ಅಪರಿಮಿತ ಸಂತಸವನ್ನು ಉಂಟು ಮಾಡುತ್ತಿತ್ತು. ತಾಯಿಯ ಜೋಗುಳ ಅವರನ್ನು ಕನಸಿನ ಲೋಕಕ್ಕೆ ಒಯ್ಯುತ್ತಿತ್ತು. ಇಷ್ಟು ಸಾಲದೆಂಬಂತೆ ಸಂಗೀತದ ಬಗ್ಗೆ ಆಸ್ಥೆಯಿದ್ದ ಭೀಮರಾಯಪ್ಪ ಮನೆಯಲ್ಲೇ ಅಪ್ಪಯ್ಯ ಎಂಬ ಸಂಗೀತಗಾರರಿಗೆ ಆಶ್ರಯ ಕೊಟ್ಟು ಅವರಿಂದ ಹಾಡಿಸಿ ನಲಿಯುತ್ತಿದ್ದರು. ಮಗ ಬಸವರಾಜರಿಗೆ ಅವರಿಂದ ಕರ್ನಾಟಕ ಸಂಗೀತ ಪಾಠ

ಹೇಳಿಸುತ್ತಿದ್ದರು. ಬಸವರಾಜರೇನೋ ಸಂಗೀತವನ್ನು ಕಲಿಯುವಲ್ಲಿ ತೋರಿದ ಶ್ರದ್ಧೆಯನ್ನೇ ಪಾಠ ಪ್ರವಚನದಲ್ಲೂ ತೋರಿಸಿದರು. ಆದರೆ ಮಲ್ಲಿಕಾರ್ಜುನರ ಮನಸ್ಸು ಮಾತ್ರ ಶಾಲೆಯ ಕಡೆ ಮೊಗ ಮಾಡದೇ ಸಂಗೀತದತ್ತಲೇ ವಾಲತೊಡಗಿತು. ಮನೆಯವರ್‍ಯಾರೂ ಆಗ ಅವರ ಅಭಿರುಚಿಯನ್ನು ಗುರುತಿಸುವ ಮಟ್ಟಿಗೆ ಅದು ಪ್ರಧಾನವಾಗಿ ಕಾಣಿಸಿಕೊಳ್ಳದಿದ್ದರೂ, ಮಲ್ಲಿಕಾರ್ಜುನರೇ ಅದರ ಹೊಳಹುಗಳನ್ನು ತಮಗೆ ಅರಿವಿಲ್ಲದೆಯೇ ಮನಸ್ಸಿನಲ್ಲೇ ಊರ್ಜಿತಗೊಳಿಸಿಕೊಳ್ಳಲು ತೊಡಗಿದರು. ಭೀಮ ರಾಯಪ್ಪನವರು ಬಸವರಾಜರನ್ನು ಧಾರವಾಡದಲ್ಲಿದ್ದ ಅವರಜ್ಜ ಚನ್ನವೀರಪ್ಪನವರ ಬಳಿಗೆ ವ್ಯಾಸಂಗ ಮುಂದುವರಿಕೆಗಾಗಿ ಕಳಿಸಿದರು. ಅಣ್ಣನನ್ನು ಅಪಾರವಾಗಿ ಪ್ರೀತಿಸುತ್ತಿದ್ದ ಮಲ್ಲಿಕಾರ್ಜುನರು ಅವರು ದೂರವಾದಾಗ ಹತಾಶರಾದರು. ಅತ್ತ ಬಸವರಾಜರೂ ಸುಖವಾಗೇನೂ ಇರಲಿಲ್ಲ. ಸಂತಾನವಿಲ್ಲದೆ ಮಕ್ಕಳಿಗಾಗಿ ಹಂಬಲಿಸುತ್ತ ಹತಾಶೆಯಿಂದಿದ್ದ ಚನ್ನವೀರಪ್ಪನವರು ಬಸವರಾಜರು ತಮ್ಮಲ್ಲಿಗೆ ಬಂದಾಗ ಆತ್ಮೀಯವಾಗಿ ಅವರನ್ನು ಬರಮಾಡಿಕೊಂಡಿದ್ದರೂ ತಮ್ಮ ಮೂರನೆಯ ಮಡದಿಯಿಂದ ಗಂಡುಮಗುವಾದ ಕೂಡಲೇ ಬಸವರಾಜರನ್ನು ಅನಾದರಿಸಲು ತೊಡಗಿದರು. ಒಲ್ಲದ ಮನಸ್ಸಿನಿಂದಲೇ ಅವರ ಮನೆಯಲ್ಲಿ ಇರತೊಡಗಿದ್ದರು. ಬಸವರಾಜರಿಗೆ ಚಿಕ್ಕ ವಯಸ್ಸಾದರೂ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಅರ್ಥ ಮಾಡಿಕೊಳ್ಳುವಷ್ಟು ತಿಳಿವಳಿಕೆಯಿತ್ತು. ಆ ಸಮಯಕ್ಕೆ ಅಲ್ಲಿಗೆ ಬಂದಿದ್ದ ವಾಮರಾವ್ ಮಾಸ್ತರರ ನಾಟಕ ಕಂಪನಿಗೆ ಸೇರಿದರು.

ಭೀಮರಾಯಪ್ಪನವರಿಗೆ ಬಸವರಾಜರ ಈ ವರ್ತನೆ ಆಕಸ್ಮಿಕ, ಮಗನೊಬ್ಬ ನಾಟಕದ ಖಯಾಲಿ ಹತ್ತಿಸಿಕೊಂಡು ಕಂಪೆನಿ ಸೇರಿದ್ದನ್ನು ಕಂಡ ಅವರು ನಂತರ ಮಲ್ಲಿಕಾರ್ಜುನರ ಮೇಲೆ ಹೆಚ್ಚು ಭರವಸೆಯನ್ನು ಇಡತೊಡಗಿದರು. ಅವರನ್ನು ಮುಂದಿನ ಓದಿಗಾಗಿ ಧಾರವಾಡದ ಅಜ್ಜನ ಮನೆಯಲ್ಲಿ ಬಿಟ್ಟಾಗ, ಶಾಲಾ ಶಿಕ್ಷಣದ ಬಗ್ಗೆ ಎಳ್ಳಷ್ಟೂ ಉತ್ಸುಕರಾಗದೇ ಇದ್ದ ಮಲ್ಲಿಕಾರ್ಜುನರು ಮೂರನೇ ಇಯತ್ತೆಗೇ ಇತಿಶ್ರೀ ಹಾಡಿದರು. ತಾನೂ ಅಣ್ಣನಂತಾಗಬೇಕೆಂದು ಹಂಬಲಿಸಿದರು. ನಾಟಕ ಕಂಪನಿಯ ಬಾಗಿಲು ತಟ್ಟಿದರು. ಅನಿರೀಕ್ಷಿತವಾಗಿ ಆಗಮಿಸಿದ ತಮ್ಮನನ್ನು ಕಂಡು ಬಸವರಾಜರಿಗೆ ಆಘಾತ. ಅವರನ್ನು ಬೈದರು, ಅಂದರು, ಹಿಂತಿರುಗಿ ಹೋಗೆಂದು ಉಪದೇಶ ಮಾಡಿದರು. ಭೀಮರಾಯಪ್ಪನವರೂ ವಿಷಯ ತಿಳಿದು ಕಂಪನಿಯತ್ತ ಧಾವಿಸಿ ಪುಟ್ಟ ಮಲ್ಲಿಕಾರ್ಜುನರನ್ನು ವಾಪಸ್ಸು ಕರೆದೊಯ್ದರು. ಆದರೆ ಮಲ್ಲಿಕಾರ್ಜುನರು ಮನೆಯಲ್ಲಿ ಉಳಿಯಲಿಲ್ಲ. ಮನೆ ಸೇರುತ್ತಿದ್ದಂತೆಯೇ ಮತ್ತೆ ನಾಟಕ ಕಂಪನಿಯತ್ತ ಓಡಿ ಬಂದರು. ಅಲ್ಲಿ ಮ್ಯಾನೇಜರಾಗಿದ್ದ ರಾಮಚಂದ್ರಪ್ಪ ಎಂಬುವರ ಕಣ್ಣಿಗೆ ಬಿದ್ದರು. ಕಂಪೆನಿ ಬೆಳಗಾವಿಗೆ ಹೊರಟಾಗ ತಮ್ಮ ಬೆನ್ನಿಗಂಟಿದ್ದ ಮಲ್ಲಿಕಾರ್ಜುನರನ್ನು ಅವರು ಅಥಣಿಯ ಕ್ಯಾಂಪ್‌ಗೆ ಕರೆದೊಯ್ದರು. ಬಾಲಕನಲ್ಲಿದ್ದ ಪ್ರತಿಭೆ ಬಹಳ ಬೇಗನೆ ಅಲ್ಲಿದ್ದವರಿಗೆಲ್ಲ ಗೋಚರಿಸಿತು. ಅಣ್ಣ ಬಸವರಾಜರೊಂದಿಗೆ ತಮ್ಮ ಮಲ್ಲಿಕಾರ್ಜುನರೂ ಪಾರ್ಟ್ ಮಾಡಲು ಪ್ರಾರಂಭಿಸಿದರು. ಭಕ್ತ ಪ್ರಹ್ಲಾದದಲ್ಲಿ ಪ್ರಹ್ಲಾದ, ಕೃಷ್ಣಲೀಲೆಯಲ್ಲಿ ವಿಜಯ, ಮಹಾನಂದಾದಲ್ಲಿ ನಾರದ, ಬಾಜೀರಾವದಲ್ಲಿ ಸ್ವರಾಜ್ಯ ಲಕ್ಷ್ಮಿ, ವರಪ್ರಧಾನದಲ್ಲಿ ವಿದ್ಯಾರಣ್ಯ. ಅಣ್ಣನ ಅಭಿನಯದೊಂದಿಗೆ ತಮ್ಮ ಹಾಡುಗಾರಿಕೆ ಮೇಳೈಸಿದಾಗ ತಮಗಾದ ಅವರ್ಣನೀಯ ಆನಂದವನ್ನು ಜನರು ಚಪ್ಪಾಳೆ ತಟ್ಟಿ ಅಭಿವ್ಯಕ್ತಿಸಿದರು.

ಒಮ್ಮೆ ನಾಟಕ ಕಂಪನಿಯ ನಟರೊಂದಿಗೆ ಶಿವಯೋಗಿಗಳ ಮಠಕ್ಕೆ ತೆರಳಿ ಸಂಕೋಚದಿಂದ ಮುದುರಿ ನಿಂತಿದ್ದ ಮಲ್ಲಿಕಾರ್ಜುನರನ್ನು ಕಂಡ ಯೋಗಿಗಳು ಯಾರೀತ? ತಂದೆ ತಾಯಿಗಳು ಇವನನ್ನು ಇಷ್ಟು ಚಿಕ್ಕ ವಯಸ್ಸಿನಲ್ಲಿ ನಾಟಕ ಕಂಪನಿ ಸೇರಿಸಲು ಹೇಗೆ ಮನಸ್ಸು ಮಾಡಿದರು ಎಂದು ಕೇಳಿದರು. ಬಸವರಾಜರತಮ್ಮನನ್ನು ಕಂಡು ನಸು ನಕ್ಕ ಯೋಗಿಗಳು ಅವರ ಬೆನ್ನುತಟ್ಟಿ ನೀನೇನೂ ಯೋಚಿಸಬೇಡ. ಹೆಸರು ಗಳಿಸುವಿ ಅಂದರು. ಅವರ ಹುರಿದುಂಬಿಸುವಿಕೆಯ ಹಿಂದೆಯೇ ಬಂತು, ಮಲ್ಲಿಕಾರ್ಜುನ ಮನಸೂರರ ಬದುಕನ್ನು ಸೃಜನಶೀಲತೆಯತ್ತ ತಿರುಗಿಸಿದಂಥ ಅಪೂರ್ವ ಸನ್ನಿವೇಶ. ಕಂಪೆನಿಯ ಬಾಲಕೃಷ್ಣ ಬುವಾ ಇಚಲಕರಂಜಿ ಅವರ ಶಿಷ್ಯರಾದ ನೀಲಕಂಠ ಬುವಾ ಮಿರಜಕರ ಬಾಗಲಕೋಟೆಯ ಕ್ಯಾಂಪಗೆ ಬಂದಿದ್ದಾಗ ತಾವಾಗಿಯೇ ನಿಮ್ಮ ಕಂಪನಿಯಲ್ಲಿ ಒಬ್ಬ ಹುಡುಗ ಬಹಳ ಪಸಂದಾಗಿ ಹಾಡತಾನಂತಲ್ಲ ? ಯಾರವನು? ಎಲ್ಲಿದ್ದಾನೆ? ಎಂದಾಗ ಸುತ್ತಲಿದ್ದವರಿಗೆ ಅವರು ವಿಚಾರಿಸುತ್ತಿರುವುದು ಮಲ್ಲಿಕಾರ್ಜುನರ ಬಗ್ಗೆ ಎಂಬುದರಲ್ಲಿ ಸಂದೇಹವೇ ಉಳಿಯಲಿಲ್ಲ. ಅವರನ್ನು ಸಹ ನಟರು ಮುಂದಕ್ಕೆ ತಳ್ಳಿದರು. ಪಾಂಚೋಬಾ ಅವರ ಹಾರ್ಮೋನಿಯಂ ಸಾಥಿಗೆ ಮಲ್ಲಿಕಾರ್ಜುನರು ಹಾಡುತ್ತಿದ್ದಂತೆಯೇ ನೀಲಕಂಠ ಬುವಾ, ನಾನು ನಿನಗೆ ಶಾಸ್ತ್ರೀಯ ಸಂಗೀತ ಕಲಿಸುತ್ತೀನಿ. ಬರ್ತೀಯಾ? ಎಂದರು. ಬಸವರಾಜರತ್ತ ನೋಡಿ ಈ ಹುಡುಗ ನನ್ನ ಜತೆಗಿರಲಿ. ಇವನು ಉತ್ತಮ ಸಂಗೀತಗಾರನಾಗುತ್ತಾನೆ. ನಾಟಕ ಕಂಪನಿಯಲ್ಲಿ ಇದ್ದುಕೊಂಡು ತನ್ನ ಪ್ರತಿಭೆಯನ್ನು ಹಾಳು ಮಾಡಿಕೊಳ್ಳುವುದು ಬೇಡ ಎಂದರು. ತುದಿಗಾಲಲ್ಲಿ ನಿಂತಿದ್ದ ಮಲ್ಲಿಕಾರ್ಜುನರು ಗುರುಗಳ ಹಿಂದೆ ನಡೆದರು ಭವಿಷ್ಯದಲ್ಲಿ ಭಾರೀ ಸಂಗೀತಗಾರರಾಗಲು ಮೊದಲ ಹೆಜ್ಜೆಯನ್ನಿರಿಸಿದರು.

''ನೀಲಕಂಠ ಬುವಾರಲ್ಲಿ ಅಪಾರ ಶ್ರದ್ಧೆ ಭಕ್ತಿಗಳಿಂದ ಮನಃಪೂರ್ತಿಯಾಗಿ ತಾಲೀಮುಗಳನ್ನು ನಡೆಸಿದ ಮಲ್ಲಿಕಾರ್ಜುನ ಮನಸೂರರು ವಿದ್ಯಾರ್ಥಿಯಾಗಿಯೇ ಉಳಿದು ಹಿಂದುಸ್ಥಾನಿ ಶಾಸ್ತ್ರೀಯ ಸಂಗೀತ ಅಗಾಧ ಸಮುದ್ರದಿಂದ ದೊರೆಯಬಲ್ಲದೆಲ್ಲವನ್ನೂ ಪಡೆದುಕೊಳ್ಳಬೇಕು ಎಂದು ಹಂಬಲಿಸುತ್ತಿದ್ದಾಗಲೇ ಹದಿನಾರು ವರ್ಷದ ಅವರ ವಯೋಧರ್ಮಕ್ಕೆ ಅನುಗುಣವಾಗಿ ದನಿ ಒಡೆಯಿತು. ಸಪ್ತಕದಲ್ಲಿ ಪಂಚಮದಲ್ಲಿನ ಮೇಲಿನ ಸ್ವರಗಳನ್ನು ಗಂಟಲಿನಿಂದ ಹೊರಡಿಸುವುದು ಕಷ್ಟಕರ ಎನ್ನಿಸಿತು. ಆದರೆ ಮನಸೂರರದ್ದು ಏಕಾಗ್ರಚಿತ್ತ. ಸಂಗೀತಕ್ಕೆ ತಮ್ಮನ್ನು ಅರ್ಪಿಸಿಕೊಂಡ ಮೇಲೆ ಹಿಂತಿರುಗುವುದು ಸಾಧ್ಯವೇ ಇಲ್ಲ ಎಂಬ ವ್ರತ. ಚಿತ್ತಸ್ವಾಸ್ಥ್ಯವನ್ನು ಉಳಿಸಿಕೊಂಡ ಮನಸೂರರು ಧಾರವಾಡಕ್ಕೆ ವಾಪಸ್ಸಾಗಿ ಮೂರು ತಿಂಗಳ ಕಾಲ ಚೀಜುಗಳನ್ನು ಮತ್ತೆ ಮತ್ತೆ ಹಾಡಿಕೊಂಡರು. ರಾತ್ರಿ ೧೦ ರಿಂದ ೬ ರವರೆಗೆ ರಿಯಾಜುಗಳನ್ನು ಅಭ್ಯಸಿಸಿದರು. ಮೂರು ವರ್ಷಗಳೊಳಗಾಗಿ ಆಶ್ಚರ್ಯಕರ ರೀತಿಯಲ್ಲಿ ನಿರಂತರವಾಗಿ ದನಿಯನ್ನು ಪಳಗಿಸಿದ್ದರ ಪರಿಣಾಮವಾಗಿ ಅದನ್ನು ಗಾಯನಕ್ಕೆ ಪಕ್ಕದನ್ನಾಗಿಸಿಕೊಂಡರು''[೩೯] ಎಂದು ಶ್ರೀಮತಿ ಬಿ. ಎಸ್. ವೆಂಕಟಲಕ್ಷ್ಮಿ ಅವರು ಬರೆಯುತ್ತಾರೆ.

---

೩೯. ಮಲ್ಲಿಕಾರ್ಜುನ ಮನಸೂರ: ಬಿ. ಎಸ್. ವೆಂಕಟಲಕ್ಷ್ಮಿ, ಪುಟ-೮

## ೫.೯.೫೦. ಲಿಂಗರಾಜ ಬುವಾ ಯರಗುಪ್ಪಿ

ಆಯುಷ್ಯದ ಎಂಟನೇಯ ದಶಕ ಮುಗಿಸಲು ಸಮೀಪಿಸಿರುವ ಅಂದರೆ ಸುಮಾರು ಎಪ್ಪತ್ತಾರು ವರುಷ ವ ಋಸ್ಸಿನವರಾಗಿದ್ದ ಪಾರ್ಶ್ವವಾಯು ಪೀಡಿತ ಕೃಶ ಶರೀರಿಯಾದ, ಫಲಾಪೇಕ್ಷೆ ಪಡದೆ ಪ್ರಸಿದ್ಧಿಪಡಲು ಇಚ್ಛೆಪಡದೇ ಎಲೆಮರೆಯ ಕಾಯಿಯಂತೆ ಸಂಗೀತ ಶಾರದೆಯ ಸೇವೆಗೈದು ಜೀವಿಸುವ ಸರಳ ಮತ್ತು ನಿರಂಹಕಾರಿ ಜೀವಿಯಾದ ಶ್ರೀಲಿಂಗರಾಜಬುವಾ ಯರಗುಪ್ಪಿಯವರು ಯರಗುಪ್ಪಿ ಗ್ರಾಮ ನಿವಾಸಿಗಳಾದ ಸೋಮಣ್ಣವರ ಮನೆತನದ ಶ್ರೀಯಲ್ಲಪ್ಪ ಶ್ರೀಮತಿ ಫಕ್ಕೀರಪ್ಪ ಎಂಬ ಮುಗ್ಧದಂಪತಿಗಳ ಪವಿತ್ರ ಉದರದಿಂದ ತಾಯಿಯ ತವರೂರಾದ ಹಿರೇಹರಕುಣಿ ಗ್ರಾಮದಲ್ಲಿ ದಿನಾಂಕ ೨೮-೮-೧೯೧೩ ರಲ್ಲಿ ಜನಿಸಿದರು.

ಹಿರೇಹರಕುಣಿ ಅಧಿದೇವತೆಯಾದ ಶ್ರೀ ಬಸವೇಶ್ವರರ ಹೆಸರನ್ನು ಅಂದರೆ ಬಸವಣ್ಣೆಪ್ಪನೆಂದು ನಾಮಕರಣದೊಂದಿಗೆ ಸ್ವಂತ ಊರಾದ ಯರಗುಪ್ಪಿಗೆ ಬಂದರು. ಇವರ ತಂದೆ ಸಹೋದರನ ಹೆಸರು ಲಿಂಗಪ್ಪ ಎಂದಾಗಿತ್ತು. ಇವರು ಶಿಶುನಾಳ ಶರೀಫರ ಪರಮಭಕ್ತ ಮತ್ತು ಅವರ ಸನ್ನಿಧಿಯಲ್ಲಿಯೇ ಕಾಲಕಳೆಯುವವರಾಗಿದ್ದರು. ಒಂದು ದಿನ ಶಿಶುನಾಳ ಶರೀಫರು ''ಏ ಲಿಂಗಪ್ಪ ನಿನ್ನ ಮರಣ ಸಮೀಪ ಬಂದೇತಿ ನೀನು ನಿಮ್ಮ ಊರಿಗೆ ಹೋಗಿ ಎಲ್ಲರನ್ನು ಭೆಟ್ಟಿಯಾಗು ಹೋಗು'' ಎಂದು ಕಳುಹಿಸಿದರು. ಯರಗುಪ್ಪಿಗೆ ಬಂದ ದಿನವೇ ಅವರು ಮರಣಹೊಂದಿದರು. ಇದರ ನಿಮಿತ್ತ ಅದೇ ತಾನೆ ಅಜ್ಜ ಅಜ್ಜಿಯ ಮನೆಯಿಂದ ಹರಕುಣಿ ಗ್ರಾಮದಿಂದ ಯರಗುಪ್ಪಿಗೆ ತಾಯಿಯೊಂದಿಗೆ ಬಂದಿದ್ದಾಗಿತ್ತು. ದೊಡ್ಡಪ್ಪನ ಮರಣದ ನಂತರ ಇವರ ಹೆಸರನ್ನು ಬಸವಣ್ಣೆಪ್ಪನೆಂಬ ಹೆಸರನ್ನು ಬದಲಿಸಿ ಲಿಂಗಪ್ಪನೆಂದು ನಾಮಕರಣಗೊಳಿಸಿದರು.

ಬಾಲ್ಯದಲ್ಲಿ ಇವರ ತಂದೆಯವರು ೫ ಜನ ಅಣ್ಣ ತಮ್ಮಂದಿರರಿಗೆ, ಮನೆಗೆ, ಲಿಂಗಪ್ಪನೊಬ್ಬನೇ ಗಂಡು ಮಗುವಾಗಿದ್ದ. ಹೀಗಾಗಿ ಇವರನ್ನು ಬಹುವಾತ್ಸಲ್ಯದಿಂದ ರಕ್ಷಿಸುತ್ತಿದ್ದರು. ಅತೀಯಾದ ವಾತ್ಯಲ್ಯ ಇವರನ್ನು ಶಾಲೆಗೆ ಕಳಿಸದಂತೆ ಮಾಡಿತ್ತು. ಗೆಳಯರೊಂದಿಗೆ ಆಟವಾಡುತ್ತಾ ದನ ಕಾಯಲು ಹೋಗುವ ರೂಢಿಯಾಯಿತು. ಐದಾರು ವರ್ಷದವರಿದ್ದಾಗಲೇ ಕೇಳಿದ ಹಾಡುಗಳನ್ನು ಹಾಡುವ ರೂಢಿ ಬಾಲ್ಯದಲ್ಲಿಯೇ ಏಕಾಗ್ರಚಿತ್ತದಿಂದ ಹಾಡುವ ರೂಢಿ ರಕ್ತಗತವಾಗಿ ಬೆಳೆದು ಬಂದಿತ್ತು. ಇವರ ವಂಶದಲ್ಲಿಯ ಹೆಣ್ಣು ಮಕ್ಕಳು ಮತ್ತು ಗಂಡು ಮಕ್ಕಳು ಸಾಂಪ್ರದಾಯಿಕ ಹಾಡುಗಳನ್ನು ಹಾಡುವದರಲ್ಲಿ ಪ್ರಸಿದ್ಧಿ ಪಡೆದಿದ್ದರು.

ಒಮ್ಮೆ ಈ ಆರು ವರ್ಷದ ಬಾಲಕ ದನ ಮೇಯಿಸುತ್ತ ಎಮ್ಮೆಯ ಮೇಲೆ ಕುಳಿತು ಅಭಿಮನ್ಯುವಿನ ಬಗ್ಗೆ ಲಾವಣಿ ಹಾಡು ಹಾಡುತ್ತ ಅಭಿಮನ್ಯುವಿನ ಅಭಿನಯದೊಂದಿಗೆ ಮೈಮರೆತು ಹಾಡುತ್ತಿದ್ದಾಗ ಹಿರೇನರ್ತಿ ದೇವೇಂದ್ರಪ್ಪನವರು ಈ ಬಾಲಕನ ಲಕ್ಷಣ, ಪ್ರತಿಭೆ ಅರಿತು ಇವನ ಮೇಲೆ ಕೃಪೆಯಾಯಿತು. ಅವರು ಈ ಬಾಲಕನ ಬೆನ್ನು ಹತ್ತಿ ಇವನ ಮನೆ ಗುರುತಿಸಿ ಇವರ ತಂದೆ ತಾಯಿ ದೊಡ್ಡಪ್ಪ ಮತ್ತು ಅಜ್ಜಂದಿರಿಗೆ ಭೆಟ್ಟಿಯಾಗಿ ಈ ಬಾಲಕ ನಿಮ್ಮ ಮನೆಯಲ್ಲಿ ಇರುವದಕ್ಕಿಂತ ನನ್ನ ಜೊತೆಯಲ್ಲಿ ಇರಲು ಪರಮಾತ್ಮ ಕಳಿಸಿದ್ದಾನೆ ಕಾರಣ ನನ್ನ ಜೊತೆಗೆ

ಇವನನ್ನು ಕರೆದೊಯ್ಯುತ್ತೇನೆ ಎಂದು ಹೇಳಿದಾಗ ಮನೆಯವರಿಗೆಲ್ಲ ಇದ್ದ ಒಬ್ಬ ಮಗ ಈ ಸ್ವಾಮಿಯ ಹಿಂದೆ ಹೋದರೆ ನಮ್ಮ ಮನೆತನದ ಗತಿ ಏನು ಎಂದು ಚಿಂತಿಸತೊಡಗಿದರು. ಕಳಿಸಲೂ ಕಷ್ಟ ಕಳಿಸದಿದ್ದರೂ ಕಷ್ಟ ಬಂದೊದಗಿತು.

ಆ ದೇವೇಂದ್ರಪ್ಪನವರು ಶಿಶುನಾಳ ಶರೀಫ ಶಿವಯೋಗಿಗಳ ವರದಾನದಿಂದ ಜನಿಸಿದವರು ಮತ್ತು ಮಹಾ ಯೋಗಿಗಳು ಅಲ್ಲದೇ ವಾಕ್ ಸಿದ್ಧಿ ಇದ್ದವರು. ಅವರು ಎಲ್ಲಿ ಶಾಪಕೊಡುವರೋ ಎಂಬ ಭಯದಿಂದ ಹೂಂ ಗುಟ್ಟು ಅವರ ಸಂಗಡ ಕಳಿಸಿದರು. ಆಗ ಲಿಂಗಪ್ಪನಿಗೆ ಆರು ವರ್ಷ ಇರಬಹುದು.

ಶ್ರೀ ದೇವೇಂದ್ರಪ್ಪನವರು ಕರ್ನಾಟಕೀ ಮತ್ತು ಹಿಂದುಸ್ತಾನಿ ಸಂಗೀತ ಉಭಯ ಸಂಗೀತ ಪಾರಂಗತರು ತಂತಿಯ ಮತ್ತು ತೊಗಲಿನ ಸರ್ವವಾದ್ಯಗಳನ್ನು ಅಲ್ಲದೇ ಕೊಳಲು ಶಹನಾಯಿ ನುಡಿಸುವದರಲ್ಲಿಯೂ ಪರಿಣಿತರು ಒಟ್ಟಿನ ಮೇಲೆ ಸಂಗೀತಕ್ಕೆ ಸಂಬಂಧಪಟ್ಟ ಸರ್ವವಿದ್ಯಾ ಸಂಪನ್ನರು. ತಮ್ಮ ಹತ್ತಿರವೇ ಸುಮಾರು ಏಳೆಂಟು ವರ್ಷ ಲಿಂಗರಾಜರನ್ನು ಇಟ್ಟುಕೊಂಡು ವಿದ್ಯಾಭ್ಯಾಸ ಮಾಡಿಸಿ ನಂತರ ಇವನಿಗೆ ದುಡಿಮೆ ಹಚ್ಚಬೇಕೆಂದು ಇಚ್ಛಿಸಿದರು. ಅಷ್ಟೊತ್ತಿಗೆ ಲಿಂಗರಾಜರ ಹೆಸರು ಪ್ರಚಾರವಾಗತೊಡಗಿತ್ತು. ನಾಟ್ಯಸಂಘ ಮಾಲೀಕರಿಗೆ ಇವರ ಹೆಸರು ಕೇಳಿ ಬಂತು.

ಆಗ ಪ್ರಸಿದ್ಧ ನಾಟ್ಯಸಂಘದ ಮಾಲೀಕರಾದ ಶ್ರೀ ಶಿರಹಟ್ಟಿ ವೆಂಕೋಬರಾವ್ ಮಾಸ್ತರ ಬಂದು, ''ಇವನನ್ನು ನನ್ನ ಕಂಪನಿಗೆ ಕಳಿಸಿದರೆ ನಿಮ್ಮ ಊರಿನಲ್ಲಿ ಉತ್ತಮ ಜಮೀನು ಕೊಡುವದಿದ್ದರೆ ಹೇಳಿ ಆ ಜಮೀನನ್ನು ೧೬ ಎಕರೆ ಜಮೀನ ನಿಮಗೆ ಕೊಡಿಸಿ, ಪ್ರತಿ ತಿಂಗಳಿಗೆ ಪಗಾರ ಸಹಿತಕೊಟ್ಟು ಮತ್ತು ಯಾವತ್ತೂ ಅವನ ಖರ್ಚು ನೋಡಿಕೊಳ್ಳುವೆ''ಎಂದು ಹೇಳಿದರು. ಆ ಬಗ್ಗೆ ವಿಚಾರಿಸುತ್ತಿರುವಾಗ ಗದುಗಿನ ಶ್ರೀ ಗರುಡ ಸದಾಶಿವರಾಯರು ಬಂದು ಇದೇ ತೆರನಾಗಿ ಹೇಳಿದರು. ಇದೇ ಸಮಯದಲ್ಲಿ ವಾಣಿವಿಲಾಸ ಕಂಪನಿಯ ಮಾಲೀಕರಾದ ಶ್ರೀ ಯರೇಶಿ ಭರ್ಮಪ್ಪನವರು ಬಂದು, ನಿಮ್ಮ ಮಗನಿಗೆ ಊಟ ಉಪಚಾರಕೊಟ್ಟು ನಿಮ್ಮ ಮಗನ ಕೈಯಲ್ಲಿ ೧೨ ತೊಲಿ ಬಂಗಾರ ಕಡೆ ಹಾಕಿ ಉತ್ತಮ ಸಂಗೀತ ಶಿಕ್ಷಕರಿಂದ ಪಾಠ ಹೇಳಿಸುವೆ ಎಂದು ಹೇಳಿದರು. ಯಾವ ಕಂಪನಿಗೆ ಕಳಿಸದರೆ ಯೋಗ್ಯವೆಂದು ವಿಚಾರಕ್ಕಿಟ್ಟಾಗ ಇವರ ಗುರುಗಳಾದ ಶ್ರೀಯುತ ದೇವೇಂದ್ರಪ್ಪನವರು ಬಂದು ಆಸ್ತಿ ಹಣ ಬಂಗಾರ ಸ್ಥಿರವಲ್ಲ ವಿದ್ಯೆಯೇ ಆಸ್ತಿ ಆದದ್ದು, ವಿದ್ಯಾ ಸಿಗುವಲ್ಲಿ ಕಳಿಸಿರಿ ಎಂದು ಹೇಳಿದ್ದರಿಂದ ಶ್ರೀ ಯರೇಸಿ ಭರಮಪ್ಪನವರ ಕಂಪನಿಗೆ ಕಳಿಸಿದರು. ಅಲ್ಲಿ ನೀಲಕಂಠಬುವಾ ಮಿರಜ ಎನ್ನುವವರು ಸಂಗೀತ ಶಿಕ್ಷಕರಾಗಿದ್ದರು. ಅವರಲ್ಲಿಯೇ ಈಗಿನ ಜಗತ್ ಪ್ರಸಿದ್ದ ಸಂಗೀತಗಾರರಾದ ಶ್ರೀ ಮಲ್ಲಿಕಾರ್ಜುನ ಮನ್ಸೂರ ಅಭ್ಯಾಸ ಮಾಡುತ್ತಿದ್ದರು. ಅವರ ಜೊತೆಯಲ್ಲಿ ಲಿಂಗರಾಜರ ಸಂಗೀತ ಅಭ್ಯಾಸ ಆರಂಭವಾಯಿತು. ನಾಟಕಗಳಲ್ಲಿ ಬಾಲಪಾತ್ರ ಮಾಡಹತ್ತಿದರು. ಆ ಕಂಪನಿಯಲ್ಲಿ ಬಾಲ ಪಾತ್ರಗಳನ್ನು ಪ್ರದರ್ಶಿಸ ಹತ್ತಿದರು. ಇವರ ಪ್ರಸಿದ್ಧ ಬಾಲ ಪಾತ್ರಗಳೆಂದರೆ ಕೃಷ್ಣಲೀಲೆಯಲ್ಲಿ ಕೃಷ್ಣ, ಕಿತ್ತೂರ ಚನ್ನಮ್ಮ ನಾಟಕದಲ್ಲಿ ಬಾಪುವಿನ ಪಾತ್ರ.

ಕಂಪನಿಯ ನಟರಿಗೆ ಸಂಗೀತ ಅಭ್ಯಾಸ ಮಾಡಿಸಲು ಶ್ರೀ ಯರೇಸಿ ಭರಮಪ್ಪನವರು ಮಿರಜದಿಂದ ನೀಲಕಂಠಬುವಾ ಎಂಬ ಪ್ರಸಿದ್ಧ ಗ್ವಾಲೇರ ಘರಾಣೆಯ ಗಾಯಕರನ್ನು ಗುರುವಾಗಿ ನೇಮಿಸಿದರು.

ಸದರ ಕಂಪನಿಯ ನಾಟಕ ಅಹೋರಾತ್ರಿ ಮುಗಿದ ನಂತರ ಮರುದಿನ ಹಗಲೆಲ್ಲ ಗುರುಗಳ ಸಾನಿಧ್ಯದಲ್ಲಿ ಸಂಗೀತ ಅಭ್ಯಾಸ ಪ್ರಾರಂಭ. ಆಗ ಶ್ರೀ ಮಲ್ಲಿಕಾರ್ಜುನ ಮನ್ಸೂರರು ಮತ್ತು ಲಿಂಗರಾಜರು ಪಾತ್ರಧಾರಿಗಳಾಗಿಯೂ, ಸಂಗೀತ ಗೆಳೆಯರಾಗಿಯೂ ನೀಲಕಂಠ ಬುವಾರಲ್ಲಿ ಸಂಗೀತ ಅಭ್ಯಾಸ ಮಾಡತೊಡಗಿದರು. ಬರಬರುತ್ತಾ ಜೊತೆಯಾಗಿ ಪಾತ್ರ ನಿರ್ವಹಿಸತೊಡಗಿದರು. ಹೇಮರೆಡ್ಡಿ ಮಲ್ಲಮ್ಮನ ಪಾತ್ರದಲ್ಲಿ ಶ್ರೀಲಿಂಗರಾಜರು ಪ್ರಸಿದ್ಧಿ ಪಡೆದರು. ಇದರಂತೆ ಎಲ್ಲ ನಾಟಕಗಳಲ್ಲಿ ಜೊತೆಯಾಗಿ ಮುಖ್ಯ ಪಾತ್ರ ನಿರ್ವಹಿಸುತ್ತಾ ಸಂಗೀತ ಅಭ್ಯಾಸ ಮಾಡಿದರು ಮುಂದೆ ಸದರ ಕಂಪನಿ ವಿಸರ್ಜನೆಗೊಂಡು ಎಲ್ಲ ಕಲಾವಿದರು ಬೇರೆ ಬೇರೆ ಕಡೆಗೆ ಹೋದರು. ಆಗ ಲಿಂಗರಾಜರು ಅಥಣಿಯ ಭಾಗ್ಯೋದಯ ಕಂಪನಿಗೆ ಹೋದರು. ಅದರ ಮಾಲೀಕರು ಭೀಮರಾವ್ ಹೂಗಾರ ಆಗಿದ್ದರು. ಲಿಂಗರಾಜರು ಅಲ್ಲಿ ಮುಖ್ಯ ರಾಜಪಾತ್ರಗಳನ್ನು ನಿರ್ವಹಿಸುತ್ತಿದ್ದರು. ಮತ್ತು ಅದೇ ಕಂಪನಿಯ ಸಂಗೀತ ಗುರುಗಳಾದ ಕೃಷ್ಣಬುವಾ ಕೊಲ್ಲಾಪೂರ ಇವರಲ್ಲಿ ಹೆಚ್ಚಿನ ಸಂಗೀತ ಅಭ್ಯಾಸ ದೊರೆಯಿತು. ನಂತರ ಅಲ್ಲಿಂದ ಗರುಡ ಸದಾಶಿವರಾಯರ ಕಂಪನಿಯಿಂದ ಕರೆ ನಿಮಿತ್ತ ಅಲ್ಲಿ ಮುಖ್ಯ ಪಾತ್ರಗಳ ನಿರ್ವಹಣೆಯಲ್ಲಿ ಪ್ರಸಿದ್ಧಿ ಪಡೆದರು. ಇದೇ ಕಂಪನಿಯು ಪುತ್ತೂರಿನಲ್ಲಿ ಬೀಡು ಬಿಟ್ಟಾಗ ಶ್ರೀ ಶಿವರಾಮಕಾರಂತರ ಅಧ್ಯಕ್ಷತೆಯಲ್ಲಿ ಕೃಷ್ಣಸುಧಾಮ ನಾಟಕವನ್ನು ಅಭಿನಯಿಸಿದರು. ಅದರಲ್ಲಿ ಕೃಷ್ಣನ ಪಾತ್ರವನ್ನುಲಿಂಗರಾಜರು ವಹಿಸುತ್ತಿದ್ದರು. ಇವರ ಸಂಗೀತ ಮತ್ತು ನಾಟ್ಯ ಕಲೆಯನ್ನು ಕಂಡು ಶ್ರೀಶಿವರಾಮ ಕಾರಂತರು ಕಲಿಯುಗದ ಕೃಷ್ಣ ಎಂಬ ಬಿರುದುಕೊಟ್ಟು ಬಂಗಾರದ ಪದಕ ಕೊಟ್ಟರಷ್ಟೆ ಅಲ್ಲದೇ ತಮ್ಮ ಆಶ್ರಮದಲ್ಲಿ ಸಂಗೀತ ಸೇವೆ ಮಾಡಿಸಿ ಬಂಗಾರದ ಪದಕ ಮತ್ತು ಬೆಳ್ಳಿಯ ಜೋಡಿ ಕಪ್ಪು ಕೊಟ್ಟು ಸತ್ಕರಿಸಿ ೨೫ ರೂ ದಕ್ಷಿಣೆಯೊಂದಿಗೆ ಖಾದಿ ವಸ್ತ್ರಾಲಂಕಾರ ಕೊಟ್ಟು ಕಳಿಸಿದರು. ಆಗ ಇವರ ವಯಸ್ಸು ಇಪ್ಪತ್ಮೂರು, ಇಪ್ಪತ್ನಾಲ್ಕು ಇರಬಹುದು.

ನಂತರ ಆ ಕಂಪನಿ ಬಿಟ್ಟು ಸ್ವಂತ ನಾಟಕ ಕಂಪನಿ ಮಾಡಿ ಕೈಸುಟ್ಟುಕೊಂಡರು ಅಂದರೆ ಹಾನಿಗೊಳಗಾದರು. ನಂತರ ಸಂಗೀತ ಪಾಠ ಹೇಳುತ್ತಾ ಸಂಗೀತ ಕಛೇರಿಗಳನ್ನು ಮಾಡುತ್ತ ಸಂಗೀತ ಲೋಕದಲ್ಲಿ ಒಳ್ಳೆ ಹೆಸರುವಾಸಿಯಾಗುತ್ತಿರುವಾಗಲೇ ದುರ್ದೈವ ಇವರ ಬೆನ್ನು ಹತ್ತಿ ಇವರ ಸರ್ವ ನಾಶ ಮಾಡಿತು. ಆಗ ಇವರ ವಯಸ್ಸು ಸುಮಾರು ೩೦ ವರ್ಷ ಇರಬಹುದು. ಹೊಸಪೇಟಗೆ ಸಂಗೀತ ಕಛೇರಿಗೆ ಹೋದಾಗ ಪಾರ್ಶ್ವವಾಯು ಹೊಡೆಯಿತು. ಸಂಗೀತ ಪುತ್ರನ ಜೀವ ಇಹಲೋಕ ಪರಲೋಕದ ಗಡಿಯಲ್ಲಿ ತೊಳಲಾಡುತ್ತ ಬೀಳುತ್ತ ಏಳುತ್ತ ಏನೋ ಔಷಧೋಪಚಾರದಿಂದ ಜೀವ ಉಳಿಯಿತು. ಆದರೆ ದೈವವು ಶರೀರವನ್ನು ಮಾತ್ರ ನಿಸ್ಸತ್ವಗೊಳಿಸಿ ಕಂಠವನ್ನು ಮಾತ್ರ ಉಳಿಸಿತು. ನಂತರ ಇವರು ತಮ್ಮ ಸ್ವಂತ ಊರಾದ ಯರಗುಪ್ಪಿಗೆ ಬಂದು ನೆಲೆಸಿದರು. ಅಷ್ಟರೊಳಗಾಗಿ ತಂದೆ-ತಾಯಿಗಳು ಇಹಲೋಕ ಯಾತ್ರೆ ಮುಗಿಸಿದ್ದರು.

ಆದರೆ ಪಾರ್ಶ್ವವಾಯು ರೋಗವು ಲಿಂಗರಾಜರಿಗೆ ಶಾಪ. ಹಳ್ಳಿಯ ಅನೇಕ ವಿದ್ಯಾರ್ಥಿಗಳಿಗೆ ವರದಾನವಾಯಿತು. ಯಾಕೆಂದರೆ ಆ ರೋಗದಿಂದ ಹಳ್ಳಿಯ ವಾಸಿಗಳಾದರೂ ಅವರಿಂದ ಹಳ್ಳಿಯಲ್ಲಿ ಸಂಗೀತ ಕಲಿಯುವವರಿಗೆ ಒಬ್ಬ ಉತ್ತಮ ಸಂಗೀತ ಗುರುಗಳಾಗಿ ದೊರೆತರು. ಇವರು ಶಿಷ್ಯರ ಮನೆ ಮನೆಗೆ ಹೋಗಿ ಫಲಾಪೇಕ್ಷೆ ಇಲ್ಲದೇ ಸಂಗೀತ ಕಲಿಸತೊಡಗಿದರು. ಸಾಧಾರಣ ಧಾರವಾಡ ಜಿಲ್ಲೆ ಬಹುತೇಕ ಹಳ್ಳಿಗಳಲ್ಲಿ ಅಸಂಖ್ಯಾತ ಶಿಷ್ಯ ಬಳಗವಿದ್ದು ಅವರಿಂದ ದೊರೆತ ಅಲ್ಪ ಗುರುಕಾಣಿಕೆಯೇ ಇವರ ಜೀವನಾಧಾರವಾಗಿತ್ತು. ಈ ಎಪ್ಪತ್ತಾರರ ವಯಸ್ಸಿನ ಕೃಶ ಶರೀರ ಶ್ರೀ ಲಿಂಗರಾಜರಿಗೆ ಸಂಗೀತ ಪಾಠ ಹೇಳುವದೆಂದರೆ ಬಲು ಹುರುಪು ಅವರು ಸಂಗೀತಗಾರರಷ್ಟೇ ಅಲ್ಲ ಕಲಿಸುವ ಕಲೆಯಲ್ಲಿ ನಿಪುಣರು. ಇವರು ಕಲಿಸುವ ಪದ್ಧತಿ ಎಂದರೆ ಎಂಥ ದಡ್ಡ ಶಿಷ್ಯನೇ ಇರಲಿ ಒಮ್ಮೆ ಮಾತ್ರ ಹೇಳಿದರೆ ಸಾಕು ತರಬೇತಿಗೊಳ್ಳುತ್ತಾರೆ. ಇವರ ಶಿಷ್ಯರ ಬಳಗದಲ್ಲಿ ಅನೇಕರು ಆಕಾಶವಾಣಿ ಕಲಾವಿದರಾಗಿ ಕೆಲವರು ಸಂಗೀತ ಉಚ್ಚ ಶಿಕ್ಷಣ ತರಬೇತಿಗಾಗಿ ಹೋಗಿದ್ದಾರೆ. ಕರ್ನಾಟಕ ರಾಜ್ಯದ ನಾಟ್ಯ ಕಲಾ ಅಕಾಡೆಮಿಯವರು ಇವರಿಗೆ ೧೫೦ ರೂ ಮಾಸಾಶನ ಕೊಡುತ್ತಿದ್ದರು. ಎಷ್ಟೇ ತೊಂದರೆ ಇದ್ದರೂ ಸಂಗೀತ ಋಷಿಗಳಾಗಿ ಜೀವನ ಕಳೆಯುತ್ತಾ ಯರಗುಪ್ಪಿ ಗ್ರಾಮದಲ್ಲಿಯೇ ಇದ್ದು ಸ್ವಗ್ರಾಮದಲ್ಲಿ ನಿಧನರಾದರು. ಇವರ ಶಿಷ್ಯ ಪರಂಪರೆ ಅನೇಕ : ಶ್ರೀರಾಮಪ್ಪ ಹುಗಣ್ಣವರ, ಬಸಯ್ಯ ಕುದರಿ, ಹುಸೇನಸಾಬ ನಧಾಪ್, ಬಸವನಗೌಡ ತುಮ್ಮಿನಕಟ್ಟಿ, ಅಶೋಕ ಹುಗ್ಗಣ್ಣವರ, ಹನುಮಂತಪ್ಪ ಅಳಗವಾಡಿ, ಶಂಕರಪ್ಪ ಬೋಕನವರ ಇವರೆಲ್ಲ ಉಲ್ಲೇಖನೀಯರು.

### ೫.೧೦. ಡಾ. ಬಸವರಾಜ ರಾಜಗುರು

ಬಸವರಾಜ ರಾಜಗುರು ಎಂದಾಕ್ಷಣ ಸಂಗೀತದ ಗಂಧವಿರುವವರ ಕಿವಿಯಲ್ಲಿ ಇಂಚರ ಸಂಚರಿಸತೊಡಗುವುದು. ಅವರ ಗಾಯನದ ಮಾಧುರ್ಯ ಅಂತಹದು. ಭಾರತಾದ್ಯಂತ ಬಸವರಾಜ ರಾಜಗುರು ಮೋಡಿಗೆ ಒಳಗಾಗದವರಿಲ್ಲ. ಕೊನೆಯುಸಿರಿನವರೆಗೂ ಸಂಗೀತವನ್ನೆ ಉಸಿರಾಡಿದವರು ಅವರು. ತಮ್ಮ ಸಂಗೀತ ಸೌರಭವನ್ನು ಅಮೇರಿಕೆಯಲ್ಲಿ ಬೀರುವ ಸನ್ನಾಹದಲ್ಲಿ ವೀಸಾ ತೆಗೆಯಿಸಲು ಚೆನ್ನೈಗೆ ಹೋಗಿದ್ದವರು ಬೆಂಗಳೂರಿಗೆ ಜುಲೈ ೨೧, ೧೯೯೧ ರಂದು ಬಂದಿಳಿದರು. ಅಲ್ಲಿಯೂ ಶಿಷ್ಯನೊಬ್ಬನಿಗೆ ಸಂಗೀತ ಪಾಠ. ಈಗ ರಾತ್ರಿ ಇಷ್ಟೊತ್ತು ಈ ಹೊತ್ತಿನಲ್ಲಿ ಇಂತಿಂಥ ರಾಗ ಹಾಡುತ್ತಾರೆ ಎಂದು ವಿವರಿಸುತ್ತಿದ್ದರು. ಹಾಡುತ್ತ ಹಾಡುತ್ತ ಸ್ವರಲೋಕದಲ್ಲಿ ಲೀನವಾದರು. ಸಂಗೀತ ಪ್ರಪಂಚ ಬಡವಾಯಿತು.

ಎಲಿವಾಳ ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಚಿಕ್ಕ ಗ್ರಾಮ. ಅಲ್ಲೊಂದು ಒಕ್ಕಲುತನದ ಮನೆತನ. ಈ ಮನೆತನ ಮೂಲತಃ ಕೆಳದಿ ರಾಜರ ಗುರುಗಳು. ಹಾಗಾಗಿ, ರಾಜಗುರು ಎಂಬ ಅಡ್ಡಹೆಸರು. ಕಾರಣಾಂತರಗಳಿಂದ ಎಲಿವಾಳಕ್ಕೆ ಬಂದು ನೆಲೆಸಿದ್ದರು. ಬಸವರಾಜ ಅಗಸ್ಟ ೨೪, ೧೯೨೦ ರಂದು ಜನಿಸಿದ. ಮಹಾಂತಸ್ವಾಮಿ-ರಾಚವ್ವ ತಂದೆ ತಾಯಿ. ದೊಡ್ಡಪ್ಪ ಸಂಸ್ಕೃತ ವಿದ್ವಾಂಸರು, ಜ್ಯೋತಿಷಿಗಳು. ತಂದೆಗೆ

ಸಂಗೀತವೆಂದರೆ ಪಂಚಪ್ರಾಣ. ತಂಜಾವೂರಿಗೆ ಹೋಗಿ ಕರ್ನಾಟಕ ಸಂಗೀತ ಕಲಿತು ಬಂದಿದ್ದರು. ಪಿಟೀಲು ಚೆನ್ನಾಗಿ ನುಡಿಸುತ್ತಿದ್ದರು. ಚಿಕ್ಕಪ್ಪ ಚನ್ನಬಸವಸ್ವಾಮಿ ಬಯಲಾಟ ಪ್ರವೀಣ. ಬಯಲಾಟ ಪದಗಳನ್ನು ಇಂಪಾಗಿ ಹಾಡುತ್ತಿದ್ದುದಲ್ಲದೆ ಹಾರ್ಮೋನಿಯಮ್ ನುಡಿಸುತ್ತಿದ್ದರು. ಬಸವರಾಜನಿಗೆ ಬುದ್ಧಿ ತಿಳಿದಾಗಿನಿಂದಲೂ ಸಂಗೀತದ್ದೆ ಹುಚ್ಚು.

ಬಸವರಾಜ ಆರು ವರ್ಷದವನಿದ್ದಾಗ ತಾಯಿ ತೀರಿಕೊಂಡಳು. ತಂದೆಯೆ ತಾಯಿಯೂ ಆದರು. ಏಳನೆಯ ವರ್ಷಕ್ಕೆ ತಂದೆಯಿಂದ ಸಂಗೀತಪಾಠ ಆರಂಭ. ಲಂಬೋದರ ಲಕುಮಿಕರ ಕೃತಿಯಿಂದ ಶ್ರೀಗಣೇಶ. ಸುಮಾರು ಎರಡು ವರ್ಷ ಸರಳೆ, ಜಂಟಿ, ವರ್ಣ, ಕೀರ್ತನೆ ಅಭ್ಯಾಸ ಮಾಡಿಸಿದರು.

ಆಗಿನ್ನೂ ಬಸವರಾಜನಿಗೆ ಒಂಬತ್ತು ವರ್ಷ. ಎಲಿವಾಳದಲ್ಲಿ ಶನಿಪ್ರಭಾವ ನಾಟಕ ಹಚ್ಚಿದ್ದರು. ನಾಟಕ ಕಲಿಸಲು ಪರ ಊರಿನ ಮಾಸ್ತರ ಬಂದಿದ್ದರು. ಹೊಡೆದು ಬಡಿದು ಕಲಿಸಿದರೂ ಪಾತ್ರ ಮಾಡುವ ಹುಡುಗರಿಗೆ ಪದ ಹಾಡಲು ಬರುತ್ತಿರಲಿಲ್ಲ. ತಾಲೀಮು ಮನೆಯೊಳಗೆ ಬೇರೆ ಯಾರನ್ನೂ ಬಿಡುತ್ತಿರಲಿಲ್ಲ. ಬಸವರಾಜ ಜಾಲಿ ಬಡ್ಡೆಯ ಮೇಲೆ ಪೀಪಾಯಿ ಇಟ್ಟು ಅದರ ಮೇಲೆ ಹತ್ತಿ ಕಿಡಕಿಯಲ್ಲಿ ಇಣಿಕಿಕ್ಕಿ ಕೇಳುತ್ತ ಒಂದೆರಡು ದಿನಗಳಲ್ಲಿಯೆ ಅವೆಲ್ಲ ಪದಗಳನ್ನು ಸರಾಗವಾಗಿ ಹಾಡಲು ಕಲಿತ. ಹಾರ್ಮೋನಿಯಂ ಜೊತೆಗೆ ಹಾಡುವಾಸೆ. ಇವನು ಕಿಡಕಿಯಲ್ಲಿ ಇಣುಕುವುದನ್ನು ಕಂಡು ನಾಟಕ ಮಾಸ್ತರರು ಕಿಡಕಿ ಮುಚ್ಚಿಸಿದರು. ಇದರಿಂದ ಬಸವರಾಜ ಕೋಪ ಬುಸ್ಸೆಂದಿತು. ಒಂದು ದಿನ ಮಧ್ಯಾಹ್ನ ಎಲ್ಲರೂ ಮಲಗಿರುವಾಗ ಅದ್ಹೇಗೋ ಒಳಗೆ ಹೋಗಿ ಚಾಕುವಿನಿಂದ ತಬಲಾ, ಡಗ್ಗಾ ತೂತು ಕೊರೆದು ಹಾರ್ಮೋನಿಯಂ ಪಟ್ಟಿ ಕಿತ್ತೆಸೆದು ಓಟ ಕೀಳುವುದರಲ್ಲಿದ್ದ. ಮಾಸ್ತರರಿಗೆ ಎಚ್ಚರವಾಯಿತು. ಹಿಡಿದು ಎರಡು ಬಾರಿಸಿದರು. ಅಭಿಮಾನಧನರಾದ ಬಸವರಾಜನ ತಂದೆಗೆ ನಖಶಿಖಾಂತ ಕೋಪ. ಏ ಮಾಸ್ತರ ನಿನಗೆ ಲುಕ್ಸಾನ ಆಗಿದ್ದರೆ ಹೊಸ ತಬಲಾ, ಡಗ್ಗಾ ಮಾಡಿಸಿಕೊಡುತ್ತಿದ್ದೆ. ನಮ್ಮ ಹುಡುಗನನ್ನು ಏಕೆ ಹೊಡೆದೆ? ಎಂದು ಗದರಿಸಿದರು. ಮಾಸ್ತರರು ನಿಮ್ಮ ದಮ್ಮಯ್ಯ ತಪ್ಪಾಯಿತು ಕ್ಷಮಿಸಿರಿ ಎಂದು ಬೇಡಿಕೊಂಡರು.

ಮಹಾಂತಸ್ವಾಮಿ ಮಗನತ್ತ ಹೊರಳಿ ನಿನಗೆ ಸಂಗೀತ ಕಲಿಯುವ ಹುಚ್ಚಿದ್ದರೆ ಇಂಥ ಕ್ಷುಲ್ಲಕ ನಾಟಕ ಮಾಸ್ತರರಲ್ಲಿ ಏಕೆ, ದೊಡ್ಡ ನಾಟಕ ಕಂಪನಿಯಲ್ಲಿ ಎಂದರು. ಅದೇ ಸುಮಾರಿಗೆ ಅವರ ಬಾಲ್ಯ ಸ್ನೇಹಿತ ವಾಮನರಾವ ಮಾಸ್ತರರ ವಿಶ್ವಗುಣಾದರ್ಶ ನಾಟಕ ಮಂಡಳಿ ಹುಬ್ಬಳ್ಳಿಯಲ್ಲಿ ಕ್ಯಾಂಪ್ ಮಾಡಿತ್ತು. ಕರೆದುಕೊಂಡು ಹೋಗಿ ಮಗನನ್ನು ಸೇರಿಸಿಬಂದರು. ಬಸವರಾಜ ಬಾಲನಟನಾಗಿ ಬಾಲಕೃಷ್ಣ, ದಾಸಿ ಮುಂತಾದ ಪಾತ್ರಗಳಲ್ಲಿ ಮಿಂಚಿದ. ಕಂಚಿನ ಕಂಠ ಬೇರೆ. ಸ್ವತಃ ವಾಮನರಾವ ಮಾಸ್ತರರು ನಾಟಕದ ಹಾಡುಗಳನ್ನು ಅಭ್ಯಾಸ ಮಾಡಿಸುತ್ತಿದ್ದರು. ಹುಬ್ಬಳ್ಳಿ, ಧಾರವಾಡ, ಬೆಳಗಾವಿ, ಹೊಸಪೇಟೆ, ಬಳ್ಳಾರಿ, ಗದಗ, ಹರಿಹರ, ದಾವಣಗೆರೆ ಮುಂತಾದ ಊರುಗಳಿಗೆ ನಾಟಕ ಕಂಪನಿಯೊಂದಿಗೆ ಸುತ್ತಾಟ. ಒಮ್ಮೆ ಬಟ್ಟೆಗೆ ಸಾಬೂನು ಹಚ್ಚುತ್ತ ಬಾಜಿರಾವ ಪೇಶ್ವೆ ನಾಟಕದ ಕೊಟ್ಟ ಕಾಲಕೆ ದೇವರು ನಿನಗೆ, ಕೆಟ್ಟು ಕೃತಿಯ ಮಾಡಲು ಬೇಡ ಎಂಬ ಹಾಡು ಹೇಳುತ್ತಿದ್ದ.

ವಾಮನರಾವ ಮಾಸ್ತರ ಹಿಂದೆ ಬಂದು ನಿಂತುದರ ಪರಿವೆಯೆ ಇಲ್ಲ. ಉಳಿದ ಹುಡುಗರು ತಿವಿದು ಎಚ್ಚರಿಸಿದಾಗಲೇ ತಿಳಿದದ್ದು. ಬಸವರಾಜನಿಗೆ ಗಾಬರಿ. ಆದರೆ ಮಾಸ್ತರರು ಇವನ ಹಾಂಗ ಹಾಡಿರಿ, ನೋಡೂಣು ಎಂದು ಮೆಚ್ಚುಗೆ ಸೂಸಿ ಹೊರಟು ಹೋದರು. ನಾಟಕ ಕಂಪನಿ ಸೇರಿ ಒಂದು ವರ್ಷವಾಗಿರಬಹುದು. ತಂದೆ ಮಹಾಂತಸ್ವಾಮಿ ಪ್ಲೇಗಿಗೆ ತುತ್ತಾದರು. ದಿಕ್ಕು ತೋಚದಾಯಿತು. ಆಗ ನೆರವಿತ್ತವರು ಕೆಳದಿ ಸಂಸ್ಥಾನ ಮಠಾಧಿಪತಿಗಳಾಗಿದ್ದ ಶ್ರೀ ರೇವಣಸಿದ್ಧ ಶಿವಾಚಾರ್ಯರು. ಅವರು ಬಸವರಾಜನ ದೊಡ್ಡಪ್ಪನ ಮಗ. ಮುಂದೆ ಬಸವರಾಜನನ್ನು ಮಠಕ್ಕೆ ಮರಿ ಮಾಡಿಕೊಳ್ಳುವಾಸೆ ಅವರಿಗಿದ್ದಂತಿತ್ತು. ಆದುದರಿಂದ, ನಾಟಕ ಕಂಪನಿ ಬಿಡಿಸಿ ಹುಬ್ಬಳ್ಳಿಯ ಮೂರುಸಾವಿರ ಮಠದ ಸಂಸ್ಕೃತ ಪಾಠಶಾಲೆ ಸೇರಿಸಿದರು. ಒಂದು ದಿನ ಬೇರೆ ಊರಿಗೆ ಹೊರಟಿದ್ದ ಪಂಚಾಕ್ಷರಿ ಗವಾಯಿಗಳು ಬಸ್ ತಪ್ಪಿ ಮೂರುಸಾವಿರ ಮಠಕ್ಕೆ ಬಂದರು. ಗುರುಸಿದ್ಧ ಸ್ವಾಮಿಗಳು ಈ ಹುಡುಗ ಛಲೋ ಹಾಡತಾನ. ನಿಮ್ಮ ಸಂಗಡ ಕರಕೊಂಡು ಹೋಗಿರಿ ಎಂದು ಶಿಫಾರಸ್ಸು ಮಾಡಿದರು. ಪಂಚಾಕ್ಷರಿ ಗವಾಯಿಗಳು ಮಗೂ ಒಂದು ಹಾಡ ಹೇಳಪಾ ಅಂದರು. ಬಸವರಾಜ ವೀರಅಭಿಮನ್ಯು ನಾಟಕದ ಭಕ್ತ ಜೀವನ ರಾಮಾ ಸುಜನ ಜೀವನ ಎಂಬ ಪದ ಹಾಡಿದ. ಅಂಧರಾದ ಪಂಚಾಕ್ಷರಿ ಗವಾಯಿಗಳು ಬಸವರಾಜನನ್ನು ಕರೆದು ಮೈದಡವಿ ಎಷ್ಟು ಛಂದ ಗಿರಡಿ ಹೊರಳಸತಿಯಲ್ಲೊ! ಎಲ್ಲಿ ನೋಡೋಣ, ಇನ್ನೊಂದು ಹಾಡು ಎಂದರು. ಬಸವರಾಜ ಅದೇ ನಾಟಕದ ಕರುಣ ಸಾಗರಾ ಪ್ರಭು ಪರಮಾತ್ಮಾ ಹಾಡಿದ. ಪಂಚಾಕ್ಷರಿ ಗವಾಯಿಗಳು ಗುರುಸಿದ್ಧ ಸ್ವಾಮಿಗಳನ್ನುದ್ದೇಶಿಸಿ ಬುದ್ಧೀ ನಮಗ ಹುಡುಗ ಒಪ್ಪಿಗೆ ಆಗ್ಯಾನ. ಇಂದೇ ಕರೆದೊಯ್ಯುವೆ ಎಂದರು. ಬಸವರಾಜನ ಅದೃಷ್ಟ ತೆರೆಯಿತು. ಇದು ನಡೆದದ್ದು ೧೯೩೦ ಜೂನ್ ತಿಂಗಳಲ್ಲಿ.

ಬಸವರಾಜನು ಪಂಚಾಕ್ಷರಿ ಗವಾಯಿಗಳ ಗಿಳಿವಿಂಡು ಸೇರಿದ. ಬೆಳಗ್ಗೆ ನಾಲ್ಕರಿಂದ ಎಂಟರವರೆಗೆ ಸಂಗೀತಪಾಠ. ಆಮೇಲೆ ಸ್ನಾನ, ಪೂಜೆ, ಊಟ, ವಿಶ್ರಾಂತಿ. ಸಂಜೆ ನಾಲ್ಕರಿಂದ ಏಳರವರೆಗೆ ಪುನಃ ಸಂಗೀತಾಭ್ಯಾಸ. ಉಳಿದ ಸಮಯದಲ್ಲಿ ಕನ್ನಡ, ಸಂಸ್ಕೃತ ಕಾವ್ಯ, ಪುರಾಣಗಳ ಅಭ್ಯಾಸ. ದಣಿವರಿಯದ ಗುರು, ದಣಿವರಿಯದ ಶಿಷ್ಯ. ಕೆಲವು ವರ್ಷ ಶಿವಯೋಗಮಂದಿರದಲ್ಲಿ, ಆಮೇಲೆ ಸಂಚಾರ ಸಂಗೀತಶಾಲೆಯೊಂದಿಗೆ ಕರ್ನಾಟಕ ತುಂಬೆಲ್ಲ ಸುತ್ತಾಟ. ಬಸವರಾಜ ಏಕಪಾಠಿ. ಪಂಚಾಕ್ಷರಿ ಗವಾಯಿಗಳು ಅಬ್ದುಲ್‌ಕರೀಮಖಾನ, ಅಖ್ತರಬಾಯಿ, ನಿಸ್ಸಾರ ಹುಸೇನಖಾನ, ಫಯಾಜಖಾನ ಮೊದಲಾದವರ ಗ್ರಾಮೋಫೋನ ಧ್ವನಿಮುದ್ರಿಕೆಗಳನ್ನು ತರಿಸುತ್ತಿದ್ದರು. ಅವುಗಳ ಉಸ್ತುವಾರಿಯನ್ನು ಬಸವರಾಜನಿಗೆ ಒಪ್ಪಿಸಿದ್ದರು. ಅವರೆಲ್ಲ ಬೇರೆ ಬೇರೆ ಶೈಲಿಯ ಗಾಯಕರಾಗಿದ್ದರೂ ಅವರ ಧ್ವನಿಮುದ್ರಿಕೆ ಕೇಳಿ ತದ್ರೂಪ ಹಾಡುತ್ತಿದ್ದ. ಅಂಥ ಗ್ರಹಣಶಕ್ತಿ ಬಸವರಾಜನದು. ಹನ್ನೊಂದು ವರ್ಷ ಕರ್ನಾಟಕ ಹಿಂದುಸ್ತಾನಿ ಪದ್ಧತಿಗಳೆರಡರಲ್ಲೂ ಬಸವರಾಜ ಪಂಚಾಕ್ಷರಿ ಗವಾಯಿಗಳ ಗರಡಿಯಲ್ಲಿ ಪಳಗಿದ.

ಪಂಚಾಕ್ಷರಿ ಗವಾಯಿಗಳು ತಮ್ಮ ಶಿಷ್ಯನ ಸಾಧನೆ ಪ್ರದರ್ಶಿಸಲು ಅವಕಾಶಕ್ಕಾಗಿ ಕಾಯ್ದಿದ್ದರು. ೧೯೩೬ ರಲ್ಲಿ ಹಂಪೆಯಲ್ಲಿ ವಿಜಯನಗರ ಸಾಮ್ರಾಜ್ಯ ಸಂಸ್ಥಾಪನೆಯ ಷಡಶತಮಾನೋತ್ಸವ. ಹದಿನೈದು ಸಾವಿರ

ಶ್ರೋತೃಗಳು ಸೇರಿದ್ದರು. ತಬಲಾ ಸಾಥ ಪುಟ್ಟರಾಜ ಗವಾಯಿಗಳದು. ಅಂದಮೇಲೆ ಕೇಳಬೇಕೆ ? ಕರ್ಣರಸಾಯನ. ಬಸವರಾಜ ರಾಜಗುರು ಬಾಗೇಶ್ರೀ ರಾಗ ಹಾಡಿದರು. ನಂತರ ನಿಜಗುಣ ಶಿವಯೋಗಿಗಳ 'ನೋಡಲಾಗದೆ ದೇವಾ' ಹಾಡಿದರು. ಬೃಹತ್ ಶ್ರೋತೃಸಮೂಹ ಚಪ್ಪಾಳೆ ಸುರಿಸಿತು. ಸಂಘಟಕರು ಒಂದು ಬಂಗಾರದ ಉಂಗುರ, ಐದು ರೂಪಾಯಿ ನೀಡಿದರು. ಅಂದು ಅದು ದೊಡ್ಡ ಮೊತ್ತ. ಬಸವರಾಜರಿಗೆ ಆಗ ತಾನೆ ಹದಿನಾರು ವರ್ಷ. ಮೈಸೂರು ಆಸ್ಥಾನ ವಿದ್ವಾನ್ ಚಿಕ್ಕರಾಮರಾಯರು ವೇದಿಕೆಗೆ ಬಂದು ಬೆನ್ನು ಚಪ್ಪರಿಸಿ, ಗವಾಯಿಗಳು, ಒಳ್ಳೆಯ ಶಿಷ್ಯರತ್ನವನ್ನು ಸಂಪಾದಿಸಿದ್ದಾರೆ ಎಂದು ಹೊಗಳಿದರು.

೧೯೩೮ ರಲ್ಲಿ ಮುಂಬಯಿ ಆಕಾಶವಾಣಿಯಲ್ಲಿ ಪ್ರಥಮ ಕಾರ್ಯಕ್ರಮ ಹದಿನೈದು ನಿಮಿಷಕ್ಕೊಂದರಂತೆ ಎರಡು ರಾಗಗಳು, ಬೆಳಿಗ್ಗೆ ಬಿಲಾವಲ್, ರಾತ್ರಿ ಗೌಡಮಲ್ಹಾರ್. ಸುತ್ತೆಲ್ಲ ಖ್ಯಾತಿ ಪಸರಿಸಿತು. ೧೯೩೮-೪೧ರ ಮಧ್ಯೆ ಬಸವರಾಜ ರಾಜಗುರುಗಳ ಹಲವಾರು ಧ್ವನಿ ಮುದ್ರಿಕೆಗಳು ಹೊರಬಂದವು. ಶ್ಯಾಮ ಕಲ್ಯಾಣ, ದೇಸಿ, ಮಾಲಕಂಸ, ಮೇಘ, ಚಾಂದನಿ ಕೇದಾರ, ಹಂಸಧ್ವನಿ೧೨ ವಚನಗಳು : ಪರಚಿಂತೆ ಎಮಗೆ ಏಕೆ ಅಯ್ಯಾ, ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ, ವಚನದಲ್ಲಿ ನಾಮಾಮೃತ ತುಂಬಿ, ಜಗವ ಸುತ್ತಿಪ್ಪುದು ನಿನ್ನ ಮಾಯೆ, ಮಡಕೆಯ ಮಾಡುವರು. ಮಣ್ಣೆ ಮೊದಲು, ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ ಇತ್ಯಾದಿ. ಅವು ಎಷ್ಟು ಜನಪ್ರಿಯವಾದವೆಂದರೆ ಹಳ್ಳಿಹಳ್ಳಿಯಲ್ಲಿ ಎಲ್ಲರ ನಾಲಗೆಯ ಮೇಲೆ ಅವುಗಳೇ. ವಚನಗಳನ್ನು ರಾಗಾಧಾರಿತ ಮಟ್ಟುಗಳಲ್ಲಿ ಮೊದಲು ಸಂಯೋಜಿಸಿದವರು ಗುರು ಪಂಚಾಕ್ಷರಿ ಗವಾಯಿಗಳು. ವಚನಗಳ ಮೊದಲ ಗಾನಮುದ್ರಿಕೆಗಳು ಹೊರಬಂದುದು ಬಸವರಾಜ ರಾಜಗುರು ಅವರವು. ವಚನಗಾಯನವನ್ನು ಜನಪ್ರಿಯಗೊಳಿಸುವಲ್ಲಿ ಬಸವರಾಜ ರಾಜಗುರು ಅವರ ಪಾತ್ರ ಮಹತ್ವದ್ದು.

ರಾಜಗುರು ಅವರಿಗೆ ಈಗ ಭಾರತಾದ್ಯಂತ ಸುತ್ತಬೇಕು, ಖ್ಯಾತಿ ಪಡೆಯಬೇಕೆಂಬ ಅದಮ್ಯ ಬಯಕೆ. ೧೯೪೧ ರಲ್ಲಿ ಗುರು ಪಂಚಾಕ್ಷರಿ ಗವಾಯಿಗಳ ಆಶೀರ್ವಾದ ಪಡೆದು ಆಗ ಹೊರಟಿದ್ದರು. ಹುಲಿ ಗವಿ ಬಿಟ್ಟು ಅರಣ್ಯಕ್ಕೆ ಬಂದಂತಾಯಿತು. ಸೀದಾ ಮುಂಬಯಿಗೆ ಬಂದರು. ಕಾರ್ಯಕ್ರಮ ನೀಡವುದು, ಇನ್ನೂ ಕಲಿಯುವುದು ಅವರ ವ್ರತ. ಎರಡು ವರ್ಷ ಇದೇ ದಿನಚರಿ. ಮುಂಬಯಿಯಿಲ್ಲಿ ಸವಾಯಿ ಗಂಧರ್ವರ ಸಾಹಚರ್ಯ. ಕೆಲಕಾಲ ಒಂದೇ ಕೋಣೆಯಲ್ಲಿ ವಾಸ. ಅವರಿಂದಲೂ ಕಲಿಕೆ. ಸವಾಯಿ ಗಂಧರ್ವರಿಗೆ ಅರ್ಧಾಂಗವಾಯು ಬಡಿದು ಮುಂಬಯಿ ಬಿಡುವಾಗ ಅವರು 'ಸುರೇಶಬಾಬು ಮಾನೆ' ಅವರಲ್ಲಿ ಹೀಗೆ ಆಗ್ರಹಿಸಿದರು. ಈ ಹುಡುಗನ ಮೇಲೆ ನಿಮ್ಮ ಸಂಪೂರ್ಣ ಲಕ್ಷ್ಯವಿರಲಿ. ೧೯೪೩ ರಲ್ಲಿ ಬಸವರಾಜ ರಾಜಗುರು ನಾಗಪುರದ ಅಖಿಲ ಭಾರತ ಸಂಗೀತ ಸಮ್ಮೇಳನದಲ್ಲಿ ಕಚೇರಿ ನೀಡಿದರು. ಅಲ್ಲಿಂದ ಅವರ ಸಂಗೀತ ಯಶೋಯಾತ್ರೆ ಆರಂಭಗೊಂಡಿತು. ರಾಜಗುರು ಹಾಡದ ಸಮ್ಮೇಳನಗಳಿಲ್ಲ, ಆಕಾಶವಾಣಿ ಕೇಂದ್ರಗಳಿಲ್ಲ, ಗುರುಗಳನ್ನರಸಿ ತಿರುಗಾಡದ ಊರುಗಳಿಲ್ಲ. ಅವರ ಸಂಗೀತ ಜ್ಞಾನದಾಹ ಅಂಥದು.

ಗುರುಗಳನ್ನರಸಿ ರಾಜಗುರು ಲಾಹೋರಿಗೆ ಬಂದರು. ಪಂಚಾಕ್ಷರಿ ಗವಾಯಿಗಳ ಗುರುಗಳೂ ಕಿರಾಣಾ ಘರಾಣೆಯ ಅಧ್ವರ್ಯರಾದ ಅಬ್ದುಲ್ ವಹೀದಖಾನರು 'ಪಂಚಾಕ್ಷರಿ ಕಾ ಶಾಗಿರ್ದ ಹೈ' ಎಂದು ಸಂತಸಪಟ್ಟರು ನಂತರ ಎರಡೂವರೆ ವರ್ಷ ವಿದ್ಯಾದಾನ ಸಂಪಾದಿಸಲು ಕರಾಚಿಗೆ ಹೋಗಿ ಆರು ತಿಂಗಳು ಇದ್ದರು. ಭಾರತದಿಂದ ಪಾಕಿಸ್ತಾನ ವಿಭಜನೆಯ ಆಂದೋಲನ. ೧೯೪೭ ರಷ್ಟೊತ್ತಿಗೆ ಹಿಂದೂ ಮುಸ್ಲಿಮ ದ್ವೇಷದ ಕಾಳ್ಗಿಚ್ಚು ಹಬ್ಬಿತ್ತು. ಗುರು ಲತೀಫ ಖಾನರು 'ಬೇಟಾ, ಅಬ್ ತುಮ್ ಚಲೆ ಜಾವೊ. ಯಂಹಾ ಖೈರಿಯತ್ ನಹೀಂ ಹೈ' ಎಂದು ಕಳಿಸಿಕೊಟ್ಟರು. ರಾಜಗುರು ಕೈಯಲ್ಲಿ ಜೀವ ಹಿಡಿದುಕೊಂಡು ರೈಲುಗಾಡಿಯೇರಿದರು. ನಿಷ್ಕಾರಣ, ನಿಷ್ಕರುಣ ಕೊಲೆಯನ್ನು ಕಣ್ಣಾರೆ ಕಂಡರು. ಭಾರತ-ಪಾಕ್ ನಡುವೆ ಅದೇ ಕೊನೆಯ ರೈಲಾಯಿತು.

ಬಸವರಾಜ ರಾಜಗುರು ತಮ್ಮ ಗಾಯನ ಪೌರುಷ ಮೆರೆದ ಪ್ರಸಂಗಗಳು ಹತ್ತು ಹಲವು. ಅವರಿಗೆ ತಮ್ಮ ಗಾಯನ ಸಾಮರ್ಥ್ಯದ ಬಗೆಗೆ ಅಳುಕಿಲ್ಲದ ಆತ್ಮವಿಶ್ವಾಸ. ಅವರೊಬ್ಬ ಜಿದ್ದಿ ಗಾಯಕ. ಸೋಲುವವರೆ ಅಲ್ಲ. ಹಿಂದೆ ಮುಂದೆ ಹಾಡುವವರಿದ್ದರೆ ಎಲ್ಲಿಲ್ಲದ ಉತ್ಸಾಹ. ಅವರನ್ನು ಮೀರುವಂತೆ ಹಾಡುತ್ತಿದ್ದರು. ೧೯೫೫ ದಿಲ್ಲಿಯ ನಗರಭವನ. ವಿಷ್ಣು ದಿಗಂಬರ ಪಲುಸ್ಕರರ ಪುಣ್ಯತಿಥಿ, ಭಾರತದ ಎಲ್ಲೆಡೆಗಳಿಂದ ಬಂದಿದ್ದ ಉದ್ದಾಮ ಸಂಗೀತಗಾರರ ಸಮಾವೇಶ. ಓಂಕಾರನಾಥ ಠಾಕೂರ ಭರ್ಜರಿ ಹಾಡಿದರು. ಆಮೇಲೆ ಹಾಡಲು ಗಾಯಕರು 'ನಾ ಒಲ್ಲೆ ನೀ ಒಲ್ಲೆ' ಎನ್ನತೊಡಗಿದರು. ವಾದ್ಯ ಸಂಗೀತದ ಸಿದ್ಧತೆ ನಡೆಯಿತು. ಅಷ್ಟರಲ್ಲಿ ಬಸವರಾಜ ರಾಜಗುರು ನಾ ಹಾಡುವೆ ಎಂದರು. ಸಭೆ ಮೂಕವಿಸ್ಮಯ ಆಯಿತು. ನಿಮ್ಮ ಸಾಧನೆ ಪ್ರದರ್ಶಿಸಿರಿ ಎಂದು ಸಂಘಟಕರ ಕೊಂಕುನುಡಿ. ರಾಜಗುರು ನಾಯಕಿ ಕಾನಡಾ ಹಾಡಿ ಶ್ರೋತೃಗಳನ್ನು ಮಂತ್ರಮುಗ್ಧಗೊಳಿಸಿದರು. ಅದೆಂಥ ಎದೆಗಾರಿಕೆ. ಆದವರ ಪ್ರಥಮ ದಿಲ್ಲಿ ಬೈಠಕ್ ಬೇರೆ.

೧೯೫೫, ನಾಂದೇಡ ಸಂಗೀತ ಸಮ್ಮೇಳನ. ರಾಜಗುರು ರಾತ್ರಿ ಹಾಡಬೇಕಿತ್ತು. ಬೆಳಿಗ್ಗೆ ೮ ಗಂಟೆಗೆ ನಾಂದೇಡ ತಲುಪಿದ್ದರು. ಬೆಳಿಗ್ಗೆ ಹಾಡಬೇಕಿದ್ದ ಡಿ.ವಿ.ಪಲುಸ್ಕರ ಬಂದಿರಲಿಲ್ಲ. ಸಂಘಟಕರು ಬೆಳಿಗ್ಗೆಯೆ ಹಾಡುವಂತೆ ರಾಜಗುರು ಅವರನ್ನು ವಿನಂತಿಸಿಕೊಂಡರು. ಮುಖ ತೊಳೆದುಕೊಂಡು ಹಾಲು ಕುಡಿದು ವೇದಿಕೆಯೇರಿದರು. ಗಾಯನ ಮುಗಿಸಲು ಶ್ರೋತೃಗಳು ಬಿಡಲೊಲ್ಲರು. ಸಂಗೀತ ಬಲ್ಲ ಅಂದಿನ ಆಕಾಶವಾಣಿ ಮಂತ್ರಿ ಬಿ.ವಿ.ಕೇಸ್ಕರ ಪುಟ್ಟ ಭಾಷಣ ಮಾಡಿ ಬಸವರಾಜ ರಾಜಗುರು ಡಿ.ವಿ.ಪಲುಸ್ಕರ ಬಾರದ ನಿರಾಸೆಯನ್ನು ನಿವಾರಿಸಿದರು. ಎಷ್ಟೊತ್ತಿನಲ್ಲಾದರೂ ಹಾಡಿಸಿರಿ. ಅವರ ಗಾಯನ ಎಂದೂ ಹುಸಿ ಹೋಗದು. ಬಸವರಾಜ ರಾಜಗುರು ಹುಕುಮಿ ಎಕ್ಕಾ ಇದ್ದಂತೆ ಎಂದು ಕೊಂಡಾಡಿದರು.

ಬಸವರಾಜು ರಾಜಗುರು ಅವರದು ಅಪಾರ ವೈವಿಧ್ಯ ಬಹುಶ್ರುತತೆ ಧ್ರುಪದ, ಧಮಾರ್, ಖ್ಯಾಲ, ಠುಮರಿ, ಗಝಲ್, ವಚನಗಳು, ಕನ್ನಡ ಮತ್ತು ಮರಾಠಿ ರಂಗಗೀತೆಗಳು, ಕನ್ನಡ ಮತ್ತು ಮರಾಠಿ ಭಾವಗೀತೆಗಳು, ದಾಸರ ಪದಗಳು, ಕೀರ್ತನೆಗಳು, ಬಯಲಾಟದ ಹಾಡುಗಳು. ಏನೇ ಹಾಡಿದರೂ ಇಂಚರ ಸಂಚಾರ.

ಬಸವರಾಜ ರಾಜಗುರು ಚೀಜುಗಳ ಭಂಡಾರವೇ ಆಗಿದ್ದರು. ಒಂದೊಂದು ರಾಗದಲ್ಲೂ ೪೦-೪೫ ಚೀಜುಗಳನ್ನು ಹಾಡಬಲ್ಲವರಾಗಿದ್ದರು. ಅವುಗಳಿಗೆ ಸ್ವರಪ್ರಸ್ತಾರ ಹಾಕಿ ಪ್ರಕಟಿಸಿದ್ದರೆ ಅಮೂಲ್ಯ ಗ್ರಂಥವಾಗಿರುತ್ತಿತ್ತು.

''ಬಸವರಾಜ ರಾಜಗುರು ಗಾಯನವೆಂದರೆ ಕಿರಾಣಾ, ಗ್ವಾಲಿಯರ, ಪಟಿಯಾಲಾ ಘರಾಣೆಗಳ ತ್ರಿವೇಣಿ ಸಂಗಮ. ಆದ ಹನ್ನೊಂದು ಗುರುಗಳಲ್ಲಿ ಅಭ್ಯಸಿಸಿದ ಫಲ ಪಂಚಾಕ್ಷರಿ ಗವಾಯಿಗಳು, ನೀಲಕಂಠಬುವಾ ಮಿರಜಕರ, ಸವಾಯಿಗಂಧರ್ವ, ಸುರೇಶಬಾಬು ಮಾನೆ, ಬಶೀರಖಾನ, ಮುಬಾರಕ ಅಲಿ, ಅಬ್ದುಲ್ ವಹೀದಖಾನ, ಲತೀಫಖಾನ, ಇನಾಯತುಲ್ಲಾಖಾನ, ರೋಶನ ಅಲಿ, ಗೋವಿಂದರಾವ ಟೇಂಬೆ. ಹೀಗಾಗಿ, ಅವರ ಗಾಯನದಲ್ಲಿ ಎಲ್ಲಿಲ್ಲದ ಸಾರಸಂಗ್ರಹ ಗುಣ. ಇವರೆಲ್ಲರ ಪ್ರಭಾವಗಳನ್ನು ತೇಪೆಯಾಗದಂತೆ ತಮ್ಮ ಪ್ರತಿಭೆಯ ಮೂಸೆಯಲ್ಲಿ ಎರಕ ಹೊಯ್ದುದು ರಾಜಗುರು ಅವರ ದೊಡ್ಡ ಸಾಧನೆ''[೪೦] ಎಂದು ಡಾ.ಸದಾನಂದ ಕನವಳ್ಳಿಯವರು ಬರೆಯುತ್ತಾರೆ.

ಬಸವರಾಜ ರಾಜಗುರು ಅವರದು ದೈವದತ್ತ ಕಂಠ. ಆ ಎಂದರೆ ಸಾಕು, ಶ್ರೋತೃ ಮಂತ್ರಮುಗ್ಧ. ಧ್ವನಿ ಮೇಣದಂತೆ ಮಿದುವು. ಅತ್ಯಧಿಕ ಸ್ಥಿತಿಸ್ಥಾಪಕತೆ. ಶೃತಿಗೆ ಚ್ಯುತಿಯಾಗದಂತೆ ಮೂರು ಸಪ್ತಕಗಳಲ್ಲಿ ಲೀಲಾಜಾಲ ಸಂಚಾರ. ತಾರಸಪ್ತಕದಲ್ಲಂತೂ ವಿಜೃಂಭಣೆ. ಗಝಲ್ ರಾಣಿ ಬೇಗಂ ಅಖ್ತರ್ ರಾಜಗುರು ಯಾನೆ ಸೂರ ಕಾ ಬಾದಶಾಹ ಎಂದು ಉದ್ಗರಿಸಿದ್ದು ಸುಮ್ಮನೆ ಅಲ್ಲ.

ಒಮ್ಮೊಮ್ಮೆ ಇದ್ದಕ್ಕಿದಂತೆ ಹಿಂದುಸ್ತಾನಿ ಗಾಯನ ಮಧ್ಯದಲ್ಲಿ ಕರ್ನಾಟಕ ಸ್ವರಪ್ರಸ್ತಾರ ಚಿಮ್ಮಿ ಬರುತ್ತಿದ್ದುದಿದೆ ಒಮ್ಮೆ ಅಹಿರಭೈರವ ಹಾಡಿದ ಮೇಲೆ ಸಮಾಂತರ ಕರ್ನಾಟಕ ರಾಗ ಚಕ್ರವಾಕಮ್‌ನಲ್ಲಿ ತ್ಯಾಗರಾಜ ಕೃತಿ ಹಾಡಿದ್ದುಂಟು. ಎರಡೂ ಪದ್ಧತಿಗಳಲ್ಲಿ ಪರಿಣತಿ.

''ಬಸವರಾಜ ರಾಜಗುರು ಅವರ ತೀವ್ರಗತಿಯ ತಾನಗಳಲ್ಲಿ ಬಡೆ ಗುಲಾಮ ಅಲಿ ಖಾನರ ನಿರಾಯಾಸತೆ, ಸಂಕೀರ್ಣತೆ ಇವೆ. ತೀವ್ರಗತಿಯಲ್ಲೂ ಇಂಚರ ಅಬಾಧಿತ. ಕೆಲವು ಗಾಯಕರ ಧ್ವನಿಯಾದರೊ ತೀವ್ರಗತಿಯಲ್ಲಿ ಕೀರಲಾಗಿ ಬಿಡುತ್ತದೆ. ಸ್ವರಶುದ್ಧತೆಗೆ ಚ್ಯುತಿ ಬಾರದ ಸ್ಪಷ್ಟೋಚ್ಚಾರಣೆ ರಾಜಗುರು ಅವರ ಗಾಯನದಲ್ಲಿ. ವೃದ್ಧ ಶ್ರೋತೃಗಳು ರಾಜಗುರು ಗಾಯನ ಆಲಿಸುವಾಗ ಇದು ದೀನಾನಾಥ ಅಂಥದು, ಇದು ನಾರಾಯಣಬುವಾ ಅವರ ಮುರ್ಕಿ, ಇದು ಕೇಶರಾವ್‌ರ ಚಕ್ರಿತಾನ, ಇದು ಶಂಕರರಾವ್‌ರ ಸ್ವರ ಇತ್ಯಾದಿಯಾಗಿ ಗುರುತಿಸುತ್ತಿದ್ದರು. ರಾಜಗುರು ಗಾಯನದಲ್ಲಿ ಘಸೀಟ್, ಮುರ್ಕಿ, ಗಮಕ್, ಮೀಂಡ್, ಸರಗಮ್, ಬೋಲ್‌ತಾನ್ ಏನೆಲ್ಲ ಮಸಾಲೆಗಳು ! ಇವೆಲ್ಲಕ್ಕೆ ಉಪ್ಪಿನಕಾಯಿಯಂತೆ ಅದ್ಭುತ ಅಶುಚಮತ್ಕಾರ. ಅದೊಂದು ನಳಪಾಕ!!''[೪೧] ಎಂದು ಕನವಳ್ಳಿಯವರು ಅಭಿಪ್ರಾಯಪಡುತ್ತಾರೆ.

---

೪೦. ಕಲಾಚೇತನ : ಡಾ. ಸದಾನಂದ ಕನವಳ್ಳಿ, ಪುಟ-೨೮೧

೪೧. ಅದೇ, ಪುಟ-೨೮೧

ಬಸವರಾಜ ರಾಜಗುರು ಅವರಿಗೆ ಹಲವು ಬಿರುದು, ಪ್ರಶಸ್ತಿಗಳು ಸಂದಿವೆ. ಇದನ್ನು ಸರಕಾರ, ಸಂಗೀತ ಪ್ರೇಮಿಗಳು ಮತ್ತು ಸಂಸ್ಥೆಗಳು ಕೊಡಮಾಡಿವೆ. ಗಾನಕೋಕಿಲೆ, ಸಂಗೀತ ಸುಧಾಕರ, ಗಾನಗಂಧರ್ವ, ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ, ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ, ಮುಂಬಯಿಯ ಸೂರಸಿಂಗಾರ್ ಸಂಸದ್‌ನ ಸ್ವರವಿಲಾಸ, ಕರ್ನಾಟಕ ವಿಶ್ವವಿದ್ಯಾಲಯದ ಗೌರವ ಡಾಕ್ಟರೇಟ್, ಪದ್ಮಭೂಷಣ.

ಆದರೆ, ಇವೆಲ್ಲಕ್ಕೂ ಮಿಗಿಲಾದ ಪ್ರಶಸ್ತಿಯೆಂದರೆ ಬಸವರಾಜ ರಾಜಗುರು ಅವರು ಬಳುವಳಿಯಾಗಿ ಬಿಟ್ಟು ಹೋಗಿರುವ ಶಿಷ್ಯವೃಂದ. ಡಾ. ಹನುಮಣ್ಣ ನಾಯಕ ದೊರೆ, ಸೋಮನಾಥ ಮರಡೂರ, ಷಣ್ಮುಖ ಗೊಜನೂರ, ಗಣಪತಿ ಭಟ್ಟ ಹಾಸಣಗಿ, ಪರಮೇಶ್ವರ ಹೆಗಡೆ, ಶ್ರೀಪಾದ ಹೆಗಡೆ, ಶಾಂತರಾಮ ಹೆಗಡೆ, ಪೂರ್ಣಿಮಾ ಭಟ್ಟ,ಸಂಗೀತಾ ಕಟ್ಟಿ, ರೋಹಿಣಿ ದೇಶಪಾಂಡೆ, ನಚಿಕೇತ ಶರ್ಮಾ ಮುಂತಾದವರು. ಇವರಲ್ಲನೇಕರು ಉತ್ತಮ ಗಾಯಕರಾಗಿದ್ದು ಗುರುಪರಂಪರೆಯನ್ನು ಮುಂದುವರಿಸಿದ್ದಾರೆ. ಇಷ್ಟೊಂದು ದೊಡ್ಡ ಶಿಷ್ಯ ಪರಿವಾರ ಹೊಂದಿದ್ದ ಸಂಗೀತಗಾರರು ಅಪರೂಪವೆಂದೇ ಹೇಳಬೇಕು.

### ೫.೧೧. ಪಂಡಿತ ಭೀಮಸೇನ ಜೋಶಿ

ಭೀಮಸೇನರ ಕುಟುಂಬ ಅಂದಿನ ಧಾರವಾಡ ಜಿಲ್ಲೆಯ ಒಂದು ತಾಲೂಕು ಪಟ್ಟಣವಾದ ಗದುಗಿನದು. ಭೀಮಸೇನರ ಅಜ್ಜ ಭೀಮಾಚಾರ್ಯರು ಖ್ಯಾತನಾಮರು, ಕೀರ್ತನಕಾರರು ಮತ್ತು ನಿಷ್ಠಾವಂತ ಸಂಗೀತಗಾರರು ಕೂಡ.

ಭೀಮಸೇನರ ತಂದೆ ಗುರುರಾಜರು ಭಾಷೆಗಳಲ್ಲಿ ಸ್ನಾತಕೋತ್ತರ ಪದವೀಧರರು ಮತ್ತು ಶಿಕ್ಷಣ ವಿಷಯದಲ್ಲಿ ಪದವೀಧರರು. ಬುದ್ಧಿವಂತ ಶಿಕ್ಷಕ, ಶಿಕ್ಷಣ ತಜ್ಞ ಮತ್ತು ಘನ ಸಂಸ್ಕೃತ ಪಂಡಿತರೆಂದು ಹೆಸರು ಮಾಡಿದವರು. ಇಂದಿಗೂ ಉತ್ತಮ ಕೃತಿಯೆಂದು ಮೆಚ್ಚುಗೆ ಪಡೆದಿರುವ ಬೃಹತ್ ಕನ್ನಡ-ಇಂಗ್ಲಿಷ್ ನಿಘಂಟನ್ನು ಬರೆದವರು. ಪ್ರಖ್ಯಾತ ಸಂತ ರಾಘವೇಂದ್ರ ಸ್ವಾಮಿಗಳ ಬೋಧನೆಗಳನ್ನು ಕುರಿತು ಅಷ್ಟೇ ದೊಡ್ಡ ಗಾತ್ರದ ಕೃತಿಯನ್ನು ಇಂಗ್ಲಿಷಿನಲ್ಲಿ ರಚಿಸಿದವರು. ಭೀಮಸೇನರ ಕಕ್ಕ ಗೋವಿಂದಾಚಾರ್ಯರು ಪ್ರಸಿದ್ಧ ಕನ್ನಡ ಲೇಖಕ-ನಾಟಕಕಾರ ಮತ್ತು ಪ್ರಕಾಶಕರಾಗಿ ಹೆಸರು ಪಡೆದವರು.

ಫೆಬ್ರುವರಿ ೧೪, ೧೯೨೨ ಆ ವರ್ಷದ ರಥಸಪ್ತಮಿ. ಅದು ಸೂರ್ಯದೇವನಿಗೆ ಸಂಬಂಧಿಸಿದ ದಿನ. ಹಿಂದೂಗಳಿಗೆ ಅದು ಪವಿತ್ರ ದಿನಗಳಲ್ಲೊಂದು. ಭೀಮಸೇನ ಜೋಶಿಯವರು ಹುಟ್ಟಿದ್ದು ಅಂದು.

ಸಂಗೀತಕ್ಕೆ ಭೀಮಸೇನರ ಸೂಕ್ಷ್ಮಗ್ರಾಹಿತ್ವ ಅವರೊಟ್ಟಿಗೆಯೇ ಬೆಳೆಯಿತು. ಏಳು ವರ್ಷ ತಲುಪುವಷ್ಟರಲ್ಲಿ ಸಂಗೀತ ಅವರಿಗೊಂದು ಗೀಳು ಆಗಿತ್ತು. ಅವರಿಗೆ ಕಾಣದಂತೆ ಎಚ್ಚರಿಕೆ ವಹಿಸಿ ಅಡಗಿಸಿಟ್ಟಿದ್ದ ಅಜ್ಜನ

ತಂಬೂರಿಯನ್ನು ಪತ್ತೆ ಹಚ್ಚಿದ್ದು ಆ ವಯಸ್ಸಿನಲ್ಲಿಯೇ. ಮನೆ ಮುಂದೆ ಹಾಯ್ದು ಹೋಗುವ ಭಜನಾ ಮೇಳಗಳ ಸಂಗೀತ ಲಯಗಳಿಗೆ ಮೋಹಿತರಾಗಿ ಹಿಂಬಾಲಿಸಿಹೋದ ಸಂದರ್ಭಗಳನೇಕ. ಕೆಲವೊಮ್ಮೆ ಪೊಲೀಸರ ಸಹಾಯದಿಂದ ಮನೆಗೆ ಮುಟ್ಟಿಸುತ್ತಿದ್ದರು. ಈ ಸಂಗೀತದ ಗೀಳಿನಿಂದಾಗಿ ಭೀಮಸೇನರು ಕಾಣೆಯಾಗುವದು ಮೇಲಿಂದ ಮೇಲೆ ಜರುಗತೊಡಗಿದಾಗ ಸಾಕಾಗಿಹೋಗಿದ್ದ ತಂದೆ ಮಗನ ಅಂಗಿಯ ಡುಬ್ಬದ ಮೇಲೆ ಹುಡುಗನ ಹೆಸರು, ವಿಳಾಸಗಳನ್ನು ಗಟ್ಟಿಯಾಗಿ ಹೊಲಿಸಿದರು.

ಗುರುರಾಜರಿಗೆ ಮಗನ ಸಂಗೀತ ಮೋಹದ ಬಗೆಗೆ ಸಂದೇಹವಿರಲಿಲ್ಲ. ಮನೆಯಲ್ಲಿನ ಅಧ್ಯಯನ, ವಿದ್ವತ್ತುಗಳ ವಾತಾವರಣಕ್ಕೆ ತಕ್ಕಂತೆ ಮಗ ಕಲೆ, ವಿಜ್ಞಾನ, ವೈದ್ಯಕೀಯ ಇಲ್ಲವೆ ಇಂಜನೀಯರ್ ಪದವೀಧರನಾಗಬೇಕೆಂದು ಅಪೇಕ್ಷಿಸಿದ್ದು ಸಹಜವೆ. ಆದುದರಿಂದ ಉಪನಯನದ ನಂತರ ಭೀಮಸೇನರನ್ನು ಶಾಲೆಗೆ ಸೇರಿಸಿದರು. ಸಂಸ್ಕೃತ ಕಲಿಯಲು ಪ್ರದ್ಯುಮ್ನಾಚಾರ ವರ್ಖೇಡಕರ ಎಂಬ ಸ್ಥಳೀಯ ಪಂಡಿತರಲ್ಲಿ ಕಳಿಸಿದರು. ಭೀಮಸೇನರ ಸ್ಮರಣಶಕ್ತಿ ಎಷ್ಟು ಧಾರಕವಾಗಿತ್ತೆಂದರೆ ಇಡೀ ಅಮರಕೋಶವನ್ನು ಕೆಲವೇ ತಿಂಗಳುಗಳಲ್ಲಿ ಕಂಠಪಾಠ ಮಾಡಿದರು.

ಆದರೆ, ಭೀಮಸೇನರ ಸಂಗೀತಗೀಳು ಕಿಂಚಿತ್ತೂ ಕಡಿಮೆಯಾಗಲಿಲ್ಲ. ಶಾಲೆಯಿಂದ ಮನೆಗೆ ತಡವಾಗಿ ಬರಹತ್ತಿದರು. ಮನೆಗೆ ಮರಳುವಾಗ ದಾರಿಯಲ್ಲಿದ್ದ ಧ್ವನಿಮುದ್ರಿಕೆಗಳನ್ನು ಮಾರುವ ಅಂಗಡಿಗಳಲ್ಲಿ ಸಂಭಾವ್ಯ ಗಿರಾಕಿಗಳಿಗೆ ಒಂದಾದ ಮೇಲೊಂದರಂತೆ ಹಚ್ಚಿತೋರಿಸುತ್ತಿದ್ದ ಸಂಗೀತಕ್ಕೆ ಕಿವಿಗೊಡುತ್ತಿದ್ದರು. ಮೂರನೇ ದಶಕದ ಜನಪ್ರಿಯ ಹಾಡುಗಾರರಾದ ನಾರಾಯಣರಾವ್ ವ್ಯಾಸ, ಪಂಡಿತ ನಗರಕರರ ಧ್ವನಿಮುದ್ರಿಕೆಗಳನ್ನು ಮಂತ್ರಮುಗ್ಧರಾಗಿ ಕೇಳುತ್ತ ತಾವು ಕೇಳಿದ ಸಂಗೀತದ ಬಹುಪಾಲನ್ನು ಹೀರಿಕೊಂಡರು.

ಅವರು ಕೆಲವು ಭಜನೆಗಳನ್ನು ಕಲಿತುಕೊಂಡು ಪ್ರತಿಗುರುವಾರ ಸ್ಥಳೀಯ ಗುಡಿಯೊಂದರಲ್ಲಿ ಜರುಗುತ್ತಿದ್ದ ಭಜನಾ ಕಾರ್ಯಕ್ರಮದಲ್ಲಿ ಹಾಡುತ್ತಿದ್ದರು. ಭೀಮಸೇನರ ಭಾವಪೂರ್ಣ ನಿರೂಪಣೆ ಅವರ ತಂದೆ ತಾಯಿ, ಸಂಬಂಧಿಕರು ಮತ್ತು ಅಭಿಮಾನಿಗಳನ್ನೊಳಗೊಂಡ ಶ್ರೋತೃಗಳನ್ನು ಯಾವಾಗಲೂ ಆಕರ್ಷಿಸುತ್ತಿತ್ತು.

ತಮ್ಮ ಮಗನ ಸಂಗೀತ ಪ್ರತಿಭೆಗೆ ದಿಕ್ಕು ಒದಗಿಸಲು ಗುರುರಾಜರು ಚನ್ನಪ್ಪ ಕುರ್ತಕೋಟಿ ಎಂಬುವರನ್ನು ತಿಂಗಳಿಗೆ ಐದು ರೂಪಾಯಿ ಸಂಭಾವನೆಯ ಮೇಲೆ ಗಾಯನ ಕಲಿಸಲು ನಿಯಮಿಸಿದರು. ವೃತ್ತಿಯಿಂದ ಅಗಸರಾಗಿದ್ದರೂ ಪ್ರವೃತ್ತಿಯಿಂದ ಸಂಗೀತಗಾರರಾಗಿದ್ದ ಚನ್ನಪ್ಪ, ಇನಾಯತಖಾನರಲ್ಲಿ ಕಲಿತಿದ್ದರು. ಏಳು ತಿಂಗಳು ಕಾಲ ಚನ್ನಪ್ಪನವರು ಭೀಮಸೇನರಿಗೆ ಭೈರವ ಭೀಮಪಲಾಸಿ ರಾಗಗಳಲ್ಲದೆ ಹಾರ್ಮೋನಿಯಮ್ ನುಡಿಸಲೂ ಕಲಿಸಿದರು.

ಆಮೇಲೆ ಹೆಚ್ಚಿನ ಶಿಕ್ಷಣಕ್ಕಾಗಿ ಪಂಡಿತ ಶಾಮಾಚಾರ್ಯರನ್ನು ಗೊತ್ತು ಮಾಡಿದರು. ಶಾಮಾಚಾರ್ಯರು ಪಂಡಿತ ಪುರೋಹಿತ, ಗಾಯಕ ಹಾಗೂ ಹಾರ್ಮೋನಿಯಮ್ ವಾದಕರಾಗಿದ್ದರು. ಗಾಯನ ಮತ್ತು

ಹಾರ್ಮೋನಿಯಮ್ ಎರಡರ ಮೇಲೂ ಭೀಮಸೇನರು ತಮ್ಮ ಪ್ರಭುತ್ವ ಸ್ಥಾಪಿಸಲು ಅವರು ನೆರವಾದರು. ಚನ್ನಪ್ಪ-ಶಾಮಾಚಾರ್ಯರಲ್ಲಿ ಭೀಮಸೇನರ ಸಂಗೀತ ಶಿಕ್ಷಣ ನಿಯಮಿತ ಶಾಲಾ ಶಿಕ್ಷಣದ ಜತೆಗೇ ಸಾಗಿತ್ತು.

ಒಂದು ಬಾರಿ ಅಬ್ದುಲ್ ಕರೀಮಖಾನರ ರಾಗ ಬಸಂತ (ಫಗವಾ ಬ್ರಿಜದೇಖನ ಕೊ) ಮತ್ತು ಝಿಂಝೋಟಿ ಠುಮರಿ (ಪಿಯಾಬಿನ ನಹಿ ಅವತ ಚೈನ) ಈ ಧ್ವನಿಮುದ್ರಿಕೆಗಳನ್ನು ತಮ್ಮ ಪ್ರೀತಿಯ ಅಂಗಡಿಯಲ್ಲಿ ಆಲಿಸಿದ ಭೀಮಸೇನರಿಗೆ ಅವುಗಳನ್ನು ಎಷ್ಟು ಕೇಳಿದರೂ ಸಾಕಾಗಲಿಲ್ಲ.

ಭೀಮಸೇನರ ತಳಮಳಕ್ಕೆ ತುಪ್ಪ ಸುರಿದದ್ದು ಸವಾಯಿಗಂಧರ್ವರ ಗಾಯನ. ಗದುಗಿನ ಸಮೀಪವಿರುವ ಕುಂದಗೋಳಕ್ಕೆ ತಂದೆಯೊಂದಿಗೆ ಹೋದಾಗ ಕೇಳಲು ಸಿಕ್ಕಿತು ಸವಾಯಿಗಂಧರ್ವರ ಸಂಗೀತ. ಅದು ತಮಗೆ ಪ್ರಿಯವಾಗಿದ್ದ-ಪರಿಚಯವಿದ್ದ ಅಬ್ದುಲ್ ಕರೀಮಖಾನರ ಬಸಂತ ಮತ್ತು ಝಿಂಝೋಟಿ ಧ್ವನಿಮುದ್ರಿಕೆಗಳನ್ನು ನೆನಪಿಸುವಂತೆ ಇತ್ತು. ಇದರಿಂದ ಅವರ ಮೇಲೆ ಎಷ್ಟು ಗಾಢಪರಿಣಾಮವಾಯಿತೆಂದರೆ ತಾವು ಸವಾಯಿಗಂಧರ್ವರಲ್ಲಿ ಕಲಿಯುವ ಇಚ್ಛೆ ವ್ಯಕ್ತಪಡಿಸಿದರು. ಆದರೆ ಕೆಲವೊಂದು ವಿವರಿಸಲಾಗದ ಪರಿಸ್ಥಿತಿಗಳಿಂದಾಗಿ ಇದು ಸಾಧ್ಯವಿರಲಿಲ್ಲ. ಆಗ ಭೀಮಸೇನರಿಗೆ ಕೇವಲ ೧೧ ವರ್ಷ. ಆದರೆ ಗುರುವಿನ ಅನ್ವೇಷಣೆಯ ಛಲ ಕಡಿಮೆ ಇರಲಿಲ್ಲ.

ಒಮ್ಮೆ ಮಧ್ಯಾಹ್ನ ಊಟ ಮಾಡುತ್ತಿದ್ದಾಗ ಅನ್ನಕ್ಕೆ ಇನ್ನೊಂದು ಚಮಚ ತುಪ್ಪ ಹಾಕಬೇಕೆಂದು ಭೀಮಸೇನ ಹಟ ಹಿಡಿದರು. ಅದಕ್ಕೆ ಪ್ರತಿಯಾಗಿ ಸೌಮ್ಯ ಬುದ್ಧಿವಾದ ಹೇಳಿದಾಗ ಅದೇ ಒಂದು ನೆಪದಿಂದ ಒಂದು ಮುದ್ದೆಯಾದ ಅಂಗಿ, ಅರ್ಧ ಚಣ್ಣ ಧರಿಸಿದ್ದ ಭೀಮಸೇನ ಯಾರಿಗೂ ಗೊತ್ತಾಗದಂತೆ ಗದಗ ರೇಲ್ವೆ ನಿಲ್ದಾಣಕ್ಕೆ ಬಂದರು. ಜೇಬಿನಲ್ಲಿ ದುಡ್ಡಿಲ್ಲ. ಆದರೂ ಸಾಹಸದಿಂದ ಟಿಕೆಟ್‌ರಹಿತ ಪ್ರಯಾಣಕ್ಕೆ ತಯಾರಾಗಿ ವಿಜಾಪುರಕ್ಕೆ ಹೊರಟಿದ್ದ ಗಾಡಿ ಏರಿದರು.

ಬಿಜಾಪುರದಲ್ಲಿ ಒಂದು ದಿನ ಭೀಮಸೇನರ ಗಾಯನದಿಂದ ಹರ್ಷಗೊಂಡ ಸಂಗೀತಪ್ರೇಮಿ ದಾರಿಹೋಕನೊಬ್ಬ "ನಿನ್ನ ಸಂಗೀತಾಕಾಂಕ್ಷೆ ಈಡೇರಿಸಿಕೊಳ್ಳಬೇಕಿದ್ದರೆ ಗ್ವಾಲಿಯರ್‌ಗೆ ಹೋಗು" ಎಂದು ಹೇಳಿದ. ಅದು ಆಗ ಮಧ್ಯಭಾರತದ ದೊಡ್ಡ ಸಂಸ್ಥಾನವೊಂದರ ರಾಜಧಾನಿಯಾಗಿತ್ತು. ನವೋತ್ಸಾಹದಿಂದ ಭೀಮಸೇನ ತನ್ನ ಅಲ್ಪಗಳಿಕೆಯಲ್ಲಿಯೇ ಹಣ ಉಳಿಸುತ್ತ ನಡೆದರು. ಆದರೂ ಅಷ್ಟು ಸಾಲುತ್ತಿರಲಿಲ್ಲ. ಧೃತಿಗೆಡದೆ ಮತ್ತೊಮ್ಮೆ ಟಿಕೆಟ್ ಇಲ್ಲದೆ ಪುಣೆಗೆ ಹೋಗುವ ರೈಲನ್ನು ಏರಿದ. ಮೊದಲಿನಂತೆಯೇ ತನ್ನ ಹಾಡುಗಳಿಂದ ಸಹಪ್ರಯಾಣಿಕರನ್ನು ಟಿಕೆಟ್ ಪರೀಕ್ಷಕರನ್ನು ರಂಜಿಸುತ್ತ ಪುಣೆಗೆ ಬಂದಿಳಿದರು. ಹೊರಹೋಗುವ ಬಾಗಿಲಲ್ಲೂ ಅವರನ್ನು ಯಾರೂ ತಡೆಯಲಿಲ್ಲ.

ಶಿಕ್ಷಣ ಮತ್ತು ಸಂಸ್ಕೃತಿಗಳ ಕೇಂದ್ರವಾಗಿದ್ದ ಪುಣೆಯಲ್ಲಿಯೂ ವಿಜಾಪುರದಲ್ಲಿಯಂತೆ ಭೀಮಸೇನ ಹೊಸಬರಾಗಿದ್ದರು. ಆಶ್ರಯ-ನೆರವು ನೀಡಲು ಯಾರೂ ಇಲ್ಲದ್ದರಿಂದ ಅಲೆಮಾರಿಯಾಗಿ ಅಲೆಯುತ್ತ ಹಾಡುತ್ತ ಅದಕ್ಕೆ ಪ್ರತಿಯಾಗಿ ಪುಡಿಗಾಸು ಸಂಪಾದಿಸುವ ಮೂಲಕ ಹೊಟ್ಟೆ ಹೊರೆಯಬೇಕಾಗಿತ್ತು.

ಪುಣೆ ಹಿಂದುಸ್ತಾನಿ ಸಂಗೀತದ ದಿಗ್ಗಜಗಳ ಮನೆಯೂ ಆಗಿತ್ತು ಎಂಬುದು ಅವರಿಗೆ ಗೊತ್ತಿದ್ದಂತೆ ಕಾಣಲಿಲ್ಲ. ಅಷ್ಟರಲ್ಲಿ ಯಾರೋ ಮಾಸ್ಟರ್ ಕೃಷ್ಣರಾವ್ ಫುಲಂಬ್ರಿಕರರಲ್ಲಿ ಶಿಷ್ಯತ್ವ ಪಡೆಯಲು ಸಲಹೆ ನೀಡಿದರು. ಭೀಮಸೇನರು ಕೃಷ್ಣರಾವ್ ಅವರನ್ನು ಭೆಟ್ಟಿಯಾಗಿ ತಮ್ಮನ್ನು ಶಿಷ್ಯನನ್ನಾಗಿ ಸ್ವೀಕರಿಸಲು ಮೊರೆಯಿಟ್ಟರು. ಕೃಷ್ಣರಾವ್ ಅವರಿಗೆ ಹಾಡಲು ಹೇಳಿ ಅವರ ಸಂಗೀತ ಕೌಶಲವನ್ನು ಮೆಚ್ಚಿಕೊಂಡರೂ ಕಲಿಸಲು ಪ್ರತಿ ತಿಂಗಳು ಒಂದು ನೂರು ರೂಪಾಯಿಗಳ ಫೀ ಕೇಳಿದರು. ಅದು ಬಡಪಾಯಿ ಬಾಲಕ ಪೂರೈಸಲಾರದ ಬೇಡಿಕೆಯಾಗಿತ್ತು.

ಭೀಮಸೇನ ದಿಲ್ಲಿಗೆ ಹೊರಟ ಇನ್ನೊಂದು ಗಾಡಿ ಹತ್ತಿದರು. ಒಂದು ಬಾರಿ ರೇಲ್ವೆ ಸಿಬ್ಬಂದಿಯಿಂದ ತಪ್ಪಿಸಿಕೊಂಡರೂ ಖಾಂಡವಾದಲ್ಲಿ ಅವರನ್ನು ಬಂಧಿಸಿ ಎರಡು ದಿನ ಬಂದಿಖಾನೆಯಲ್ಲಿ ಇಟ್ಟರು. ನಂತರ ಕನಿಕರಪಟ್ಟು ಬಿಡುಗಡೆ ಮಾಡಿದರು.

ಇದೇ ರೀತಿ ಊರಿಂದ ಊರಿಗೆ ಪಯಣಿಸಿದರು. ಡಬ್ಬಿಯಿಂದ ಡಬ್ಬಿಗೆ ಯಾರಿಗೂ ತಿಳಿಯದಂತೆ ಸಾಗುತ್ತ ನಡುವೆ ನಿಲ್ದಾಣಗಳಲ್ಲಿ ನಿಲ್ಲುತ್ತ ರೇಲ್ವೆ ಸಿಬ್ಬಂದಿಗೆ ಕೈಕೊಡಲು ನಿರಂತರವಾಗಿ ಪ್ರಯತ್ನಿಸಿ ಕೊನೆಗೆ ತಮ್ಮ ಗಮ್ಯಸ್ಥಾನ ತಲುಪಲು ಅವರಿಗೆ ಮೂರು ತಿಂಗಳು ಬೇಕಾಯಿತು.

ಇಷ್ಟರಲ್ಲಿ ಗದುಗಿನಲ್ಲಿ ತಂದೆ-ತಾಯಿ, ಬಂಧು-ಬಳಗದವರು ಭೀಮಸೇನ ಕಾಣೆಯಾದ ಬಗ್ಗೆ ಪೊಲೀಸರಿಗೆ ದೂರು ಕೊಟ್ಟು ಸಾಕಾಗಿ ವಿಧಿಯಿದ್ದಂತೆ ಆಗಲೆಂದು ಸುಮ್ಮನಾದರು. ಇತರೆಡೆಗಳಂತೆ ಗ್ವಾಲಿಯರ್‌ದಲ್ಲೂ ಭೀಮಸೇನ ಹೊಸಬರಾಗಿದ್ದರು. ಕೆಲವು ದಿನ ವಿಜಾಪುರ ಪುಣೆಗಳಲ್ಲಿಯಂತೆ ದಿನಚರಿ ನಡೆಸದೆ ಅನ್ಯ ಮಾರ್ಗವಿರಲಿಲ್ಲ. ಶಾಲಾ ಶಿಕ್ಷಣ ಮಾದರಿಯಲ್ಲಿ ಕಲಿಸುವ ಮಾಧವ ಸಂಗೀತ ವಿದ್ಯಾಲಯ ಎಂಬ ಸಂಸ್ಥೆ ಇರುವುದಾಗಿಯೂ, ಅದರ ಹಾಜರಿ ಪಟ್ಟಿಯಲ್ಲಿರುವ ಅರ್ಹ ವಿದ್ಯಾರ್ಥಿಗಳಿಗೆ ದಿನಾಲು ಒಂದು ಉಚಿತ ಊಟಕ್ಕೆ ಅವಕಾಶವುಂಟೆಂದೂ ತಿಳಿದು ಆ ಸಂಸ್ಥೆಯಲ್ಲಿ ಪ್ರವೇಶ ಹೇಗೆ ದೊರಕಿಸಿಕೊಳ್ಳಬೇಕೆಂದು ವಿಚಾರ ಮಾಡತೊಡಗಿದರು.

ಸಂಗೀತ ಗ್ವಾಲಿಯರದಲ್ಲಿ ಪ್ರತಿಯೊಂದು ಮನೆಯ ಅಂಗವಾಗಿದೆ. ಇಂದಿಗೂ ಆ ಶಹರ ತನ್ನ ಸಾಂಸ್ಕೃತಿಕ ಪರಂಪರೆಯನ್ನು ಕಾಯ್ದುಕೊಂಡು ಬಂದಿದೆ. ತನ್ನ ಅಂತಸ್ತು ಯಾವುದೇ ಇರಲಿ, ಒಬ್ಬ ಸಾಮಾನ್ಯ ಗ್ವಾಲಿಯರಿ ಒಂದು ರಾಗ ಇನ್ನೊಂದರಿಂದ ವ್ಯತ್ಯಾಸ ಹೊಂದಿರುವುದನ್ನು ಗುರುತಿಸಬಲ್ಲ. ಅಲ್ಲಿಯ ಮಗುವೊಂದು ಅತ್ತರೂ ಸ್ವರಬದ್ಧವಾಗಿ ಅಳುತ್ತದೆಂದು ಹೇಳುವುದು ಉತ್ಪ್ರೇಕ್ಷೆಯಲ್ಲ.

ಭೀಮಸೇನರು ಸ್ವಾಭಾವಿಕವಾಗಿಯೇ ಈ ಶಹರದ ಸಂಗೀತಮಯ ವಾತಾವರಣಕ್ಕೆ ಮಾರು ಹೋದರು. ಸಂಪರ್ಕ ಭಾಷೆಯಾದ ಹಿಂದಿ ಕೂಡ ಅವರಿಗೆ ಅಷ್ಟು ಸಮಸ್ಯೆಯಾಗಲಿಲ್ಲ. ತಮ್ಮ ದೀರ್ಘ ಪ್ರವಾಸದಲ್ಲಿ ಅವಶ್ಯಕ ಹಿಂದಿ ಶಬ್ದ ಹಾಗೂ ವಾಕ್ಯಾಂಗಗಳನ್ನು ಕಲಿತಿದ್ದರು.

ಗ್ವಾಲಿಯರದ ಮಹಾರಾಜರ ಆಶ್ರಯದಲ್ಲಿ ಸರೋದ ಪ್ರಭೃತಿ ಹಾಫಿಜ ಅಲಿಖಾನರಂತಹ ದಿಗ್ಗಜರು ಇದ್ದ ಸುದ್ದಿ ತಿಳಿದು ಉಸ್ತಾದರನ್ನು ಭೆಟ್ಟಿಯಾಗಿ ಬಹಳ ಧೈರ್ಯ ತಂದುಕೊಂಡು ತನ್ನ ಕಷ್ಟದ ಕತೆ, ಉತ್ಕಟೇಚ್ಛೆಗಳನ್ನು ಅವರಲ್ಲಿ ಹೇಳಿ ಮಾಧವ ಸಂಗೀತ ವಿದ್ಯಾಲಯದಲ್ಲಿ ತಮಗೆ ಪ್ರವೇಶಕ್ಕೆ ಸಹಾಯ ಕೋರಿದರು. ಉಸ್ತಾದರೊಂದಿಗೆ ಹರಕು-ಮುರುಕು ಹಿಂದಿಯಲ್ಲಿ ಮಾತನಾಡಿದರೂ ಉಸ್ತಾದರು ಇವರ ಭಾವನೆ ಅರ್ಥ ಮಾಡಿಕೊಂಡು ಆ ಘನ ಸಂಸ್ಥೆಯಲ್ಲಿ ಸೇರಲು ಪ್ರವೇಶಕ್ಕೆ ಶಿಫಾರಸು ಪತ್ರ ಕೊಟ್ಟರು.

ದೇಶದಲ್ಲಿಯೇ ಆ ತೆರನಾದ ಸಂಸ್ಥೆಗಳಲ್ಲಿ ಅಗ್ರಮಾನ್ಯವೆಂದು ಹೆಸರು ಪಡೆದ 'ಮಾಧವ ಸಂಗೀತ ವಿದ್ಯಾಲಯ' ಸಂಗೀತ ಶಿಕ್ಷಣದ ಅಭಿವೃದ್ಧಿಗೆ ಅಂದಿನ ಆಳರಸರು ನೀಡಿದ ಕೊಡುಗೆ. ವಿಷ್ಣುನಾರಾಯಣ ಭಾತಖಂಡೆ ಮತ್ತು ರಾಜಾಭಯ್ಯಾ ಪೂಛವಾಲೆ ಅವರ ಪ್ರಯತ್ನದ ಫಲವಾಗಿ ಈ ಶತಮಾನದ ಆರಂಭದಲ್ಲಿ ಮಹಾರಾಜಾ ಮಾಧವರಾವ ಸಿಂಧಿಯಾರ ಆಳ್ವಿಕೆಯಲ್ಲಿ ಪ್ರಾರಂಭಿಸಲಾಯಿತು.

ಭೀಮಸೇನ ವಿದ್ಯಾಲಯದ ವರ್ಗಗಳಿಗೆ ಹೋಗಲಾರಂಭಿಸಿದರು. ಮೂರು ದಿನ ಕೃಷ್ಣರಾವ ಪಂಡಿತ, ಇನ್ನು ಮೂರು ದಿನ ರಾಜಾಭಯ್ಯಾ ಪೂಛವಾಲೆ ಕಲಿಸುತ್ತಿದ್ದರು. ವಿದ್ಯಾರ್ಥಿಗೆ ವೈಯಕ್ತಿಕ ಗಮನ ಸಾಧ್ಯವಿರದ ಇಂತಹ ಸಮೂಹ ಶಿಕ್ಷಣ ವಿಧಾನ ಭೀಮಸೇನರಿಗೆ ಹಿಡಿಸಲಿಲ್ಲ. ಹಾಜರಾತಿಯಿಂದ ದಿನಾಲೂ ಒಂದು ಉಚಿತ ಊಟ ಸಿಗುತ್ತಿತ್ತೆಂದು ತಪ್ಪದೆ ವರ್ಗಕ್ಕೆ ಹಾಜರಾಗುತ್ತಿದ್ದರು. ಅದರ ಜತೆಗೆ ಶಾಲಾ ಪದ್ಧತಿಯ ಶಿಕ್ಷಣದಿಂದ ಸಾಧ್ಯವಾದಷ್ಟು ಖಯಾಲಿನ ನಿರೂಪಣೆಯ ತಾಂತ್ರಿಕ ಅಂಶಗಳನ್ನು ಅರ್ಥ ಮಾಡಿಕೊಳ್ಳಲು, ಅಳವಡಿಸಿಕೊಳ್ಳಲು ಕಲಿತರು.

ಗ್ವಾಲಿಯರ್‌ನಲ್ಲಿ ಸ್ಥಳೀಯ ಕೀರ್ತನಕಾರರೊಬ್ಬರು ಮಹಾರಾಜರ ಆಶ್ರಯ ಪಡೆದಿದ್ದರು. ಸಾಂಪ್ರದಾಯಿಕ ಗಾಯಕರೂ ಆಗಿದ್ದ ಅವರು ಆಗಾಗ ಅರಮನೆಯಲ್ಲಿ ನಡೆಯುತ್ತಿದ್ದ ಮಹಫಿಲಿನಲ್ಲಿ ಹಾಡುತ್ತಿದ್ದರು. ಭೀಮಸೇನರು ತಮ್ಮ ವಿರಾಮದ ವೇಳೆಯಲ್ಲಿ ಈ ಕೀರ್ತನಕಾರರಿಗೆ ತಂಬೂರಿ ಸಾಥ್ ಕೊಡುತ್ತಿದ್ದರಲ್ಲದೆ, ಅರಮನೆಯಲ್ಲಿ ನಡೆಯುವ ಸಂಗೀತ ಮಹಫಿಲ್ಲುಗಳಿಗೆಹೋಗುವ ಅವಕಾಶಗಳು ಸಿಗುತ್ತಿದ್ದವು. ಇವರು ಕೊಡುತ್ತಿದ್ದ ತಂಬೂರಿ ಸಾಥ್‌ನಿಂದ ಸಂತುಷ್ಟನಾದ ಕೀರ್ತನಕಾರ ಊಟಕ್ಕೆ ಕೊಡದಿದ್ದರೂ ಇರಲು ಜಾಗ ಕೊಟ್ಟರು. ಕೀರ್ತನಕಾರನಿಗೆ ಸಾಥ್ ಕೊಟ್ಟಿದ್ದಕ್ಕೆ ಮಹಾರಾಜರಿಂದ ತೆಂಗಿನಕಾಯಿ ೧೦ ರೂಪಾಯಿ ದಕ್ಷಿಣೆ. ಇದು ಅವರು ಮೊದಲು ಗಳಿಸಿದ ವೃತ್ತಿ ಸಂಭಾವನೆ. ಅದರಿಂದ ತಮಗೆ ಒಂದು ಅಂಗಿ ಮತ್ತು ಒಂದು ಚಣ್ಣ ಕೊಂಡುಕೊಂಡರು.

ಉಸ್ತಾದರ ಅಲ್ಪಾವಧಿಯ ಶಿಷ್ಯತ್ವದಲ್ಲಿ ಭೀಮಸೇನರು ಅವರ ಪ್ರೀತಿಯ ಪರಿಪೂರ್ಣ ತರಬೇತಿಯಲ್ಲಿ ಮಾರವಾ ಮತ್ತು ಪೂರಿಯಾ ರಾಗಗಳನ್ನೂ ಅವುಗಳಲ್ಲಿಯ ಸೂಕ್ಷ್ಮ ವ್ಯತ್ಯಾಸಗಳನ್ನೂ ಕಲಿತರು. ಇವೆರಡು ರಾಗಗಳು ಇಂದಿಗೂ ಭೀಮಸೇನರ ಬಲಗಳಾಗಿ ಉಳಿದಿವೆ. ಉಸ್ತಾದ ಹಾಫಿಜ ಅಲಿ ಅವರ ಮಾರ್ಗದರ್ಶನದ

ಪ್ರಯೋಜನ ಪಡೆಯಲು ದಿನದ ಕೆಲವು ಗಂಟೆಗಳನ್ನು ಭೀಮಸೇನರು ಮೀಸಲಾಗಿಟ್ಟಿದ್ದರು. ಮಾಧವ ಸಂಗೀತ ವಿದ್ಯಾಲಯಕ್ಕೆ ಪ್ರವೇಶ ದೊರಕಲು ಹೊಟ್ಟೆಪಾಡಿನ ಸಮಸ್ಯೆ ಕಡಿಮೆಗೊಳಿಸಲು ಅಲ್ಲದೆ ತಮ್ಮ ಸಂಗೀತದ ಹಸಿವೆ ಶಮನಗೊಳಿಸಿದ ಉಸ್ತಾದರನ್ನು ಭೀಮಸೇನರು ಇಂದಿಗೂ ಕೃತಜ್ಞತೆಯಿಂದ ಸ್ಮರಿಸುತ್ತಾರೆ. ಈ ನಡುವೆ ಸಂಗೀತ ಬಿಟ್ಟು ಭೀಮಸೇನರಿಗೆ ಇನ್ನಾವ ಆಸಕ್ತಿಯೂ ಇಲ್ಲವೆಂದು ರಾಜಾಭಯ್ಯಾ ಪೂಛ್ಛವಾಲೆ ಹಾಫಿಜಅಲಿಖಾನರಿಗೆ ಮನವರಿಕೆಯಾಗಿತ್ತು. ವಿದ್ಯಾಲಯದಲ್ಲಿ ನೀಡುತ್ತಿದ್ದ ಸಾಮೂಹಿಕ ಶಿಕ್ಷಣ ಭೀಮಸೇನರಿಗೆ ತೃಪ್ತಿ ಕೊಟ್ಟಿಲ್ಲ ಎಂದರಿತ ಅವರು ಬಂಗಾಲದಲ್ಲಿನ ಖರಗಪುರದಲ್ಲಿ ವಿದ್ವತ್‌ಪೂರ್ಣ ಶಿಕ್ಷಕರಾಗಿದ್ದ ಕೇಶವಮುಕುಂದ ಲುಖೆ ಅವರಲ್ಲಿ ಸಂಗೀತ ಮುಂದುವರಿಸಲು ಹೇಳಿದರಲ್ಲದೆ ಶಿಫಾರಸು ಪತ್ರವನ್ನು ಕೊಟ್ಟರು.

ಕರುಣಾಳುವಾದ ಲುಖೆ, ಭೀಮಸೇನರಿಗೆ ಪ್ರೀತಿಯಿಂದ ಆಶ್ರಯ ನೀಡಿದರು. ಆದರೆ ಅವರು ಬೆಳಗಿನಿಂದ ರಾತ್ರಿಯವರೆಗಿನ ವೈಯಕ್ತಿಕ ಕ್ಲಾಸುಗಳ ಸರಮಾಲೆಯೊಡನೆ ಹೋರಾಡಬೇಕಿತ್ತು. ರಾತ್ರಿ ಬಂದಾಗ ಕಲಿಸುವ ಚೈತನ್ಯ ಇರುತ್ತಿರಲಿಲ್ಲ. ಹೀಗೆ ಲುಖೆಯವರು ಹೊರಗೆ ಹೋದಾಗ ಭೀಮಸೇನ ಒಬ್ಬರೆ ಮನೆಯಲ್ಲಿ ಉಳಿದು ಸಮಯ ಕಳೆಯುವುದೆ ಭಾರವಾಗಹತ್ತಿತು. ಹೀಗೆಯೇ ನಾಲ್ಕು ತಿಂಗಳು ಕಳೆಯಿತು. ಇವರ ಸಂಕಟ ಅರಿತೋ ಏನೋ ಲುಖೆಯವರು ಕಲಕತ್ತೆಗೆ ಹೋಗಿ ಬಾದಲಖಾನರ ಪ್ರಸಿದ್ಧ ಶಿಷ್ಯರಾದ ಭೀಷ್ಮದೇವ ಚಟರ್ಜಿ ಅವರಿಂದ ಹೆಚ್ಚಿನ ಮಾರ್ಗದರ್ಶನ ಪಡೆಯಲು ಸೂಚಿಸಿದರು.

ಪರಿಚಯ ಪತ್ರದೊಂದಿಗೆ ಕಲಕತ್ತೆಗೆ ಹೊರಟ ಭೀಮಸೇನರು ಅಲ್ಲಿಗೆ ಹೋದೊಡನೆ ಮನಸ್ಸು ಬದಲಾಯಿಸಿ ಚಟರ್ಜಿಯವರ ಬದಲು ನ್ಯೂ ಥಿಯೆಟರ್ಸ್‌ದ ಪ್ರಮುಖ ಚಲನಚಿತ್ರ ನಟರಾಗಿದ್ದ ಪಹಾರಿ ಸನ್ಯಾಲರನ್ನು ಭೆಟ್ಟಿಯಾದರು. ಭೀಮಸೇನರಿಗೆ ಒಂದು ಹಾಡು ಹೇಳಲು ಹೇಳಿ ಹಾಡನ್ನು ಕೇಳಿ ಸಂತುಷ್ಟರಾಗಿ ತಮ್ಮೊಂದಿಗೆ ಇರಲು ಹೇಳಿದರಲ್ಲದೆ ಚಟರ್ಜಿ ಅವರಲ್ಲಿ ಕಲಿಯುವ ಏರ್ಪಾಡು ಮಾಡುವದಾಗಿ ಹೇಳಿದರು. ಆರು ತಿಂಗಳು ಭೀಮಸೇನರ ದಿನಚರಿಯೆಂದರೆ ತೊಳೆಯುವದು, ಉಡುಗುವುದು ಮತ್ತು ನಿತ್ಯ ಬಳಕೆಗೆ ನೀರು ತರುವದು.

ಇದರ ಮಧ್ಯೆ ಲುಖೆಯವರ ಪರಿಚಯ ಪತ್ರ, ಸನ್ಯಾಲರ ಉಪಕಾರದಿಂದ ಚಟರ್ಜಿಯವರಲ್ಲಿ ಭೀಮಸೇನ ಸಂಗೀತ ಕಲಿಯಲು ಪ್ರಾರಂಭಿಸಿದರು. ಅವರಿಂದ ಕಲಿತದ್ದು ಗಾಂಧಾರಿ ರಾಗ ಮಾತ್ರ. ಆ ರಾಗದಲ್ಲಿ ಅವರು ಕಲಿಸಿದ್ದು 'ಮಾಲನಿಯಾ ಅಬ ಗೂಂದ ಲಾವೊ' ಚೀಜು ಎಂಬುದು ಭೀಮಸೇನರಿಗೆ ಇಂದಿಗೂ ನೆನಪಿದೆ.

ಭೀಮಸೇನ ಅಲ್ಲಿಂದ ಹೊರಟು ದಿಲ್ಲಿಗೆ ಹೊರಟಿದ್ದ ಗಾಡಿ ಹಿಡಿದರು. ಪುನಃ ಅಲೆಮಾರಿ ಜೀವನ. ದೆಹಲಿಯಲ್ಲಿ ಅನೇಕ ಉಸ್ತಾದರಿದ್ದಾರೆಂದು ತಿಳಿದಿದ್ದ ಅವರು ಚಾಂದಖಾನರಲ್ಲಿ ಬಂದರು. ಆದರೆ ಶಿಷ್ಯತ್ವ ಸಿಗಲಿಲ್ಲ. ಅಷ್ಟರಲ್ಲಿ ಯಾರೊ ಒಬ್ಬರು ಪಂಜಾಬದಲ್ಲಿರುವ ಜಲಂದರಿಗೆ ಹೋದರೆ ಕಲಿಸಲು ಬೇಕಾದಷ್ಟು ಗುರುಗಳು ಸಿಗುವರೆಂದು ಸಲಹೆ ಕೊಟ್ಟರು ಭೀಮಸೇನರು ಜಲಂದರಿಗೆ ಹೊರಟರು.

ಜಲಂದರಿನಲ್ಲಿರುವಾಗ ಕಠಿಣ ವ್ಯಾಯಾಮ-ಹೊಟ್ಟೆ ತುಂಬ ಶ್ರೇಷ್ಠ ಹಾಲು, ತುಪ್ಪದಲ್ಲಿ ಕರಿದ ಜಿಲೇಬಿ ತಿಂದು ಒಳ್ಳೆಯ ಕ್ರೀಡಾಪಟುವಿನಂತೆ, ತಪ್ಪದ ವ್ಯಾಯಾಮದಿಂದಾಗಿ ಒಳ್ಳೆಯ ದೇಹದಾರ್ಢ್ಯ ಸಂಪಾದಿಸಿದರು.

ಅಷ್ಟರಲ್ಲಿ ವಾರ್ಷಿಕ ಹರಿವಲ್ಲಭ ಸಮ್ಮೇಳನದ ಸಮಯ ಬಂದಿತು. ಈ ಬಾರಿ ಪ್ರತಿಷ್ಠಿತರ ಖಯಾಲ ಸಂಗೀತವನ್ನು ಮನದಣಿಯೆ ಕೇಳಿದರು. ಅವರಲ್ಲಿ ವಿಷ್ಣುದಿಗಂಬರ ಪಲುಸ್ಕರರ ಶಿಷ್ಯರಾದ ವಿನಾಯಕರಾವ ಪಟವರ್ಧನರೂ ಇದ್ದರು.

ಭೀಮಸೇನರು ಪಟವರ್ಧನರನ್ನು ಭೆಟ್ಟಿಯಾಗಿ ಖಯಾಲ ಗಾಯನದಲ್ಲಿ ಹೆಚ್ಚಿನ ಶಿಕ್ಷಣ ಪಡೆಯುವ ತಮ್ಮ ಆಕಾಂಕ್ಷೆ ಪೂರ್ತಿ ಈಡೇರದ ಬಗ್ಗೆ ಅವರಲ್ಲಿ ತೋಡಿಕೊಂಡರು. ಆಗ ಪಟವರ್ಧನರು "ಸವಾಯಿ ಗಂಧರ್ವರಂಥ ಸಮರ್ಥ ಗುರುಗಳು ನಿನ್ನ ಹುಟ್ಟು ಜಿಲ್ಲೆಯಲ್ಲಿದ್ದು ಗದುಗಿನಿಂದ ದೂರವಿರದ ಕುಂದಗೋಳದಲ್ಲಿರುವಾಗ ಇಷ್ಟು ದೂರ ಜಲಂದರಿಗೆ ಏಕೆ ಬಂದೆ? ಕಿರಾಣಾ ಘರಾಣೆಯ ಶ್ರೇಷ್ಠ ನಿರೂಪಕರು, ಅಬ್ದುಲ್ ಕರೀಮಖಾನರ ಶಿಷ್ಯರೂ ಆದ ಸವಾಯಿ ಗಂಧರ್ವರಲ್ಲಿ ಶಿಕ್ಷಣ ಮುಂದುವರಿಸು" ಎಂದು ಉಪದೇಶ ಮಾಡಿದರು.

ಭೀಮಸೇನರಿಗೆ ಮನೆಯ ನೆನಪು ತೀವ್ರವಾಗಿ ಊರಿಗೆ ಮರಳಲು ನಿರ್ಧರಿಸಿದರು. ಕೂಡಲೇ ತಮಗೆ ಖಯಾಲ ಗಾಯನ ಕಲಿಯಲು ಸರಿಯಾದ ವ್ಯವಸ್ಥೆ ಮಾಡದಿದ್ದರೆ ಜೀವ ಕಳೆದುಕೊಳ್ಳುವದಾಗಿಯೂ ಅಲ್ಲದೆ ಮನೆಯತ್ತ ಪ್ರಯಾಣ ಬೆಳೆಸಲು ಖರ್ಚಿಗಾಗಿ ಶೀಘ್ರ ಹಣ ಕಳಿಸಬೇಕೆಂದು ತಂದೆಗೆ ಪತ್ರ ಬರೆದರು. ಹಣ ಬರುವವರೆಗೆ ಕಾಯುವ ತಾಳ್ಮೆ ಇಲ್ಲದೆ ಮತ್ತೆ ಟಿಕೆಟ್ಟಿಲ್ಲದೆ ಗದುಗಿಗೆ ಪಯಣ ಬೆಳೆಸಿದರು. ಆದರೆ ಈ ಬಾರಿ ಪಯಣದಲ್ಲಿ ರೇಲ್ವೆ ಸಿಬ್ಬಂದಿಯಿಂದ ಯಾವ ತೊಂದರೆಯಾಗಲಿಲ್ಲ.

ತಮ್ಮ ಮಗ ಒಳ್ಳೆಯ ಆರೋಗ್ಯದಿಂದ ಕಾಂತಿಯುತನಾಗಿ ಒಳ್ಳೆಯ ಹುರುಪಿನಲ್ಲಿ ಇದ್ದುದನ್ನು ಕಂಡು ಭೀಮಸೇನರ ತಂದೆ ಗುರುರಾಜರು ಸಂತೋಷಗೊಂಡು ಮಗನನ್ನು ಸವಾಯಿ ಗಂಧರ್ವರಲ್ಲಿ ಕರೆದುಕೊಂಡು ಹೋಗಲು ನಿರ್ಧರಿಸಿದರು.

೧೯೩೬ ರ ಸಮಯ ತಮ್ಮ ಅನಾರೋಗ್ಯದಿಂದಾಗಿ ಸವಾಯಿ ಗಂಧರ್ವರು ವಿಶ್ರಾಂತಿ ಮತ್ತು ಚೇತರಿಕೆಗಾಗಿ ಕುಂದಗೋಳಕ್ಕೆ ಅದೇ ತಾನೆ ಮುಂಬಯಿಯಿಂದ ಬಂದಿದ್ದರು. ಆಗ ಗುರುರಾಜರು ಸವಾಯಿ ಗಂಧರ್ವರಲ್ಲಿ ಬಂದು ಭೀಮಸೇನನಿಗೆ ಪಾಠ ಹೇಳಲು ಪ್ರಸ್ತಾಪಿಸಿದಾಗ ಮೊದಲು ಹುಡುಗನನ್ನು ಕರೆದುಕೊಂಡು ಬರಲು ಹೇಳಿ ಅವನು ಪಾತ್ರನಾಗಿದ್ದರೆ ಮಾತ್ರ ತಾವು ಕಲಿಸುವದಾಗಿ ಹೇಳಿದರು.

ಭೀಮಸೇನರು ತಂದೆಯೊಂದಿಗೆ ಕುಂದಗೋಳಕ್ಕೆ ಬಂದು ಭಾವೀ ಗುರುಗಳ ಮುಂದೆ ತುಸು ಹೊತ್ತು ಹಾಡಿದರು. ಹಾಡನ್ನು ಕೇಳಿದ ಸವಾಯಿ ಗಂಧರ್ವರು ೨೫ ರೂ. ಮಾಸಿಕ ಶುಲ್ಕದ ಮೇಲೆ ಕಲಿಸಲು ಒಪ್ಪಿದರು. ಅಲ್ಲದೆ ಒಂದು ಊಟದ ವ್ಯವಸ್ಥೆ ಬೇರೆಡೆ ಮಾಡಿಕೊಳ್ಳಲು ಹೇಳಿ ತಮ್ಮೊಂದಿಗೆ ಇರಲು ತಿಳಿಸಿದರು.

ತಿಂಗಳಿಗೆ ೧೦೦.ರೂ. ಗಳಿಸುವ ಬಡ ಶಿಕ್ಷಕರಾದ ಗುರುರಾಜರಿಗೆ ತಮ್ಮ ಆದಾಯದ ಕಾಲುಭಾಗ ವ್ಯಯಿಸುವದು ಭಾರವಾಯಿತು. ಹೆಂಡತಿ ಮತ್ತು ಏಳು ಮಕ್ಕಳನ್ನು ಸಲಹಬೇಕಿದ್ದ ಅವರಿಗೆ ಇದು ಸಹಜ. ಆದರೆ ಪ್ರತಿಭಾವಂತನಾದ ಮಗ ತನ್ನ ಆಯ್ದ ವೃತ್ತಿಯಲ್ಲಿ ಮುಂದುವರಿದು ಉನ್ನತ ಶಿಖರಕ್ಕೇರುವ ಬಗ್ಗೆ ಅವರಿಗೆ ವಿಶ್ವಾಸವಿತ್ತು. ಹೀಗಾಗಿ ಗಂಧರ್ವರ ಕರಾರುಗಳಿಗೆ ಒಪ್ಪಿ ಭೀಮಸೇನರನ್ನು ಅವರ ಆಶ್ರಯದಲ್ಲಿಟ್ಟರು.

ಅಬ್ದುಲ್ ಕರೀಮಖಾನರ ಧ್ವನಿಮುದ್ರಿತ ಸಂಗೀತ ಕೇಳಿ ಹುಚ್ಚು ಹಿಡಿದ ಭೀಮಸೇನರಿಗೆ ಉಸ್ತಾದರ ಶಿಷ್ಯರೆ ಗುರುವಾಗಿ ದೊರೆತದ್ದು ಯೋಗಾಯೋಗವೆ ಆಗಿತ್ತು.

ಭೀಮಸೇನರು ತಮ್ಮ ಗುರುಗಳೊಂದಿಗೆ ಇದ್ದಾಗ ಗುರುಗಳ ಮನೆಯೆದುರು ಗುಡಿಸಲಿನಲ್ಲಿರುತ್ತಿದ್ದ ಮುದುಕಿಯೊಬ್ಬಳು ಎಮ್ಮೆಯ ಹಾಲು ಮಾರಿ ಜೀವನ ಮಾಡುತ್ತಿದ್ದಳು. ಭೀಮಸೇನರು ಸುಡು ಬಿಸಿಲಿನಲ್ಲಿ ನೀರು ಹೊತ್ತು ತರುವದನ್ನು ನೋಡಿದ ಮುದುಕಿಯ ಮನಸ್ಸು ಕರಗಿ ಅವರಿಗೆ ದಿನಾಲೂ ಪ್ರೀತಿಯಿಂದ ಒಂದು ಲೋಟ ತಾಜಾ ಹಾಲನ್ನು ಒತ್ತಾಯದಿಂದ ಕೊಡುತ್ತಿದ್ದಳು.

ಭೀಮಸೇನರು ೧೯೮೦ ರಲ್ಲಿ ಕುಂದಗೋಳಕ್ಕೆ ಬಂದಾಗ ಮುಪ್ಪಾದ ಮುದುಕಿ ೪೫ ವರ್ಷಗಳ ನಂತರವೂ ಅವರನ್ನು ಗುರುತಿಸಿ ಪ್ರೀತಿಯ ತಾಯಿಯಂತೆ ಅವರನ್ನು ಅಪ್ಪಿಕೊಂಡು ಬಿಕ್ಕಿ ಬಿಕ್ಕಿ ಅತ್ತು ಆನಂದ ಭಾಷ್ಪ ಸುರಿಸಿದಳು.

ಒಂದೂವರೆ ವರ್ಷದ ನಂತರ ಸವಾಯಿ ಗಂಧರ್ವರು ಪಾಠ ಪ್ರಾರಂಭ ಮಾಡಿದರು. ಅವರ ಪಾಠ ನಸುಕಿನ ನಾಲ್ಕು ಘಂಟೆಗೆ ಪ್ರಾರಂಭಗೊಳ್ಳುತ್ತಿತ್ತು. ಮೊದಲ ಎರಡು ತಾಸು ಧ್ವನಿ ಸಂಸ್ಕರಣಕ್ಕೆ ಅಗತ್ಯವಾದ ಮಂದ್ರ ಸಾಧನಕ್ಕೆ, ನಂತರ ಮೂರು ತಾಸು ತೋಡಿ ಕಲಿಸುತ್ತಿದ್ದರು. ಮಧ್ಯಾಹ್ನ ನಾಲ್ಕರ ನಂತರ ಮತ್ತೆ ಮೂರು ತಾಸು ಮುಲ್ತಾನಿ ನಿರೂಪಣೆಗೆ ಸರಿಯಾದ ತರಬೇತಿ ಕೊಡುತ್ತಿದ್ದರು. ನಂತರ ಅಷ್ಟೆ ಅವಧಿ ಪೂರಿಯಾ ಕಲಿಸುತ್ತಿದ್ದರು.

ಇದೂ ಅಲ್ಲದೆ ಗುರು ಶಿಷ್ಯನಿಗಾಗಿ ಸ್ವತಃ ಹಾಡುತ್ತಿದ್ದರು. ಆಗ ಶಿಷ್ಯ ಅತ್ಯಂತ ಲಕ್ಷ್ಯಗೊಟ್ಟು ಗುರುವಿನ ಹಾಡುಗಾರಿಕೆಯ ಮುಖ್ಯಾಂಶಗಳನ್ನು ಸಾಧ್ಯವಿದ್ದಷ್ಟು ಗ್ರಹಿಸಬೇಕಾಗುತ್ತಿತ್ತು. ಕೆಲವೊಮ್ಮೆ ಕಲಿಸುವ ಲಹರಿಯಲ್ಲಿದ್ದರೆ ಗುರುಗಳು ಭೀಮಸೇನರನ್ನು ನಸುಕಿನ ಎರಡು ಗಂಟೆಗೆ ಎಬ್ಬಿಸುತ್ತಿದ್ದರು.

ಸವಾಯಿ ಗಂಧರ್ವರು ಎಷ್ಟು ಕರುಣಾಮಯಿಯಾಗಿದ್ದರೊ ಅಷ್ಟೇ ಶಿಸ್ತುಪಾಲಕರಾಗಿದ್ದರು. ಅವರು ಶಿಷ್ಯರೊಂದಿಗೆ ಮಾತನಾಡುತ್ತಿರಲಿಲ್ಲ. ಶಿಷ್ಯರಿಗೂ ಧೈರ್ಯವಾಗುತ್ತಿರಲಿಲ್ಲ. ಪರಿಪೂರ್ಣತಾವಾದಿಯಾಗಿದ್ದ ಅವರು ಒಂದೊಂದೆ ರಾಗವನ್ನು ಕಲಿಸುವದರಲ್ಲಿ ನಂಬಿಕೆಯುಳ್ಳವರು. ದತ್ತಗೀತಾಂಗ ಭಾಗವನ್ನು, ತಮಗೆ ಅದರ ಮೇಲೆ ತೃಪ್ತಿಯಾಗುವಂತೆ ಪ್ರಭುತ್ವ ಪಡೆಯುವವರೆಗೆ ಅಭ್ಯಾಸ ಮಾಡಲು ಶಿಷ್ಯರಿಗೆ ಹೇಳುತ್ತಿದ್ದರು. ಎಷ್ಟೋ ಸಂದರ್ಭಗಳಲ್ಲಿ ಒಂದೇ ಪಲ್ಟಾವನ್ನು ಎರಡು ಮೂರು ತಾಸು ಅಭ್ಯಾಸ ಮಾಡಬೇಕಾಗುತ್ತಿತ್ತು.

ಇಡೀ ಶಿಷ್ಯತ್ವ ಕಾಲಕ್ಕೆ ಒಮ್ಮೆ ಮಾತ್ರ ಗುರುಗಳು ಭೀಮಸೇನರ ಮೇಲೆ ಸಿಟ್ಟಿಗೆದ್ದರು. ಒಂದು ಬಾರಿ ರಿಯಾಝಿನಲ್ಲಿ ಒಂದು ಕ್ಷಣ ಸ್ವರಾಲಾಪದಲ್ಲಿ ಸ್ವಲ್ಪ ತಪ್ಪಿದಾಗ ಕೆರಳಿದ ಗುರುಗಳು ಅಡಕೊತ್ತನ್ನು ಶಿಷ್ಯನೆಡೆಗೆ ಎಸೆದರು. ಅದು ಭೀಮಸೇನರ ತಲೆಗೆ ಗಾಯ ಮಾಡಿತು.

ಸವಾಯಿ ಗಂಧರ್ವರು ಭೀಮಸೇನರಿಗೆ ತೋಡಿ ಮುಲ್ತಾನಿ ಮತ್ತು ಪೂರಿಯಾ ರಾಗಗಳನ್ನು ಮಾತ್ರ ಕಲಿಸಿದರು. ಗುರುಗಳ ಅಭಿಪ್ರಾಯದಲ್ಲಿ ಈ ಮೂರು ರಾಗಗಳಲ್ಲಿ ಪರಿಪೂರ್ಣತೆ ಪಡೆದರೆ ಒಂದು ವಿಶಾಲ ಚೌಕಟ್ಟಿನಲ್ಲಿ ಅರಳುವ ಗಾಯಕ ಯಾವುದೇ ರಾಗವನ್ನು ಪರಿಣಾಮಕಾರಿಯಾಗಿ ಬೆಳೆಸಬಲ್ಲನೆಂದು ತಿಳಿದಿದ್ದರು.

ಭೀಮಸೇನರು ಐದು ವರ್ಷದ ತಮ್ಮ ಶಿಷ್ಯತ್ವದ ಅವಧಿಯಲ್ಲಿ ಗುರುಗಳೊಡನೆ ಅವರ ಸಂಗೀತ ಕಛೇರಿಗಳಲ್ಲಿ ದೇಶದ ತುಂಬ ಸಂಚರಿಸಿದರು. ಇದರಿಂದ ಸಮಕಾಲೀನ ಗಾಯಕರ ಸಂಗೀತ ಆಲಿಸುವದಲ್ಲದೆ ತಮ್ಮ ಸಂಗೀತ ಜ್ಞಾನ ಮತ್ತು ಗುಣಗ್ರಹಣಗಳನ್ನು ವಿಸ್ತರಿಸಿಕೊಳ್ಳಲು ಸಹಾಯವಾಯಿತು. ಅಷ್ಟರಲ್ಲಿ ಕ್ಷುಲ್ಲಕ ಮನಸ್ತಾಪಗಳಿಂದ ತಪ್ಪು ತಿಳುವಳಿಕೆಯ ಪರಿಣಾಮವಾಗಿ ೧೯೪೦ ರಲ್ಲಿ ಗುರುಗಳೊಂದಿಗೆ ಭೀಮಸೇನರ ಸಂಬಂಧ ಕೊನೆಗೊಂಡಿತು.

ಭೀಮಸೇನರ ಗಾಯನ ಅಬ್ದುಲ್ ಕರೀಮಖಾನರು ಜನಪ್ರಿಯಗೊಳಿಸಿದಂತಹ ಕಿರಾಣಾ ಘರಾಣೆಯ ಮುದ್ರೆ ಪಡೆದಿತ್ತು. ಈ ಗಾಯನದಲ್ಲಿನ ಧ್ಯಾನಪರ ಮತ್ತು ಆತ್ಮನಿರೀಕ್ಷಕ ಸ್ಪರ್ಶವನ್ನು ಉಸ್ತಾದರ ಕೆಲವು ಶಿಷ್ಯರಲ್ಲಿ ವಿಶೇಷತಃ ಸವಾಯಿ ಗಂಧರ್ವ, ದಶರಥಬುವಾ ವಳೆ ಮತ್ತು ಗಣಪತ ಬುವಾ ಬೆಹರೆಯವರಲ್ಲಿ ಕಾಣಬಹುದು. ಬದಲಾಗುತ್ತಿದ್ದ ಸಂಗೀತ ಸನ್ನಿವೇಶಕ್ಕೆ ಮಹಾ ಸಂಪ್ರದಾಯವಾದಿಯಾದ ಭೀಮಸೇನರು ಸಾಂಪ್ರದಾಯಿಕವೆಂದು ಹೇಳಬಹುದಾದ ಮೌಲ್ಯ ಮತ್ತು ಸಮೂಹ ಸಂಸ್ಕೃತಿ ಅಭಿರುಚಿಗಳ ಮಧ್ಯೆ ಸಮತೋಲನ ಸಾಧಿಸುವಂಥ ಶೈಲಿಯನ್ನು ರೂಢಿಸಿಕೊಂಡರು.

ಭೀಮಸೇನರು ರಾಷ್ಟ್ರೀಯ ಖ್ಯಾತಿಗೇರುವ ಮೊದಲು ಹಳೆಯ ಮುಂಬಯಿ ರಾಜ್ಯದಲ್ಲಿಯ ಮರಾಠಿ ಮಾತನಾಡುವ ಶ್ರೋತೃಗಳು ಅವರಿಗೆ ಧಾರಾಳ ಆಶ್ರಯವಿತ್ತಿದ್ದರು. ಒಂದು ಶತಮಾನದವರೆಗೆ ಈ ಶ್ರೋತೃವರ್ಗ ತಾನಪ್ರಧಾನವಾದ ನಾಟ್ಯ ಸಂಗೀತದ ಸತ್ವಪೂರ್ಣ ಆಹಾರ ತಿಂದು ಬೆಳೆದ ವರ್ಗ. ಅವರ ಈ ಅಭಿರುಚಿ ಎಷ್ಟಿತ್ತೆಂದರೆ ಪರಿಶುದ್ಧ ಖಯಾಲ ಗಾಯನದಲ್ಲೂ ರಂಗ ಸಂಗೀತದ ಅವಶ್ಯಕ ಅಂಶಗಳಿಗೆ ಒಲವು ತೋರಿಸುತ್ತಿದ್ದರು. ಅವರ ಈ ತಾನಕಾರಿಗಾಗಿ ಹೊಂದಿದ್ದ ಅತಿ ಒಲವನ್ನು ಭೀಮಸೇನರು ತಮ್ಮ ವಿಪುಲ ಧ್ವನಿ ಸಂಪತ್ತಿನಿಂದ ತಾನಕಾರಿಯಿಂದ ರಸಿಕರನ್ನು ತಣಿಸುತ್ತಿದ್ದರು.

"ಗ್ವಾಲಿಯರ್, ಅತ್ರೌಳಿ, ಜೈಪುರ ಮತ್ತು ಪತಿಯಾಳಾಗಳಂತಹ ಭಿನ್ನ ಭಿನ್ನ ಗಾಯಕಿಗಳ ರಸಮಿಶ್ರಣ ಭೀಮಸೇನರ ದೃತ್ ಗಾಯನದಲ್ಲಿ ದೊರೆಯುತ್ತದೆ. ಉದಾಹರಣೆಗೆ, ಅವರು ಪತಿಯಾಳಾ ಶೈಲಿಯ ಸಪಾಟ್

ತಾನಿನ ಮಧ್ಯದಲ್ಲಿಯೆ ಅತ್ರೌಳಿ ಜೈಪುರ ಘರಾಣೆಯ ಸಂಕೀರ್ಣ, ವಕ್ರಮಾದರಿಗಳ ಮಿಂಚಿನ ವೈಭವ ಶ್ರೇಣಿಯೊಂದಿಗೆ ತಮ್ಮ ಶ್ರೋತೃಗಳನ್ನು ಚಕಿತಗೊಳಿಸುತ್ತಾರೆ. ಕಿರಾಣಾ ಘರಾಣೆಯ, ಸಾರಂಗಿಯಂತಿರುವ, ನುಣುಚಿಕೊಳ್ಳುವ ಅಲಂಕಾರವನ್ನು ಕೂಡಲೆ ಗ್ವಾಲಿಯರ್ ಶೈಲಿಯ ಲಯಪ್ರಧಾನ ತಾನಕಾರಿಗೆ ಚಾಣಾಕ್ಷತನದಿಂದ ಕಸಿ ಮಾಡುವರು. ವಸ್ತು ನಿರೂಪಣೆಯಲ್ಲಿ ಇಂಥ ಅದ್ಭುತ ಸಮರೂಪತೆಯನ್ನು ಸಾಧಿಸುವದು ಅವರಂತೆ ಪ್ರತಿಭೆ ಮತ್ತು ಹುಟ್ಟು ಶಕ್ತಿಯುಳ್ಳ ಪ್ರಭೃತಿಗಲ್ಲದೆ ಇನ್ನಾರಿಗೆ ಸಾಧ್ಯ?''[೪೨] ಎಂದು ಡಾ.ಸದಾನಂದ ಕನವಳ್ಳಿಯವರು ಹೇಳುತ್ತಾರೆ.

ತಮ್ಮ ಗುರುಗಳ ಅಲ್ಲದೆ ಹಿಂದಿನ ತಲೆಮಾರಿನ ಇತರ ಮಾರ್ಗದರ್ಶಕರ ಆದರ್ಶಗಳಲ್ಲದೆ ಪ್ರಮುಖ ಸಮಕಾಲೀನ ಗಾಯಕಿಗಳನ್ನು ಆಲಿಸಿ ತಮ್ಮ ಶೈಲಿಗೆ ಹೊಂದಾಣಿಕೆಯಾಗುವ ಅಂಶಗಳನ್ನು ಆಯ್ದುಕೊಂಡು ತಮ್ಮ ಸಂಗೀತವನ್ನು ಶಕ್ತಿಯುತವಾಗಿ ಮಾಡಿಕೊಂಡಿದ್ದಾರೆ.

### ೫.೧೨. ಉಸ್ತಾದ ರಹಿಮತ್‌ಖಾನ

ವಿಂಧ್ಯದೀಚೆ ಸಿತಾರ್ ಸಂಸ್ಕೃತಿ ತಂದವನೀತ. ೧೮೬೩ ರಲ್ಲಿ ಸಂಗೀತ ಮನೆತನದಲ್ಲಿ ಗುಲಾಮ ಹುಸೇನ ಖಾನರ ದ್ವಿತೀಯ ಪುತ್ರನಾಗಿ ರಹಿಮತ್‌ಖಾನ ಜನಿಸಿದ. ಗುಲಾಮಹುಸೇನಖಾನರು ಭಾವನಗರದ ಆಸ್ಥಾನ ಗಾಯಕ. ಮನೆಯಲ್ಲಿ ಸಂಗೀತಶಾಲೆ ನಡೆಸುತ್ತಿದ್ದರು. ಹಿಂದುಸ್ತಾನಿ ಸಂಗೀತ ಮೂಲ ಸ್ತೋತ್ರವಾದ ಗ್ವಾಲಿಯರ ಘರಾಣೆಯಲ್ಲಿ ಬಾಲಕ ರಹಿಮತ್‌ಖಾನನಲ್ಲಿ ಸಂಗೀತಾಸಕ್ತಿ ಅಂಕುರಿಸಿದುದು ಸಹಜವೆ. ನಾಲ್ಕನೆಯ ವಯಸ್ಸಿನಲ್ಲಿಯೆ ತನ್ನ ತಂದೆಯ ಪದತಲದಲ್ಲಿ ಸಂಗೀತ ಕಲಿಯಲಾರಂಭಿಸಿದ. ಅದೂ ಅಲ್ಲದೆ ಸೋದರಮಾವ ಮತ್ತು ಆಸ್ಥಾನ ಸಿತಾರವಾದಕ ಗುಲಾಮ ನಬೀಬಖಾನರು ರಹಿಮತ್‌ಖಾನನ ತಂದೆಯೊಂದಿಗೆ ವಾಸಿಸುತ್ತಿದ್ದರು. ಗಾಯನ ಪಾಠ ಮುಗಿಯುತ್ತಲೆ ಪುಟ್ಟ ರಹಿಮತ್‌ಖಾನ ಸಿತಾರ ಪಾಠಕ್ಕೆ ಓಡುತ್ತಿದ್ದ. ಸಿತಾರದ ಸೆಳೆತ ಜೋರಾಗತೊಡಗಿತು.

ರಹಿಮತ್‌ಖಾನ ಎರಡರಲ್ಲೂ ಸಮಾನ ಪರಿಣತಿ ಸಂಪಾದಿಸತೊಡಗಿದ. ಎರಡಲ್ಲಿ ಯಾವುದನ್ನು ಆಯ್ದುಕೊಳ್ಳಬೇಕೆಂಬ ಹೊಯ್ದಾಟ. ಮಗನನ್ನು ತಮ್ಮಂತೆಯೆ ಗಾಯಕನನ್ನಾಗಿ ಮಾಡುವ ಪ್ರಬಲ ಇಚ್ಛೆಯಿದ್ದರೂ ಗುಲಾಮಹುಸೇನ ಉದಾರ ಮನಸ್ಕರು. ''ಮಗನೆ, ನಿನ್ನ ಒಲವನ್ನು ಅನುಸರಿಸು, ನೀನು ನೀನಾಗು'' ಎಂದು ಉಪದೇಶಿಸಿದರು. ಅಷ್ಟೆ ಅಲ್ಲ ಹೆಚ್ಚಿನ ವಿದ್ಯಾಭ್ಯಾಸಕ್ಕಾಗಿ ಭಾವನಗರ ಆಸ್ಥಾನದ ಬೀನ ಮತ್ತು ಸಿತಾರ ವಾದಕ ಹಬೀಬಖಾನರಲ್ಲಿ ಒಯ್ದಿಟ್ಟರು. ರಹಿಮತ್‌ಖಾನ ನಿಷ್ಠೆಯಿಂದ ಗುರುಸೇವೆ ಮಾಡಿದ. ಒಮ್ಮೆ ಗುರುವಿನ ಹುಕ್ಕಾ ಹೊತ್ತಿಸಬೇಕಿತ್ತು. ಇಕ್ಕಳ ಸಿಕ್ಕಲಿಲ್ಲ. ರಹಿಮತ್‌ಖಾನ ಕೆಂಡವನ್ನು ಅಂಗೈಯಲ್ಲಿ

---

೪೨. ಭೀಮಸೇನ ಜೋಶಿ ವ್ಯಕ್ತಿ ಮತ್ತು ಸಂಗೀತ - ಅನು : ಡಾ. ಸದಾನಂದ ಕನವಳ್ಳಿ, ಪುಟ- ೧೧೫

ಹಿಡಿದುತಂದ. ಗುರುವಿನ ಮನಸ್ಸು ಗೆದ್ದ. ಹಬೀಬಖಾನರು ಮನಸ್ಸು ಬಂದಾಗ ಕಲಿಸುತ್ತಿದ್ದರು. ''ಬೇಟಾ, ಬೀನ ಲೇ ಆವೋ'' ಎಂದಾಗ ರಹಿಮತ್‌ಖಾನನಿಗೆ ಖುಷಿಯೋ ಖುಷಿ. ನಾಲ್ಕು ವರ್ಷ ಕಠಿಣ ರಿಯಾಜಿನಿಂದ ರಹಿಮತ್‌ಖಾನ ವಾದ್ಯದ ಮೇಲೆ ಹಿಡಿತ ಸಾಧಿಸಿದ. ಒಂದು ದಿನ ಗುರು ನುಡಿದರು. ''ರಹಿಮತ್, ಇನ್ನು ಮೇಲೆ ನನ್ನ ಕೆಲವು ಶಿಷ್ಯರಿಗೆ ನೀನೇ ಕಲಿಸು'' ಗುರು ತನ್ನಲ್ಲಿಟ್ಟ ವಿಶ್ವಾಸದಿಂದ ರಹಿಮತ್‌ಖಾನ ಭಾವತುಂದಿಲರಾದರು. ಗುರು ತಮ್ಮ ಕಚೇರಿಗಳಿಗೆ ಶಿಷ್ಯನನ್ನು ಕರೆದೊಯ್ಯುವುದು ವಾಡಿಕೆಯಾಯಿತು. ಕೆಲವು ಕಚೇರಿಗಳಿಗೆ ಶಿಷ್ಯನನ್ನು ಶಿಫಾರಿಸುತ್ತಿದ್ದರು ಕೂಡ.

ಒಂದು ಸುದಿನದಂದು ಪಕ್ಕದ ಸಂಸ್ಥಾನದ ಲಿಮ್ಡಿಯ ದೊರೆಯಿಂದ ರಹಿಮತ್‌ಖಾನರಿಗೆ ಆಮಂತ್ರಣ ಬಂತು. ರಹಿಮತ್‌ಖಾನರು ಬೀನ ಮತ್ತು ಸಿತಾರಗಳನ್ನು ರಾತ್ರಿ ಒಂಬತ್ತರಿಂದ ನಸುಕಿನ ಮೂರರವಗೆ ನುಡಿಸಿದರು. ಮಹಾರಾಜಾ ಜಸವಂತಸಿಂಗ್ ಮತ್ತು ಉಪಸ್ಥಿತ ಸಂಗೀತಪ್ರೇಮಿಗಳು ಪ್ರಶಂಸೆ ಮತ್ತು ಕಾಣಿಕೆಗಳನ್ನು ಸುರಿದರು. ರಹಿಮತ್‌ಖಾನರು ಅವುಗಳನ್ನೆಲ್ಲ ಗುರುಚರಣಗಳಿಗೆ ಅರ್ಪಿಸಿದರು. ಸಂಗೀತದೇವಿಯ ಪದತಲದಲ್ಲಿ ಗೈದ ೨೦ ವರ್ಷಗಳ ತಪಸ್ಸು ಫಲ ನೀಡಿತ್ತು. ರಹಿಮತ್‌ಖಾನರ ಪ್ರೌಢಿಮೆಯ ಖ್ಯಾತಿ ಪಸರಿಸಲಾರಂಭಿಸಿತು. ಮಂಗರೋಲಾ, ಗುಜರಾತ್, ನಾಗಪುರ, ರಾಯಗಡ, ಕಚ್ಛ, ಒಡಿಸಾ, ಪಂಜಾಬ ಮತ್ತು ಸಿಂಧ ಮೊದಲಾದೆಡೆಗಳಿಂದ ಆಮಂತ್ರಣಗಳು ಪ್ರವಹಿಸಿದವು. ಆದರೂ, ರಹಿಮತ್‌ಖಾನರದು ಇದೆಲ್ಲ ಸಾಧನೆಯಿಂದ ಸಂತೃಪ್ತವಾಗುವ ಜಾಯಮಾನವಲ್ಲ. ಇನ್ನೂ, ಇನ್ನೂ ಪರಿಪೂರ್ಣತೆ ಸಾಧಿಸುವ ಹಂಬಲ, ಪರಿಶ್ರಮ.

ಇಂದೋರ ಸಂಸ್ಥಾನದಿಂದ ೧೮೭೮ ರಲ್ಲಿ ಆಮಂತ್ರಣ ಬಂತು. ರಹಿಮತ್‌ಖಾನರ ಜೀವನದಲ್ಲಿ ಅದೊಂದು ಮಹತ್ವದ ತಿರುವು. ಅವರ ಬೀನವಾದನ ಮೆಚ್ಚಿಕೊಂಡ ಇಂದೋರ ಸಂಸ್ಥಾನಿಕರು ರಹಿಮತ್‌ಖಾನರನ್ನು ಆಸ್ಥಾನ ಕಲಾವಿದರನ್ನಾಗಿ ನಿಯಮಿಸಿದರು. ರಹಿಮತ್‌ಖಾನರು ಅರಸುತ್ತಿದ್ದ ಅಪ್ರತಿಮ ಬಂದೆ ಅಲೀಖಾನರೂ ಅಲ್ಲಿಯ ಆಸ್ಥಾನ ಬೀನವಾದಕರಾಗಿದ್ದರು. ರಹಿಮತ್‌ಖಾನರು ಬಂದೆ ಅಲೀಖಾನರನ್ನು ಗುರುವಾಗಿ ಸ್ವೀಕರಿಸಿ ಹಲವಾರು ವರ್ಷ ಮಾರ್ಗದರ್ಶನ ಪಡೆದು ಪರಿಪೂರ್ಣತೆ ಸಾಧಿಸಿದರು. ''ಬೀನ್ ಹೊಟ್ಟೆಪಾಡಿಗಾಗಿ ನುಡಿಸುವ ವಾದ್ಯವಲ್ಲ. ಭಗವಂತನನ್ನು ಒಲಿಸಿಕೊಳ್ಳಲು ನುಡಿಸುವ ವಾದ್ಯ. ನೀನು ಇದುವರೆಗೆ ಸಾಧಿಸಿದ್ದನ್ನೆಲ್ಲ ಸಿತಾರಿನಲ್ಲಿ ಅಳವಡಿಸಿಕೊ'' ಎಂದು ಗುರು ಬಂದೆ ಅಲೀಖಾನರು ಉಪದೇಶಿಸಿದರು.

ಈಗ ರಹಿಮತ್‌ಖಾನರು ಸಿತಾರದ ಮೇಲೆ ಗಮನ ಕೇಂದ್ರೀಕರಿಸಿದರು. ಅದು ಅವರನ್ನು ಅಮರವಾಗಿಸಿದ ವಾದ್ಯವಾಯಿತು. ಅಂದಿನ ಸಿತಾರ ಗಾತ್ರದಲ್ಲಿ ಚಿಕ್ಕದಿದ್ದು ಮಸೀಟಖಾನಿ ಮತ್ತು ರಝಾಖಾನಿ ಗತ್ತುಗಳನ್ನು ಮಾತ್ರ ನುಡಿಸಲು ಯೋಗ್ಯವಾಗಿತ್ತು. ಬೀನ್‌ನಲ್ಲಿ ನುಡಿಸಬಹುದಾಗಿದ್ದ ಅಲಾಪ, ಜೋಡ, ಝಾಲಾ, ನುಡಿಸಲು ಬರುತ್ತಿರಲಿಲ್ಲ. ಸಿತಾರದ ಏಳು ತಂತಿಗಳಲ್ಲಿ ಖರ್ಜ ಷಡ್ಜ ತಂತಿಯಿರಲಿಲ್ಲ. ಇದ್ದುದು ಮಂದ್ರ ಮಧ್ಯಮ, ಎರಡೆ. ಮಂದ್ರ ಷಡ್ಜ ಖರ್ಜ ಪಂಚಮ, ಮಂದ್ರ ಪಂಚಮ, ಪಪಿಹಾ ಮತ್ತು ಚಿಕಾರಿ ತಂತಿಗಳು. ಹಾಗಾಗಿ, ವಿಲಂಬಿತದಲ್ಲಿ

ಒಳ್ಳೆಯ ಆಲಾಪ ನುಡಿಸಲು ಅಡಚಣೆಯಾಗುತ್ತಿತ್ತು. ಈ ಕೊರತೆಯನ್ನು ನೀಗಿಸಲು ರಹಿಮತ್‌ಖಾನರ ಆವಿಷ್ಕಾರಕ ಬುದ್ಧಿ ಕೆಲಸ ಮಾಡತೊಡಗಿತು. ರಹಿಮತ್‌ಖಾನರು ಖರ್ಜ ಷಡ್ಜ ಅಳವಡಿಸಿ ತಂತಿಗಳ ಮರುಹೊಂದಾಣಿಕೆ ಮಾಡಿದರು. ಮಂದ್ರ ಮಧ್ಯಮ, ಮಂದ್ರ ಷಡ್ಜ, ಖರ್ಜ ಪಂಚಮ, ಖರ್ಜ ಷಡ್ಜ, ಮಂದ್ರ ಪಂಚಮ, ಪಪೀಹಾ (ಮಧ್ಯ ಷಡ್ಜ) ಮತ್ತು ಚಿಕಾರಿ (ತಾರ ಷಡ್ಜ) ಈಗ ಅಧಿ ಮಾಧುರ್ಯ, ಸ್ಥಿತಿಸ್ಥಾಪಕತೆ, ವೈವಿಧ್ಯ ಸಾಧ್ಯವಾಯಿತು. ಸಿತಾರವು ಬೀನ್ ಮತ್ತು ಸೂರಬಹಾರ ವಾದ್ಯಗಳು ನುಡಿಸುವ ಎಲ್ಲವನ್ನು ನುಡಿಸಲು ಸಮರ್ಥವಾಯಿತು. ನಾಲ್ಕು ಸಪ್ತಕಗಳಿಂದೊಡಗೂಡಿದ ಪರಿಪೂರ್ಣ ವಾದ್ಯವಾಯಿತು.

ಭಾತಖಂಡೆ ಮತ್ತು ವಿಷ್ಣು ದಿಗಂಬರ ಪಲುಸ್ಕರರ ಸಂಗೀತ ಚಟುವಟಿಕೆಗಳಿಂದಾಗಿ ಮುಂಬಯಿ ಸಂಗೀತ ಕೇಂದ್ರವಾಗಿತ್ತು. ರಹಿಮತ್‌ಖಾನರನ್ನು ಮುಂಬಯಿ ಕೈಬೀಸಿ ಕರೆಯಿತು. ಮುಂಬಯಿಯಾದ್ಯಂತ ಅವರ ಕಚೇರಿಗಳೇರ್ಪಟ್ಟು ಹೊಸ ಸಿತಾರವು ರಸಿಕರ ಹಾಗೂ ಸಂಗೀತಜ್ಞರ ಹೃದಯ ಗೆದ್ದಿತು. ರಹಿಮತ್‌ಖಾನ ಪುಣೆಗೆ ಹೋದರು. ಅಲ್ಲಿಯೂ ಅವರ ಸಿತಾರ ಜಯಭೇರಿ ಬಾರಿಸಿತು. ತಮ್ಮ ಕಚೇರಿಗಳಿಗಾಗಿ ದೊಡ್ಡ ದೊಡ್ಡ ಥಿಯೇಟರುಗಳನ್ನು ಬಾಡಿಗೆ ಹಿಡಿದರು. ಸಂಗೀತ ಸವಿಯುವ ಹಕ್ಕು ಕೇವಲ ರಾಜಾ ಮಹಾರಾಜರಿಗಷ್ಟೆ ಅಲ್ಲ, ಜನಸಾಮಾನ್ಯರಿಗೂ ಇದೆ ಎಂದು ಬಲವಾಗಿ ನಂಬಿದವರು ರಹಿಮತ್‌ಖಾನ. ಪುಣೆಯಲ್ಲಿ ಅವರು ಭಾರತ ಗಾಯನ ಸಮಾಜ ಎಂಬ ಸಂಗೀತಶಾಲೆಯನ್ನು ತೆರೆದರು. ಅಲ್ಲಿ ಅವರು ಸಿತಾರ ಕಲಿಸಿದರೆ, ಭಾಸ್ಕರಬುವಾ ಬಖಲೆ ಗಾಯನ ಕಲಿಸುತ್ತಿದ್ದರು. ಸುಪ್ರಸಿದ್ಧ ಗಾಯಕ ಬೆಹರೆಬುವಾ ಆ ಶಾಲೆಯ ಶಿಷ್ಯರಲ್ಲೊಬ್ಬರು.

ರಹಿಮತ್‌ಖಾನರ ಖ್ಯಾತಿ ಮೈಸೂರರಸ ನಾಲ್ವಡಿ ಕೃಷ್ಣರಾಜ ಒಡೆಯರ ಕಿವಿ ತಲುಪಿತು. ಮಹಾರಾಜರು ಸ್ವತಃ ವೈಣಿಕರಾಗಿದ್ದು ಕಲೆಗಳ ಬಹು ದೊಡ್ಡ ಆಶ್ರಯದಾತರಾಗಿದ್ದರು. ಹಿಂದುಸ್ತಾನಿ ಸಂಗೀತವೆಂದರೆ ಬಲು ಇಷ್ಟ. ನತ್ಥನ ಖಾನ, ಅವರ ತರುವಾಯ ಅವರ ಪುತ್ರ ವಿಲಾಯತಹುಸೇನಖಾನ, ಠುಮರಿ ಗಾಯಕಿ ಗೋಹರಜಾನ ಆಸ್ಥಾನ ಗಾಯಕರಾಗಿದ್ದರೆ ಬರ್ಕತುಲ್ಲಾ ಖಾನ ಆಸ್ಥಾನ ಸಿತಾರವಾದಕರಾಗಿದ್ದರು. ಮಹಾರಾಜರಿಂದ ಸೈ ಎನಿಸಿಕೊಳ್ಳುವುದು ಶ್ರೇಷ್ಠತೆಗೆ ಮುದ್ರೆ ಬಿದ್ದಂತೆ. ನಾಲ್ವಡಿ ಕೃಷ್ಣರಾಜರು ೧೯೧೧ ರಲ್ಲಿ ರಹಿಮತ್‌ಖಾನರನ್ನು ಆಮಂತ್ರಿಸಿದರು. ಮೊದಲ ಬಾರಿ ಅರಮನೆಯಲ್ಲಿ ಹಾಡುವವರು / ಬಾರಿಸುವವರು ಪದ್ಧತಿಯಂತೆ ವೀಣೆ ಶೇಷಣ್ಣನವರ ಮುಂದೆ ತಮ್ಮ ಕಲೆ ಪ್ರದರ್ಶಿಸಿ ಶಿಫಾರಸು ಪಡೆಯಬೇಕಿತ್ತು. ವೀಣೆ ಶೇಷಣ್ಣನವರು ಭಾರೀ ಶಿಫಾರಸು ಮಾಡಿದ್ದರಿಂದ ಮಹಾರಾಜರು ರಹಿಮತ್‌ಖಾನರ ಸಿತಾರವಾದನ ಆಲಿಸಲು ಉತ್ಸುಕರಾಗಿದ್ದರು. ಮಹಾರಾಜರು ಬಹುವಾಗಿ ಮೆಚ್ಚಿಕೊಂಡು ಸಿತಾರರತ್ನ ಬಿರುದು ನೀಡಿ ಸನ್ಮಾನಿಸಿದರು. ಅಂದಿನಿಂದ ಸಿತಾರರತ್ನ ಎನ್ನುವುದು ಅವರ ಹೆಸರಿನ ಅವಿಭಾಜ್ಯ ಅಂಗವಾಗಿದೆ. ಮಹಾರಾಜರು ತಮ್ಮ ಆಸ್ಥಾನ ಕಲಾವಿದರಾಗುವಂತೆ ರಹಿಮತ್‌ಖಾನರನ್ನು ಕೇಳಿದರು. ಸಿತಾರರತ್ನರು ಎಲ್ಲಕ್ಕಿಂತ ಸ್ವಾತಂತ್ರ್ಯವನ್ನು ಹೆಚ್ಚು ಇಷ್ಟಪಡುತ್ತಿದ್ದುದರಿಂದ ಮಹಾರಾಜರ ಆಹ್ವಾನವನ್ನು ವಿನಯಪೂರ್ವಕವಾಗಿಯೆ ಒಪ್ಪಿಕೊಳ್ಳಲಿಲ್ಲ.

ಮೈಸೂರಿನ ನಷ್ಟ ಧಾರವಾಡಕ್ಕೆ ಲಾಭವಾಯಿತು. ಮೈಸೂರಿಗೆ ಹೋಗುವ ಮಾರ್ಗದಲ್ಲಿ ರಹಿಮತ್‌ಖಾನರು ಧಾರವಾಡದಲ್ಲಿ ಒಂದೆರಡು ದಿನ ತಂಗಿದ್ದರು. ಧಾರವಾಡದ ಸೃಷ್ಟಿ ಸೌಂದರ್ಯ ಮತ್ತು ಪ್ರಶಾಂತ ವಾತಾವರಣ ರಹಿಮತ್‌ಖಾನರ ಮನ ಸೂರೆಗೊಂಡಿತ್ತು. ೧೯೧೨ ರಲ್ಲಿ ಅವರು ಧಾರವಾಡದಲ್ಲಿ ನೆಲೆಸಿ ೧೯೫೪ ರಲ್ಲಿ ಪೈಗಂಬರವಾಸಿಗಳಾಗುವವರೆಗೂ ಧಾರವಾಡವನ್ನೇ ತಮ್ಮ ಕರ್ಮಭೂಮಿಯನ್ನಾಗಿಸಿಕೊಂಡರು. ಹೆಮ್ಮೆಯಿಂದ ತಮ್ಮನ್ನು ರಹಿಮತ್‌ಖಾನ ಧಾರವಾಡಕರ ಎಂದೇ ಕರೆದುಕೊಳ್ಳುತ್ತಿದ್ದರು. ೧೯೩೧ ರಲ್ಲಿ ಧಾರವಾಡದ ಮಾಳಮಡ್ಡಿಯ ಸ್ಟೇಷನ್ ರಸ್ತೆಯಲ್ಲಿ ಭಾರತೀಯ ಸಂಗೀತ ವಿದ್ಯಾಲಯ ಸ್ಥಾಪಿಸಿ ಸಂಗೀತವಿದ್ಯೆ ಕಲಿಸಿದರು. ಅದನ್ನು ಮೊಮ್ಮಕ್ಕಳಾದ ಬಾಲೆಖಾನ, ಈಗ ಹಮೀದಖಾನ ಮುಂದುವರಿಸಿಕೊಂಡು ಬರುತ್ತಿರುವರು.

''ಸಿತಾರರತ್ನರು ಮೇರು ಸಿತಾರವಾದಕರಾಗಿದ್ದರು. ಅವರ ಶೈಲಿಯು ಬೀನಕಾರ ಘರಾಣೆಯ ಮಾಧುರ್ಯ, ಗ್ವಾಲಿಯರ ಘರಾಣೆಯು ಉನ್ನತ ಗಾಂಭೀರ್ಯ ಮತ್ತು ಚಾಚೂ ತಪ್ಪದ ಲಯಕಾರಿಗಳ ಮುಪ್ಪುರಿಯಾಗಿತ್ತು. ಅದಕ್ಕೆ ಗಾಯಕಿ ಅಂಗದ ಕುಂದಣ ಬೇರೆ. ಅವರು ಎರಡೂ ಕೈಗಳನ್ನು ಏಕಕಾಲಕ್ಕೆ ಚಲಾಯಿಸುವ ಕಲೆಯನ್ನು ಕರಗತ ಮಾಡಿಕೊಂಡಿದ್ದರು. ಬಲಗೈ ತಂತಿಗಳನ್ನು ಮೀಟುತ್ತಿದ್ದಂತೆ ಎಡಗೈ ಪಡೆದೆಗಳ ಮೇಲೆ ಸರಾಗವಾಗಿ ಓಡಾಡುತ್ತಿತ್ತು. ಅವರು ಸ್ವರ ಮತ್ತು ಲಯಗಳ ಪ್ರಭುವಾಗಿದ್ದರು. ಅವರ ಇನ್ನೊಂದು ವೈಶಿಷ್ಟ್ಯವೆಂದರೆ ಮೊಹರಾ, ಮೊಹರಾ ಎಂದರೆ ತೀನತಾಲದ ಕೊನೆಯಲ್ಲಿ ಎರಡೂವರೆ ಮಾತ್ರೆಗಳಲ್ಲಿ ಸಂಯೋಜಿಸಿದ ಸ್ವರಗುಚ್ಛ. ಇವೆಲ್ಲದರ ರಸಾಯನ ರಹಿಮತ್ ಬಾಜ್ ಎಂದೇ ಪ್ರಖ್ಯಾತವಾಗಿತ್ತು''[೪೩] ಎಂದು ಡಾ.ಸದಾನಂದ ಕನವಳ್ಳಿಯವರು ಅಭಿಪ್ರಾಯಪಡುತ್ತಾರೆ.

ಅದು ಗ್ರಾಮೊಫೋನುಗಳ ಮತ್ತು ೭೮ ಆರ್ ಪಿ. ಎಂ. ಧ್ವನಿ ಮುದ್ರಿಕೆಗಳ ಯುಗ. ತಮ್ಮ ಧ್ವನಿಮುದ್ರಿಕೆಗಳನ್ನು ಹೊಟೆಲುಗಳಲ್ಲಿ ಮತ್ತು ಸಾರ್ವಜನಿಕ ಸಮಾರಂಭಗಳಲ್ಲಿ ಹಚ್ಚಿ ಕುಲಗೆಡಿಸುವುದು ಸಿತಾರತ್ನರಿಗೆ ಸುತರಾಂ ಇಷ್ಟವಿರಲಿಲ್ಲ. ಆದುದರಿಂದ, ಅವರು ಧ್ವನಿಮುದ್ರಿಕೆಗಳನ್ನು ಹೊರತರಲು ಉತ್ಸುಕರಾಗಿರಲಿಲ್ಲ. ಅಂತಾಗಿಯೂ ಎಚ್. ಎಂ.ವಿ. ಆರು ರಾಗಗಳನ್ನು ಧ್ವನಿಮುದ್ರಿಸಿಕೊಳ್ಳಲು ಅವರ ಮನವೊಲಿಸವಲ್ಲಿ ಯಶಸ್ವಿಯಾಯಿತು. ಭೈರವಿ, ಮಾಲಕಂಸ, ಜೋಗಿಯಾ, ಲಲಿತ, ಜೀವನಪುರಿ ಮತ್ತು ಪರಜ. ಅದು ಮೂರು ನಿಮಿಷಗಳ ಗಾನತಟ್ಟೆಗಳ ಕಾಲ. ಆ ಮೂರು ನಿಮಿಷಗಳಲ್ಲಿಯೆ ರಹಿಮತ್‌ಖಾನರು ಆಯಾ ರಾಗರಸವನ್ನು ಅದ್ಭುತವಾಗಿ ಸೆರೆಹಿಡಿದಿರುವರು. ಸಿತಾರರತ್ನರದು ಅಪ್ಪಟ ಭಾರತೀಯ ಮನೋಧರ್ಮ. ಸಂಗೀತವೆ ನನ್ನ ಧರ್ಮ, ಸೂರ ಹೀ ಈಶ್ವರ, ಎಂದು ಹೆಮ್ಮೆಯಿಂದ ಉದ್ಗರಿಸುತ್ತಿದ್ದರು.

ಸಿತಾರರತ್ನರದು ಮಹಾ ಸಂಗೀತ ಪರಂಪರೆ. ಅವರಿಗಿಂತ ಪೂರ್ವದ ಮೂರು ತಲೆಮಾರು ಮತ್ತು ಅವರ ನಂತರದ ಮೂರು ತಲೆಮಾರು ಸಂಗೀತಗಾರರಾಗಿರುವರು. ತಂದೆ ಗುಲಾಮ ಹುಸೇನಖಾನ ಭಾವನಗರದ ಆಸ್ಥಾನ

---

೪೩. ಕಲಾಚೇತನ : ಡಾ.ಸದಾನಂದ ಕನವಳ್ಳಿ, ಪುಟ-೨೪೦

ಗಾಯಕರಾಗಿದ್ದರು. ಅಜ್ಜ ಮದಾರ ಬಕ್ಷ ರತ್ಲಮ್ ಆಸ್ಥಾನ ಗಾಯಕ ಹಾಗೂ ಸಿತಾರವಾದಕ. ಮುತ್ತಜ್ಜ ದೌಲತಖಾನ ಇಂದೋರ ಮತ್ತು ರತ್ಲಮ್ ಆಸ್ಥಾನಗಳ ಗಾಯಕ.

ಸಿತಾರರತ್ನರ ಮಗ ಪೈಗಂಬರವಾಸಿ ಎ. ಕರೀಮಖಾನ ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಿತಾರ ಪ್ರಾಧ್ಯಾಪಕಾರಿಗಿದ್ದರು. ನಿವೃತ್ತಿ ನಂತರ ಗೋವಾದ ಅಕಾಡೆಮಿ ಆಫ್ ಮ್ಯೂಜಿಕಲ್‌ನಲ್ಲೂ ಹಲವಾರು ವರ್ಷ ಬೋಧಕ. ಸಿತಾರರತ್ನರ ಇನ್ನೊಬ್ಬ ಮಗ ದಿ.ಸತೀಶಕುಮಾರ ದಿಲ್ಲಿ ಆಕಾಶವಾಣಿ ಕೇಂದ್ರದ ನಿಲಯ ಸಿತಾರವಾದಕ. ಮತ್ತೊಬ್ಬ ಮಗ ದಸ್ತಗೀರಖಾನ ಕೂಡ ಸಿತಾರವಾದಕರಾಗಿದ್ದು ಮುಂಬಯಿಯಲ್ಲಿ ವಾದ್ಯಗಳ ಅಂಗಡಿಯಿಟ್ಟಿರುವರು.

ಸಿತಾರತ್ನರ ಒಂಬತ್ತು ಮೊಮ್ಮಕ್ಕಳಲ್ಲಿ (ಎಲ್ಲರೂ ಎ. ಕರೀಮಖಾನರ ಮಕ್ಕಳು) ಏಳು ಜನ ಸಿತಾರವಾದಕರು. ಸುಪ್ರಸಿದ್ಧರು. ಹಿರಿಯ ಮೊಮ್ಮಗ ಉಸ್ಮಾನಖಾನ ಪುಣೆಯಲ್ಲಿ ನೆಲೆಸಿರುವರು. ಎರಡನೆಯವರಾದ ಬಾಲೆಖಾನ ಧಾರವಾಡ ಆಕಾಶವಾಣಿ ಕೇಂದ್ರದ ನಿಲಯ ಕಲಾವಿದರಾಗಿ ಇದೀಗ ನಿವೃತ್ತರಾಗಿರುವರು. ಮೂರನೆಯವರಾದ ಮೆಹಬೂಬಖಾನ ಮುಂಬಯಿಯಲ್ಲಿರುವರು. ನಾಲ್ಕನೆಯವರಾದ ಹಮೀದಖಾನ ಧಾರವಾಡದ ಕರ್ನಾಟಕ ಸಂಗೀತ ಕಾಲೇಜಿನ ಪ್ರಾಚಾರ್ಯರು. ಐದನೆಯ ಭೋಟೆ ರಹಿಮತ್‌ಖಾನ ಗೋವಾ ಸಂಗೀತ ಅಕಾಡೆಮಿಯಲ್ಲಿ ಅಧ್ಯಾಪಕರು. ಅವಳಿಗಳಾದ ಕೊನೆಯ ಇಬ್ಬರು ರಫೀಕಖಾನ ಮತ್ತು ಶಫೀಕಖಾನ ಕ್ರಮವಾಗಿ ಬೆಂಗಳೂರು ಮತ್ತು ಗುಲಬರ್ಗಾ ಆಕಾಶವಾಣಿ ಕೇಂದ್ರಗಳ ನಿಲಯ ಕಲಾವಿದರು. ಬಾಲೆಖಾನರ ಮಗ ರಯೀಸಖಾನ ಪಂಚಗಣಿಯ ಪಬ್ಲಿಕ್ ಸ್ಕೂಲೊಂದರಲ್ಲಿ ಸಿತಾರ ಅಧ್ಯಾಪಕ. ಅಲ್ಲಿಗೊಂದು ಸಪ್ತಕ ಪೂರ್ಣವಾಯಿತು. ಏಳು ತಲೆಮಾರು ಸಂಗೀತ ಹರಿದು ಬಂದಿರುವ ಈ ಮನೆತನದಲ್ಲಿ ಇನ್ನೂ ಹಲವಾರು ಸಪ್ತಕಗಳು ಮೂಡಿಬಂದರೆ ಅಚ್ಚರಿಯಲ್ಲ. ಇಂಥ ಮಹಾನ್ ಸಂಗೀತವೃಕ್ಷ ಇನ್ನೆಲ್ಲಿಯೂ ಇಲ್ಲವೇ ಇಲ್ಲವೆನ್ನುವಷ್ಟು ವಿರಳ.

೧೯೫೪ ರಲ್ಲಿ ಸಿತಾರರತ್ನರು ಸ್ವರ್ಗಸ್ಥರಾದಂದಿನಿಂದ ಪ್ರತಿವರ್ಷ ಅವರ ಪುಣ್ಯತಿಥಿ ಸಂಗೀತೋತ್ಸವವನ್ನು ಕಳೆದ ೪೮ ವರ್ಷಗಳಿಂದ ನಡೆಸಿಕೊಂಡು ಬರಲಾಗುತ್ತಿದೆ. ಮೊದಲು ಪುಣೆಯಲ್ಲಿ ಜರುಗುತ್ತಿತ್ತು. ೧೯೬೧ರ ಮುಳಾ-ಮುಠಾ ನೆರೆಯಿಂದಾಗಿ ಕುಟುಂಬ ಧಾರವಾಡಕ್ಕೆ ಸ್ಥಳಾಂತರವಾಯಿತು. ಅಂದಿನಿಂದ ಪುಣ್ಯತಿಥಿ ಧಾರವಾಡದಲ್ಲಿ ಜರುಗುತ್ತಿದೆ. ಹೀರಾಬಾಯಿ ಬಡೋದೆಕರ, ಮಲ್ಲಿಕಾರ್ಜುನ ಮನಸೂರ, ಗಂಗೂಬಾಯಿ ಹಾನಗಲ್ಲ, ಬಸವರಾಜ ರಾಜಗುರು, ಭೀಮಸೇನ ಜೋಶಿ, ಸಂಗಮೇಶ್ವರ ಗುರವ, ಜಿತೇಂದ್ರ ಅಭಿಷೇಕಿ, ಅಜಯ ಚಕ್ರವರ್ತಿ, ಪಂಡಿತ ಪ್ರತಾಪನಾರಾಯಣ, ಕಂಕಣಾ ಬ್ಯಾನರ್ಜಿ, ಶ್ರುತಿ ಸಡೋಲೆಕರ, ಪದ್ಮಾ ತಳವಾಳಕರ, ಅಶ್ವಿನಿ ಭಿಡೆ, ಎನ್. ರಾಜಂ (ವಾಯಲಿನ್), ರಾಜೀವ ತಾರಾನಾಥ (ಸರೋದ್), ಶಾಹಿದ್ ಪರ್ವೇಜ್ (ಸಿತಾರ), ವಿಶ್ವಮೋಹನ ಭಟ್ಟ (ಮೋಹನವೀಣಾ) ಮೊದಲಾದವರು ಪಾಲ್ಗೊಂಡಿರುವರು. ದಿಲ್ಲಿ, ಮುಂಬಯಿ, ಕಲಕತ್ತಾ,

ಪುಣೆ, ಹೈದರಾಬಾದ ಮೊದಲಾದೆಡೆಗಳಿಂದ ಸಂಗೀತಗಾರರನ್ನು ಆಹ್ವಾನಿಸಲಾಗುತ್ತದೆ. ಅನೇಕ ತರುಣ ಸಂಗೀತಗಾರರಿಗೆ ಅವಕಾಶ ನೀಡುವ ಮೂಲಕ ಅವರ ಏಳ್ಗೆಗೆ ಪ್ರೋತ್ಸಾಹ ನೀಡಲಾಗುತ್ತಿದೆ. ಈ ಸಂಗೀತೋತ್ಸವಗಳು ಸಿತಾರರತ್ನರ ಸ್ಮರಣೆಯನ್ನು ಹಸಿರಾಗಿರಿಸಿವೆ.

### ೫.೧೩.ಪಂ. ಸಂಗಮೇಶ್ವರ ಗುರವ

ಬಾಲಕನಿಗೊ ಸಂಗೀತ ಕಲಿಯುವಾಸೆ. ''ಬೇಡ ಸಂಗೀತದ ಬೆನ್ನು ಹತ್ತಿ ನಾನು ಕಂಡ ಉಂಡ ಕಷ್ಟವೆ ಸಾಕು. ನೀನು ಶಿಕ್ಷಣ ಪಡೆದು ಒಳ್ಳೆಯ ಉದ್ಯೋಗ ದೊರಕಿಸಿಕೊಂಡು ಸುಖದಿಂದಿರು'' ಎಂಬುದು ತಂದೆಯ ಉಪದೇಶ. ಬಾಲಕನಿಗೆ ಶಾಲಾಶಿಕ್ಷಣ ಸೇರಲೊಲ್ಲದು. ತಂದೆಯ ಒತ್ತಾಯಕ್ಕೆ ಶಾಲೆಗೇನೋ ಹೋಗುತ್ತಿದ್ದ. ಆದರೆ, ಮನಸ್ಸೆಲ್ಲ ಸಂಗೀತದ ಮೇಲೆ. ಅಂದು ಹೈಸ್ಕೂಲ ಎರಡನೆಯ ಇಯತ್ತೆಯ ಗಣಿತ ಪರೀಕ್ಷೆ. ಶಾಲೆಯ ದಾರಿಯಲ್ಲಿ ರೇಡಿಯೋದಿಂದ ಬಿತ್ತರವಾಗುತ್ತಿದ್ದ ಅಬ್ದುಲ್‌ಕರೀಮಖಾನರ ಗಾಯನ ಕೇಳಿಬರುತ್ತಿತ್ತು. ಪರೀಕ್ಷೆ ಹಾಳಾಗಿ ಹೋಗಲಿ ಎಂದು ಬಾಲಕ ರೇಡಿಯೊ ಕೇಳುತ್ತ ಮಂತ್ರಮುಗ್ಧನಾಗಿ ನಿಂತುಬಿಟ್ಟ. ಅಂದಿನಿಂದ ಅಬ್ದುಲ್ ಕರೀಮಖಾನರ ಧ್ವನಿಮುದ್ರಿಕೆಗಳನ್ನು ಅನುಕರಣ ಮಾಡುವುದೇ ಕಾಯಕವಾಯಿತು. ಇಂಥ ಸಂಗೀತನಿಷ್ಠೆ ತೋರಿದ ಅಂದಿನ ಬಾಲಕನೆ ಇಂದಿನ ಹಿರಿಯ ಹಿಂದುಸ್ತಾನಿ ಗಾಯಕ ಸಂಗಮೇಶ್ವರ ಗುರವ. ಜನನ ೭.೧೨.೧೯೩೧ ರಂದು ಜಮಖಂಡಿಯಲ್ಲಿ.

ಸಂಗಮೇಶ್ವರನ ಹೆಣ್ಣಜ್ಜ ರಾಮಚಂದ್ರಪ್ಪ ಸಂಗಮೇಶ್ವರ ತಾಯಿ ನಂದೆವ್ವ ಅವರಿಗೆ ಹೇಳುತ್ತಿದ್ದ. ''ನಿನ್ನ ಮಗ ದೊಡ್ಡ ಗಾಯಕ ಆಗತಾನ, ನೋಡತಿರು, ಆದರೆ, ಅವನಪ್ಪ ಅವನಗಿ ಕಲಿಸಾಕ ಒಲ್ಲ'' ಮಗ ಸಂಗೀತ ಬಿಡಲೋಲ್ಲ. ಅಪ್ಪ ಸಂಗೀತ ಕಲಿಸಲೊಲ್ಲ. ಬೇರೆಯವರೂ ಹೇಳಿ ನೋಡಿದರು. ಅಪ್ಪ ಜಪ್ಪೆನ್ನಲಿಲ್ಲ. ಮೂಲೆಯಲ್ಲಿ ಬಿದ್ದಿದ್ದ ಸಾರಂಗಿಯನ್ನು ಸಂಗಮೇಶ್ವರ ಹುಡುಕಿ ತೆಗೆದ. ತಂದೆಯ ಸೋದರಮಾವ ಬಾಳಪ್ಪ ಸಾರಂಗಿ ನುಡಿಸುವುದನ್ನು ಕಲಿಸಿದ. ಮರುದಿನ ಆದರಂತೆಯೇ ನುಡಿಸಬೇಕೆ! ''ಮೀನಿಗೆ ಯಾರಾದರೂ ಈಜು ಕಲಿಸುವ ಅಗತ್ಯವಿದೆಯೆ!'' ಎಂದು ಸೋದರಮಾವ ಬಾಳಪ್ಪನ ಉದ್ಗಾರ.

ಸಂಗಮೇಶ್ವರನ ತಂದೆ ಗಣಪತರಾವ ಗುರವ ಜಮಖಂಡಿ ಸಂಸ್ಥಾನದ ಆಸ್ಥಾನ ಗಾಯಕರಾಗಿದ್ದರು. ೧೯೪೮ ರಲ್ಲಿ ಸಂಸ್ಥಾನ ವಿಲೀನಗೊಂಡು ರಾಜಾಶ್ರಯ ತಪ್ಪಿ ಬೆಳಗಾವಿಗೆ ಬಂದು ನೆಲೆಸಿದರು. ಗಣಪತರಾವ ಕಿರಾಣಾ ಘರಾಣೆಯ ಅಧ್ವರ್ಯು ಅಬ್ದುಲ್ ಕರೀಮಖಾನರ ಪ್ರಥಮ ಶಿಷ್ಯರಲ್ಲೊಬ್ಬರು. ಒಂದು ದಿನ ಮಗ ಕದ್ದು ಸಾರಂಗಿ ಬಾರಿಸುವುದು ಕಿವಿಗೆ ಬಿತ್ತು. ''ಅದನ್ಯಾಕ ಜಮಖಂಡಿಯಿಂದ ಬೆಳಗಾವಿಗೆ ತಂದೀ'' ಎಂದು ಮಗನನ್ನು ಗದರಿಸಿದರು. ಸಂಗೀತ ಬೆನ್ನು ಹತ್ತಿ ಅನುಭವಿಸಿದ ಕಷ್ಟನಷ್ಟದಿಂದ ಬೇಸತ್ತ ಜೀವ ಅವರದು. ''ಬಾರಿಸಾಕ ತಂದೀನಿ'' ಮಗ ಶಾಂತಚಿತ್ತನಾಗಿಯೆ ಉತ್ತರಿಸಿದ.

ಒಂದು ದಿನ ತಂದೆ ಅಂದರು : ''ಸಾರಂಗಿ ಬಾರಿಸು, ನೋಡೋಣು'', ಸಂಗಮೇಶ್ವರ ಬಿಹಾಗ ರಾಗವನ್ನು ನುಡಿಸಿದ. ತಂದೆಗೆ ಮೆಚ್ಚಿಗೆಯಾಯಿತು. ೧೦-೧೫ ದಿನ ಸಾರಂಗಿ ನುಡಿಸುವುದನ್ನು ಕಲಿಸಿದರು. ಆದರೆ, ಮಗ

ಗಾಯಕನಾಗಬಯಸಿದ್ದ. ತಂದೆ ಹಾಡುವಾಗ ಬಾಗಿಲ ಮರೆಯಲ್ಲಿ ನಿಂತು ರಾಗಗಳನ್ನು ಕದ್ದು ಆಲಿಸುತ್ತಿದ್ದ. ಅಷ್ಟೊತ್ತಿಗಾಗಲೆ ಶಾಲೆಗೆ ಶರಣು ಹೊಡೆದಾಗಿತ್ತು. ಬೆಳಗಾವಿಯ ಶಹಾಪುರದಲ್ಲಿದ್ದ ಗಂಜೀಪ್ರಾಕ್ ಫ್ಯಾಕ್ಟರಿಯಲ್ಲಿ ವಾರಕ್ಕೆ ಮೂರು ರೂಪಾಯಿ ಸಂಬಳಕ್ಕೆ ದುಡಿಯಲಾರಂಭಿಸಿದ್ದ.

ತಂದೆಯ ಗಾಯನ ಕದ್ದು ಕೇಳುತ್ತಿರುವಾಗ ಒಂದು ದಿನ ಸಿಕ್ಕಿಬಿದ್ದ. ''ಹಾಡು, ನಿನ್ನ ದನಿ ಹ್ಯಾಂಗೈತಿ, ನೋಡೂನು'' ಎಂದರು ಗಣಪತರಾವ. ಸಂಗಮೇಶ್ವರ ಐದು ನಿಮಿಷ ಹಾಡಿದ್ದನೊ ಇಲ್ಲವೊ ಗಣಪತರಾವ ತಮ್ಮ ತಂಬೂರಿ ಪಕ್ಕಕ್ಕಿಟ್ಟು ಎರಡೂ ಕೈಗಳಿಂದ ತಲೆಯನ್ನು ಗಟ್ಟಿಯಾಗಿ ಹಿಡಿದುಕೊಂಡರು. ''ಏನಾರ ತಪ್ಪಾತೇನಪಾ'' ಎಂದು ಸಂಗಮೇಶ್ವರ ಕೇಳಿದ. ''ಇಲ್ಲಪಾ, ತಪ್ಪು ನಂದೇ ಆಗೇತಿ. ನಿನಗ ಮೊದ್ಲ ಗಾಯನ ಕಲಿಸಾಕ ಸುರು ಮಾಡಬೇಕಿತ್ತು. ಇವತ್ತಿನಿಂದ ಸಾರಂಗಿ ಬಿಟ್‌ಬಿಡು. ನಿನ್ನ ದನಿ ಇಷ್ಟು ಛಂದ ಐತಿ. ನೀ ಸಾರಂಗಿ ಯಾಕ ಬಾರಿಸ್ಬೇಕು'' ಅಂದರು ತಂದೆ. ಸಂಗಮೇಶ್ವರನಿಗೆ ಆಗ ೧೭ ವರ್ಷ.

ಗಾಯನಪಾಠ ರಭಸದಿಂದ ಆರಂಭಗೊಂಡವು. ಕಳೆದು ಹೋಗಿದ್ದ ಸಮಯ ಸರಿದೂಗಿಸಬೇಕಿತ್ತಲ್ಲ! ಹರಕುಮುರುಕು ತಬಲಾ ಡಗ್ಗಾ ಸಹಾಯದಿಂದ ಮುಂಜಾನೆ ತೋಡಿ, ಮಧ್ಯಾಹ್ನ ಭೀಮಪಲಾಸ, ಸಂಜೆ ಬಿಹಾಗ ರಾಗಗಳ ಪಾಠ. ತಂದೆ ಮಗ ಇಬ್ಬರಿಗೂ ಹುಚ್ಚು ಹಿಡಿದಂತಾಗಿತ್ತು. ಸಂಗಮೇಶ್ವರ ಸಂಜೆಗೆ ಫ್ಯಾಕ್ಟರಿಯಿಂದ ಬರುವುದೇ ತಡ, ಸಂಗೀತಪಾಠ ಆರಂಭ. ತರಕಾರಿ ತರಲು ಪೇಟೆಗೆ ಹೋಗಿ ಬರುವಾಗಲೂ ದಾರಿಯುದ್ದಕ್ಕೂ ಪಾಠ. ಸುತ್ತಮುತ್ತ ಜನರಿದ್ದಾರೆಂಬ ಪರಿವೆಯಿಲ್ಲ. ಗಣಪತರಾವ ರಾಗಗಳ ಸೂಕ್ಷ್ಮಗಳನ್ನು ದಾರಿಯುದ್ದಕ್ಕೂ ಹಾಡುತ್ತ ತಿಳಿಸಿಕೊಡುತ್ತಿದ್ದರು. ''ನೋಡು, ನೋಡು, ಆ ಆ ಆ ಜೋಡಿ ಹೊರಟೈತಿ'' ಎಂದು ಜನ ತಮಾಷೆ ಮಾಡುತ್ತಿದ್ದರು. ಸಂಗೀತ ಕಲಿಸುವ, ಸಂಗೀತ ಕಲಿಯುವ ಹುಚ್ಚು ಎಷ್ಟು ತಾರಕಕ್ಕೇರಿತ್ತೆಂದರೆ ನಿದ್ದೆಗೆಟ್ಟ ನೆರೆಹೊರೆಯವರು ಪೊಲೀಸರಿಗೆ ತಕರಾರು ಕೊಟ್ಟರು. ''ನಾಳೆಯಿಂದ ನಿಮ್ಮ ಗಾಯನ ಗದ್ದಲ ನಿಲ್ಲಿಸಿರಿ. ಇಲ್ಲದಿದ್ದರೆ ನೆಟ್ಟಗಾಗಲಿಕ್ಕಿಲ್ಲ'' ಎಂದು ಪೊಲೀಸರು ಮನೆಗೆ ಬಂದು ಎಚ್ಚರಿಕೆ ನೀಡಿದರು. ಅಂದಿನಿಂದ ರಾತ್ರಿ ಪಾಠ ನಿಂತಿತು. ಆ ಮೇಲೆ ಪ್ರಾಕ್ಟಿಸಿಗೆ ಒಂದು ಪ್ರತ್ಯೇಕ ಕೋಣೆ ಗೊತ್ತು ಮಾಡಿದರು. ತಾಲದ ಸರಿಯಾದ ಗ್ರಹಿಕೆಯಾದ ದಿನ ಸಂಗಮೇಶ್ವರರಿಗೆ ಸ್ವರ್ಗ ಸಿಕ್ಕಂತಾಯಿತು.

ಗಣೇಶೋತ್ಸವ ಮತ್ತು ದಸರಾ ಹಬ್ಬದ ಸಂದರ್ಭಗಳಲ್ಲಿ ಸಣ್ಣಪುಟ್ಟ ಕಚೇರಿಗಳು ಆರಂಭಗೊಂಡವು. ಆ ಮೇಲೆ ೩-೪ ತಾಸಿನ ಕಚೇರಿಗಳು. ಸಂಭಾವನೆ ಐದು ರೂಪಾಯಿ, ಹೆಚ್ಚೆಂದರೆ ಹತ್ತು ರೂಪಾಯಿ.

೧೯೫೦ ರಲ್ಲಿ ಧಾರವಾಡ ಆಕಾಶವಾಣಿ ಕೇಂದ್ರದ ಉದ್ಘಾಟನೆಯಾಯಿತು. ಕೇಂದ್ರದ ನಿರ್ದೇಶಕರಾದ ಗುಲ್ವಾಡಿ ಪ್ರತಿಭೆಗಳನ್ನರಸಿ ಬೆಳಗಾವಿಗೆ ಬಂದರು. ಲಿಂಗರಾಜ ಕಾಲೇಜಿನಲ್ಲಿ ಧ್ವನಿ ಪರೀಕ್ಷೆ. ಸಂಗಮೇಶ್ವರರನ್ನು ಕಣಕ್ಕೆ ಇಳಿಸಬೇಕೆ ಬೇಡವೆ ಎಂದು ಮನೆಯಲ್ಲಿ ಬಿರುಸಿನ ಚರ್ಚೆ. ''ಹಾಡಿಸೋಣ'' ಎಂದು ಸೋದರಮಾವ ಅಂದರೆ ''ಬೇಡ, ಅವನಿನ್ನೂ ಚಿಕ್ಕವ'' ಎಂದು ತಂದೆ ಅಂದರು. ಜಿದ್ದಾಜಿದ್ದಿಯಲ್ಲಿ ಸೋದರಮಾವನೆ ಗೆದ್ದ.

ಟಿಳಕವಾಡಿಯಿಂದ ಲಿಂಗರಾಜ ಕಾಲೇಜಿನವರೆಗೆ ಕಾಲುನಡಿಗೆಯ ಪಯಣ. ಬಸ್ಸಿಗೆ ದುಡ್ಡಿರಲಿಲ್ಲ. ಎಲ್ಲರೂ ಒಬ್ಬರಾದ ಮೇಲೊಬ್ಬರು ಹಾಡಿದರು. ''ಇನ್ನಾರಾದರು ಇದ್ದಾರೆಯೇ?'' ಎಂದು ಗುಲ್ವಾಡಿ ವಿಚಾರಿಸಿದರು. ಯಾರೋ ಹೇಳಿದರು. ''ಜಮಖಂಡಿಯ ಹುಡುಗನೊಬ್ಬ ಚೆನ್ನಾಗಿ ಹಾಡುತ್ತಾನೆ'' ಸಂಗಮೇಶ್ವರರು ಮೂಲತಃ ಜಮಖಂಡಿಯ ಬಳಿಯ ಮದರಖಂಡಿಯವರು.

ಸಂಗಮೇಶ್ವರ ನಂದ ರಾಗವನ್ನು ''ಒಂದೂವರೆ ವರ್ಷ ತಾಲೀಮು ಮಾಡಿದ್ದಾನೆ'' ಎಂದು ಗಣಪತರಾವ ವಿವರಿಸಿದರು. ''ಇದು ಕೇವಲ ಒಂದೂವರೆ ವರ್ಷದ ತಾಲೀಮೇ?'' ಎಂದು ಗುಲ್ವಾಡಿ ಅಚ್ಚರಿಪಟ್ಟರು. ಗುಲ್ವಾಡಿ ಎಷ್ಟೊಂದು ಮೆಚ್ಚಿಕೊಂಡರೆಂದರೆ ಮಧ್ಯ ರಾತ್ರಿಯವರೆಗೂ ಸಂಗಮೇಶ್ವರರನ್ನು ಹಾಡಿಸಿದರು. ಸಂಗಮೇಶ್ವರರನ್ನು ಆಕಾಶವಾಣಿ ಕಾರ್ಯಕ್ರಮಗಳಿಗೆ ಆಯ್ಕೆ ಮಾಡಿರುವುದಾಗಿ ಗುಲ್ವಾಡಿ ಸ್ಥಳದಲ್ಲಿಯೇ ಘೋಷಿಸಿದರು. ಜನವರಿ ೩೧, ೧೯೫೦ ರಂದು ಧಾರವಾಡದ ಆಕಾಶವಾಣಿಯ ಕಾಂಟ್ರಾಕ್ಟ್ ಬಂತು. ಅದನ್ನು ಸಂಗಮೇಶ್ವವರು ೧೯೫೨ ರಲ್ಲಿ ಮುಂಬಯಿ ಆಕಾಶವಾಣಿ ಕೇಂದ್ರಕ್ಕೆ ವರ್ಗಾಯಿಸಿಕೊಂಡರು. ೧೯೬೦ ರಲ್ಲಿ ಮರಳಿ ಧಾರವಾಡಕ್ಕೆ ವರ್ಗಾಯಿಸಿಕೊಂಡರು. ಸಂಗಮೇಶ್ವರ ಗುರವ ಸುಮಾರಾಗಿ ದೇಶದ ಎಲ್ಲ ಆಕಾಶವಾಣಿ ಕೇಂದ್ರಗಳಿಂದಲೂ ಹಾಡಿರುವರು.

೧೯೩೦ ಸಾಂಗ್ಲಿ ಮ್ಯೂಜಿಕ್ ಸರ್ಕಲ್ ಆಶ್ರಯದಲ್ಲಿ ಸಂಗಮೇಶ್ವರರ ಗಾಯನ. ಶ್ರೀಮಂತ ರಸಿಕ ನನ್ನೂಭಾಯಿ ನಾಥ ಸರ್ಕಲ್ಲಿನ ಅಧ್ಯಕ್ಷರು. ಅವರು ಅಬ್ದುಲ್ ಕರೀಮಖಾನರ ಒಡನಾಡಿ. ಕಾರ್ಯಕ್ರಮದ ಬಳಿಯೆ ಅವರ ಮನೆ. ಅಂದು ಅವರಿಗೆ ಅನಾರೋಗ್ಯ. ಜ್ವರ ಬಂದು ಮನೆಯಲ್ಲಿ ಮಲಗಿದ್ದರು. ''ರೇಡಿಯೊ ಹಚ್ಚು. ಪಕ್ಕದ ಮನೆಯ ರೇಡಿಯೊದಿಂದ ಅಬ್ದುಲ್ ಕರೀಮಖಾನರ ಗಾಯನ ಕೇಳಿಬರುತ್ತಿದೆ'' ಎಂದು ಪತ್ನಿಗೆ ಹೇಳಿದರು. ''ಈಗ ರಾತ್ರಿ ೧೧.೩೦ ಎಲ್ಲ ಆಕಾಶವಾಣಿ ಕೇಂದ್ರಗಳೂ ಮುಚ್ಚಿರುತ್ತವೆ'' ಎಂದು ಪತ್ನಿ ಸಮಜಾಯಿಷಿ ಹೇಳಿದರು. ನನ್ನೂಭಾಯಿ ನಾಥ ಗಾಯನ ಕೇಳಿಬರುತ್ತಿದ್ದ ಜಾಡು ಹಿಡಿದು ಬಂದರು. ಅರೆ, ತಮ್ಮದೇ ಸರ್ಕಲ್ಲಿನ ಕಾರ್ಯಕ್ರಮ! ಕಾರ್ಯಕ್ರಮದ ಭವನಕ್ಕೆ ಬರುತ್ತಿದ್ದಂತೆಯೆ ನನ್ನೂ ಭಾಯಿ ನಾಥ ಜೋರಾಗಿ ಹೇಳಿದರು ''ಯಾರು ಹೇಳುತ್ತಾರೆ, ಅಬ್ದುಲ್ ಕರೀಮಖಾನರು ಸ್ವರ್ಗಸ್ಥರಾಗಿರುವರೆಂದು? ಅವರು ಈ ಯುವಗಾಯಕನ ಗಂಟಲಲ್ಲಿ ವಾಸವಾಗಿದ್ದಾರೆ.''

ಒಮ್ಮೆ ಪುಣೆಯಲ್ಲಿ ಸಂಗಮೇಶ್ವರರ ಕಚೇರಿ. ಇಬ್ಬರು ಶ್ರೋತೃಗಳು ಕಚೇರಿಗೆ ತಡವಾಗಿ ಬರುತ್ತಿದ್ದರು. ದೂರದಿಂದ ಮೈಕಿನಲ್ಲಿ ಗಾಯನ ಕೇಳಿಬರುತ್ತಿತ್ತು. ಆ ಇಬ್ಬರಲ್ಲೊಬ್ಬ ಅಂದ ''ಅಬ್ದುಲ್ ಕರೀಮಖಾನರ ಧ್ವನಿಮುದ್ರಿಕೆ ಹಾಕಿದ್ದಾರೆ''. ಇನ್ನೊಬ್ಬನೆಂದ ''ಇಲ್ಲ, ಸಂಗಮೇಶ್ವರ ಗುರವ ಹಾಡುತ್ತಿದ್ದಾರೆ''. ''ಹಾಗಾದರೆ ಬೆಟ್ ಕಟ್ಟುವೆಯಾ?''''ಓಹೋ?''. ಯಾರು ಗೆದ್ದರೆಂದು ಬೇರೆ ಹೇಳಬೇಕಿಲ್ಲ. ಸಂಗಮೇಶ್ವರ ಗುರುವ ಥೇಟ ಅಬ್ದುಲ್ ಕರೀಮಖಾನರಂತೆಯೆ ಹಾಡುತ್ತಿದ್ದ ದಿನಗಳವು.

"ಇನ್ನೊಂದು ಪ್ರಸಂಗ. ೧೯೭೨ ರಲ್ಲಿ ಭೀಮಸೇನ ಜೋಶಿ ಅವರಿಗೆ ಪದ್ಮಶ್ರೀ ಬಂದಿತ್ತು. ಅಭಿನಂದನಾರ್ಥ ಪುಣೆಯಲ್ಲಿ ಸಂಗಮೇಶ್ವರ ಗುರವ ಅವರ ಗಾಯನ. ಹಿರಿಯ ಗಾಯಕಿ ಹೀರಾಬಾಯಿ ಬಡೋದಕರ ಅಲ್ಲದೆ ಅನೇಕ ಗಾಯಕರು, ರಸಿಕರು ನೆರೆದಿದ್ದರು. ಸಂಗಮೇಶ್ವರ ತಮ್ಮ ಗಾಯನದಿಂದ ಶ್ರೋತೃಹೃದಯ ಗೆದ್ದರು. ಪುಳಕಿತಗೊಂಡ ಭೀಮಸೇನ ಜೋಶಿ ಹೀಗೆಂದರು : "ಇನ್ನು ಮುಂದೆ ನನ್ನ ಗಾಯನ, ಹೀರಾಬಾಯಿ ಬಡೋದಕರ ಗಾಯನ, ಗಂಗೂಬಾಯಿ ಹಾನಗಲ್ಲ ಗಾಯನ ಎಲ್ಲ ಸಂಗಮೇಶ್ವರ ಗುರವ ಅವರ ಕಂಠದಲ್ಲಿ ಕೇಳಿರಿ. ಕಿರಾಣಾ ಘರಾಣೆಯ ನಿಶಾನೆಯನ್ನು ನಾವು ಸಂಗಮೇಶ್ವರರ ಕೈಯಲ್ಲಿ ಕೊಟ್ಟಿದ್ದೇವೆ"[೪೪] ಎಂದು ಡಾ.ಸದಾನಂದ ಕನವಳ್ಳಿ ಬರೆಯುತ್ತಾರೆ.

ಸುಪ್ರಸಿದ್ಧ ಮರಾಠಿ ಸಾಹಿತಿ ರಣಜಿತ್ ದೇಸಾಯಿ ಸಂಗಮೇಶ್ವರ ಗುರವ ಅವರ ಆತ್ಮೀಯ ಮಿತ್ರರು. ಅವರ ಗಾಯನವನ್ನು ತುಂಬಾ ಮೆಚ್ಚಿಕೊಂಡವರು. ಒಮ್ಮೆ ರಣಜಿತ್ ದೇಸಾಯಿ ಅವರ ಮನೆಯಲ್ಲಿ ಖಾಸಗಿ ಬೈಠಕ. ಕೇಳುತ್ತಿದ್ದಂತೆಯೆ ಅಶ್ರುಧಾರೆ ಸುರಿಸಿದರು. ಮನೆಯೊಳಗೆ ಹೋಗಿ ಕಣ್ಣೊರೆಸಿಕೊಂಡು ಬಂದರು. "ನಿಮ್ಮ ಗಾಯನದಲ್ಲಿ ಒಂದು ಕೊರತೆಯಿದೆ" ಅಂದರು. ಇದೇನಪ್ಪಾ ಎಂದು ಎಲ್ಲರೂ ಕುತೂಹಲಭರಿತರಾಗಿದ್ದಂತೆಯೆ ದೇಸಾಯಿ ಮಾತು ಮುಂದುವರಿಸಿದರು. "ನೀ ಹಾಡುವಾಗ ನಿನ್ನ ಬೆರಳಲ್ಲಿ ಉಂಗುರ ಇಲ್ಲ". ತಮ್ಮ ಬೆರಳಿನಲ್ಲಿದ್ದ ಉಂಗುರವನ್ನೇ ಸಂಗಮೇಶ್ವರರ ಬೆರಳಿಗೆ ತೊಡಿಸಿದರು.

೧೯೭೯ ಕರ್ನಾಟಕ ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಸಂಗೀತ ವಿಭಾಗದ ನಿರ್ದೇಶಕರಾಗಿ ಡಾ.ಮಲ್ಲಿಕಾರ್ಜುನ ಮನಸೂರ ಇದ್ದರು. ತಕ್ಷಣ ಹೊರಟು ಬರುವಂತೆ ಸಂಗಮೇಶ್ವರರಿಗೆ ಮನಸೂರರಿಂದ ತಾರುಸಂದೇಶ. ಏನು ಎಂತು ಎಂದು ಸಂಗಮೇಶ್ವರರಿಗೆ ತಿಳಿಯದು. ಬೆಳಗಾವಿಯಿಂದ ಬಂದವರೇ ಮನಸೂರ ಅವರನ್ನು ಕಂಡರು. ಹಾಂಗ ಬಂದೀಯೇನು? ಲಗೇಜ ವಗೈರೆ ಏಕೆ ತರಲಿಲ್ಲ. ಹೋಗು, ಸಾಮಾನು ತೆಗೆದುಕೊಂಡು ಬಾ. ನಿನ್ನನ್ನು ಅಧ್ಯಾಪಕನನ್ನಾಗಿ ನೇಮಿಸಿರುವೆ. ಎಂದರು ಮನಸೂರ. ಸಂಗಮೇಶ್ವರ ಅವಾಕ್ ಆದರು. ಅರ್ಜಿ ಇಲ್ಲ. ಸಂದರ್ಶನ ಇಲ್ಲ. ವಾಪಸು ಹೋಗಿ ಸಾಮಾನು ತಂದು ಧಾರವಾಡದಲ್ಲಿ ನೆಲೆಸಿದರು. ಆ ಕಾಲ ಹಾಗಿತ್ತು. ಯಾವ ಡಿಗ್ರಿ ಎಂದು ನೋಡಲಿಲ್ಲ. ಡಿಗ್ರಿಗಳಿಗೂ ಹಾಡುಗಾರಿಕೆಗೂ ಸಂಬಂಧವಿಲ್ಲ. ಹಾಗೆ ನೋಡಿದರೆ, ಮನಸೂರರಿಗೆ ಯಾವ ಡಿಗ್ರಿ ಇತ್ತು ಬಸವರಾಜ ರಾಜಗುರು ಅವರಿಗೆ ಯಾವ ಡಿಗ್ರಿ ಇತ್ತು ? ಭೀಮಸೇನ ಜೋಶಿ ಅವರಿಗೆ ಯಾವ ಡಿಗ್ರಿ ಇದೆ ? ಆದರೆ ಯಾವ ಡಿಗ್ರಿ ಅವರ ಕಲಾಯೋಗ್ಯತೆಗೆ ಸಮನಾದೀತು ಸಂಗಮೇಶ್ವರ ಗುರವ ಲೆಕ್ಕವಿಲ್ಲದಷ್ಟು ವಿದ್ಯಾರ್ಥಿಗಳಿಗೆ ಸಂಗೀತವಿದ್ಯೆ ಕಲಿಸಿ ಈಗ ನಿವೃತ್ತರಾಗಿರುವರು.

ಸಂಗಮೇಶ್ವರ ಗುರವ ಅವರಕಂಠ ಬಲು ಮಧುರ. ಸುರೀಲಿ ಗಾಯಕರೆಂದೆ ಹೆಸರಾಗಿದ್ದಾರೆ. ಒಮ್ಮೆ ಒಬ್ಬರು ಬಾಲಗಂಧರ್ವರಿಗೆ ಸಂಗಮೇಶ್ವರರನ್ನು ಪರಿಚಯಿಸುತ್ತ ಬಹಳ ಮಧುರವಾಗಿ ಹಾಡುತ್ತಾರೆ ಎಂದರು. ಅವರು ಮಾತಾಡುವುದನ್ನು ಕೇಳಿದರೆ ಗೊತ್ತಾಗುವುದಿಲ್ಲವೆ? ಎಂದು ಬಾಲಗಂಧರ್ವ ಉದ್ಗರಿಸಿದರು.

---

೪೪. ಕಲಾಚೇತನ : ಡಾ. ಸದಾನಂದ ಕನವಳ್ಳಿ, ಪುಟ-೩೭೯

ಸಂಗಮೇಶ್ವರರ ಗಾಯನದಲ್ಲಿ ಚಕಮಕಿ ಇಲ್ಲ. ಅವರ ಗಾಯನದಲ್ಲಿರುವುದು ಸ್ವರಶುದ್ಧತೆ, ಶಾಸ್ತ್ರಶುದ್ಧತೆ, ಶ್ರೀಮದ್ಗಾಂಭೀರ್ಯ, ಬಹು ಕಲ್ಪಕತೆ. ಇಟ್ಟಿಗೆ ಮೇಲೆ ಇಟ್ಟಿಗೆ ಇಟ್ಟು ಮನೆ ಕಟ್ಟಿದಂತೆ ಒಂದೊಂದಾಗಿ ಸ್ವರಗಳನ್ನು ಬೆಳೆಸುತ್ತಾರೆ. ಎಲ್ಲಕ್ಕಿಂತ ಮಿಗಿಲಾಗಿ ಸಂಗಮೇಶ್ವರರ ಗಾಯನದಲ್ಲಿ ಭಾವನಾತ್ಮಕತೆ ಇದೆ. ರಾಗದ ಭಾವದೊಂದಿಗೆ ತಾದಾತ್ಮ್ಯ ಬೆಸೆಯುವ ತುಡಿತವಿದೆ. ಹಾಗಾಗಿ, ಅವರ ಗಾಯನ ಶ್ರೋತೃಗಳನ್ನು ಭಾವಸಾಗರದಲ್ಲಿ ಮುಳುಗಿಸುತ್ತದೆ. ಭಾವವು ರಾಗದೊಂದಿಗೆ ಬೆಸೆಯಬೇಕು. ತಾನಗಳು ತಾವೇ ತಾವಾಗಿ ಹೊರಹೊಮ್ಮಬೇಕು ಮತ್ತು ರಾಗ ಪ್ರತಿಸಲ ಹೊಸತು ಎನಿಸಬೇಕು ಎಂಬುದು ಸಂಗಮೇಶ್ವರರ ದೃಢ ನಂಬಿಕೆ. ತತ್ಫಲವಾಗಿ ಅವರ ಕಚೇರಿಗಳು ಆಳ ಪ್ರಭಾವ ಬೀರುತ್ತವೆ. ಶುದ್ಧ ಕಿರಾಣಾ ಶೈಲಿಯಲ್ಲಿ ಹಾಡುವ ವಿರಳ ಗಾಯಕರವರು. ಭಕ್ತಿ ಸಂಗಮೇಶ್ವರರ ವ್ಯಕ್ತಿತ್ವದ ಪ್ರಧಾನ ಗುಣ. ವಚನಗಳನ್ನೆ ಹಾಡಲಿ, ಅಭಂಗಗಳನ್ನೇ ಹಾಡಲಿ, ಕಬೀರ ಭಜನೆಗಳನ್ನೆ ಹಾಡಲಿ, ಪುರಂದರದಾಸರ ಪದಗಳನ್ನೆ ಹಾಡಲಿ ಭಕ್ತಿರಸ ಹೊರಸೂಸತ್ತದೆ. ಅವರು ಸೃಷ್ಟಿಸಿದ ರಾಗಗಳಾದ ಸಂಗಮ, ರುದ್ರ, ಗೌರಿಧರ, ಗರಗಜಗಳೂ ಭಕ್ತಿ ಪ್ರಧಾನವಾಗಿವೆ.

ಕಿರಾಣಾ ಘರಾಣೆಯ ಪರಂಪರೆಯನ್ನು ಅವರ ಮಕ್ಕಳೂ ಮುಂದುವರಿಸಿದ್ದಾರೆ. ಹಿರಿಯ ಮಗ ನಂದಿಕೇಶ್ವರ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ತಬಲಾ ಅಧ್ಯಾಪಕ. ಕಿರಿಯ ಮಗ ಕೈವಲ್ಯಕುಮಾರ ಹಲವಾರು ಪ್ರಶಸ್ತಿಗಳನ್ನು ಗೆದ್ದು ಅಖಿಲ ಭಾರತ ಮಟ್ಟದಲ್ಲಿ ಹೆಸರು ಮಾಡಿದ್ದಾನೆ. ಇತ್ತೀಚಿಗೆ ಅವರಿಗೆ ಆಕಾಶವಾಣಿಯ ಟಾಪ್ ಗ್ರೇಡ್ ಬಂದಿದೆ. ಅದು ಅವರ ತಲೆಗೆ ಇನ್ನೊಂದು ತುರಾಯಿ. ಹೆಣ್ಣು ಮಕ್ಕಳಾದ ಶಶಿಕಲಾ, ಸುಜಾತಾ ಕೂಡ ಚೆನ್ನಾಗಿ ಹಾಡುತ್ತಾರೆ.

ಸಂಗಮೇಶ್ವರ ಗುರವ ಅವರಿಗೆ ಡಿಸೆಂಬರ ೭, ೨೦೦೨ ರಂದು ೭೧ ತುಂಬಿತು. ಅವರನ್ನರಸಿ ಪ್ರತಿಷ್ಠಿತ ಪ್ರಶಸ್ತಿಗಳು ಬಂದಿವೆ. ಪುಣೆಯ ಪಂಥನಾಥ ಸ್ವಾಮಿಗಳು ಸೂರಸೇನ ಬಿರುದು ನೀಡಿ ಗೌರವಿಸಿರುವರು. ೧೯೮೨ ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಪ್ರಶಸ್ತಿ ಬಂದಿದೆ. ೧೯೯೭ ರಲ್ಲಿ ಕರ್ನಾಟಕ ರಾಜ್ಯ ಸಂಗೀತ ವಿದ್ವಾನ್ ಪದವಿ ಬಂದಿದೆ. ಇದು ರಾಜರ ಕಾಲದ ಆಸ್ಥಾನ ವಿದ್ವಾನ್ ಪದವಿಯಿದ್ದಂತೆ. ಈಗ ರಾಜರಿಲ್ಲ, ಆಸ್ಥಾನಗಳಿಲ್ಲ ಸರಕಾರವೇ ಎಲ್ಲ. ೨೦೦೧ ರಲ್ಲಿ ಕೇಂದ್ರ ಸಂಗೀತ ನಾಟಕ ಅಕಾಡೆಮಿಯ ಪ್ರಶಸ್ತಿ ಬಂದಿದೆ. ಅದು ರಾಷ್ಟ್ರಮಟ್ಟದ ಗೌರವ.

### ೫.೧೪.ಪಂ. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ

ಎಪ್ಪತ್ತೈಗಕ್ಕೆ ಕಾಲಿಟ್ಟಿರುವ (ಜನನ ೧೨-೧೦-೧೯೨೭) ಪಂಡಿತ ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ಜೈಪುರ ಅತ್ರೌಳಿ ಘರಾಣೆಯ ಹಿರಿಯ ಗಾಯಕರು. ಆಕಾಶವಾಣಿ-ದೂರದರ್ಶನಗಳ 'ಎ' ಶ್ರೇಣಿಯ ಕಲಾವಿದರು. ಈ ಇಳಿವಯಸ್ಸಿನಲ್ಲೂ ಇನ್ನೂ ಕಲಿಯುವ ಅದಮ್ಯ ಉತ್ಸಾಹ. ಕಳೆದ ಒಂದು ವರ್ಷದಿಂದ ಪ್ರತಿ ತಿಂಗಳು ಕೊಲ್ಹಾಪುರಕ್ಕೆ ಹೋಗಿ ಒಂದು ವಾರ ಇದ್ದು ಬಾಬಾ ಅಜೀಜುದ್ದೀನಖಾನರಲ್ಲಿ (ಬುರ್ಜಿಖಾನರ ಮಗ,

ಅಲ್ಲಾದಿಯಾಖಾನರ ಮೊಮ್ಮಗ) ಕಲಿಯುತ್ತಿರುವರು. ಅಜೀಜುದ್ದೀನಖಾನರು ರಾಗ-ರಾಗಿಣಿಗಳ ಗಣಿ. ೮೦೦ ರಾಗಗಳನ್ನು ಬಲ್ಲವರು. ಬಿಲಾವಲ ರಾಗವೊಂದರಲ್ಲಿಯೆ ೬೦ ಪ್ರಕಾರಗಳನ್ನು ಬಲ್ಲವರು. ಶಂಕರಾ ಆರನ್, ಗೌಂಡಗಿರಿ ಮಲ್ಹಾರ, ಲಚ್ಛಾಸಾಗ, ರಾಮಸಾಗ, ದೇವಸಾಗ, ಭಿವಸಾಗ ಹೀಗೆ ಇನ್ನೂ ಅಸಂಖ್ಯ ಅಪ್ರಚಲಿತ ರಾಗಗಳ ಭಂಡಾರವಾಗಿದ್ದಾರೆ. ಬುರ್ಜಿಖಾನರ ಮರಣಾನಂತರ ಮಲ್ಲಿಕಾರ್ಜುನ ಮನಸೂರ ಸಹ ಅಜೀಜುದ್ದೀನ ಖಾನರಿಂದ ಅನೇಕ ಚೀಜುಗಳನ್ನು ಕಲಿತಿದ್ದನ್ನು ಕಾಣುತ್ತೇವೆ.

ಪಂಚಾಕ್ಷರಿಸ್ವಾಮಿ ಹುಟ್ಟಿದ್ದು ತಾಯಿ ಸಾತವ್ವರ ತವರೂರಾದ ಶಿಶುನಾಳದಲ್ಲಿ. ತಂದೆಯ ಊರು ಧಾರವಾಡ ಜಿಲ್ಲೆಯ ಕುಂದಗೋಳ ತಾಲೂಕಿನ ಮತ್ತಿಗಟ್ಟಿ. ತಂದೆ ಚನ್ನಬಸವಯ್ಯ ಶರೀಫರ ಪದಗಳನ್ನು ಸುಶ್ರಾವ್ಯವಾಗಿ ಹಾಡುತ್ತಿದ್ದರು. ಮನೆಯಲ್ಲಿ ಸದಾ ತಬಲಾ ಪೇಟಿ.

ವಿಸ್ಮಯವೆಂದರೆ ಪಂಚಾಕ್ಷರಿಸ್ವಾಮಿ ನಿಜಕ್ಕೂ ಸತ್ತು ಹುಟ್ಟಿದ್ದು. ಆರು ತಿಂಗಳ ಕೂಸಿದ್ದಾಗ ಮೃತಪಟ್ಟು ಸ್ಮಶಾನಕ್ಕೂ ಒಯ್ಯಲಾಗಿತ್ತು. ಕುಣಿ ತೋಡಿದರು. ಇನ್ನೇನು ಕುಣಿಯಲ್ಲಿ ಇಡಬೇಕು. ಏನಾಶ್ಚರ್ಯ! ಕೂಸು ಅಳಲಾರಂಭಿಸಿತು. ಕೂಸನ್ನು ಮನೆಗೆ ತಂದರು. ಅದೇ ಕೂಸು ಇಂದು ಹಿಂದುಸ್ತಾನಿ ಸಂಗೀತದ ಉಚ್ಚ ಗಾಯಕವಾಗಿದೆ. ಬಾಲ್ಯವನ್ನು ಶಿಶುನಾಳದಲ್ಲಿ ಕಳೆದ ಪಂಚಾಕ್ಷರಿಸ್ವಾಮಿಗೆ ಶಿಶುನಾಳ ಶರೀಫರ ಮೊಮ್ಮಗ ಮೊಯಿನುದ್ದೀನನ ಸ್ನೇಹ. ಅವನೇ ಪಂಚಾಕ್ಷರಿಸ್ವಾಮಿಯಲ್ಲಿ ಸಂಗೀತಬೀಜ ನೆಟ್ಟವನು. ಅವನು ಕಲಿಸಿದ ಕರ್ನಾಟಕಿ ಕೃತಿ ಪಾಲಯಮಾಂ ಶ್ರೀಗೌರಿ ಪಂಚಾಕ್ಷರಿಸ್ವಾಮಿಯವರಿಗೆ ಇನ್ನೂ ಹಸಿರಾಗಿದೆ.

ಪಂಚಾಕ್ಷರಿಸ್ವಾಮಿ ತಮ್ಮ ಏಳನೆಯ ವಯಸ್ಸಿನಲ್ಲಿಯೇ ಪಂಚಾಕ್ಷರಿ ಗವಾಯಿಗಳಲ್ಲಿ ಸಂಗೀತ ಕಲಿಯಲು ಆರಂಭಿಸಿದ ಪಂಚಾಕ್ಷರಿ ಗವಾಯಿಗಳು ಉಭಯ ಗಾಯನಾಚಾರ್ಯರು. ಕಿರಾಣಾ ಘರಾಣೆಯ ಅಬ್ದುಲ್‌ವಹೀದಖಾನ ಮತ್ತು ಗ್ವಾಲಿಯರ ಘರಾಣೆಯ ನೀಲಕಂಠಬುವಾ ಮೀರಜಕರ ಶಿಷ್ಯರು. ವಿಚಿತ್ರವೆಂದರೆ, ಪಂಚಾಕ್ಷರಿಸ್ವಾಮಿಯ ತಂದೆ ಚನ್ನಬಸಯ್ಯರು ಪಂಚಾಕ್ಷರಿ ಗವಾಯಿಗಳಲ್ಲಿ ಕಲಿಯಬಯಸಿದ್ದರು. ''ಮದುವೆಯಾದವರಿಗೆ ನಾನು ಕಲಿಸುವುದಿಲ್ಲ. ನಿನ್ನ ಹೊಟ್ಟ್ಯಾಗ ಹುಟ್ಟಿದವರು ಯಾರಾದರೂ ಇದ್ದರೆ ಕಳಿಸು'' ಎಂದು ಪಂಚಾಕ್ಷರಿ ಗವಾಯಿಗಳ ಅಪ್ಪಣೆ. ಆ ಭಾಗ್ಯ ಮಗನಿಗೆ ಲಭಿಸಿತು. ಪಂಚಾಕ್ಷರಿಸ್ವಾಮಿಯು ಪಂಚಾಕ್ಷರಿ ಗವಾಯಿಗಳ ಸಂಗೀತಶಾಲೆ ಸೇರಿದಾಗ ಪುಟ್ಟರಾಜ ಗವಾಯಿಗಳು, ಬಸವರಾಜ ರಾಜಗುರು ಹಿರಿಯ ಸಹಪಾಠಿಗಳು. ಸಿದ್ಧರಾಮ ಜಂಬಲದಿನ್ನಿ ಸಮವಯಸ್ಕ ಸಹಪಾಠಿ.

ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಹತ್ತು ವರ್ಷ ಪಂಚಾಕ್ಷರಿ ಗವಾಯಿಗಳಲ್ಲಿ ಪರಿಶ್ರಮವಹಿಸಿ ಅಭ್ಯಾಸ ಮಾಡಿದರು. ಪಂಚಾಕ್ಷರಿ ಗವಾಯಿಗಳು ಶಿಷ್ಯರನ್ನು ಬಾಗಿಲು ತಟ್ಟಿ ಬೆಳಿಗ್ಗೆ ಐದು ಘಂಟೆಗೆ ಎಬ್ಬಿಸುತ್ತಿದ್ದರು. ಐದರಿಂದ ಏಳರವರೆಗೆ ತೋಡಿ ರಾಗದ ಅಭ್ಯಾಸ. ಆರು ತಿಂಗಳು ಅದೊಂದೇ ರಾಗದ ಅಭ್ಯಾಸ. ಆರು ತಿಂಗಳು ಜೀವನಪುರಿ ರಾಗದ ಅಭ್ಯಾಸ. ಹೀಗೆಯೆ ಒಂದೊಂದಾಗಿ ರಾಗಗಳಿಗೆ ಭದ್ರ ಬುನಾದಿ.

ಪಂಚಾಕ್ಷರಿ ಗವಾಯಿಗಳು ತಮ್ಮ ವಿದ್ಯಾರ್ಥಿಗಳ ಪೋಷಣೆಗಾಗಿ ಬಹಳಷ್ಟು ಸಾಲಸೋಲ ಮಾಡಿದರು. ಸಾಲ ತೀರಿಸಲು ಉಪಾಯವೆಂದು ನಾಟಕ ಕಂಪನಿ ಪ್ರಾರಂಭಿಸಿದರು. ಪಂಚಾಕ್ಷರಿ ಗವಾಯಿಗಳು ಕಂಪನಿಗೆ ತಮ್ಮ ಪಾಲನೆಪೋಷಣೆ ಮಾಡಿ ಮುಂದೆ ತಂದ ಗುರುಗಳಾದ ಹಾನಗಲ್ಲ ಕುಮಾರಸ್ವಾಮಿಗಳ ಹೆಸರನ್ನಿಟ್ಟರು : ಶ್ರೀಕುಮಾರೇಶ್ವರ ಕೃಪಾಪೋಷಿತ ನಾಟಕ ಸಂಘ. ಅದು ಗವಾಯಿಗಳ ಕಂಪನಿಯೆಂದೇ ಜನಜನಿತವಾಗಿತ್ತು. ಪಂಚಾಕ್ಷರಿ ಗವಾಯಿಗಳ ಶಿಷ್ಯರನೇಕರು ನಾಟಕಗಳಲ್ಲಿ ಪಾತ್ರ ಮಾಡುತ್ತಿದ್ದರು. ಸ್ತ್ರೀಯರು ನಟಿಸುವಂತಿರಲಿಲ್ಲ. ಪುರಷರೇ ಸ್ತ್ರೀ ಪಾತ್ರ ಮಾಡಬೇಕಿತ್ತು. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಕೂಡ ನಾಟಕ ಕಂಪನಿ ಸೇರಿದರು. ಹಲವಾರು ವರ್ಷ ಅಭಿನಯಿಸಿದರು. ಯಾವ ಪಾತ್ರವಾದರೂ ಸೈ. ಆಲ್‌ರೌಂಡ್ ನಟ. ಹೇಮರೆಡ್ಡಿ ಮಲ್ಲಮ್ಮ ನಾಟಕ ಸತತವಾಗಿ ೩೭೬ ಪ್ರಯೋಗ ಕಂಡಿತು. ಅದರ ಪ್ರಧಾನ ಆಕರ್ಷಣೆ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ. ಅವರ ಅಭಿನಯ ಹಾಡುಗಾರಿಕೆ. ಅವರು ಮಲ್ಲಿಕಾರ್ಜುನ ವೇಮನ, ಭರಮರೆಡ್ಡಿ ಪಾತ್ರಗಳಲ್ಲಿ ಮಿಂಚಿದರು. ಅಂದಿನ ನಾಟಕಗಳೆಲ್ಲ ಸಂಗೀತಮಯ. ಹಾಡುಗಳ ಸುರಿಮಳೆ. ಅದರಲ್ಲೂ ಶಾಸ್ತ್ರೀಯ ಸಂಗೀತಾಧಾರಿತ ಹಾಡುಗಳು. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಹಾಡುತ್ತಿದ್ದ ರಂಗಗೀತೆಗಳು ರಸಿಕರ ನಾಲಗೆಯ ಮೇಲೆ ಕುಣಿದಾಡುತ್ತಿದ್ದವು.

ಹೀಗಿರುತ್ತ ೧೯೪೪ ರಲ್ಲಿ ಪಂಚಾಕ್ಷರಿ ಗವಾಯಿಗಳು ಸ್ವರ್ಗಸ್ಥರಾದರು. ಮುಂದೇನು ? ಎಂಬ ಪ್ರಶ್ನೆ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರ ಮುಂದೆ ಧುತ್ತೆಂದು ನಿಂತಿತು. ಅಂಥ ಸನ್ನಿವೇಶದಲ್ಲಿ ಗುರುವೇ ಶಿಷ್ಯನನ್ನರಸಿ ಬಂದಂತೆ ಮಲ್ಲಿಕಾರ್ಜುನ ಮನಸೂರ ಬಂದರು. ಅದರ ಕಥೆ ಹೀಗಿದೆ. ಶ್ರೀಕುಮಾರೇಶ್ವರ ಕೃಪಾಪೋಷಿತ ನಾಟಕ ಕಂಪನಿ ಗದಗಿನಲ್ಲಿ ಕ್ಯಾಂಪ್ ಮಾಡಿತ್ತು. ಒಂದು ರಾತ್ರಿ ಮಲ್ಲಿಕಾರ್ಜುನ ಮನಸೂರರು ನಾಟಕ ನೋಡಲು ಬಂದರು. ಮನಸೂರರಿಗೆ ಸ್ನೇಹಿತರೊಬ್ಬರು ಹೇಳಿದ್ದರು. ''ಶ್ರೀ ಕುಮಾರೇಶ್ವರ ಕೃಪಾಪೋಷಿತ ನಾಟಕ ಕಂಪನಿಯಲ್ಲಿ ಮಲ್ಲಿಕಾರ್ಜುನನ ಪಾತ್ರ ಮಾಡುವ ಹುಡುಗನೊಬ್ಬ ಏನ ಹಾಡತಾನ! ನೀವು ಒಂದು ಸಲ ಕೇಳಬೇಕು'' ಆ ಹುಡುಗ ಯಾರೆಂದು ಮಲ್ಲಿಕಾರ್ಜುನ ಮನಸೂರರಿಗೆ ಗೊತ್ತಿತ್ತು.

ಮಧ್ಯಂತರದಲ್ಲಿ ಮಲ್ಲಿಕಾರ್ಜುನ ಮನಸೂರ ಗ್ರೀನ್‌ರೂಮಿಗೆ ಧಾವಿಸಿ ಬಂದು ''ಮತ್ತಿಗಟ್ಟಿ ಎಲ್ಲಿ, ಮತ್ತಿಗಟ್ಟಿ ಎಲ್ಲಿ?'' ಎಂದು ಆತುರಪಟ್ಟು ಕೇಳಿದರು. ''ನಿನ್ನ ಕಡೆಗೆ ಒಂದು ಕೆಲಸ ಐತಿ. ನಾಳೆ ಸಂಜೆಗೆ ಮುನಿಸಿಪಲ್ ಹೈಸ್ಕೂಲ್ ಗ್ರೌಂಡಿನ್ಯಾಗ ಇರತೀನಿ. ಬಂದು ಭೆಟ್ಟಿಯಾಗು'' ಎಂದು ಹೇಳಿ ಹೊರಟುಹೋದರು. ಸಂಜೆ ಐದು ಘಂಟೆಗೆ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಮುನಿಸಿಪಲ್ ಹೈಸ್ಕೂಲ ಗ್ರೌಂಡಿಗೆ ಹೋಗಿ ಮಲ್ಲಿಕಾರ್ಜುನ ಮನಸೂರ ಅವರನ್ನು ಕಂಡರು. ಮನಸೂರರ ಜೊತೆ ಬಂಗ್ಲೆದ ಮಾಸ್ತರರು, ಸಿದ್ಧರಾಮ ಜಂಬಲದಿನ್ನಿ (ಅವರು ಅಷ್ಟೊತ್ತಿಗಾಗಲೆ ಮಲ್ಲಿಕಾರ್ಜುನ ಮನಸೂರರ ಶಿಷ್ಯರಾಗಿದ್ದರು) ಮತ್ತು ಭೀಮರಾವ ಹರಕಾರೆ ಇದ್ದರು. ಭೀಮರಾವ ಗದಗಿನವರಾಗಿದ್ದು ಜೈಪುರ ಗಾಯಕಿಯ ಅಪ್ಪಟ ಅಭಿಮಾನಿಗಳಾಗಿದ್ದರು. ಜೈಪುರ ಗಾಯಕಿ ಬಿಟ್ಟು ಬೇರೆ ಗಾಯಕಿ ಕೇಳುತ್ತಿರಲಿಲ್ಲ. ಸರಿ, ಮಲ್ಲಿಕಾರ್ಜುನ ಮನಸೂರ ಮಾತಿಗಾರಂಭಿಸಿದರು.

''ನಾನು ನಿನ್ನಂಗ ಭಾಳ ವರ್ಷ ಬಣ್ಣ ಹಚ್ಚಿಕೊಂಡಾವ- ಅದಕ್ಕ ಈ ಮಾತ ಕೇಳತೀನಿ. ನೀ ಹೀಂಗ ಬಣ್ಣ ಹಚ್ಚಿಕೊಂತಾನ ಇರತೀಯಾಏನ? ಅದ ಬಿಟ್ಟು ಶಾಸ್ತ್ರೀಯ ಗಾಯನ ಹಿಡಿಯ್ಯಾವನೋ?''

''ಇಲ್ರಿ, ನನಗೂ ಶಾಸ್ತ್ರೀಯ ಗಾಯಕ ಆಗಬೇಕಂತ ಐತಿ''

''ಹಂಗಾರ, ಯಾರ ಹತ್ರ ಕಲೀಬೇಕಂತ ಮಾಡೀದಿ?''

ನಾನೇ ಕಲಿಸುವೆನೆಂದು ಮಲ್ಲಿಕಾರ್ಜುನ ಮನಸೂರ ಹೇಳಲೊಲ್ಲರು. ನಿಮ್ಮಲ್ಲಿಯೆ ಕಲಿಯಬೇಕೆಂದಿರುವೆನೆಂದು ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಬಾಯಿ ಬಿಡಲೊಲ್ಲರು. ಒಬ್ಬರು ಇನ್ನೊಬ್ಬರ ಮನಸ್ಸಿನಲ್ಲೇನಿದೆ ಎನ್ನುವುದನ್ನು ತಿಳಿದುಕೊಳ್ಳುವ ಕುತೂಹಲ. ಸುಮ್ಮನೆ ನೋಡೋಣವೆಂದು ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅಂದರು.

ಬಡೆ ಗುಲಾಮು ಅಲಿಖಾನರಲ್ಲಾಗಲಿ ನಿಸ್ಸಾನ ಹುಸೇನಖಾನರಲ್ಲಾಗಲಿ ಅಮೀರಖಾನರಲ್ಲಾಗಲಿ ಕಲೀಬೇಕಂತ ಮಾಡೀನಿ.

ಹೀಗಂದದ್ದೇ ತಡ. ಭೀಮರಾವ ಹರಕಾರೆ ಮೂದಲಿಸಿದರು.

''ಹುಚ್ಚಾ, ಎದುರಿಗೇ ಇರುವ ಸಂಗೀತಸಾಗರಾ ಬಿಟ್ಟು ಎಲ್ಲೆಲ್ಲೊ ಹೊರಟೀದಿ''

ಪಂಚಾಕ್ಷರಿಸ್ವಾಮಿ ಬೇಕೆಂತಲೆ ಪರೀಕ್ಷಿಸೋಣವೆಂದು ಕೇಳಿದರು.

''ಎಲ್ಲೈತ್ರಿ ?ಸಂಗೀತಸಾಗರಾ?''

''ಮತ್ತೆಲ್ಲಿ ? ಎದುರಿಗೆ ಕುಳಿತಿಲ್ಲೇನು? ಮಲ್ಲಿಕಾರ್ಜುನ ಮನಸೂರ ಅವರಂಥಾ ಗಾಯಕರು ಎಲ್ಲದಾರ?''

ಇದನ್ನೆಲ್ಲ ಗಮನಿಸುತ್ತಿದ್ದ ಮಲ್ಲಿಕಾರ್ಜು ಮನಸೂರ ನುಡಿದರು. ''ನಿನ್ನ ಸಲುವಾಗೇ ಬಂದೀನಿ. ನಾಟಕ ಕಂಪನಿ ಬಿಟ್ ಬಾ. ನಾ ಕಲಿಸತೀನಿ''.

ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ಅವರಿಗೂ ಅದೇ ಬೇಕಿತ್ತು.

''ನೀವು ಕಲಿಸಿದರ ನಾ ಕಲಿಯಾಕ ಒಪ್ಪಿದೀನ್ರಿ''

ಜೈಪುರ - ಅತ್ರೌಳಿ ಘರಾಣೆಯ ಮಹತ್ವಪೂರ್ಣ ಗುರು-ಶಿಷ್ಯ ಜೋಡಿ ಸಂಗಮಿಸಿದ್ದು ಇಂತು.

ಜುಲೈ ೨೯, ೧೯೬೯ ರಂದು ಧಾರವಾಡದ ರಸಿಕಾಗ್ರೇಸರ ನಾರಾಯಣರಾವ ಗುರ್ಟು ಅವರ ಮನೆಯಲ್ಲಿ

ಗಂಡಾಬಂಧನ. ಇದು ವಿಧ್ಯುಕ್ತವಾಗಿ ಶಿಷ್ಯರನ್ನು ಗುರು ಸ್ವೀಕರಿಸುವ ಸಮಾರಂಭ. ತಮ್ಮಲ್ಲಿ ಕನಿಷ್ಠ ಐದು ವರ್ಷ ಕಲಿಯಬೇಕೆಂಬುದು ಮಲ್ಲಿಕಾರ್ಜುನ ಮನಸೂರರ ಷರತ್ತು. ಶಿಷ್ಯ ಅರೆಬರೆ ಕಲಿತು ಗುರುವಿನ ಹೆಸರು ಕೆಡಿಸುವುದು ಬೇಡವೆಂದು ಆಗಿನ ಕಾಲದಲ್ಲಿ ಇಂಥ ಷರತ್ತು ಪ್ರಚಲಿತವಿತ್ತು. ಮಲ್ಲಿಕಾರ್ಜುನ ಮನಸೂರ ಜೈಪುರ-ಅತ್ರೌಳಿ ಘರಾಣೆಯ ಗಾಯಕಿಯಲ್ಲಿ ತಮ್ಮದೇ ವಿಶಿಷ್ಟ ಶೈಲಿ ನಿರ್ಮಿಸಿಕೊಂಡವರು. ಒಮ್ಮೊಮ್ಮೆ ನಸುಕಿನ ೩-೪ ಘಂಟೆಗೆ ಬಾಗಿಲು ಬಡಿದು ಎಬ್ಬಿಸಿ ಅಭ್ಯಾಸ ಮಾಡಿಸುತ್ತಿದ್ದರು. ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ಅವರಿಗೆ ಸಂಗೀತದ ಹುಚ್ಚು ಎಷ್ಟು ಹತ್ತಿತ್ತೆಂದರೆ ಊಟ, ನಿದ್ರೆ ಕೂಡ ಬೇಕೆನಿಸುತ್ತಿರಲಿಲ್ಲ. ಅದು ನಿಜವಾದ ನಿಷ್ಠೆಯ ಲಕ್ಷಣ. ದಿನಕ್ಕೆ ೧೦-೧೨ ತಾಸು ಮೆಹನತ್ ಮಾಡಿದರು. ಐದು ವರ್ಷ ಕಳೆದುದೇ ಗೊತ್ತಾಗಲಿಲ್ಲ.

ಮಲ್ಲಿಕಾರ್ಜುನ ಮನಸೂರರಿಗೆ ಮೂಲವ್ಯಾಧಿ ತೊಂದರೆ ಜೋರಾಯಿತು. ಶಸ್ತ್ರ ಚಿಕಿತ್ಸೆ ಮಾಡಿದ ಹುಬ್ಬಳ್ಳಿಯ ಡಾ.ಆರ್.ಬಿ. ಪಾಟೀಲರು ಎರಡು ವರ್ಷ ಹಾಡಕೂಡದೆಂದು ಹೇಳಿದರು. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರಿಗೆ ಇನ್ನೂ ಕಲಿಯುವಾಸೆ. ಹೇಗೆ ಮಾಡುವುದೆಂದು ಮನಸೂರರಿಗೆ ಚಿಂತೆಗಿಟ್ಟಿತು. ಅವರ ಆತಂಕವನ್ನು ಗ್ರಹಿಸಿದ ಪಂಚಾಕ್ಷರಿ ಮತ್ತಿಗಟ್ಟಿ ಪರಿಹಾರ ಸೂಚಿಸಿದರು.

''ನಿವೃತ್ತಿ ಬುವಾ ಸರನಾಯಕರಲ್ಲಿ ಕಲಿಯಲೆ?''

''ಅಡ್ಡಿಯಿಲ್ಲ. ಅವರೂ ನಮ್ಮ ಘರಾಣೆಯವರೆ.''

ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ನಿವೃತ್ತಿಬುವಾ ಸರನಾಯಕರಲ್ಲಿ ಎರಡು ವರ್ಷ ಅಭ್ಯಾಸಗೈದು ಮತ್ತೆ ಮಲ್ಲಿಕಾರ್ಜುನ ಮನಸೂರರಲ್ಲಿಗೆ ಬಂದರು. ಮನಸೂರರು ತಮ್ಮ ವಿದ್ಯೆಯನ್ನೆಲ್ಲ ಧಾರೆಯೆರೆದರೆಂದು ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಸ್ಮರಿಸುತ್ತಾರೆ. ಮಲ್ಲಿಕಾರ್ಜುನ ಮನಸೂರ ತಾವು ಕಚೇರಿಗೆ ಹೋದೆಡೆಯಲ್ಲೆಲ್ಲ ಶಿಷ್ಯನನ್ನು ಕರೆದೊಯ್ಯುತ್ತಿದ್ದರು. ಹೀಗೆ, ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ನಾಲ್ವರು ಗುರುಗಳ ಗರಡಿಯಲ್ಲಿ ಪಳಗಿದವರು. ಪಂಚಾಕ್ಷರಿ ಗವಾಯಿ, ಮಲ್ಲಿಕಾರ್ಜುನ ಮನಸೂರ, ನಿರುತ್ತಿಬುವಾ ಸರನಾಯಕ, ಈಗ ಬಾಬಾ ಅಜೀಜುದ್ದೀನಖಾನ. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರ ಜ್ಞಾನದಾಹ ಯುವಕರಿಗೊಂದು ಆದರ್ಶ.

೧೯೭೭ ರಲ್ಲಿ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಸ್ನಾತಕೋತ್ತರ ಸಂಗೀತ ವಿಭಾಗ ಆರಂಭ. ಮಲ್ಲಿಕಾರ್ಜುನ ಮನಸೂರರು ಸಂಸ್ಥಾಪಕ ನಿರ್ದೇಶಕರು. ಅವರು ಗಂಗೂಬಾಯಿ ಹಾನಗಲ್ಲ ಮತ್ತು ಬಸವರಾಜ ರಾಜಗುರು ಅವರನ್ನು ಗೌರವ ಪ್ರಾಧ್ಯಾಪಕರಾಗಿ ನಿಯುಕ್ತಿಗೊಳಿಸಿದರು. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಮತ್ತು ಸಂಗಮೇಶ್ವರ ಗುರವ ಅವರನ್ನು ಪೂರ್ಣಾವಧಿ ಉಪನ್ಯಾಸಕರಾಗಿ ನಿಯಮಿಸಿದರು. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರಿಗೆ ತಂಬೂರಿ ಕಲಾವಿದರಾಗಿ ಆಕಾಶವಾಣಿಯಿಂದ ನೇಮಕಾಜ್ಞೆ ಬಂದಿತ್ತು. ತಾವು ಆಕಾಶವಾಣಿ ಉದ್ಯೋಗ ಸೇರುವುದಾಗಿ ಹೇಳಿದಾಗ ಮಲ್ಲಿಕಾರ್ಜುನ ಮನಸೂರ ''ಅದ್ನೇನು ಮಾಡತೀ, ಇಲ್ಲೇ ಉಪನ್ಯಾಸಕನಾಗಿ ಕಲಿಸು'' ಎಂದು ಬಿಟ್ಟರು. ಗುರುವಿನ ಮಾತಿಗೆ ಮನ್ನಣೆ ನೀಡಿ ಅಧ್ಯಾಪಕರಾಗಿಯೇ ಮುಂದುವರಿದರು. ೧೯೮೭ ರಲ್ಲಿ ನಿವೃತ್ತರಾಗುವವರೆಗೆ ಅನೇಕಾನೇಕ ವಿದ್ಯಾರ್ಥಿಗಳಿಗೆ ವಿದ್ಯೆ ನೀಡಿದರು.

ಆರಂಭದಲ್ಲಿ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಮುಂಬೈ ಆಕಾಶವಾಣಿಯಿಂದ ಹಾಡುತ್ತಿದ್ದರು. ತಿಂಗಳಿಗೊಂದು ಕಾರ್ಯಕ್ರಮ. ಹೋಗಲು, ಬರಲು, ಕಾರ್ಯಕ್ರಮಕ್ಕೆ ಒಂದೊಂದು ದಿನದಂತೆ ಒಟ್ಟು ಮೂರು ದಿನ ಬೇಕಿತ್ತು. ಪ್ರತಿ ತಿಂಗಳು ಮೂರು ಮೂರು ದಿನ ನಿಯಮಿತವಾಗಿ ರಜೆ ತೆಗೆದುಕೊಳ್ಳುತ್ತಿದ್ದುದು ಏಕೆಂದು ಮಲ್ಲಿಕಾರ್ಜುನ ಮನಸೂರರಿಗೆ ತಿಳಿಯಿತು. ಅವರು ಕಾಂಟ್ರಾಕ್ಟನ್ನು ಧಾರವಾಡ ಆಕಾಶವಾಣಿ ಕೇಂದ್ರಕ್ಕೆ ವರ್ಗಾಯಿಸಿಕೊಟ್ಟರು.

ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅನೇಕ ಆಕಾಶವಾಣಿ ಕೇಂದ್ರಗಳಿಂದ ಗಾಯನ ಬಿತ್ತರಿಸಿದ್ದಾರೆ. ಹಲವು ಸಂಗೀತ ಸಮ್ಮೇಳನಗಳಲ್ಲಿ ಪಾಲ್ಗೊಂಡಿದ್ದಾರೆ. ದೂರದರ್ಶನದಲ್ಲೂ ಕಾರ್ಯಕ್ರಮ ನೀಡಿರುವರು. ೧೯೮೯ ರಲ್ಲಿ ಅಮೇರಿಕ ಪ್ರವಾಸ ಮಾಡಿ ೩೦-೩೫ ಕಚೇರಿ ನೀಡಿರುವರು. ಅವರಿಗೆ ಇಂಗ್ಲೀಷ ಬಾರದು ಬಲು ಪಜೀತಿ. ಅತಿಥೇಯರಾಗಿದ್ದ ಡಾ. ಜಯಾನಂದಯ್ಯ ಒಂದು ಸೂತ್ರ ಹೇಳಿಕೊಟ್ಟಿದ್ದರು ''ಯಾರು ಏನು ಕೇಳಿದರೂ No ಎಂದು ಬಿಡಿರಿ'' ಬಹಳ ಚೆನ್ನಾಗಿ ಹಾಡಿದಿರಿ ಎಂದು ಯಾರಾದರೂ ಇಂಗ್ಲಿಷಿನಲ್ಲಿ ಹೇಳಿದರೂ ಇವರು No ಎನ್ನುತ್ತಿದ್ದರು. ಒಮ್ಮೆ ಬಾಸ್ಟನ್ ವಿಶ್ವವಿದ್ಯಾಲಯದಲ್ಲಿ ಕಚೇರಿ, ಕುಲಪತಿಗಳು ಬಂದು ನಿಮ್ಮ ಗಾಯನವನ್ನು ಧ್ವನಿಮುದ್ರಿಸಿಕೊಳ್ಳಲೇ ಎಂದು ಕೇಳಿದರು. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ತಮಗೆ ಕಲಿಸಿಕೊಟ್ಟಿದ್ದ ಮಂತ್ರದಂತೆ No ಎಂದು ಬಿಟ್ಟರು. ಕಕ್ಕಾಬಿಕ್ಕಿಯಾದ ಕುಲಪತಿಗಳು ಡಾ.ಜಯಾನಂದಯ್ಯ ಅವರನ್ನು ಏನಿದು ಎಂದು ವಿಚಾರಿಸಿದರು. ಜಯಾನಂದಯ್ಯ Yes ಅಂದು ಬಿಡಿರಿ ಅಂದರು. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ Yes ಅಂದರು. ಕುಲಪತಿಗಳಿಗೆ ಖುಷಿ.

ಲಂಡನ್ನಿನ ಭಾರತೀಯ ವಿದ್ಯಾಭವನದ ನಿರ್ದೇಶಕರಾದ ಮತ್ತೂರು ಕೃಷ್ಣಮೂರ್ತಿ ಅವರಿಂದ ಆಹ್ವಾನ ಬಂತು. ಎಲ್ಲ ವ್ಯವಸ್ಥೆ ಮಾಡಿದರು. ವಿಮಾನಯಾನದ ಟಿಕೆಟ್, ವೀಸಾ ೧೫ ದಿನದಲ್ಲಿ ಬಂದವು. ಲಂಡನ್ನಿನಲ್ಲಿ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಹಾಡಿದ ದಿನ ಅಂದಿನ ಪ್ರಧಾನಿ ಪಿ.ವಿ. ನರಸಿಂಹರಾವ್ ಲಂಡನ್ನಿಗೆ ಬಂದಿದ್ದರು. ಮತ್ತೂರು ಕೃಷ್ಣಮೂರ್ತಿ ಭಾರತದ ಪ್ರಧಾನಿಯನ್ನು ಸಂಗೀತ ಆಲಿಸಲು ಆಮಂತ್ರಿಸಿದ್ದರು. ಐದು ನಿಮಿಷ ಕುಳಿತು ಹೋಗುವುದಾಗಿ ಹೇಳಿದ್ದ ನರಸಿಂಹರಾಯರು ಕಚೇರಿ ಮುಕ್ತಾಯವಾಗುವವರೆಗೂ ಕುಳಿತು ಆಸಕ್ತಿಯಿಂದ ಆಲಿಸಿದರು. ಭೈರವಿ ಹಾಡಿದ ಮೇಲೆ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರನ್ನು ಅಭಿನಂದಿಸುತ್ತ ಅಚ್ಚ ಕನ್ನಡದಲ್ಲಿ ಪ್ರಶ್ನಿಸಿದರು.

*''ಸ್ವಾಮಿ, ಯಾವ ಊರು ನಿಮ್ಮದು?''*

*''ಭಾರತ''*

*''ಅದು ಗೊತ್ತು. ಊರು ಯಾವುದು?''*

*''ಧಾರವಾಡ''*

*''ಮಲ್ಲಿಕಾರ್ಜುನ ಮನಸೂರರ ಶಿಷ್ಯರೇನು ? ದಿಲ್ಲಿಗೆ ಬಂದಾಗ ನನ್ನನ್ನು ಕಾಣಿರಿ.''*

ಭಾರತೀಯ ವಿದ್ಯಾಭವನದ ಲಂಡನ್‌ಶಾಖೆಯಲ್ಲಿ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ೧೫ ದಿನ ಹಿಂದುಸ್ತಾನ ಗಾಯನ ಕಲಿಸಿದರು. ಐದು ವರ್ಷದ ಒಪ್ಪಂದದ ಮೇಲೆ ಲಂಡನ್ನಿಗೆ ಬರಲು ಮತ್ತೂರು ಕೃಷ್ಣಮೂರ್ತಿ ಆಮಂತ್ರಿಸಿದರು. ಇಂಗ್ಲೆಂಡಿನ ಧೋ ಧೋ ಸುರಿಯುವ ಮಳೆಯಿಂದ ಹೈರಾಣಾಗಿದ್ದ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ''ನಾನು ಊರಿಗೆ ಹೋಗಿ ತಿಳಿಸುವೆ'' ಎಂದವರು ಲಂಡನ್ನಿನತ್ತ ಮತ್ತೆ ಮುಖ ಮಾಡಲಿಲ್ಲ.

ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ದೊಡ್ಡ ಶಿಷ್ಯಬಳಗ ನಿರ್ಮಿಸಿರುವರು. ಅವರಲ್ಲಿ ಗೀತಾ ಜಾವಡೆಕರ, ನಿರ್ಮಲಾ ಜಯಾನಂದಯ್ಯ, ಸರಯೂ ಸೊನ್ನಿ, ಷಡಕ್ಷರಿಬುವಾ, ದಿ.ಅಜ್ಜಣ್ಣ ಪಾಟೀಲ, ಮುಕ್ತಾ ಮಜುಮದಾರ, ಮೀರಾ ಗುಂಡಿ, ವೀರಣ್ಣ ಹೂಗಾರ, ಶಶಿಕಲಾ ಚವಡಿ, ಮೃತ್ಯುಂಜಯ ಅಗಡಿ, ನಾಗರಾಜ ಹವಾಲ್ದಾರ ಪ್ರಮುಖರು. ಒಬ್ಬ ಸಂಗೀತಗಾರನ ನಿಜವಾದ ಸಂಪತ್ತೆಂದರೆ ಶಿಷ್ಯಸಂಪತ್ತೇ.

ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರ ಪ್ರತಿಭೆ ಗುರುತಿಸಿ ಬಿರುದು, ಪ್ರಶಸ್ತಿಗಳು ಬಂದಿವೆ. ಸಂಗೀತ ಕಲಾನಿಧಿ, ನಾದಬ್ರಹ್ಮ, ಲಯಬ್ರಹ್ಮ ೧೯೮೬ ರಲ್ಲಿ ಕರ್ನಾಟಕ ರಾಜ್ಯ ಸಂಗೀತ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾಶ್ರೀ ಪ್ರಶಸ್ತಿ. ೧೯೯೪ ರಲ್ಲಿ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ. ೨೦೦೨ ರಲ್ಲಿ ಪುಟ್ಟರಾಜ ಸಮ್ಮಾನ. ಈಗ ಇವೆಲ್ಲಕ್ಕೂ ಕಿರೀಟವಿಟ್ಟಂತೆ ಕನಕ ಪುರಂದರ ಪ್ರಶಸ್ತಿ.

ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರ 'ಅಕ್ಕ ಕೇಳವ್ವ' ಕ್ಯಾಸೆಟ್ ಹೊರಬಂದಿದೆ. ಅದರಲ್ಲಿ ಬಸವೇಶ್ವರ ಮತ್ತು ಅಕ್ಕಮಹಾದೇವಿಯವರ ವಚನಗಳನ್ನು ಸುಶ್ರಾವ್ಯವಾಗಿ, ಅರ್ಥಪೂರ್ಣವಾಗಿ ಹಾಡಿರುವರು.

''ಜೈಪುರ ಗಾಯಕಿ ಕಠಿಣವಾದುದು. ಧ್ರುಪದವನ್ನೆ ಖ್ಯಾಲ ಮಾಡಿಕೊಂಡು ಹಾಡುವುದೆ ಜೈಪುರ ಗಾಯಕಿಯ ವೈಶಿಷ್ಟ್ಯ ಎಂದು ಮಲ್ಲಿಕಾರ್ಜುನ ಮನಸೂರ ವ್ಯಾಖ್ಯಾನಿಸುತ್ತಿದ್ದರು. ಅಂಥ ಮುಷ್ಕಿಲ್ ಗಾಯಕಿಯನ್ನು ಕರತಲಾಮಲಕ ಮಾಡಿಕೊಂಡುದು ಪಂಡಿತ ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ ಅವರ ಸಾಧನೆ. ಅಂತೆಯೆ, ರಸಿಕರ, ವಿಮರ್ಶಕರ ಪ್ರಶಂಸೆಗೆ ಪಾತ್ರರಾಗಿರುವರು''[೪೫] ಎಂದು ಡಾ. ಕನವಳ್ಳಿಯವರು ಬರೆಯುತ್ತಾರೆ.

### ೫.೧೫.ಡಾ. ಬಿಂದುಮಾಧವ ಡಿ. ಪಾಠಕ

ಕರ್ನಾಟಕ ಸಾಂಸ್ಕೃತಿಕ ಕ್ಷೇತ್ರದಲ್ಲಿ ಅವಳಿ ನಗರಗಳಾದ ಹುಬ್ಬಳ್ಳಿ ಧಾರವಾಡಗಳಿಗೆ ತುಂಬಾ ಗೌರವ ಸ್ಥಾನವಿದೆ. ಸಾಹಿತ್ಯ,ಸಂಗೀತ, ಚಿತ್ರ, ಶಿಲ್ಪ, ರಂಗಭೂಮಿ ಮುಂತಾದ ಕಲೆಗಳು ಈ ನೆಲದಲ್ಲಿ ಸಮೃದ್ಧವಾಗಿ ಬೆಳೆದಿವೆ. ಧಾರವಾಡ, ಹುಬ್ಬಳ್ಳಿಗಳನ್ನು ಸಾಂಸ್ಕೃತಿಕವಾಗಿ ಒಂದುಗೂಡಿಸಿ ಸಂಗೀತ ಗಂಗೆಯು ಅತ್ಯಂತ ವೈಭವದಿಂದ ಇಲ್ಲಿ ಹರಿಯುತ್ತಿದ್ದಾಳೆ. ಇಲ್ಲಿ ಕಂಠ ಸಂಗೀತದೊಡನೆ ತಂತುವಾದನ, ಸುಷಿರ ಹಾಗೂ ಘನವಾದನಕಾರರು ಸಾಧನೆ ಮಾಡಿ ಪರಿಣಿತ ಕಲಾವಿದರಾಗಿ ನಾಡಿಗೆ ಕೀರ್ತಿ ತಂದ ಹಿರಿಮೆಗೆ ಪಾತ್ರರಾಗಿದ್ದಾರೆ.

---

೪೫. ಕಲಾಚೇತನ : ಡಾ. ಸದಾನಂದ ಕನವಳ್ಳಿ, ಪುಟ-೩೦೩

ಈ ಸ್ವರಲತೆಯ ಹೂಬಳ್ಳಿಯಲ್ಲಿ ಅನೇಕ ಕಲಾ ಕುಸುಮಗಳು ವಿಕಸಿತವಾಗಿವೆ. ಇವುಗಳಲ್ಲಿ ಖ್ಯಾತ ಬೀನಕಾರರಾದ ಡಾ.ಬಿಂದುಮಾಧವ ಪಾಠಕರೂ ಒಬ್ಬರಾಗಿದ್ದಾರೆ.

ತಂತುವಾದ್ಯ ರುದ್ರವೀಣೆಗೆ ಬೀನ್ ಎಂದೂ ಕರೆಯುವರು. ವೈದಿಕ ಕಾಲದಿಂದಲೂ ರುದ್ರವೀಣೆಗೆ ವಿಶಿಷ್ಟ ಸ್ಥಾನವಿದೆ. ವೇದ ಮಂತ್ರಗಳ ಪಠಣದ ಜೊತೆಗೆ ರುದ್ರವೀಣೆಯನ್ನೂ ನುಡಿಸುತ್ತಿದ್ದರು. ರುದ್ರವೀಣೆಯ ಆವಿಷ್ಕಾರ ಶಿವನಿಂದಾಯಿತೆಂಬ ಪ್ರತೀತಿ ಇದೆ. ಪಾರ್ವತಿಯ ಶಯನಮುದ್ರೆಯನ್ನು ಕಂಡ ಶಿವನು ಮೋಹಿತನಾಗಿ ಅದೇ ಆಕಾರದ ವೀಣೆಯನ್ನು ಸೃಷ್ಟಿಸಿದ. ಅದೇ ರುದ್ರವೀಣೆ ಎಂದು ತಿಳಿಯಲಾಗುತ್ತಿದೆ.

ಇಂದು ಅಖಿಲ ಭಾರತ ವ್ಯಾಪ್ತಿಯಲ್ಲಿ ಅತಿವಿರಳವಾದ ವಾದ್ಯ ಇದಾಗಿದೆ. ಡಾ.ಬಿಂದುಮಾಧವ ಪಾಠಕರು ಕಳೆದ ಐದು ದಶಕಗಳಿಂದ ರುದ್ರವೀಣಾ ವಾದನದಲ್ಲಿ ಅನುಪಮ ಸಾಧನೆ ಮಾಡಿದ ಕಲಾವಿದರಾಗಿದ್ದಾರೆ. ಕಣ್ಮರೆಯಾಗುತ್ತಿರುವ ರುದ್ರವೀಣೆಯನ್ನು ಪ್ರಚಾರ ಮಾಡಿ ಅನೇಕ ಶಿಷ್ಯರನ್ನು ತಯಾರು ಮಾಡಿದ ಶ್ರೇಯಸ್ಸು ಇವರಿಗೆ ಸಲ್ಲುತ್ತದೆ.

ಡಾ. ಬಿಂದುಮಾಧವ ಪಾಠಕರು ೧೯೩೫ ರ ಎಪ್ರಿಲ್ ಒಂಬತ್ತರಂದು ಹುಬ್ಬಳ್ಳಿಯಲ್ಲಿ ಜನಿಸಿದರು. ಇವರದು ಸಂಗೀತ ಪರಂಪರೆಯ ಮನೆತನ. ತಂದೆ ದತ್ತೋಪಂತ ಹಾಗೂ ಚಿಕ್ಕಪ್ಪ ಸಖಾರಾಮ್ ಅವರು ಬೀನ್‌ವಾದಕರು. ಅವರು ಪ್ರಸಿದ್ಧ ಬೀನ್‌ಕಾರರಾದ ಉಸ್ತಾದ ಮುರಾದಖಾನರ ಶಿಷ್ಯರು. ದತ್ತೋಪಂತರ ಪೂರ್ವಜರು ಮೂಲತಃ ಧಾರವಾಡ ಜಿಲ್ಲೆಯ ಬಂಕಾಪುರದ ರೈತ ಮನೆತನದವರು. ಹುಬ್ಬಳ್ಳಿಗೆ ಬಂದು ನೆಲೆಸಿದ ಪಾಠಕ ಮನೆತನ ಸಂಗೀತ ಕ್ಷೇತ್ರದಲ್ಲಿ ಹೆಸರು ಮಾಡಿತು. ಬಾಲ್ಯದಿಂದಲೇ ಬಿಂದುಮಾಧವ ಸಂಗೀತದ ವಾತಾವರಣದಲ್ಲಿ ಬೆಳೆದುದರಿಂದ ರಕ್ತಗತವಾದ ಸಂಗೀತದ ಎಡೆಗೆ ಸಹಜವಾಗಿ ಒಲವು ಮೂಡಿತು. ದಿನವೂ ತಂದೆ ನುಡಿಸುತ್ತಿದ್ದ ರುದ್ರವೀಣೆಯ ನಾದಮಾಧುರ್ಯ ಬಿಂದುಮಾಧವನ ಅಂತರಂಗವನ್ನು ಮಿಡಿಯುತ್ತಿತ್ತು. ಈ ಬಾಲಕ ತನಗರಿವಿಲ್ಲದಂತೆಯೇ ಸಂಗೀತದ ದಾಸನಾಗಿ ಬಿಟ್ಟ. ಮನೆಯಲ್ಲಿ ಬಿಂದುಮಾಧವನ ಅಕ್ಕ ಗಾಯನ ಕಲಿಯುತ್ತಿದ್ದುದರಿಂದ ಕಂಠಸಂಗೀತದ ಪ್ರಭಾವವೂ ಆಯಿತು. ಮನೆಯಲ್ಲಿದ್ದ ಎಲ್ಲ ವಾದ್ಯಗಳನ್ನೂ ಬಾರಿಸುವ ಹವ್ಯಾಸ ಈ ಬಾಲಕನಿಗೆ ಬೆಳೆಯಿತು. ತಬಲಾ, ಬೀನ್‌ಗಳನ್ನು ನುಡಿಸುತ್ತಿದ್ದ ಹಾಡನ್ನೂ ಹಾಡುತ್ತಿದ್ದ. ಶಾಲೆಯ ಎಲ್ಲ ಸಾಂಸ್ಕೃತಿಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿ ಬಹುಮಾನಗಳನ್ನೂ ಗೆಲ್ಲುತ್ತಿದ್ದ. ಮ್ಯಾಟ್ರಿಕ್ ಆದ ನಂತರ ತಂದೆ ದತ್ತೋಪಂತರು ''ವಿಜ್ಞಾನ ಕಾಲೇಜಗೆ ಸೇರಿ ಡಾಕ್ಟರ ಆಗು'' ಎಂದು ಒತ್ತಾಯಿಸಿದರು. ತನಗೆ ಅದರಲ್ಲಿ ಅಭಿರುಚಿ ಇಲ್ಲವೆಂದು ಹಟಮಾಡಿ ಕಲಾ ಮಹಾವಿದ್ಯಾಲಯಕ್ಕೇ ಸೇರಿಕೊಂಡ. ಆದರೆ ತಂದೆಗೆ ಸಂಗೀತದಲ್ಲಿ ಮಗನಿಗೆ ಇಷ್ಟೊಂದು ಆಸಕ್ತಿಯಿದೆಯೆಂಬುದು ಗೊತ್ತಿರಲಿಲ್ಲ. ಬಿಂದುಮಾಧವರ ಸಂಗೀತ ಸಾಧನೆ ಮಾತ್ರ ತಂದೆಗೆ ತಿಳಿಯದಂತೆ ನಡೆದಿತ್ತು. ಆದಾಗ್ಯೂ ಚಿಕ್ಕಪುಟ್ಟ ಕಾರ್ಯಕ್ರಮ ಮಾಡುವಷ್ಟರ ಮಟ್ಟಿಗೆ ಮಗ ತಯಾರಾಗಿದ್ದು ತಂದೆಗೆ ಮಾತ್ರ ಇದರ ಸುಳಿವು ಹತ್ತಿರಲಿಲ್ಲ.

ಕಾಲೇಜು ಶಿಕ್ಷಣ ಪ್ರಾರಂಭವಾದ ನಂತರ ಈ ಯುವಕ ಬಿಂದುಮಾಧವ ವಿಶ್ವವಿದ್ಯಾಲಯದ ಯುವಜನೋತ್ಸವದಲ್ಲಿ ಭಾಗವಹಿಸಿ ಬೀನ್‌ವಾದನದಲ್ಲಿ ಪ್ರಥಮ ಬಹುಮಾನ ಗಿಟ್ಟಿಸಿದ. ಇದರ ಅಂತರ ವಿಶ್ವವಿದ್ಯಾಲಯ ಯುವಮೇಳ ದಿಲ್ಲಿಯಲ್ಲಿ ನಡೆಸಲಾಗುತ್ತಿತ್ತು.

ಹೀಗಾಗಿ, ಬಿಂದುಮಾಧವನಿಗೆ ತಂದೆಗೆ ಹೇಳದೆ ವಿಧಿಯಿರಲಿಲ್ಲ. ಏನಾದರಾಗಲಿ ಎಂದು ಹೆದರುತ್ತಾ ತಂದೆಗೆ ಹೇಳಿದಾಗ ಮೊದಲು ತಂದೆ ಏನೂ ಮಾತನಾಡದೆ ಸುಮ್ಮನೆ ಕುಳಿತುಬಿಟ್ಟರು. ಸ್ವಲ್ಪ ಸಮಯದ ನಂತರ, ''ಅದೇನು ಬಾರಿಸುವಿಯೋ ಮೊದಲು ನನ್ನೆದುರು ಬಾರಿಸು, ಆಮೇಲೆ ನೋಡೋಣ'' ಎಂದರು. ಬಿಂದುಮಾಧವ ಬಾರಿಸಿದಾಗ ಅವನಲ್ಲಿಯ ಸಂಗೀತದ ಹಸಿವು, ಪರಿಶ್ರಮಗಳನ್ನು ಅರಿತರು. ಅವನ ಮುಂದಿನ ಸ್ಪರ್ಧೆಗೆ ತಾವೇ ತಿದ್ದಿ ಕಲಿಸಿ ತಯಾರಿ ಮಾಡಿದರು. ಮುಂದೆ ಬಿಂದುಮಾಧವನಿಗೆ ದಿಲ್ಲಿಯಲ್ಲೂ ಪ್ರಥಮ ಬಹುಮಾನ ಬಂದಾಗ ತಂದೆಗೆ ಸಂತೋಷವಾಗಿ ಅವನಿಗೆ ದಿನ ನಿತ್ಯ ರುದ್ರವೀಣೆಯ ತಾಲೀಮನ್ನು ಕೊಡಹತ್ತಿದರು. ದಿಲ್ಲಿಯಲ್ಲಿ ನಿರ್ಣಾಯಕರಾಗಿ ಬಂದ ಖ್ಯಾತ ಸಂಗೀತಗಾರ ಪಂ.ರತನ್‌ಝಣಕರರು ಬಿಂದುಮಾಧವನಿಗೆ ''ನೀನು ಚೆನ್ನಾಗಿ ಬಾರಿಸುತ್ತಿ, ನಿನ್ನ ಬಾಜ್ ಪ್ರಭಾವಶಾಲಿಯಾಗಬೇಕಾದರೆ ಕಂಠ ಸಂಗೀತವನ್ನು ಕಲಿಯಬೇಕು'' ಎಂದು ಹೇಳಿದರು. ಆದ್ದರಿಂದ ಮನೆಯಲ್ಲಿ ಅಕ್ಕ ಸುಮನಳ ಸಂಗೀತಾಭ್ಯಾಸಕ್ಕೆ ತಬಲಾ ಸಾಥ್ ನೀಡುತ್ತಿದ್ದ ಬಿಂದುಮಾಧವನಿಗೆ ಗಾಯನದ ಅಭ್ಯಾಸ ಮಾಡಲು ತೊಂದರೆಯಾಗಲಿಲ್ಲ. ಪಂ. ದತ್ತೋಪಂತ ದೇಸಾಯಿಯವರಿಂದ ಸಂಗೀತ ಅಭ್ಯಾಸ ಮಾಡತೊಡಗಿದ. ಗಣಪತಿ ಉತ್ಸವದಲ್ಲಿ, ರಾಯರ ಮಠದಲ್ಲಿ, ಹೀಗೆ ಸಣ್ಣಪುಟ್ಟ ಕಾರ್ಯಕ್ರಮಗಳನ್ನು ಕಾಲೇಜು ದಿನಗಳಲ್ಲಿ ಮಾಡುತ್ತಿದ್ದ.

ತಂದೆ ದತ್ತೋಪಂತರು ಮಗನಿಗೆ ಗುರುವಾಗಿ ಗಂಡಾಕಟ್ಟಿ ಸಂಗೀತ ವಿದ್ಯೆಗೆ ಶ್ರೀಕಾರ ಹಾಕಿದರು. ಹೆಚ್ಚಿನ ಬೀನ್ ವಿದ್ಯೆಗಾಗಿ ಮಗನನ್ನು ಮಧ್ಯಪ್ರದೇಶದ ದೇವಾಸದಲ್ಲಿಯ ಪ್ರಸಿದ್ಧ ಬೀನ್‌ಕಾರ ಉಸ್ತಾದ ರಜಬ್ ಅಲಿಖಾನರಲ್ಲಿಗೆ ಕಳಿಸಿದರು. ಅಲ್ಲಿಯ ಕಠಿಣ ಪರಿಶ್ರಮ, ಗುರಸೇವಾ ಕೆಲಸಗಳಿಗೆ ಅಂಜಿ ಬಿಂದುಮಾಧವರು ಕೆಲವೇ ದಿನಗಳಲ್ಲಿ ಮನೆಗೆ ತೆರಳಿದರು. ಆದರೆ ತಂದೆ ಕೋಪಿಸಿ ಪುನಃ ದೇವಾಸಕ್ಕೆ ಕಳಿಸಿದರು. ಅಲ್ಲಿ ಒಂದೆರಡು ವರ್ಷ ಬೀನ್‌ದಲ್ಲಿ ಕಠಿಣ ಪರಿಶ್ರಮದಿಂದ ಸಾಧನೆ ಮಾಡಿದಾಗ ಬೀನ್‌ವಾದನದಲ್ಲಿ ನೈಪುಣ್ಯತೆಯನ್ನು ಸಾಧಿಸಿದರು. ನಂತರ ಬೀನ್ ವಾದನದಂತೆ ಸಿತಾರ್ ವಾದನದಲ್ಲಿಯೂ ಸಾಧನೆ ಮಾಡುವುದರೊಂದಿಗೆ ಪ್ರಾವೀಣ್ಯತೆಯನ್ನು ಪಡೆದರು.

ಜೀವನೋಪಾಯಕ್ಕಾಗಿ ೧೯೫೮ ರಲ್ಲಿ ಕರ್ನಾಟಕ ರಾಜ್ಯ ಸಾರಿಗೆ ಸಂಸ್ಥೆಯ ಕಛೇರಿಯಲ್ಲಿ ಕೆಲಸ ಮಾಡಲಾರಂಭಿಸಿದರು. ಸುದೈವದಿಂದ ೧೯೭೩ ರಲ್ಲಿ ಶಿರಸಿಯ ಎಂ. ಎಂ. ಕಾಲೇಜಿನಲ್ಲಿ ಸಂಗೀತ ಪ್ರಾಧ್ಯಾಪಕರೆಂದು ನಿಯುಕ್ತರಾದಾಗ ಸಂಗೀತ ಸಾಧನೆಗೆ ಆಧಾರದ ದೊರೆತಂತಾಯಿತು. ವೃತ್ತಿಯೊಂದಿಗೆ ಉನ್ನತ ಪದವಿ ಪಡೆಯಬೇಕೆಂಬ ಬಯಕೆ ಇವರಿಗಿತ್ತು. ಆದ್ದರಿಂದ ೧೯೬೫ ರಲ್ಲಿ ಹಿಂದಿಯಲ್ಲಿ ಎಂ. ಎ., ೧೯೬೬ ರಲ್ಲಿ

ಸಂಗೀತದಲ್ಲಿ ಎಂ. ಎ. ೧೯೭೨ ರಲ್ಲಿ ಇಂಗ್ಲೀಷನಲ್ಲಿ ಎಂ. ಎ. ಪದವಿ ಗಳಿಸಿದರು. ಅದರಂತೆ ಫ್ರೆಂಚ್ ವಿಷಯದಲ್ಲಿ ಸರ್ಟಿಫಿಕೇಟ್ ಕೋರ್ಸ್ ಮಾಡಿಕೊಂಡರು.

೧೯೬೧ ರಲ್ಲಿ ಸಾಠೇ ಮನೆತನದ ಕನ್ಯೆ ವಿಜಯಲಕ್ಷ್ಮಿಯವರೊಡನೆ ಬಿಂದುಮಾಧವ ಮದುವೆಯಾಯಿತು. ಪತ್ನಿ ವಿಜಯಲಕ್ಷ್ಮಿ ನಿಜಕ್ಕೂ ಬಿಂದುಮಾಧವರ ಸಂಗೀತ ಸಾದನೆಗೆ ಸ್ಪೂರ್ತಿಯ ಸೆಲೆಯಾದರು. ಅದರಂತೆ, ರಾಗದಾರಿಯಲ್ಲಿ ಉದಯರಾಗ, ಭಕ್ತಿಗೀತೆಗಳನ್ನು ಹಾಡುತ್ತಿದ್ದ ತಾಯಿ ಉಮಾಬಾಯಿವರ ಆಧ್ಯಾತ್ಮಿಕ ಜೀವನ ಬಿಂದುಮಾಧವರಿಗೆ ಪ್ರೇರಕ ಶಕ್ತಿಯಾಗಿ ಆಶೀರ್ವಾದವಾಗಿ ಸಂಗೀತದಲ್ಲಿ ಕೀರ್ತಿ ಸೋಪಾನಕ್ಕೆ ಎಡೆ ಮಾಡಿತು.

೧೯೮೧ ರಲ್ಲಿ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಸಂಗೀತ ವಿಭಾಗದಲ್ಲಿ ಪ್ರಾಧ್ಯಾಪಕರಾಗಿ ವಿಭಾಗದ ಮುಖ್ಯಸ್ಥರಾಗಿ ಕಾರ್ಯನಿರ್ವಹಿಸತೊಡಗಿದರು. ೧೯೮೩ ರಲ್ಲಿ ಸಂಗೀತ ವಿಷಯ ಕುರಿತು ಹಿಂದಿಯಲ್ಲಿ ಪಿಎಚ್.ಡಿ. ಪದವಿ ಸಂಪಾದಿಸಿದರು. ಜೊತೆಗೆ ಸಂಶೋಧನ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದು ಇವರ ಮಾರ್ಗದರ್ಶನದಲ್ಲಿ ಐದು ಜನ ವಿದ್ಯಾರ್ಥಿಗಳು ಪಿಎಚ್.ಡಿ. ಪದವಿ ಪಡೆದುಕೊಂಡಿದ್ದಾರೆ. ಹುಬ್ಬಳ್ಳಿಯ ಪ್ರಾದೇಶಿಕ ಸಂಶೋಧನಾ ಹಾಗೂ ಅಭಿವೃದ್ಧಿ ಕೇಂದ್ರದ ನಿರ್ದೇಶಕರಾಗಿ ಸೇವೆ ಸಲ್ಲಿಸಿದ್ದಾರೆ. ೧೯೯೫ ರಲ್ಲಿ ವೃತ್ತಿಯಿಂದ ನಿವೃತ್ತರಾದರು.

ಡಾ. ಬಿಂದುಮಾಧವರು ಸಂಗೀತ ವಿಷಯ ಕುರಿತು ವಿದ್ವತ್ಪೂರ್ಣ ಲೇಖನಗಳನ್ನು ಬರೆದಿದ್ದಾರೆ. ಅನೇಕ ನಿಯತಕಾಲಿಕೆಗಳಲ್ಲಿ ಅವು ಪ್ರಕಟಗೊಂಡಿವೆ.

ಡಾ. ಪಾಠಕರು ಭಾರತೀಯ ಸಂಗೀತದ ಚರಿತ್ರೆ ಮತ್ತು ಡಾ. ಪುಟ್ಟರಾಜ/ಗವಾಯಿ ಎಂಬ ಎರಡು ಗ್ರಂಥಗಳನ್ನು ರಚಿಸಿದ್ದಾರೆ. ಮೊದಲ ಗ್ರಂಥವನ್ನು ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯ ಪ್ರಕಟಿಸಿದ್ದು ಈ ಗ್ರಂಥಕ್ಕೆ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಅತ್ಯುತ್ತಮ ಗ್ರಂಥವೆಂಬ ಪ್ರಶಸ್ತಿ ದೊರೆತಿದೆ. ಎರಡನೆಯ ಗ್ರಂಥವನ್ನು ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಪ್ರಕಟಿಸಿದೆ.

ಡಾ. ಪಾಠಕರು ೧೯೫೦ ರಿಂದಲೆ ಸಾರ್ವಜನಿಕ ಸಂಗೀತ ಕಾರ್ಯಕ್ರಮ ನೀಡಲು ಪ್ರಾರಂಭಿಸಿದರು. ೧೯೫೫ ರಲ್ಲಿ ಅಖಿಲ ಭಾರತ ಆಕಾಶವಾಣಿ ಸ್ಪರ್ಧೆಯಲ್ಲಿ ಎರಡನೆಯ ಬಹುಮಾನ ದೊರೆಯಿತು. ೧೯೫೬ ರಲ್ಲಿ ಅಂತರ ವಿಶ್ವವಿದ್ಯಾಲಯದ ಯುವಜನೋತ್ಸವ ಬಹುಮಾನ ಪ್ರಾಪ್ತವಾಯಿತು. ೧೯೫೮ ರಲ್ಲಿ ಲಖನೌ ಯುವ ಕಾಂಗ್ರೆಸ್ ಅಧಿವೇಶನದಲ್ಲಿ, ೧೯೭೭ ರಲ್ಲಿ ಪುಣೆ ಸವಾಯಿ ಗಂಧರ್ವ ಪುಣ್ಯತಿಥಿಯಲ್ಲಿ, ೧೯೮೨ ರಲ್ಲಿ ಭೋಪಾಲದ ದುರ್ಲಭ ವಾದ್ಯ ವಿನೋದ ಸಮ್ಮೇಳನದಲ್ಲಿ, ಬೆಂಗಳೂರಿನ ಸಾರ್ಕ್ ಸಮ್ಮೇಳನದಲ್ಲಿ, ಮೈಸೂರಿನ ದಸರಾ ಉತ್ಸವದಲ್ಲಿ ಹಾಗೂ ಆಕಾಶವಾಣಿ ರಾಷ್ಟ್ರೀಯ ಸಂಗೀತ ಕಾರ್ಯಕ್ರಮಗಳಲ್ಲಿ ಇವರು ಬೀನ್ ನುಡಿಸಿದ್ದಾರೆ. ಧಾರವಾಡ ಆಕಾಶವಾಣಿ ಹಾಗೂ ದೂರದರ್ಶನದ 'ಎಟಾಪ್' ಶ್ರೇಣಿಯ ಬೀನ್‌ವಾದನ ಕಲಾವಿದರು.

"ಡಾ.ಬಿಂದುಮಾಧವರ ಬೀನ್‌ವಾದನ ಶೈಲಿಯ ಧೃಪದ ಅಂಗದ ಗೌರಿಹಾರಿ ಬಾನಿಯದಾಗಿದೆ. ಹಾಗೂ ಕಿರಾಣಾ ಘರಾನಾದ ಖ್ಯಾಲ್ ಅಂಗದ್ದಾಗಿದೆ. ಸ್ವರಮಾಧುರ್ಯ, ರಾಗವಿಸ್ತಾರ, ಅಲಾಪ, ಜೋಡ್, ಝಾಲಾ, ಸಾಂಪ್ರಾದಾಯಿಕ ಗತ್‌ಗಳ ಶೈಲಿ ಇವರ ವಾದನದಲ್ಲಿ ಸಮೃದ್ಧವಾಗಿವೆ"[೬೬] ಎಂದು ಡಾ. ಕಮಲ ಪುರಂಧರೆ ಬರೆಯುತ್ತಾರೆ. ಇವರು ಪಖಾವಾಜ್ ಸಾಥ್ ಬದಲಾಗಿ ತಬಲಾ ಸಾಥದೊಂದಿಗೆ ಬೀನ್ ನುಡಿಸುವರು. ಇವರ ಶಿಷ್ಯರಲ್ಲಿ ಪ್ರಮುಖವಾಗಿ ಪ್ರೊ. ರಾಮಚಂದ್ರಹೆಗಡೆ, ಶ್ರೀಮತಿ ಜ್ಯೋತಿ ಹೆಗಡೆ ಹಾಗೂ ಮಗ ಡಾ.ಶ್ರೀಕಾಂತ ಪಾಠಕ ಇದ್ದಾರೆ.

ಡಾ. ಬಿಂದುಮಾಧವ ಪಾಠಕರ ಸಾಧನೆ, ಸಿದ್ಧಿಗೆ ಅನೇಕ ಪ್ರಶಸ್ತಿಗಳು, ಪುರಸ್ಕಾರಗಳು ದೊರೆತಿವೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಸದಸ್ಯತ್ವ ಹಾಗೂ ಅಕಾಡೆಮಿಯ 'ಕರ್ನಾಟಕ ಕಲಾತಿಲಕ' ಪ್ರಶಸ್ತಿ, ೧೯೯೫ ನೇ ಸಾಲಿನ ಕರ್ನಾಟಕ ಸರಕಾರದ ಅತ್ಯುನ್ನತ ಸಂಗೀತ ಪ್ರಶಸ್ತಿಯಾದ 'ಕನಕ ಪುರಂದರ' ಪ್ರಶಸ್ತಿ, ಆರ್ಯಭಟ ಸಂಸ್ಥೆಯ ಸಂಗೀತ ವಿದ್ಯಾಪ್ರಪೂರ್ಣ ಬಿರುದುಗಳು ದೊರೆತಿವೆ. ಅಲ್ಲದೆ ಕ.ವಿ.ವಿ. ಧಾರವಾಡ ಹಾಗೂ ಗೋವಾದ ಕಲಾ ಅಕಾಡೆಮಿಯ ಸಂಗೀತ ಪಠ್ಯಪುಸ್ತಕ ಸಮಿತಿಯ ಸದಸ್ಯರಾಗಿ, ಕ.ವಿ.ವಿ. ಧಾರವಾಡ, ಸಂಗೀತದ ಅಭ್ಯಾಸ ಮಂಡಳಿಯ ಸದಸ್ಯರಾಗಿ ಕ.ವಿ.ವಿ. ಅಕಾಡೆಮಿಕ್ ಕೌನ್ಸಿಲ್ ಸದಸ್ಯರಾಗಿ, ಪಶ್ಚಿಮ ಬಂಗಾಲದ ಭಾರತೀಯ ಸಂಗೀತದ ಕಾಂಗ್ರೆಸ್ ಸದಸ್ಯರಾಗಿ, ಬರೋಡಾದ ಇಂಡಿಯನ್ ಮ್ಯುಜಿಕಾಲಾಜಿಕಲ್ ಸೊಸೈಟಿಯ ಸದಸ್ಯರಾಗಿ ಕಾರ್ಯ ನಿರ್ವಹಿಸಿರುವರು.

ಡಾ. ಪಾಠಕರದು ತುಂಬಾ ಸುಖಮಯ ಸಂಗೀತಮಯ ಪರಿವಾರ. ಇವರಿಗೆ ಮೂರು ಜನ ಮಕ್ಕಳು. ಮಗ ಡಾ.ಶ್ರೀಕಾಂತನು ಗದುಗಿನ ಪುಟ್ಟರಾಜ ಗವಾಯಿಗಳ ಸಂಗೀತ ಮಹಾವಿದ್ಯಾಲಯದಲ್ಲಿ ಸಿತಾರ್ ಪ್ರಾಧ್ಯಾಪಕನಾಗಿ ಕಾರ್ಯ ನಿರ್ವಹಿಸುತ್ತಿರುವನು. ಇನ್ನೊಬ್ಬ ಮಗ ಗಿರೀಶನು ಶಾಲೆಯಲ್ಲಿ ಶಿಕ್ಷಕನಾಗಿದ್ದಾನೆ. ಮಗಳು ಸಂಗೀತಾ ಸಂಗೀತದಲ್ಲಿ ಎಂ.ಎ. ಪದವಿ ಪಡೆದಿದ್ದು ಮದುವೆಯಾಗಿ ಈ ಪೂನಾದಲ್ಲಿ ಸುಖಸಂಸಾರ ಸಾಗಿಸುತ್ತಿದ್ದಾಳೆ. ಡಾ.ಬಿಂದುಮಾಧವರು ಕಲಾವಿದರಾಗಿ, ಸಂಗೀತ ಶಾಸ್ತ್ರಜ್ಞರಾಗಿ, ಶಿಕ್ಷಕರಾಗಿ ಅನೇಕ ಕ್ಷೇತ್ರಗಳಲ್ಲಿ ಕೆಲಸ ಮಾಡಿ ಸಂಗೀತ ಕ್ಷೇತ್ರಕ್ಕೆ ತಮ್ಮದೇ ಆದ ಕೊಡುಗೆಯನ್ನು ನೀಡಿದ್ದಾರೆ.

### ೫.೧೬.ಪಂ. ಬಸವರಾಜ ಬೆಂಡಿಗೇರಿ

ಭಾರತದ ಹೆಸರಾಂತ ತಬಲಾ ಕಲಾವಿದರಲ್ಲಿ ಹೆಚ್ಚಿನವರು ಉತ್ತರ ಭಾರತದವರು. ದಕ್ಷಿಣ ಭಾರತದಲ್ಲಿ ಅಂತಹ ಪ್ರತಿಭಾವಂತರಿಲ್ಲವೆಂದೇನಿಲ್ಲ. ಆದರೆ ಅವರ ಸಂಖ್ಯೆ ತೀರ ವಿರಳ. ಅಂತಹ ವಿರಳ ವರ್ಗದಲ್ಲಿ ಬಸವರಾಜ ಬೆಂಡಿಗೇರಿಯವರೂ ಒಬ್ಬರು. ಬಿಳಿಯ ಪೈಜಾಮ ಮೇಲೊಂದು ಜುಬ್ಬಾ, ಬಡಕಲು ಶರೀರ ಹಣೆಯ ಮೇಲೆ

---

೬೬. ಕಲಾಚೇತನ : ಡಾ. ಕಮಲ ಪುರಂಧರೆ, ಪುಟ-೩೧೫

ಭಸ್ಮ, ದೃಷ್ಟಿ ಮಾಂದ್ಯದ ಸಾಮಾನ್ಯರಂತೆ ಕಾಣುವ ಈ ವ್ಯಕ್ತಿಯನ್ನು ನೋಡಿದ ಯಾರಾದರೂ ಆಶ್ಚರ್ಯ ಪಡದಿರರು ನೋಟಕ್ಕೆ ಸಾಮಾನ್ಯರಂತೆ ಕಂಡರೂ ಅಸಾಮಾನ್ಯತೆ ಪಡೆದ ಅವರನ್ನು ಗುರುತಿಸುವುದು ಓರ್ವ ಕಲಾವಿದನಿಗೆ ಮಾತ್ರ ಸಾಧ್ಯ.

ತಬಲಾವಾದನ ಕಲೆಯಲ್ಲಿ ಅಖಿಲ ಭಾರತ ಮಟ್ಟದ ಖ್ಯಾತಿ ಪಡೆದ ಕರ್ನಾಟಕದ ಕೆಲವೇ ಜನ ಕಲಾವಿದರಲ್ಲೊಬ್ಬರಾದ ಬೆಂಡಿಗೇರಿಯವರು ಹುಟ್ಟಿದ್ದು ೨೨-೯-೧೯೨೮ರಲ್ಲಿ ಬೆಳಗಾಂವ ಸಮೀಪದ ಖಾಸಭಾಗದಲ್ಲಿ. ತಂದೆ ಶಂಕ್ರಪ್ಪ ಅಲ್ಪ ಸ್ವಲ್ಪ ತಬಲಾ ಕಲೆ ಬಲ್ಲವರು, ತಾಯಿ ಗಂಗಮ್ಮ ಸದ್ಗೃಹಿಣಿ. ಬಾಲಕ ಬಸವರಾಜರದು ಹುಟ್ಟುತ್ತಲೆ ದೃಷ್ಟಿ ಮಾಂದ್ಯ ಅದರಿಂದ ಶಾಲೆಗೆ ಸಂಚಕಾರ, ಹೆತ್ತವರಿಗೆ ಚಿಂತೆ. ಶಾಲಾಭ್ಯಾಸದಿಂದ ವಂಚಿತನಾದ ಮಗ ಸಂಗೀತವನ್ನಾದರೂ ಕಲಿಯಲಿ ಎಂಬುದು ತಾಯಿಯ ಆಶೆ. ಆದರೆ ಮಗ ಕಲಿತು ವಿದ್ಯಾವಂತನಾಗಬೇಕೆಂಬುದು ತಂದೆಯ ಇಚ್ಛೆ. ವಿಧಿಯಿಲ್ಲದೆ ತಂದೆಯವರು ಮಗನಿಗೆ ತಬಲಾ ಕಲಿಯಲು ಅನುವು ಮಾಡಿಕೊಟ್ಟರು. ಬಾಲಕ ಬಸವರಾಜ ೯ ನೇ ವಯಸ್ಸಿನಿಂದಲೇ ತಬಲಾ ಕಲಿಯಲಾರಂಭಿಸಿದ ತಂದೆಯವರು ನಾಲ್ಕಾರು ತಾಲಗಳನ್ನು ಹೇಳಿಕೊಟ್ಟರು. ಅವುಗಳನ್ನೇ ಚೆನ್ನಾಗಿ ಅಭ್ಯಾಸ ಮಾಡಿದ ಬಸವರಾಜ. ಕೇಳುಗರನ್ನು ಮಗ್ನಗೊಳಿಸುತ್ತಿದ್ದ. ಕೆಲದಿನ ಅಲ್ಲಲ್ಲಿ ತಬಲಾ ಕಲಾ ಪ್ರದರ್ಶನ ನೀಡಿದರು. ಕೀರ್ತನಕಾರರ ಜೊತೆ, ದಾಸರ ಹಾಡುಗಳನ್ನು ಹಾಡುವವರ ಜೊತೆ ತಬಲಾ ಸಾಥಿ ಮಾಡಲಾರಂಭ. ೧೯೩೮ ರಲ್ಲಿ ಓರ್ವ ಕೀರ್ತನಕಾರ ಇವರ ತಬಲಾ ಕಲೆ ಕಂಡು ಇದನ್ನು ಸದುಪಯೋಗಪಡಿಸಬೇಕೆಂದು, ಬಾಲಕನ್ನು ದೊಡ್ಡ ತಬಲಾ ಕಲಾವಿದರಲ್ಲಿ ಅಭ್ಯಾಸ ಕಲಿಸುವ ಏರ್ಪಾಡು ಮಾಡಬೇಕೆಂದು ತಂದೆಗೆ ಸ್ಫೂರ್ತಿ ನೀಡಿದರು. ಅದರ ಫಲವಾಗಿ ಶಂಕ್ರಪ್ಪ ಉಸ್ತಾದ ಮೆಹಬೂಬ ಸಾಹೇಬ ಮಿರಜಕರ ಅವರನ್ನು ಮನೆಗೆ ಕರೆಯಿಸಿ ಮಗನಿಗೆ ತಬಲಾ ವಿದ್ಯೆ ಕಲಿಸಲಾರಂಭಿಸಿದರು. ಅಲ್ಲಿ ಎರಡು ವರ್ಷ ಅಭ್ಯಾಸ ಮಾಡಿದರು.

೧೯೪೦ ರಲ್ಲಿ ಮೆಹಬೂಬ ಸಾಹೇಬರು ಬೆಳಗಾಂವಿಯನ್ನು ಬಿಟ್ಟು ಕೊಲ್ಹಾಪೂರಕ್ಕೆ ಹೋದರು. ಆ ಅವಧಿಯ ಎರಡು ವರ್ಷ ಮತ್ತೆ ಅಭ್ಯಾಸಕ್ಕೆ ತಡೆಯಾಯಿತು. ಮತ್ತೆ ೧೯೪೨ ರಿಂದ ೪೫ ರ ವರೆಗೆ ಪುಣೆ, ಕೊಲ್ಹಾಪೂರಗಳಲ್ಲಿ ಗುರುಗಳ ಮನೆಯಲ್ಲಿದ್ದು ಕೊಂಡು ತಬಲಾ ವಿದ್ಯೆ ಮುಂದುವರೆಸಿದರು. ಹೀಗೆ ಅವರು ಗುರುಗಳ ಹತ್ತಿರ ಆರೇಳು ವರ್ಷ ಅಭ್ಯಾಸ ಕಲಿತು, ಸತತ ಪರಿಶ್ರಮಪಟ್ಟರು. ಅದರ ಫಲವಾಗಿ ಕೆಲವೇ ದಿನಗಳಲ್ಲಿ ಅವರೊಬ್ಬ ಉತ್ತಮ ತಬಲಾ ಕಲಾವಿದರಾಗಿ ಸಂಗೀತ ಪ್ರಪಂಚದಲ್ಲಿ ಸೇವೆ ಸಲ್ಲಿಸಲಾರಂಭಿಸಿದರು.

ಅಖಿಲ ಭಾರತ ಖ್ಯಾತಿವೆತ್ತ ಕರ್ನಾಟಕದ ಹಲವಾರು ಸಂಗೀತ ಕಲಾವಿದರು ಪರಿಪೂರ್ಣ ಸಂಗೀತಗಾರರಾಗಿ ಹೊರಬರುವ ಮುನ್ನ ಹತ್ತಾರು ವರ್ಷ ರಂಗಭೂಮಿಯಲ್ಲಿದ್ದವರೇ. ಆದರೆ ಈ ಮಾತಿಗೆ ಬೆಂಡಿಗೇರಿಯವರು ಅಪವಾದ. ಅವರು ಯಾವುದೇ ನಾಟಕ ಕಂಪನಿಯಲ್ಲಿ ಕೆಲಸ ಮಾಡಿದವರಲ್ಲ ಹತ್ತಾರು ವರ್ಷ ಗುರುಗಳ ಗರಡಿಯಲ್ಲಿ ಸಾಧನೆ ಮಾಡಿ ನೇರವಾಗಿ ಸಂಗೀತ ಕ್ಷೇತ್ರಕ್ಕೆ ಬಂದವರು. ಅಂತೆಯೇ ಅವರು ಇತರ ಕಲಾವಿದರಂತೆ ಕಲಾ ಬದುಕಿನಲ್ಲಿ ಕಷ್ಟದ ದಿನಗಳನ್ನು ಕಂಡವರಲ್ಲ. ಹಾಗೆ ನೋಡಿದರೆ ಬೆಂಡಿಗೇರಿಯವರದು ಪಾರಂಪರಿಕ ಸಂಗೀತ ಮನೆತನವೇನಲ್ಲ. ಯೋಗ್ಯ ಗುರುಗಳ ಮಾರ್ಗದರ್ಶನ ಸತತ ಪರಿಶ್ರಮ, ಅಭಿಮಾನಿಗಳ ಪ್ರೋತ್ಸಾಹ ಇವುಗಳಿಂದಲೇ ಹೆಸರು ಸಂಪಾದಿಸಿದವರು.

''ಗಾಯನದಲ್ಲಿ ಹಲವು ಘರಾಣೆಗಳಿರುವಂತೆ, ತಬಲಾ ವಾದನದಲ್ಲೂ ಹಲವು ಘರಾಣೆಗಳುಂಟು. ಗಾಯನದ ಘರಾಣೆಗಳಿಗೆ ಗಾಯಕಿ ಅಂಗವೆಂದು ಕರೆದರೆ, ತಬಲಾ ಕಲೆಯಲ್ಲಿ ಬಾಜ್ ಎಂದು ಕರೆಯುವುದುಂಟು. ಬೆಂಡಿಗೇರಿಯವರ ತಬಲಾ ಕಲೆ ಪೂರಬ್ ಬಾಜ್ ಹಾಗೂ ದಿಲ್ಲಿ ಬಾಜ್‌ಗೆ ಸೇರಿದ್ದು. ವಿವಿಧ ಘರಾಣೆಗಳ ವೈಶಿಷ್ಟ್ಯಗಳನ್ನರಿತು ಸಾಥ ಮಾಡುವುದು ಅವರ ಕಲೆಯ ವೈಶಿಷ್ಟ್ಯ. ಕಚೇರಿಗೆ ತಕ್ಕಂತೆ ಸಾಥ ಮಾಡುವುದು ಕಲಾವಂತಿಕೆಯ ಹಿರಿಮೆಯನ್ನು ಎತ್ತಿ ತೋರಿಸುತ್ತದೆ. ಘರಾಣೆಗಳ ಮಹತ್ವವನ್ನರಿತು ಸಮರ್ಥವಾಗಿ ಸಾಥ ಮಾಡುವಲ್ಲಿ ಬೆಂಡಿಗೇರಿಯವರದು ಬಹು ವಿದ್ವತ್ ಪ್ರತಿಭೆ. ತಬಲಾ ಸ್ವತಂತ್ರವಾದನ ನುಡಿಸುವಲ್ಲಿಯೂ ಅವರದು ಎತ್ತಿದ ಕೈ. ಲಯದ ಬಿಗಿಬಂಧ. ಹಿತಮಿತವಾದ ಸಾಥ ಸಂಗತ್ ಅವರ ವಾದನದ ವೈಶಿಷ್ಟ್ಯ. ಈ ಸಂಗಿತಿಗಳೇ ಓರ್ವ ಕಲಾವಿದನನ್ನು ಎತ್ತರಕ್ಕೆ ತರುವಂತಹವು. ಬೆಂಡಿಗೇರಿಯವರು ಈ ಎಲ್ಲ ಉತ್ತಮಾಂಶಗಳನ್ನು ಹೊತ್ತ ಪೂರ್ಣ ಕಲಾವಿದರು''[೪೭] ಎಂದು ಡಾ.ಕನವಳ್ಳಿಯವರು ಬರೆಯುತ್ತಾರೆ.

ತಂದೆಯ ಸಹಕಾರ, ಕೀರ್ತನಕಾರರ ಸ್ಫೂರ್ತಿ, ಮೆಹಬೂಬ ಸಾಹೇಬ ಗುರುಗಳ ಶಿಷ್ಯತ್ವ ಬೆಂಡಿಗೇರಿಯವರನ್ನು ಒಬ್ಬ ಕಲಾವಿದರನ್ನಾಗಿಸಿದವು. ಸಂಗೀತ ಕಲಿಕೆಯ ಆರಂಭದಲ್ಲಿಯೇ ಸಾರ್ವಜನಿಕ ಕಾರ್ಯಕ್ರಮ ಕೊಡಲಾರಂಭ. ೧೯೩೯ ರಲ್ಲಿ ಸ್ವರ್ಗೀಯ ಪಂ. ಸವಾಯಿ ಗಂಧರ್ವರ ಸಲಹೆಯ ಮೇರೆಗ ಮುಂಬೈ ಆಕಾಶವಾಣಿ ಕೇಂದ್ರದಲ್ಲಿ ಕೆಲಹೊತ್ತು ತಬಲಾ ಸ್ವತಂತ್ರವಾದನ ಪ್ರದರ್ಶನ. ಸವಾಯಿ ಗಂಧರ್ವರಿಂದ ಭೇಷ್ ಎಂಬ ಅಗ್ಗಳಿಕೆ. ೧೯೪೫ ರಿಂದ ೫೦ ರ ವರೆಗೆ ಮುಂಬೈ ಆಕಾಶವಾಣಿ ಕೇಂದ್ರದಿಂದ ತಬಲಾ ಕಲಾ ಪ್ರದರ್ಶನ. ಆಗ ಅದೇ ತಾನೆ ಪ್ರಾರಂಭಗೊಂಡ ಧಾರವಾಡ ಆಕಾಶವಾಣಿಯಲ್ಲಿ ೧೯೫೦ ರಿಂದ ತಬಲಾ ಕಲಾ ಪ್ರದರ್ಶನ. ಅಲ್ಲಲ್ಲಿ ಅಲೆದಾಟ ಬಿಟ್ಟು ಧಾರವಾಡದಲ್ಲಿಯೇ ವಾಸ್ತವ್ಯ.

ಧಾರವಾಡ ಒಂದರ್ಥದಲ್ಲಿ ಬುದ್ಧಿಜೀವಿ, ಕಲಾವಿದರ ತವರು ಮನೆ. ಧಾರವಾಡ ಆಕಾಶವಾಣಿ ಕೇಂದ್ರದಿಂದ ತಬಲಾ ಕಲಾ ಪ್ರದರ್ಶನದ ಜೊತೆಗೆ ನಾಡಿನಾದ್ಯಂತ ಸಂಗೀತ ಕಲಾ ಸೇವೆ. ಸಾರ್ವಜನಿಕ ಕಾರ್ಯಕ್ರಮಗಳ ಆಧಾರವೇ ಕುಟುಂಬದ ಆರ್ಥಿಕಾಧಾರ. ಕಲಾವಿದರ ಬದುಕಿನಲ್ಲಿ ಕಷ್ಟದ ದಿನಗಳಿಗೇನೂ ಕೊರತೆಯಿಲ್ಲ. ಆದರೆ ಅಂತಹ ತೊಂದರೆ ಬದುಕು ಇವರದಲ್ಲ.

ಕರ್ನಾಟಕದ ಹಿಂದಿನ ಮುಖ್ಯಮಂತ್ರಿಗಳಾದ ಶ್ರೀ ವೀರೇಂದ್ರಪಾಟೀಲರು ಒಮ್ಮೆ ಧಾರವಾಡದ ಇತಿಹಾಸ ಪ್ರಸಿದ್ಧವಾದ ಕರ್ನಾಟಕ ಕಾಲೇಜಿಗೆ ಭೇಟಿ ಕೊಟ್ಟಾಗ, ಹಿಂದುಸ್ತಾನಿ ಸಂಗೀತದ ವಿಖ್ಯಾತ ಗಾಯಕ ಡಾ. ಮಲ್ಲಿಕಾರ್ಜುನ ಮನಸೂರ ಅವರು ಮುಖ್ಯಮಂತ್ರಿಯವರಿಗೆ ಮನವಿಯೊಂದನ್ನು ಅರ್ಪಿಸಿ, ಕಲಾ ಜೀವಿಗಳ ತವರುಮನೆಯಾದ ಧಾರವಾಡದಲ್ಲಿ ಕಾಲೇಜುಮಟ್ಟದ ಸಂಗೀತ ಕಲಿಯಲು ಅವಕಾಶ ಮಾಡಿಕೊಡಬೇಕೆಂದು ವಿನಂತಿಸಿಕೊಂಡರು. ಮನ್ಸೂರರ ಮನವಿಯ ಫಲವಾಗಿ ಮುಖ್ಯಮಂತ್ರಿಯವರು ಕರ್ನಾಟಕ ಕಾಲೇಜಿನಲ್ಲಿ

೪೭. ಕಲಾಚೇತನ : ಡಾ. ಸದಾನಂದ ಕನವಳ್ಳಿ, ಪುಟ-೩೦೯

ಸಂಗೀತ ವಿಭಾಗ ಆರಂಭಿಸಿದರು. ಈ ಶ್ರೇಯಸ್ಸು ಡಾ.ಮನ್ಸೂರ ಅವರಿಗೆ ಸಲ್ಲಬೇಕು. ಅದೇ ತಾನೆ ಹೊಸದಾಗಿ ಆರಂಭಗೊಂಡ ಕರ್ನಾಟಕ ಕಾಲೇಜಿನ ಸಂಗೀತ ವಿಭಾಗದಲ್ಲಿ ಬಸವರಾಜ ಬೆಂಡಿಗೇರಿಯವರು ೨೦-೧೧-೧೯೬೧ ರಲ್ಲಿ ತಬಲಾ ಪ್ರಾಧ್ಯಾಪಕರಾಗಿ ವೃತ್ತಿಗಾರಂಭಿಸಿದರು. ಅದೇ ಕಾಲೇಜಿನಲ್ಲಿ ಅವರು ೨೭ ವರ್ಷಗಳ ಸುದೀರ್ಘ ಸೇವೆ ಸಲ್ಲಿಸಿ, ತಮ್ಮ ೬೦ ನೇ ವಯಸ್ಸಿನಲ್ಲಿ ೧೯೮೮ ರ ಸೆಪ್ಟೆಂಬರ್‌ದಲ್ಲಿ ವೃತ್ತಿಯಿಂದ ನಿವೃತ್ತರಾಗಿದ್ದಾರೆ. ವೃತ್ತಿಯಿಂದ ನಿವೃತ್ತರಾದರೂ ಸಹ ಅವರ ಸಂಗೀತ ಪ್ರವೃತ್ತಿ ದಿನೇ ದಿನೇ ಪಕ್ವವಾಗುತ್ತಿದೆ. ಅವರ ಜೀವನದ ಅನುಭವಗಳು ಯುವಕರ ಮೇಲೆ ಅಚ್ಚಳಿಯದೇ ಪ್ರಭಾವ ಬೀರುವಂತಹವು. ಅವರ ಸ್ಮರಣ ಶಕ್ತಿ ಅಗಾಧ. ದೃಷ್ಟಿ ಮಾಂದ್ಯವಿದ್ದರೂ ಸಹ ಹೆಜ್ಜೆಯ ಮೇಲೆ ವ್ಯಕ್ತಿಯನ್ನು ಗುರುತಿಸುವ ಅವರ ಅಂತಃಚಕ್ಷುಗಳು ಬಲು ಪ್ರಬಲ.

ಬೆಂಡಿಗೇರಿಯವರು ಧಾರವಾಡ ಆಕಾಶವಾಣಿಯ 'ಎ' ಶ್ರೇಣಿಯ ಕಲಾವಿದರು. ಧಾರವಾಡ ಕೇಂದ್ರದ ಮೂಲಕ ಅವರು ಬೆಂಗಳೂರು, ಪಾಂಡಿಚೇರಿ, ಪುಣೆ, ಮುಂಬೈ, ಬಡೋದಾ, ಅಹಮದಾಬಾದ, ಇಂದೋರ, ನಾಗಪುರ, ದೆಹಲಿ, ರಾಜಕೋಟ ಮುಂತಾದ ಆಕಾಶವಾಣಿ ಕೇಂದ್ರಗಳಲ್ಲಿ ತಬಲಾ ಕಲಾ ಪ್ರದರ್ಶನ ನೀಡಿದ್ದಾರೆ. ಆಕಾಶವಾಣಿ ನಡೆಸುವ ಅಖಿಲ ಭಾರತ ರೇಡಿಯೋ ಸಂಗೀತ ಸಮ್ಮೇಲನಗಳಲ್ಲಿ, ಅಖಿಲ ಭಾರತ ರಾಷ್ಟ್ರೀಯ ರೇಡಿಯೋ ಕಾರ್ಯಕ್ರಮಗಳಲ್ಲಿ ಅವರು ಭಾಗವಹಿಸಿ ತಮ್ಮ ಕಲೆ ಪ್ರದರ್ಶಿಸಿದ್ದಾರೆ. ೧೯೪೬ ರಲ್ಲಿ ಅಲಹಾಬಾದದಲ್ಲಿ, ೧೯೫೮ ರಲ್ಲಿ ಕರಾಡದಲ್ಲಿ ಮತ್ತು ಅದೇ ವರ್ಷ ಕೊಲ್ಹಾಪುರದಲ್ಲಿ ನಡೆದ ಸಂಗೀತ ಸಮ್ಮೇಲನಗಳು ಅವಿಸ್ಮರಣೀಯ. ರೇಡಿಯೋ ಸಂಗೀತ ಸಮ್ಮೇಳನಗಳ ಜೊತೆ ಜೊತೆಗೆ ಹಲವಾರು ಖಾಸಗಿ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದಾರೆ. ಅವರು ಭಾರತದ ಉದ್ದಗಲಕ್ಕೂ ಸಂಚರಿಸಿ ಹಲವಾರು ಶ್ರೇಷ್ಠ ಕಲಾವಿದರಾದ ಸರ್ವಶ್ರೀ ಮಲ್ಲಿಕಾರ್ಜುನ ಮನಸೂರ, ಬಸವರಾಜ ರಾಜಗುರು, ಬಾಲಗಂಧರ್ವ, ಶ್ರೀಮತಿ ಮೋಗೂಬಾಯಿ ಕುರಡೀಕರ, ಭೀಮಸೇನ ಜೋಶಿ. ವಿಲಾಯತ್ ಹುಸೇನಖಾನ, ಅನಂ ಮನೋಹರ ಜೋಶಿ, ಬಿ. ಆರ್. ದೇವಧರ, ಜೋತ್ಸ್ನಾ ಭೋಳೆ, ಸರಸ್ವತಿ ರಾಣೆ, ಗಜಾನನ ಬುವಾ ಜೋಶಿ, ಜಗನ್ನಾಥ ಬುವಾ, ಡಿ.ವಿ. ಪಲುಸ್ಕರ, ಖಾದಿಂಹುಸೇನ, ಬಿಬ್ಬೀಖಾನ, ರವಿಶಂಕರ, ವ್ಹಿ. ಜಿ. ಜೋಗ, ಅಲಿ ಅಕ್ಬರಖಾನ, ಅಲ್ಲಾವುದ್ದೀನಖಾನ, ಶ್ರೀಧರ ಸಾರ್ಸೇಕರ, ಮಾಣಿಕವರ್ಮಾ, ಕಿಶೋರಿ ಅಮೋಣಕರ ಮುಂತಾದವರ ಜೊತೆ ತಬಲಾ ಸಾಥಿ ನೀಡಿದ್ದಾರೆ.

ಬೆಂಡಿಗೇರಿಯವರ ತಬಲಾ ಕಲೆಯ ಮೇಲೆ ಪ್ರಭಾವ ಬೀರಿದವರೆಂದರೆ, ಸ್ವತಂತ್ರ ತಬಲಾ ವಾದನದಲ್ಲಿ ಅವರ ಗುರುಗಳಾದ ಉಸ್ತಾದ ಮೆಹಬೂಬಸಾಹೇಬ ಮಿರಜಕರ, ಉಸ್ತಾದ ಅಹಮದಜಾನ ತಿಂಖವಾ ಮತ್ತು ಹಬೀಬುದ್ದೀನಖಾನ ಅವರುಗಳು ಸಾಥ ಮಾಡುವುದರಲ್ಲಿ ರಾಮರಾವ್ ಮಂಗೇಶ್ಕರ, ಅಲ್ಲಾರಖಾ ಹಾಗೂ ಮಹಮ್ಮದ ಅವರುಗಳು.

ಬಸವರಾಜ ಬೆಂಡಿಗೇರಿಯವರ ಶಿಷ್ಯ ಬಳಗ ಅಪಾರ. ಸುಮಾರು ೧೫ ಕ್ಕೂ ಮಿಕ್ಕಿ ತಬಲಾ ಕಲಾವಿದರು ಇವರಲ್ಲಿ ತಯಾರಾಗಿದ್ದಾರೆ. ಅಂಥವರಲ್ಲಿ ಕೆಲವರು ರೇಡಿಯೋ ಕೇಂದ್ರದಲ್ಲಿ, ಕಾಲೇಜಿನಲ್ಲಿ ಸಂಗೀತ ವೃತ್ತಿ ನಿರತರು. ಇನ್ನೂ ಕೆಲವರು ಅದನ್ನೇ ಹವ್ಯಾಸವಾಗಿರಿಸಿಕೊಂಡು ಸ್ವತಂತ್ರ ಕಾರ್ಯಕ್ರಮ ಕೊಡುತ್ತಿರುವರು. ಅವರ ಶಿಷ್ಯ ಬಳಗದಲ್ಲಿ ಸರ್ವಶ್ರೀ ಎಸ್.ಪಿ.ವೇರ್ಣೆಕರ, ಡಾ. ಆರ್. ಎಸ್. ಹಿರೇಮಠ, ಎಸ್. ಎನ್. ಮುಜುಮದಾರ, ರಘುನಾಥ ನಾಕೋಡ, ವೀರಣ್ಣ ಕಾಮಕರ, ಎಂ. ಎಸ್. ಆರಾಧ್ಯಮಠ, ಪ್ರೊ. ಎಸ್.ಸಿ. ಬಳ್ಳೂರ, ಆರ್.ಜಿ. ಜೋಶಿ, ಎಸ್.ವ್ಹಿ. ದೇಶಪಾಂಡೆ, ಪ್ರಕಾಶ ಕಾಮತ, ಜಿ. ಎ. ಕುಲಕರ್ಣಿ, ನೀಲಕಂಠ ಬಡಿಗೇರ, ಎಸ್. ಎಮ್. ನಿಡಗುಂದಿ, ವಿರೂಪಾಕ್ಷ ಬಡಿಗೇರ, ನಂದಿಕೇಶ್ವರ ಗುರವ ಹಾಗೂ ಶಾಂತಲಿಂಗ ಹೂಗಾರ ಇನ್ನೂ ಅನೇಕರು ಉತ್ತಮ ಕಲಾವಿದರಾಗಿದ್ದಾರೆ.

ಬೆಂಡಿಗೇರಿಯವರಿಗೆ ಸಮಾಜ ಹಾಗೂ ಸಂಘ ಸಂಸ್ಥೆಗಳು ನೀಡಿರುವ ಸನ್ಮಾನಗಳು ಅನೇಕ. ಆದರೆ ಅವರ ಕಲೆಯ ಮುಂದೆ ಅವುಗಳೆಲ್ಲ ಗೌಣ. ಅವರ ಕಲಾ ತಪಸ್ಸನ್ನು ಗುರುತಿಸಿ ಕರ್ನಾಟಕ ರಾಜ್ಯ ಸಂಗೀತ ನೃತ್ಯ ಅಕಾಡೆಮಿ ೧೯೮೩-೮೪ ನೇ ವರ್ಷದಲ್ಲಿ ಪ್ರಶಸ್ತಿ ನೀಡಿ ಗೌರವಿಸಿದೆ. ಈ ಯಾವ ಪ್ರಶಸ್ತಿ, ಪುರಸ್ಕಾರಗಳಿಗೂ ಅವರು ಗಮನಕೊಡದೆ ಸಂಗೀತ ಶಾರದೆಯ ಸೇವೆಯಲ್ಲಿ ಸದಾ ನಿರತರಾಗಿ ತಮ್ಮನ್ನೇ ತಾವು ಮರೆಯುತ್ತಾರೆ. ಇಂತಹ ಕಲಾವಿದರು ರಾಷ್ಟ್ರದ ನಿಜವಾದ ಚೇತನ ಸಂಪತ್ತು.

**೫.೧೭.ಪಂ. ಶೇಷಗಿರಿ ಹಾನಗಲ್**

ರಾಷ್ಟ್ರೀಯ ಹಾಗೂ ಅಂತಾರಾಷ್ಟ್ರೀಯ ಖ್ಯಾತಿಯ ಹಿಂದುಸ್ತಾನಿ ಗಾಯಕರಲ್ಲಿ ಕನ್ನಡಿಗರ ಸಂಖ್ಯೆ ಅಧಿಕ. ತಬಲಾ ವಾದನದಲ್ಲಿ ಆ ಮಟ್ಟದ ಖ್ಯಾತಿ ಪಡೆದ ಕಲಾವಿದರ ಸಂಖ್ಯೆ ಕಡಿಮೆ. ಅಂತಹ ಕಡಿಮೆ ಸಂಖ್ಯೆ ಕಲಾವಿದರಲ್ಲಿ ಆ ಎತ್ತರದ ಖ್ಯಾತಿ ಪಡೆದ ತಬಲಾ ಕಲಾವಿದರಲ್ಲಿ ಪಂ. ಶೇಷಗಿರಿ ಹಾನಗಲ್ಲರು ಒಬ್ಬರು.

ಪಂ. ಶೇಷಗಿರಿ ಹಾನಗಲ್ಲ ಅವರು ಜನಿಸಿದ್ದು ಧಾರವಾಡದಲ್ಲಿ ೧೯೨೨ ರ ಅಕ್ಟೋಬರ ೧೦ ರಂದು. ಅವರದು ಪರಂಪರಾಗತ ಸಂಗೀತ ಮನೆತನ. ಹುಟ್ಟು ಅಂಗ ವಿಕಲರಾಗಿ ಜನ್ಮ ತಳೆದು ಬಂದ ಶೇಷಗಿರಿಯವರಿಗೆ ಎಳವೆಯಿಂದಲೇ ಸಂಗೀತದ ಆಸಕ್ತಿ ಬೆಳೆದು ಬಂದಿತು. ಅವರ ಆಸಕ್ತಿಗನುಗುಣವಾಗಿ ಅವರ ತಂದೆ ತತ್ಕಾಲೀನ ಜನಪ್ರೀಯ ತಬಲಾ ವಾದಕ ಶ್ರೀಕೃಷ್ಣರಾವ ಹಾನಗಲ್ಲರಲ್ಲಿ ಮಗನ ತಬಲಾವಾದನಕ್ಕೆ ಶ್ರೀಕಾರ ಹಾಕಿಸಿದರು. ಕೃಷ್ಣರಾವ ಅವರ ಸಹೋದರ ಶ್ರೀರಾಮರಾವ್ ಹಾನಗಲ್ಲ ಅವರೂ ಸಹ ಶೇಷಗಿರಿಯವರಿಗೆ ತಬಲಾ ಶಿಕ್ಷಣ ನೀಡಿದರು. ಶ್ರೀರಾಮರಾವ್ ಹಾನಗಲ್ಲರು ಆಗಿನ ಕಾಲದ ಹೆಸರಾಂತ ತಬಲಾವಾದಕರಲ್ಲೊಬ್ಬರು.

ತಂದೆ ಹಾಗೂ ಚಿಕ್ಕಪ್ಪಂದಿರಲ್ಲಿ ತಬಲಾ ಶಿಕ್ಷಣವನ್ನು ಪಡೆದು ಹೆಚ್ಚಿನ ತಬಲಾ ವಿದ್ಯೆಯ ಸಂಪಾದನೆಗಾಗಿ ಶೇಷಗಿರಿಯವರು ಭಾರತಧ ಸಾಂಸ್ಕೃತಿಕ ರಾಜಧಾನಿಯೆನಿಸಿರುವ ಮುಂಬೈಗೆ ಬಂದರು. ಉಸ್ತಾದ್

ಜಹಾಂಗಿರಖಾನರ ಶಿಷ್ಯ ಪಂ.ನಾರಾಯಣರಾವ ಇಂದೋರಕರ ಅವರ ಶಿಷ್ಯತ್ವ ವಹಿಸಿ ಶೇಷಗಿರಿಯವರು ತಬಲಾದಲ್ಲಿ ವಿಶೇಷ ಪರಿಣತಿ ಪಡೆದರು. ಸುಪ್ರಸಿದ್ಧ ತಬಲಾಕಲಾವಿದ ಉಸ್ತಾದ್ ಅಹಮದ್‌ಜಾನ ತಿರಕವಾರರ ಶಿಷ್ಯ ಪಂ. ಲಾಲಜಿ ಗೋಖಲೆ ಅವರ ಹತ್ತಿರ ಶೇಷಗಿರಿಯವರು ಕೆಲವು ವರ್ಷ ತಬಲಾ ಶಿಕ್ಷಣ ಪಡೆದುಕೊಂಡರು.

''ತಂದೆಯಿಂದ ಮೊದಲ್ಗೊಂಡು ನಾಲ್ಕು ಜನ ಮಹಾನ್ ತಬಲಾ ಕಲಾವಿದರಲ್ಲಿ ತಬಲಾದ ವಿವಿಧ ಬಾಜ್‌ಗಳನ್ನು ಅಭ್ಯಾಸ ಮಾಡಿದ ಪಂ. ಶೇಷಗಿರಿ ಹಾನಗಲ್ಲರು ಇಂದು ದೇಶದ ಒಬ್ಬ ಪ್ರತಿಷ್ಠಿತ ತಬಲಾ ಕಲಾವಿದರಲ್ಲಿ ಒಬ್ಬರೆನಿಸಿದ್ದಾರೆ. ಕಠಿಣತಮ ಸಾಧನೆ, ಅನೇಕ ಗುರುಗಳ ವಿದ್ಯಾಸಂಗ್ರಹಗಳ ಫಲವಾಗಿ ಅವರಿಂದು ತಬಲಾದ ಮೊದಲ ಶ್ರೇಣಿ ಕಲಾವಿದರಲ್ಲಿ ಅಗ್ರ ಪಂಕ್ತಿಯಲ್ಲಿದ್ದಾರೆ. ಅವರು ಹುಟ್ಟು ಅಂಗವಿಕಲರಾಗಿದ್ದರೂ ಸಹ ಅವರ ಕಲಾ ಬದುಕಿಗೆ ಮಾತ್ರ ಯಾವುದೇ ವಿಕಲತೆ ಇಲ್ಲ. ಮನುಷ್ಯ ಛಲತೊಟ್ಟು ಸಾಧನೆ ಮಾಡಿದರೆ ಅಸಾಧ್ಯವಾದುದು ಯಾವುದು ಇಲ್ಲವೆನ್ನುವುದಕ್ಕೆ ಶೇಷಗಿರಿಯವರ ಜೀವನವೇ ಉತ್ತಮ ಉದಾಹರಣೆ''[೪೮] ಎಂದು ಶ್ರೀ ಸಿದ್ಧರಾಮಯ್ಯ ಮಠಪತಿ ಅವರು ಬರೆಯುತ್ತಾರೆ. ಕಾಲುಗಳನ್ನು ಕಳೆದುಕೊಂಡ ಅವರು ಬಡಿಗೆಯ ಸಹಾಯದಿಂದ ನಡೆಯುತ್ತ ವೇದಿಕೆಯ ಮೇಲೆ ಕುಳಿತು ತಬಲಾದ ಮೇಲೆ ಅವರು ಕೈ ಹಾಕಿದರೆ ಅವರನ್ನು ಕಂಡ ಯಾರೂ ಅವರೊಬ್ಬ ಅಂಗವಿಕಲನೆಂಬುದನ್ನು ಒಪ್ಪುವುದಿಲ್ಲ.

ಭಾರತದ ಹೆಸರಾಂತ ಹಿಂದುಸ್ತಾನಿ ಗಾಯಕಿ ಡಾ.ಗಂಗೂಬಾಯಿ ಹಾನಗಲ್ಲ ಶೇಷಗಿರಿಯವರ ಸಹೋದರಿಯಾಗಿದ್ದಾರೆ. ಅಕ್ಕ ಗಂಗೂಬಾಯಿಯವರ ಗಾಯನಕ್ಕೆ ತಮ್ಮ ಶೇಷಗಿರಿಯವರ ತಬಲಾ ಹೇಳಿ ಮಾಡಿಸಿದಂತಹ ಅಪರೂಪದ ತಬಲಾಸಾಥಿ. ಅಕ್ಕಳ ಗಾಯನಕ್ಕೆ ನಿರಂತರ ತಬಲಾ ಸಾಥಿ ನೀಡುತ್ತಿರುವ ಶೇಷಗಿರಿಯವರು ಭಾರತದ ಹೆಸರಾಂತ ಸಂಗೀತಗಾರರಿಗೆ ತಬಲಾಸಾಥಿ ನೀಡಿದ್ದಾರೆ. ಅವರು ನುಡಿಸುವ ಸ್ವತಂತ್ರ ತಬಲಾವಾದನವೂ ಅಷ್ಟೇ ಪಾಂಡಿತ್ಯಪೂರ್ಣ.

ಪಂ. ಶೇಷಗಿರಿ ಹಾನಗಲ್ಲರವರು ತಬಲಾ ವಾದನದಲ್ಲಿ ಲಖನೌ ಹಾಗೂ ಪೂರಬ್ ಘರಾಣೆಯ ಬಾಜ್ ಜೊತೆಗೆ ದೆಹಲಿ, ಅಜರಾಡಾ ಮತ್ತು ಪಂಜಾಬ ಘರಾಣೆಯ ಬಾಜ್‌ಗಳು ತುಂಬ ಸಮೃದ್ಧ. ಅವರ ಸ್ವತಂತ್ರ ತಬಲಾವಾದನದ ಪ್ರಥಮ ಕಾರ್ಯಕ್ರಮ ನೆರವೇರಿದ್ದು ೧೯೪೯ ರಲ್ಲಿ ಅದು ಮುಂಬೈ ಆಕಾಶವಾಣಿಯ ಮೂಲಕವಾಗಿ. ಅದು ಅಪಾರ ಸಂಖ್ಯೆಯ ಶ್ರೋತೃಗಳನ್ನು ಆಕರ್ಷಿಸಿತು. ಆಕಾಶವಾಣಿಯ 'ಎ' ಗ್ರೇಡ್ ಕಲಾವಿದರಾಗಿ ಅವರು ೧೯೫೧ ರಿಂದ ೧೯೮೩ ರ ವರೆಗೆ ಧಾರವಾಡ ಆಕಾಶವಾಣಿಯ ನಿಲಯದ ತಬಲಾ ಕಲಾವಿದರಾಗಿ ಸೇವೆ ಸಲ್ಲಿಸಿ ಇಂದು ನಿವೃತ್ತಿ ಜೀವನ ನಡೆಸುತ್ತಿದ್ದಾರೆ.

---

೪೮. ಹಿಂದುಸ್ತಾನಿ ಸಂಗೀತಗಾರರು ಸಂ-೨ : ಶ್ರೀ ಸಿದ್ಧರಾಮಯ್ಯ ಮಠಪತಿ, ಪುಟ-೧೧೮

ದೇಶದ ವಿವಿಧ ಸಂಗೀತ ಸಮ್ಮೇಳನಗಳಲ್ಲಿ, ವಿವಿಧ ನಗರಗಳಲ್ಲಿ ತಬಲಾವಾದನ ನುಡಿಸಿ ಅವರು ಹೆಸರು ಪಡೆದಿದ್ದಾರೆ. ೧೯೫೨ ರಲಿ ಅಖಿಲ ಭಾರತ ರೇಡಿಯೋ ಸಂಗೀತ ಸಮ್ಮೇಳನದಲ್ಲಿ ಡಾ.ಗಂಗೂಬಾಯಿ ಹಾನಗಲ್ಲ ಅವರ ಗಾಯನಕ್ಕೆ ತಬಲಾ ಸಾಥ ನೀಡಿ ಅಪಾರ ಜನಪ್ರಿಯತೆ ಗಳಿಸಿದ್ದಾರೆ. ವಿವಿಧ ರೇಡಿಯೋ ಕೇಂದ್ರಗಳಿಂದ ಮತ್ತು ದೂರದರ್ಶನ ಕೇಂದ್ರಗಳಿಂದ ಅವರ ತಬಲಾ ಕಾರ್ಯಕ್ರಮಗಳು ಪ್ರಸಾರಗೊಂಡಿವೆ. ಡಾ.ಗಂಗೂಬಾಯಿ ಹಾನಗಲ್ಲ ಅವರೊಂದಿಗೆ ಪಂ.ಶೇಷಗಿರಿಯವರು ವಿದೇಶಗಳಲ್ಲಿ ತಬಲಾ ಕಾರ್ಯಕ್ರಮ ನೀಡಿ ಖ್ಯಾತಿ ಪಡೆದಿದ್ದಾರೆ.

ಪಂ.ಶೇಷಗಿರಿ ಹಾನಗಲ್ಲರು ಒಬ್ಬ ಸೃಜನಶೀಲ ಕಲಾವಿದರು. ಅವರು ೯ ೧/೨ ಮಾತ್ರಾದ ತಾಲವನ್ನು ಕಂಡು ಹಿಡಿದು ಅದಕ್ಕೆ 'ಇಂದಿರಾ' ತಾಲವೆಂದು ಹೆಸರಿಟ್ಟಿದ್ದಾರೆ. ಗಂಗಚಲನವೆಂಬ ಶೈಲಿಯನ್ನು ಕೂಡಾ ರಚನೆ ಮಾಡಿದ್ದಾರೆ. ಅನೇಕ ತಾಲಗಳಲ್ಲಿ ಅವರು ವಿವಿಧ ಪೇಷ್ಕಾರ, ಕಾಯದಾ, ರೇಲಾ, ಚಕ್ರಧಾರಗತ್‌ಗಳನ್ನು ರಚಿಸಿದ್ದಾರೆ.

ಅವರ ಶಿಷ್ಯ ಸಂಪತ್ತು ಅಪಾರ. ಅಂಥವರಲ್ಲಿ ಸೂರಜ್ ಪುರಂದರೆ, ರವೀಂದ್ರ ಯಾವಗಲ್, ಸಂಜೀವ ಪೋತದಾರ,ಗೋಪಾಲಕೃಷ್ಣ ಹೆಗಡೆ, ರಮೇಶ ಜೋಶಿ, ರಾಮಚಂದ್ರ ಉಪಾಧ್ಯಾಯ, ಶ್ರೀಪಾದ ಮುಳಗುಂದ, ವಿನಾಯಕ ಪಾಟೀಲ, ಎಂ ನಾಗೇಶ, ಯಾತ್ರಿಕ, ಉದಯರಾಜ ಕರಪೂರ, ಸೋಮಶೇಖರ ಹೊಳಗುಂದಿ ಮತ್ತು ಶೇಷಗಿರಿಯವರ ಮಗ ಅಜೇಯ ಹಾನಗಲ್ಲ ಮುಂತಾದವರು ಉಲ್ಲೇಖನೀಯರಾಗಿದ್ದಾರೆ. ಶ್ರೀ ಸೂರಜ್‌ಪುರಂದರೆ ಬಿ ಹೈಯ್ ಗ್ರೇಡ್ ಕಲಾವಿದರಾಗಿ ಧಾರವಾಡ ಆಕಾಶವಾಣಿಯ ನಿಲಯದ ಕಲಾವಿದರಾಗಿ, ಶ್ರೀ ರವೀಂದ್ರ ಯಾವಗಲ್ ಎ ಗ್ರೇಡ್ ಕಲಾವಿದರಾಗಿ, ಬೆಂಗಳೂರು ಆಕಾಶವಾಣಿಯ ನಿಲಯದ ಕಲಾವಿದರಾಗಿ, ಕೆಲಸ ಮಾಡುತ್ತಿದ್ದಾರೆ. ಪ್ರೊ. ಸಂಜೀವ ಪೋತದಾರ ಅವರು ಶಿರಸಿಯ ಎಂ. ಎ. ಕಲಾ ಕಾಲೇಜಿನಲ್ಲಿ ತಬಲಾ ಪ್ರಾಧ್ಯಾಪಕರಾಗಿ ಕೆಲಸ ಮಾಡುತ್ತಿದ್ದಾರೆ. ಶೇಷಗಿರಿಯವರ ಶಿಷ್ಯ ರವೀಂದ್ರ ಯಾವಗಲ್‌ರವರು ತಬಲಾದಲ್ಲಿ ಅಪಾರ ಹೆಸರು ಪಡೆದು ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿಗೆ ಪಾತ್ರರಾಗಿದ್ದಾರೆ.

ಅನೇಕ ಜನ ಶಿಷ್ಯರನ್ನು ತಯಾರಿಸಿ, ಮೂರು ದಶಕಕ್ಕೂ ಮಿಕ್ಕಿ ಆಕಾಶವಾಣಿಯಲ್ಲಿ ಕೆಲಸ ಮಾಡಿ, ದೇಶದೆಲ್ಲೆಡೆ ಸಂಗೀತ ಕಾರ್ಯಕ್ರಮ ನೀಡಿ ಹೆಸರು ಪಡೆದಿರುವ ಪಂ. ಶೇಷಗಿರಿ ಹಾನಗಲ್ಲ ಅವರಿಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಬಂದಿವೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ 'ಕರ್ನಾಟಕ ಕಲಾತಿಲಕ' ಹಾಗೂ 'ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ'ಗಳು ಅಂಥವುಗಳಲ್ಲಿ ಉಲ್ಲೇಖನೀಯವಾಗಿವೆ. ಬೆಂಗಳೂರಿನ ವಿಜಯಾ ಇನ್‌ಸ್ಟಿಟ್ಯೂಟ್ ಆಪ್ ಮ್ಯೂಜಿಕ್ ಸಂಸ್ಥೆಯು ಶೇಷಗಿರಿಯವರ ಹೆಸರಿನಲ್ಲಿ ಪ್ರತಿಭಾವಂತ ೩ ಜನ ತಬಲಾ ವಿದ್ಯಾರ್ಥಿಗಳಿಗೆ ಪ್ರತಿವರ್ಷ ೧೦೦ ರೂಪಾಯಿಗಳ ಶಿಷ್ಯ ವೇತನ ನೀಡುತ್ತಿರುವುದು ಅಭಿಮಾನದ ಸಂಗತಿ.

## ೫.೧೮. ಪಂ. ಅರ್ಜುನ ಸಾ ನಾಕೋಡ

ಕರ್ನಾಟಕ ಸಾಂಸ್ಕೃತಿಕ ಕ್ಷೇತ್ರದಲ್ಲಿ ಗದುಗಿಗೆ ತುಂಬ ಗೌರವದ ಸ್ಥಾನವಿದೆ. ಶ್ರೀವೀರನಾರಾಯಣನು ನೆಲನಿಂತ ಈ ನೆಲದಲ್ಲಿ ಸಾಹಿತ್ಯ, ಸಂಗೀತ, ಚಿತ್ರ, ಶಿಲ್ಪ, ರಂಗಭೂಮಿ ಮುಂತಾದ ಕಲೆಗಳು ಸಮೃದ್ಧವಾಗಿ ಬೆಳೆದದ್ದು ಇತಿಹಾಸ ಪ್ರಸಿದ್ಧ ವಿಷಯ. ಸಾಹಿತಿಗಳ, ಕಲಾವಿದರ, ಗವಾಯಿಗಳ ಸಾಧನೆಗೆ ಗರಡಿ ಮನೆಯಾದ ಗದುಗಿಗೆ ನಾಡಿನ ಚರಿತ್ರೆಯಲ್ಲಿ ಸ್ಥಳ ಮಹಿಮೆಯ ಹಿರಿಮೆ ಪ್ರಾಪ್ತವಾಗಿದೆ.

ವೀರೇಶ್ವರ ಪುಣ್ಯಾಶ್ರಮ ಕರ್ನಾಟಕ ಸಂಗೀತ ಸಂತರಿಗೊಂದು ತವರು ಮನೆ. ಸಂಗೀತ-ಸಾಹಿತ್ಯ ಪ್ರಿಯರಿಗೆ ಒಂದು ಯಾತ್ರಾಸ್ಥಳ. ಪುಣ್ಯಾಶ್ರಮ ಇಂದಿನವರೆಗೆ ನೀಡಿದ ಜ್ಞಾನ ದಾಸೋಹದಿಂದ ವಿವಿಧ ರಂಗಗಳಲ್ಲಿ ಅವರ ಶಿಷ್ಯ ಪ್ರಶಿಷ್ಯರನ್ನು ಕಾಣಬಹುದಾಗಿದೆ. ಹೀಗೆ ಸಂಗೀತದಲ್ಲಿ ಸಾಧನೆ ಮಾಡಿ ಸಿದ್ಧಿ ಪಡೆದು ಪ್ರಸಿದ್ಧರಾದವರಲ್ಲಿ ಪಂ. ಅರ್ಜುನ ಸಾ ನಾಕೋಡರವರೂ ಒಬ್ಬರು.

ಅರ್ಜುನ ಸಾ ನಾಕೋಡರು ಮೂಲತಃ ಗದಗ-ಬೆಟಗೇರಿಯ ನೇಕಾರ ಮನೆತನದವರು. ಗದಗ-ಬೆಟಗೇರಿಯಲ್ಲಿ ೧೯೨೮ ರ ಜನವರಿ ೨ ರಂದು ಅರ್ಜುನ ಸಾ ಅವರ ಜನನವಾಯಿತು. ಸಾತ್ವಿಕ ದಂಪತಿಗಳಾದ ಶ್ರೀವೆಂಕೂ ಸಾ ಹಾಗೂ ಶ್ರೀಮತಿ ನಾಗೂಬಾಯಿಯವರೇ ಇವರ ತಂದೆ ತಾಯಿಗಳು. ವೆಂಕೂಸಾ ನಾಕೋಡರು ನೇಕಾರಿಕೆಯ ಉದ್ಯೋಗದ ಉಸ್ತುವಾರಿ ಮಾಡುತ್ತಾ ಗದುಗಿನ ಶಿವಣ್ಣ ಮಾನ್ವಿಯವರ ಅಂಗಡಿಯಲ್ಲಿ ಗುಮಾಸ್ತರಾಗಿ ಸೇವೆ ಸಲ್ಲಿಸುತ್ತಿದ್ದರು. ವೆಂಕೂ ಸಾ ಹಾಗೂ ನಾಗಮ್ಮ ದಂಪತಿಗಳ ಐವರು ಗಂಡು ಮಕ್ಕಳಲ್ಲಿ ಇಬ್ಬರು ಚಿಕ್ಕಂದಿನಲ್ಲೇ ಮೃತರಾದರು. ವಸಂತ ಸಾ, ಅರ್ಜುನ ಸಾ, ಸುರೇಂದ್ರ ಸಾ ಉಳಿದ ಗಂಡುಮಕ್ಕಳು. ದೊಡ್ಡ ಕುಟುಂಬ. ಆರ್ಥಿಕ ಸ್ಥಿತಿ ಚೆನ್ನಾಗಿರಲಿಲ್ಲ. ಬಡತನದಲ್ಲಿಯೇ ಕಾಲ ಸಾಗುತ್ತಿತ್ತು. ತಂದೆ ವೆಂಕೂಸಾ ಅವರಿಗೆ ಸಂಗೀತದಲ್ಲಿ ಬಹಳ ಆಸಕ್ತಿ ಇತ್ತು. ಅದರಂತೆ ಎಲ್ಲ ಮಕ್ಕಳಲ್ಲಿಯೂ ಈ ಆಸಕ್ತಿ ಇರುವುದು ಒಂದು ವಿಶೇಷವೆನ್ನಬಹುದು. ವೆಂಕೂ ಸಾ ಅವರಿಗೆ ಸಂಗೀತದಲ್ಲಿ ಆಸಕ್ತಿ ಇದ್ದರೂ ಮಕ್ಕಳು ಶಾಲೆ ಕಲಿತು ಒಳ್ಳೆಯ ಉದ್ಯೋಗ, ನೌಕರಿ ಮಾಡಬೇಕು, ಅಂದರೆ ಮನೆಯ ಬಡತನ ತಾಪತ್ರಯ ಕಳೆದೀತು ಎಂಬ ಅನಿಸಿಕೆಯಿಂದ ಮಕ್ಕಳ ಸಂಗೀತಾಸಕ್ತಿಗೆ ಪ್ರೋತ್ಸಾಹಿಸುತ್ತಿರಲಿಲ್ಲ. ತಾನೊಂದು ಬಗೆದರೆ ದೈವ ಇನ್ನೊಂದು ಬಗೆಯುವುದೆಂಬುದು ಸತ್ಯ. ಮಕ್ಕಳೆಲ್ಲ ಸಂಗೀತದಲ್ಲಿಯೇ ಉಜ್ವಲ ಭವಿಷ್ಯವನ್ನು ಕಂಡುಕೊಂಡರು.

ಮುಳಗುಂದದ ಚಿಂತಾಮಣಿ ಸಾ ಎನ್ನುವವರು ಮನೆಗೆ ನೇಯ್ಗೆ ಉದ್ಯೋಗಕ್ಕೆ ಬರುತ್ತಿದ್ದರು. ಅವರು ಜಾನಪದ ಗೀತೆಗಳನ್ನು ಹಾಡುತ್ತಿದ್ದರು. ಈ ಜಾನಪದ ಗೀತೆಗಳನ್ನು ಕೇಳಿ ಅರ್ಜುನ ಸಾ ಅವರು ಕಲಿತು ಹಾಡುತ್ತಿದ್ದರಲ್ಲದೆ ಭಕ್ತಿಗೀತೆಗಳನ್ನೂ ಹಾಡುತ್ತಿದ್ದರು. ಚಿಕ್ಕಂದಿನಿಂದಲೇ ಸಂಗೀತದೆಡೆಗೆ ಒಲವಿದ್ದ ಅರ್ಜುನ ಸಾ ಅವರು ಚಿತ್ರ ಗೀತೆಗಳನ್ನೂ ಕೇಳಿ, ಕಲಿತು ಹಾಡಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿರುವಾಗಲೇ ಹೆಸರು

ಗಳಿಸಿದರು. ಶಾಲಾ ವಾರ್ಷಿಕೋತ್ಸವದ ಸಂದರ್ಭದಲ್ಲಿ ಪಂಚಾಕ್ಷರಿ ಗವಾಯಿಗಳು ಅತಿಥಿಗಳಾಗಿ ಬಂದಿದ್ದರು. ಅಲ್ಲಿ ಬಾಲಕ ಅರ್ಜುನ ಸಾ ನ ಹಾಡು ಕೇಳಿ ಸಂತೋಷಪಟ್ಟರು. ಹಾಗೂ ಸಂಗೀತ ಕಲಿಯಲು ತಮ್ಮ ಆಶ್ರಮಕ್ಕೆ ಬರುವಂತೆ ಹೇಳಿದರು. ಆಗ ಅರ್ಜುನ ಸಾ ಅವರಿಗೆ ಒಂಬತ್ತು ವರ್ಷ. ಶಾಲೆಗೆ ಹೋಗುತ್ತಿದ್ದರೂ ಸಂಗೀತದಲ್ಲಿಯೇ ಗಮನ ಹೆಚ್ಚು. ತಂದೆ ವೆಂಕೂ ಸಾ ಅವರು ಪಂಚಾಕ್ಷರಿ ಗವಾಯಿಗಳ ಆದೇಶದಂತೆ ಮಗನನ್ನು ವೀರೇಶ್ವರ ಪುಣ್ಯಾಶ್ರಮಕ್ಕೆ ಸಂಗೀತ ಕಲಿಯಲು ಕಳಿಸಿದರು. ಸಂಗೀತ ಕಲಿತು ಒಳ್ಳೆಯ ಗಾಯಕನಾಗಬೇಕೆಂಬ ಅರ್ಜುನ ಸಾ ಅವರಿಗೆ ಇದೊಂದು ವರದಾನವಾಯಿತು. ಹೀಗೆ ಪ್ರಾರಂಭವಾಯಿತು ಅವರ ಸಂಗೀತ ಶಿಕ್ಷಣ.

ಉಭಯ ಗಾಯನಾಚಾರ್ಯ ಪಂ. ಪಂಚಾಕ್ಷರಿ ಗವಾಯಿಗಳ ಉತ್ತರಾಧಿಕಾರಿಗಳಾದ ಪಂ.ಪುಟ್ಟರಾಜ ಗವಾಯಿಗಳ ಶಿಷ್ಯತ್ವ ಪಡೆದು ಗ್ವಾಲ್ಹೇರ ಘರಾಣೆಯ ಗಮಕಿಯೊಂದಿಗೆ ಅನೇಕ ರಾಗಗಳನ್ನು ಆತ್ಮಸಾತ್ ಮಾಡಿಕೊಂಡರು. ದಿನವಿಡೀ ಸಂಗೀತ ಕಲಿಯುತ್ತ ಗುರುಗಳ ಸೇವೆಯಲ್ಲಿಯೇ ಕಾಲ ಸಾಗುತ್ತಿತ್ತು. ಅದೊಂದು ಗಾಯನ ತಪಸ್ಸು. ಶ್ರದ್ಧೆಯಿಂದ ಮಾಡಿದ ಈ ತಪಸ್ಸಿಗೆ ಸಿದ್ಧಿ ದೊರೆಯಿತು. ಇವರ ಸಮಕಾಲೀನರಾಗಿ ಅನೇಕ ಪ್ರತಿಭಾವಂತ ವಿದ್ಯಾರ್ಥಿಗಳು ಅಲ್ಲಿ ಕಲಿಯುತ್ತಿದ್ದುದರಿಂದ ಸ್ಪರ್ಧಾತ್ಮಕ ಮನೋಭಾವದಿಂದ ವಿದ್ಯಾರ್ಥಿಗಳು ಅಲ್ಲಿ ಸಂಗೀತ ಸಾಧನೆ ಮಾಡುತ್ತಿದ್ದರು. ಅರ್ಜುನಸಾ ಅವರೊಡನೆ ಶಿವಮೂರ್ತಿಸ್ವಾಮಿ ದೇವಗಿರಿ, ಶೇಷಾದ್ರಿ ಗವಾಯಿಗಳು, ದೊಡ್ಡಬಸವಾಚಾರ್ಯ ಜಾಲಿಬೆಂಚಿ, ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ, ಮರಿಯಪ್ಪರೋಣ, ಮುರಡಯ್ಯ, ಸಿದ್ಧರಾಮ ಜಂಬಲದಿನ್ನಿ, ಬಸವರಾಜ ತಾಳಕೇರಿ ಮೊದಲಾದ ಪ್ರತಿಭಾವಂತ ವಿದ್ಯಾರ್ಥಿಗಳಿದ್ದು ಇವರೆಲ್ಲರ ಸಂಗೀತ ಸಾಧನೆ ಸತತವಾಗಿ ಸಾಗುತ್ತಿತ್ತು. ವೀರೇಶ್ವರ ಪುಣ್ಯಾಶ್ರಮ ನಾದ ತರಂಗದಿಂದ ಮಾರ್ದನಿಗೊಳ್ಳುತ್ತಿತ್ತು. ಇವರೆಲ್ಲರೂ ಆಗ ೧೮ ರಿಂದ ೨೦ ವರ್ಷದವರಿದ್ದರು.

ಈ ಸಂಗೀತ ನಾಡಿನಲ್ಲೆ ಜನಸಾಮಾನ್ಯರ ಮನ ಮುಟ್ಟಲು ನಾಟಕ ಕ್ಷೇತ್ರದಿಂದಲೇ ಸಾಧ್ಯ ಎಂಬುದನ್ನು ಅರಿತ ಪೂಜ್ಯ ಪಂಚಾಕ್ಷರಿ ಗವಾಯಿಗಳು ತಮ್ಮದೇ ಆದ ನಾಟಕ ಕಂಪನಿಯನ್ನು ೧೯೩೯ ರಲ್ಲಿ ಪ್ರಾರಂಭಿಸಿದರು. ಈ ಶ್ರೀಕುಮಾರೇಶ್ವರ ನಾಟ್ಯ ಸಂಘವು ಅಭಿನಯ ಹಾಗೂ ಹಾಡುಗಾರಿಕೆಯೊಂದಿಗೆ ಕಲಾ ಜಗತ್ತನ್ನು ಪ್ರವೇಶಿಸಿತು. ಆಗ ಹಾಡುಗಾರಿಕೆಗೆ ರಂಗ ಮಂಚವೇ ಮಾಧ್ಯಮವಾಗಿತ್ತು. ಹೀಗಾಗಿ ಆಶ್ರಮದಲ್ಲಿ ಸಂಗೀತ ಕಲಿಯುತ್ತಿದ್ದ ವಿದ್ಯಾರ್ಥಿಗಳು ನಾಟಕದ ಪಾತ್ರಧಾರಿಗಳಾದರು.

''ಅಂದಿನ ನಾಟಕ ಮಂಡಳಿಗಳಲ್ಲಿ ಪುರುಷರೇ ಸ್ತ್ರೀ ಪಾತ್ರಗಳನ್ನು ಮಾಡುತ್ತಿದ್ದರು. ಈ ಸಮಸ್ಯೆಯನ್ನು ಸವಾಲಾಗಿ ಸ್ವೀಕರಿಸಿದ ಅರ್ಜುನಸಾ ಅವರು ಸೀರೆಯುಟ್ಟು ಸ್ತ್ರೀಪಾತ್ರಗಳನ್ನು ನಿರ್ವಹಿಸಿದರು. ಅರ್ಜುನಸಾ ತಮ್ಮ ತೆಳುವಾದ ದೇಹ, ಸುಂದರ ಮುಖ ಹಾಗೂ ಬಳುಕುವ ಶರೀರ ಹಾಗೂ ಸುಶ್ರಾವ್ಯ ಹಾಡುಗಾರಿಕೆಯಿಂದ ಪ್ರಮುಖ ಸ್ತ್ರೀ ಪಾತ್ರಗಳಲ್ಲಿ ಮಿಂಚಿದರು. ಕೇವಲ ಸಂಗೀತವಲ್ಲದೆ ಅವರ ಪೂರ್ಣ ನಟನೆ ಜನಮನವನ್ನು

ಸೂರೆಗೊಂಡಿತು. ಹೀಗೆ ಈ ನಾಟಕ ಮಂಡಳಿ ಯಶಸ್ವಿಯಾಗಿ ಅಂಧರಿಂದ ಕೂಡಿದ ಸಂಗೀತ ಶಾಲೆ, ಈ ಬೆಳಕಿನ ಹುಡುಗರ ಥಳುಕಿನಿಂದ ನಾಟಕಗಳು ಪ್ರಸಿದ್ಧಿಗೊಂಡು ಆಶ್ರಮ ತನ್ನ ಕಾಲಮೇಲೆ ತಾನು ನಿಲ್ಲುವಂತಾಯಿತು''[೪೯] ಎಂದು ಡಾ. ಕಮಲ ಪುರಂಧರೆ ಬರೆದಿದ್ದಾರೆ.

ಅಲ್ಲಿ ಆರು ವರ್ಷ ಸತತ ಸಂಗೀತ ಅಭ್ಯಾಸ ಹಾಗೂ ಐದು ವರ್ಷ ನಾಟಕ ತರಬೇತಿಯಿಂದ ಖ್ಯಾತರಾದ ಅರ್ಜುನಸಾ ಮೇಲೇರುತ್ತಿದ್ದಾಗ ಹಿರಿಯ ಸಹೋದರ ವಸಂತ ಸಾ ನಾಕೋಡ ಅವರು ಮಿಲಟರಿ ಸೇರಿ ವಾಯುಪಡೆಯಲ್ಲಿದ್ದರು. ಅವರಿಗೂ ನಾಟ್ಯಕಲೆ ಹಾಗೂ ಸಂಗೀತದಲ್ಲಿ ಆಸಕ್ತಿಯಿತ್ತು. ರಜೆಯಲ್ಲಿ ಬಂದಾಗ ತಮ್ಮಂದಿರ ಖ್ಯಾತಿಯನ್ನು ನೋಡಿ ಸಂತಸಗೊಂಡರು. ಸುರೇಂದ್ರಸಾ ಅವರೂ ನಾಟಕ ಸಂಗೀತಗಳಲ್ಲಿ ಪರಿಣತರಾಗಿದ್ದರು. ಆಗ ತಾವೇ ಮೂರು ಜನ ಸಹೋದರರು ಸೇರಿ ನಾಟಕ ಕಂಪನಿಯನ್ನೇಕೆ ಮಾಡಬಾರದೆಂದು ಯೋಚಿಸಿ, ಯೋಜನೆಯನ್ನು ಕಾರ್ಯಗತಗೊಳಿಸಲು ತಂದೆ ವೆಂಕೂಸಾ ಅವರಲ್ಲಿ ಚರ್ಚಿಸಿದರು.

೧೯೪೬ ರಲ್ಲಿ ಕಲಾವಿದ ಮಕ್ಕಳ ತೀವ್ರತರದ ಮಹತ್ವಾಕಾಂಕ್ಷೆಯನ್ನೂ ಉತ್ಕಟೇಚ್ಛೆಯನ್ನೂ ಗಮನಿಸಿ ತಂದೆ ವೆಂಕೂ ಸಾ ಅವರು ಬೆಟಗೇರಿಯಲ್ಲಿದ್ದ ಒಂದು ಮನೆಯನ್ನು ಮಾರಿ ಶ್ರೀ ಜಗದಂಬಾ ಸಂಗೀತ ನಾಟಕ ಮಂಡಳಿಯೆಂಬ ಸಂಸ್ಥೆಯನ್ನು ಆರಂಭಿಸಿದರು. ಮುಂದೆ ಅದು ಬದಲಾಗಿ ವಸಂತ-ನಾಟ್ಯ ಕಲಾ ಸಂಘ ಎಂದಾಯಿತು. ವೆಂಕೂ ಸಾ ಅವರೂ ಸಹಾ ತಕ್ಕಮಟ್ಟಿಗೆ ಪಿಯಾನೊ ನುಡಿಸುತ್ತಿದ್ದರು. ಹೀಗೆ ನಾಟಕ ಕಂಪನಿ ನಡೆಯುತ್ತಿರುವಾಗ ಅರ್ಜುನ ಸಾ ಅವರು ಎತ್ತರಕ್ಕೆ ಬೆಳೆದರು. ಸ್ತ್ರೀ ಪಾತ್ರದ ಘನತೆ ಗೌರವ ಬೇರೊಬ್ಬರಿಗೆ ಸಾಧಿಸದೆ ಇವರಿಗೇ ಮೀಸಲಾಯಿತು. ದ್ರೌಪದಿ, ಸಾವಿತ್ರಿ, ಚಿತ್ರಾಂಗದಾ, ಮಲ್ಲಮ್ಮ ಮೊದಲಾದ ಪಾತ್ರಗಳು ಶಾಸ್ತ್ರೀಯ ಸಂಗೀತ ಮಾಧುರ್ಯದಿಂದ, ಹೆಣ್ತನದ ನಯ ನಾಜೂಕಿನಿಂದ, ಒನಪು ವಯ್ಯಾರಗಳಿಂದ ಜನಮನವನ್ನು ರಂಜಿಸಿದವು. ಮುಂದೆ ಪುರುಷ ಪ್ರಧಾನ ನಾಟಕಗಳಲ್ಲಿ ಸಂಗೀತ ಪ್ರಧಾನವಾದಾಗ, ಮಲ್ಲಮ್ಮನ ನಾಟಕದಲ್ಲಿ ಮಲ್ಲಿಕಾರ್ಜುನನ ಪಾತ್ರ, ಟಿಪ್ಪು ಸುಲ್ತಾನದಲ್ಲಿ ಟಿಪ್ಪುವಿನ ಪಾತ್ರಗಳನ್ನೂ ಅಭಿನಯಿಸಿ ಎಲ್ಲರ ಮೆಚ್ಚುಗೆಗೆ ಪಾತ್ರರಾದರು.

ಹೀಗೆ ೧೯೬೫ ರವರೆಗೆ ನಾಟಕ ಕಂಪನಿ ನಡೆಯಿತಾದರೂ ಹೆಚ್ಚಿನ ಸಂಪಾದನೆ ಇಲ್ಲದೆ ಹೋಯಿತು. ಆರ್ಥಿಕ ತೊಂದರೆ, ಕಂಪನಿಯ ತಾಪತ್ರಯ ಇದ್ದಾಗಲೂ ಸಹ ಅರ್ಜುನ ಸಾ ಅವರ ಸಂಗೀತ ಸಾಧನೆಗೆ ಯಾವ ಭಂಗವೂ ಬಾರದಂತೆ, ಯಾವುದೇ ವ್ಯವಹಾರಕ್ಕೆ ಅವರನ್ನು ಬಳಸಿಕೊಳ್ಳದೇ ಅವರ ಅಭ್ಯಾಸವು ಮುಂದುವರೆಯುವಂತೆ ಅಣ್ಣ ವಸಂತ ಸಾ ನೋಡಿಕೊಂಡರು. ಅರ್ಜುನಸಾ ಅವರು ತಮ್ಮ ಸಂಗೀತ ಸಾಧನೆ ಸಿದ್ಧಿಗಳು ವ್ಯರ್ಥವಾಗದಿರಲೆಂದು ಈ ಸೇವೆಯಿಂದಲೇ ಬದುಕನ್ನು ಮುಂದುವರಿಸಲು ಸಂಗೀತ ಶಾಲೆಯನ್ನು ಸ್ಥಾಪಿಸಬೇಕೆಂದು ಆಲೋಚಿಸಿ ಅಣ್ಣನಲ್ಲಿ ಪ್ರಸ್ತಾಪಿಸಿದರು.

---

೪೯. ಕಲಾಚೇತನ : ಡಾ. ಕಮಲಪುರಂಧರೆ, ಪುಟ-೩೦೫

ಐವತ್ತು ವರ್ಷಗಳ ತಮ್ಮನ ಈ ಸಾಧನೆ ಕಲಾಕ್ಷೇತ್ರಕ್ಕೆ ಮುಡಿಪಾಗಿರಲೆಂದು ಅಣ್ಣ ವಸಂತಸಾ ನಾಟಕ ಕಂಪನಿಯಿಂದ ಸೋದರನನ್ನು ಬೀಳ್ಕೊಟ್ಟರು.

ಅರ್ಜುನಸಾ ಅವರು ಧಾರವಾಡ ಆಕಾಶವಾಣಿಯ 'ಎ' ಗ್ರೇಡ್ ಕಲಾವಿದರಾಗಿದ್ದರು. ಧಾರವಾಡ ಆಕಾಶವಾಣಿಯ ನಿಲಯದ ಕಲಾವಿದರಾಗಿ ಪೂರ್ಣಾವಧಿ ಕೆಲಸಕ್ಕೆ ನೇಮಕಗೊಂಡಾಗ ಅರ್ಜುನಸಾ ಅವರ ಜೀವನದಲ್ಲಿ ಮತ್ತೆ ನೆಮ್ಮದಿಯುಂಟಾಗಿ ಸಂಗೀತ ಸಾಧನೆಗೆ ಸ್ಫೂರ್ತಿ ನೀಡಿತು. ಕಲಾವಿದರಾಗಿ ಅನೇಕ ವರ್ಷ ನಾಡಿನ ಅನೇಕ ನಿಲಯ ಕೇಂದ್ರಗಳ ಮೂಲಕ ತಮ್ಮ ಅಮೋಘ ಗಾಯನದಿಂದ ಶ್ರೋತೃಗಳನ್ನು ರಂಜಿಸಿದ್ದಾರೆ.

ಅಪಾರ ಸಂಗೀತಾಭಿಮಾನಿಗಳನ್ನು ಹೊಂದಿದ್ದ ನಾಕೋಡರು ಕರ್ನಾಟಕದ ಪ್ರಮುಖ ಪಟ್ಟಣಗಳಲ್ಲದೆ ದೆಹಲಿ, ಕಲ್ಕತ್ತಾ, ಹೈದರಾಬಾದ, ಮುಂಬೈ, ನಾಗಪೂರ, ಇಂದೋರ್, ಮದ್ರಾಸ್, ಭೂಪಾಲ್ ಮುಂತಾದೆಡೆ ಸ^ಗೀತ ಕಚೇರಿ ನೀಡಿ ಕನ್ನಡದ ಕೀರ್ತಿಯನ್ನು ಹೆಚ್ಚಿಸಿದ್ದಾರೆ. ಆಕಾಶವಾಣಿ ಸಂಗೀತ ಸಮ್ಮೇಳಗಳಲ್ಲಿ ಪಾಲ್ಗೊಂಡಿದ್ದಾರೆ.

ಸಂಗೀತ ಕಲೆ ಬೆಳೆಯಲೆಂಬ ಉದ್ದೇಶದಿಂದ ಅವರು ೧೯೬೭ ರಲ್ಲಿ ಶ್ರೀ ರೇಣುಕಾ ಸಂಗೀತ ವಿದ್ಯಾಲಯ ಸ್ಥಾಪಿಸಿದಾಗ ಅದರಲ್ಲಿ ಕೇವಲ ೧೦ ಬಾಲಕ ಬಾಲಕಿಯರಿದ್ದರು. ಅದು ಮುಂದೆ ಬೆಳೆದು ನೂರಾರು ವಿದ್ಯಾರ್ಥಿಗಳಾದರು. ಅವರಲ್ಲಿ ಅನೇಕರು ಹೆಸರುವಾಸಿಗಳಾಗಿದ್ದಾರೆ.

ಸ್ತ್ರೀ ಸಂಕುಲದ ಮಾತ್ಸರ್ಯ ಅಸೂಯೆಗಳನ್ನು ದಾಟಿ ಬೆಳೆದಿರುವ ಶ್ರೀಮತಿ ಅನಸೂಯಾಬಾಯಿಯವರನ್ನು ಮದುವೆಯಾದ ಅರ್ಜುನ ಸಾ ನಾಕೋಡರು ಸಂಸಾರದ ಸಾವಿರ ಸಂಕಟಗಳಿಂದ ಸುಲಭವಾಗಿ ಪಾರಾದರು. ಬದುಕಿನ ಯಾವ ನೋವನ್ನು ಯಜಮಾನರ ಅರಿವಿಗೆ ಬಾರದಂತೆ ಸರಿತೂಗಿಸಿದ ಆ ತಾಯಿಯು ಅರ್ಜುನಸಾ ನಾಕೋಡರ ಬೆನ್ನ ಹಿಂದಿರುವ ದೊಡ್ಡ ಶಕ್ತಿಯಾಗಿದ್ದಾರೆ. ಅರ್ಜುನ ಸಾ ಅವರಿಗೆ ನಾಲ್ಕು ಪುತ್ರರು ಹಾಗೂ ಇಬ್ಬರು ಪುತ್ರಿಯರು. ತಮ್ಮ ಮಕ್ಕಳಿಗೂ ಸತ್ಸಂಸ್ಕಾರ ನೀಡಿ ಕಲಾ ಸಂಪನ್ನರಾಗಿ ಬೆಳೆಯಿಸಿದರು. ಹಿರಿಯ ಮಗ ರಘುನಾಥ ನಾಕೋಡರವರು ಇಂದು ಹೆಸರಾಂತ ತಬಲಾವಾದಕರಾಗಿದ್ದಾರೆ. ಎರಡನೆಯ ಮಗ ಬಾಲಚಂದ್ರ ಗಾಯನದಲ್ಲಿ ಪ್ರವೀಣನಾಗಿದ್ದು ಇಬ್ಬರೂ ಧಾರವಾಡದ ಆಕಾಶವಾಣಿ ಕೇಂದ್ರದ ನಿಲಯ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮೂರನೆಯ ಮತ್ತು ನಾಲ್ಕನೆ ಮಗ ವಿಶ್ವನಾಥ ಹಾಗೂ ರಾಜೇಂದ್ರ ಇಬ್ಬರೂ ತಬಲಾವಾದಕರಾಗಿದ್ದು ವಿಶ್ವನಾಥ ಬೆಂಗಳೂರು ಆಕಾಶವಾಣಿಯ ನಿಲಯ ಕಲಾವಿದನಾಗಿದ್ದಾನೆ. ಇಬ್ಬರು ಹೆಣ್ಣು ಮಕ್ಕಳಲ್ಲಿ ಹಿರಿಯವಳು ಶಾರದಾ ಮದುವೆಯಾಗಿ ಮುಂಬಯಿಯಲ್ಲಿದ್ದಾಳೆ. ಚಿಕ್ಕವಳು ವಿಜಯಲಕ್ಷ್ಮಿ ಸೊಲ್ಲಾಪುರದಲ್ಲಿರುವಳು. ಈಕೆಯೂ ಸಹ ಸುಗಮ ಸಂಗೀತ ಕಲಾವಿದೆಯಾಗಿ ಹೆಸರು ಮಾಡಿದ್ದಾಳೆ.

ಆಕಾಶವಾಣಿಯಿಂದ ನಿವೃತ್ತಿಯಾದ ನಂತರ ಅರ್ಜುನ ಸಾ ಅವರು ತಮ್ಮ ಸಂಪೂರ್ಣ ಸಮಯವನ್ನು ಸಂಗೀತ ಸೇವೆಗೆ ಮೀಸಲಾಗಿರಿಸಿ ಅನೇಕ ಶಿಷ್ಯರನ್ನು ತರಬೇತಿಗೊಳಿಸಿದುದು ಶ್ಲಾಘನೀಯವಾಗಿದೆ. ಅವರ

ಶಿಷ್ಯರಲ್ಲಿ ಮಗ ಬಾಲಚಂದ್ರ ನಾಕೋಡ, ಜಯತೀರ್ಥ ಮೇವುಂಡಿ, ಕೃಷ್ಣೇಂದ್ರ ವಾಡೀಕರ, ವೀಣಾ ಪಾಥ್ಯಾಪೂರ, ಮಾಧವಿ ಕಲ್ಯಾಣಪೂರ, ಶಕ್ತಿ ಪಾಟೀಲ, ಪದ್ಮಾದೇವ ಶಿಖಾಮಣಿ, ಉಮಾ ವಾಡೀಕರ, ಸದಾನಂದ ಐಹೊಳೆ, ರೇಣುಕಾ ನಾಕೋಡ, ಮೌನಾ ರಾಮಚಂದ್ರ, ಸಂಜೀವ ಮುತ್ತಗೀಕರ, ಶಾಲಿನಿ ಶ್ರೀನಿವಾಸ, ಸ್ಮಿತಾ ಬೆಳ್ಳೂರ, ನಾರಾಯಣ ವನಕಿ, ರವೀಂದ್ರ ಸೋರಗಾವಿ, ಕಾಶಿನಾಥ (ಹೈದ್ರಾಬಾದ), ಡಿ. ಎಸ್. ಸಿದ್ದರಾಮು (ಕ್ಲಾರಿಯೊನೇಟ್) ಮುಂತಾದವರು ಪ್ರಮುಖರು.

ಗ್ವಾಲ್ಹೇರ ಘರಾಣೆಯ ಗಾಯನವು ಮುಕ್ತಕಂಠದ್ದಾಗಿದ್ದು ಮನಮೋಹಕ ವಿನ್ಯಾಸದ ವಿನಿಕೆಗೆ ಪ್ರಸಿದ್ಧಿ ಪಡೆದಿದೆ. ಅರ್ಜುನಸಾ ಅವರ ಗಾಯನ ಈ ಗುಣಗಳಿಂದ ಕೂಡಿದೆ. ಅವರು ಪ್ರತಿಭೆ ಹಾಗೂ ಸಾಮರ್ಥ್ಯದಿಂದ ಅಪಾರ ಜನಪ್ರಿಯತೆಯನ್ನು ಹೊಂದಿದ್ದು ಬಿರುದು ಸನ್ಮಾನಗಳನ್ನು ಪಡೆದಿದ್ದಾರೆ. ಅವರಿಗೆ ದೊರೆತ ಪದವಿ ಪ್ರಶಸ್ತಿಗಳು ಅನೇಕ. ೧೯೮೨ ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ 'ಕರ್ನಾಟಕ ಕಲಾ ತಿಲಕ' ೧೯೮೯ ರಲ್ಲಿ 'ಕರ್ನಾಟಕ ರಾಜ್ಯೋತ್ಸವ' ಪ್ರಶಸ್ತಿ. ರಂಭಾಪುರಿ ಜಗದ್ಗುರುಗಳ 'ಗಾನಭಾನು'. ಇಳಕಲ್ ವಿಜಯಮಹಂತೇಶ ಮಠದ 'ಸಂಗೀತ ಸುಧಾಕರ' ೧೯೯೨ ರಲ್ಲಿ ಗದುಗಿನಲ್ಲಿ ಪಂಚಾಕ್ಷರ ಗವಾಯಿಗಳ ಶತಮಾನೋತ್ಸವ ಸಂದರ್ಭದ ಗಾನ ಶಾರ್ದೂಲ ಪ್ರಶಸ್ತಿ ಇತ್ಯಾದಿ.

ಸುಮಾರು ೧೯೯೯ ರಲ್ಲಿ ಕರುಳು ಬೇನೆಯಿಂದಾಗಿ ಇಂಥ ಅಪರೂಪದ ಗಾಯಕನ ಧ್ವನಿ ಸಂಪೂರ್ಣ ಬಿದ್ದು ಹೋದದ್ದು ದುರ್ದೈವದ ಸಂಗತಿ. ಕಲಾಕ್ಷೇತ್ರಕ್ಕೆ ಇದೊಂದು ನಷ್ಟ ಎನ್ನಬೇಕು. ಧ್ವನಿ ಮಧುರವಿರುವಾಗ ಅರ್ಜುನಸಾ ಅವರ ಒಂದೇ ಒಂದು ಧ್ವನಿ ಸುರಳಿಯೂ ಹೊರಬಾರದಿದ್ದುದು ವಿಷಾದಕರ ಸಂಗತಿ. ಆದಾಗ್ಯೂ ಭೋಪಾಲ್‌ನ ಆಕಾಶವಾಣಿ ಇವರ ಒಂದು ಧ್ವನಿ ಸುರಳಿಯನ್ನು ಮಾಡಿ ಇರಿಸಿಕೊಂಡಿರುವುದು ಸಮಾಧಾನಕರ ಸಂಗತಿಯಾಗಿದೆ.

ಅರ್ಜುನಸಾ ಅವರ ಕೊನೆಯುಸುರಿನ ದಿನದಲ್ಲಾದ ಘಟನೆ ತುಂಬ ಚಮತ್ಕಾರಿಕವಾಗಿದೆ. ವೈದ್ಯರು ಹತಾಶರಾಗಿ ಮನೆಗೆ ಕರೆದುಕೊಂಡು ಹೋಗಲು ಹೇಳಿದಾಗ, ಮಕ್ಕಳು ಮನೆಗೆ ಕರೆತಂದು ಡಾ.ಪುಟ್ಟರಾಜ ಕವಿ ಗವಾಯಿಗಳಿಗೆ ತಿಳಿಸಿದರು. ಶ್ರೀಗುರುಗಳು ಧಾವಿಸಿ ಬಂದರು. ಆಗ ಅರ್ಜುನ ಸಾ ಅವರಿಗೆ ಸ್ಮೃತಿ ಬಂದು ಎದ್ದವರೇ ಗುರುಗಳಿಗೆ ಸಾಷ್ಟಾಂಗ ಪ್ರಣಾಮ ಮಾಡಿದರು. ಧರ್ಮಪತ್ನಿ ಅನಸೂಯಾ ಅವರೊಡಗೂಡಿ ಮನದಿಚ್ಛೆಯಂತೆ ಗುರುಗಳ ಪಾದ ಪೂಜೆ ಮಾಡಿದರು. ಕಣ್ಣಿನಿಂದ ಆನಂದ ಭಾಷ್ಪಗಳು ಮುತ್ತಿನಂತೆ ಗುರುಗಳ ಪಾದಕ್ಕೆ ಬೀಳುತ್ತಿದ್ದವು. ಇಡಿಯ ಕುಟುಂಬಕ್ಕೆ ಪೂರ್ಣಫಲದ ಆಶೀರ್ವಾದವನ್ನು ಗುರುಗಳು ನೀಡಿದರು. ಅಂದೇ ಅವರ ಕೊನೆಯುಸಿರಾಗಬೇಕೆಂಬ ಸಂಕಲ್ಪವಿತ್ತೊ ಏನೋ! ಎಪ್ಪತ್ತೈದು ವರ್ಷಗಳ ಸಂತೃಪ್ತಿಯ ತುಂಬು ಜೀವನ ನಡೆಸಿದ ಅರ್ಜುನಸಾ ಅವರ ಪ್ರಾಣಪಕ್ಷಿಯೂ ೪-೧-೨೦೦೧ ರಂದು ನಾದಲೋಕದಲ್ಲಿ ಲೀನವಾಗಿ ಪರಮಾತ್ಮನ ಪಾದ ಸೇರಿತು.

ಪ್ರತಿವರ್ಷ ಇಂದಿಗೂ ಪುಣ್ಯದಿನದಂದು ಮಕ್ಕಳು, ಶಿಷ್ಯರು ಶ್ರದ್ಧೆ ಭಕ್ತಿಯಿಂದ ಅರ್ಜುನಸಾ ನಾಕೋಡರಿಗೆ ಸ್ವರ ಶ್ರದ್ಧಾಂಜಲಿಯನ್ನರ್ಪಿಸುವರು.

## ೫.೧೯.ಪಂ. ಭಾಸ್ಕರ ಬುವಾ ಬಖಲೆ

ಪಂ. ಭಾಸ್ಕರ ಬುವಾ ಬಖಲೆ ಭಾರತದ ಮಹಾನ್ ಸಂಗೀತಗಾರರಲ್ಲೊಬ್ಬರು. ಗಾಯಕರಾಗಿ, ಸಂಗೀತ ಶಿಕ್ಷಕರಾಗಿ, ಸಂಗೀತ ಸಂಸ್ಥೆಗಳ ಸಂಘಟಕರಾಗಿ, ಸಂಗೀತ ಸಂಸ್ಥೆಯ ಸ್ಥಾಪಕರಾಗಿ ಅವರು ಗೈದ ಕಾರ್ಯ ಅಮೋಘ.

ಪಂ. ಭಾಸ್ಕರ ಬುವಾ ಅವರು ಜನಿಸಿದ್ದು ಬಡೋದಾ ಸಂಸ್ಥಾನದ ಕಠೋರ ಎಂಬ ಹಳ್ಳಿಯಲ್ಲಿ ೧೮೬೯ ರ ಅಕ್ಟೋಬರ ೧೭ ರಂದು ಅವರ ತಂದೆ ಮಧ್ಯಮ ವರ್ಗದ ಒಬ್ಬ ಸಾಮಾನ್ಯ ನೌಕರರಾಗಿದ್ದರು. ಅವರ ಆರ್ಥಿಕ ಸ್ಥಿತಿ ದುರ್ಬಲವಾಗಿದ್ದರಿಂದಾಗಿ ಅವರು ತಮ್ಮ ಮಗ ಭಾಸ್ಕರನನ್ನು ಇಂಗ್ಲೀಷ್ ಶಾಲೆಗೆ ಕಳಿಸಲಿಕ್ಕಾಗದೇ ಬಡೋದೆಯಲ್ಲಿಯ ಪಂ. ರಾಜಾರಾಮ ಶಾಸ್ತ್ರಿಯವರ ಸಂಸ್ಕೃತ ಪಾಠ ಶಾಲೆಗೆ ಕಳಿಸಿದರು. ಹುಟ್ಟಿನೊಂದಿಗೆ ಸಂಗೀತದ ಗೀಳು ಅಂಟಿಸಿಕೊಂಡು ಬಂದಿದ್ದ ಬಾಲಕ ಭಾಸ್ಕರ ಸಂಸ್ಕೃತ ಶ್ಲೋಕಗಳನ್ನು ಸ್ವರಬದ್ಧವಾಗಿ, ಲಯಬದ್ಧವಾಗಿ ಹೇಳುತ್ತಿದ್ದನು. ಹರಿದಾಸಜೀಯವರ ಕೀರ್ತನದಲ್ಲಿ ವಿಶೇಷ ಆಸಕ್ತಿವಹಿಸಿದ ಸಂಗೀತದ ಗೀಳಿನಿಂದಾಗಿ ಭಾಸ್ಕರ ಸಂಸ್ಕೃತದ ಬಗ್ಗೆ ಉದಾಸೀನನಾಗಹತ್ತಿದ. ಅದನ್ನು ಗಮನಿಸಿದ ಶಾಸ್ತ್ರಿಗಳು ಅವನನ್ನು ಸಂಸ್ಕೃತ ಬಿಟ್ಟು ಸಂಪೂರ್ಣವಾಗಿ, ಸಂಗೀತ ಕಲಿಕೆಯತ್ತ ಗಮನವೀಯಲು ಹೇಳಿದರು.

ಬಾಲಕ ಭಾಸ್ಕರನ ಸಂಗೀತದ ಪ್ರತಿಭೆ ಕಂಡು ಅವರ ತಂದೆ ಅವರನ್ನು ಪ್ರಸಿದ್ಧ ಗಾಯಕ ವಿಷ್ಣು ಬುವಾ ಪಿಂಗಳೆಯವರ ಸಂಗೀತ ಪಾಠಕ್ಕೆ ಅನುವು ಮಾಡಿಕೊಟ್ಟರು. ಕೆಲ ದಿನಗಳ ನಂತರ ಭಾಸ್ಕರ ಪ್ರಸಿದ್ಧ ಸಂಗೀತಜ್ಞ, ಗಾಯನಾಚಾರ್ಯ ಫಯಾಜ ಮಹಮ್ಮದ್‌ಖಾನ ಅವರ ಬಳಿ ಸಂಗೀತ ಅಭ್ಯಾಸ ಮುಂದುವರೆಸಿದನು. ಅವರ ಕಠಿಣತಮ ಪರಿಶ್ರಮದಿಂದಾಗಿ ಭಾಸ್ಕರನಿಗೆ ಸಂಗೀತ ರಿಯಾಜ್ ಯಥೇಚ್ಛವಾಗಿ ದೊರೆಯಿತು. ಮೌಲಾಭಕ್ಷ ಅವರ ಸಂಗೀತ ಪಾಠ ಶಾಲೆಯ ವಾರ್ಷಿಕ ಸಂಗೀತ ಸಮಾರಂಭದಲ್ಲಿ ಯುವಕ ಭಾಸ್ಕರ ಗಾಯನ ಕಾರ್ಯಕ್ರಮ ನೀಡಿದ. ಅದು ಎಲ್ಲ ವಿದ್ವಜ್ಜನರ ಪ್ರಶಂಸೆಗೆ ಪಾತ್ರವಾಯಿತು. ಅಂದಿನಿಂದ ಭಾಸ್ಕರನ ಹೆಸರು ಸಂಗೀತ ಕ್ಷೇತ್ರದಲ್ಲಿ ಕೇಳಿ ಬರಹತ್ತಿತು.

ಆ ದಿನಗಳಲ್ಲಿ ಕಿರ್ಲೋಸ್ಕರ ನಾಟಕ ಕಂಪನಿ ಮಹಾರಾಷ್ಟ್ರದ ತುಂಬೆಲ್ಲ ಜಯಭೇರಿ ಬಾರಿಸಿತ್ತು. ಆಗಿನ ಕಾಲದ ನಾಟಕ ಕಂಪನಿಗಳಲ್ಲಿ ನಟರೆ ಸ್ವತಃ ಹಾಡಿ ಪಾತ್ರ ಮಾಡುತ್ತಿದ್ದರು. ದೊಡ್ಡ ದೊಡ್ಡ ಗವಾಯಿಗಳು ನಾಟಕ ಕಂಪನಿಯಲ್ಲಿ ಸಂಗೀತ ನಿರ್ದೇಶನ ಮಾಡುತ್ತ ನಟರಿಗೆ ಸಂಗೀತದ ತಾಲೀಮ ಕೊಡುತ್ತಿದ್ದರು. ಕಿರ್ಲೋಸ್ಕರ ನಾಟಕ ಕಂಪನಿಗೆ ಒಬ್ಬ ಯುವ ಗಾಯಕನ ಅವಶ್ಯಕತೆ ಇತ್ತು. ಅದೇ ಸಮಯಕ್ಕೆ ಭಾಸ್ಕರ ಆ ನಾಟಕ ಕಂಪನಿ

ಸೇರಿದರು. ನಾಟಕ ಕಂಪನಿ ಸೇರಿದ ಮೇಲೂ ಸಹ ಭಾಸ್ಕರ ನಿಯಮಿತವಾಗಿ ಸಂಗೀತ ಸಾಧನೆ ಮುಂದುವರೆಸಿದರು. ಕಂಪನಿಯು ದೊಡ್ಡ ಪಟ್ಟಣಗಳಲ್ಲಿ ಕ್ಯಾಂಪ ಮಾಡಿದಾಗ ಅವರು ಅಲ್ಲಿಯ ಪ್ರಸಿದ್ಧ ಸಂಗೀತಗಾರರ ಸಂಪರ್ಕ ಪಡೆದು ಅವರಿಂದ ಸಂಗೀತದ ಲಾಭ ಪಡೆದುಕೊಳ್ಳುತ್ತಿದ್ದರು.

ಒಮ್ಮೆ ಭಾಸ್ಕರರವರ ಬಾಳಿನಲ್ಲಿ ಭಾಗ್ಯೋದಯದ ದಿನ ಕೂಡಿ ಬಂದಿತು. ನಾಟಕ ಕಂಪನಿ ಇಂದೋರನಲ್ಲಿ ಕ್ಯಾಂಪ ಮಾಡಿದ ದಿನಗಳವು. ಆ ನಾಟಕವನ್ನು ನೋಡಲು ಇಂದೋರದ ಪ್ರಸಿದ್ಧ ಸಂಗೀತಗಾರ ಬಂದೇ ಅಲಿಖಾನರು ಬಂದಿದ್ದರು. ನಾಟಕದ ಪರದೆಯ ಮೇಲೆ ಬಾಲಕನೋರ್ವನ ಸುಮಧುರ ಕಂಠದ ಗಾಯನ ಕೇಳಿ ಅ.ರು ಪ್ರಭಾವಿತರಾದರು. ತಕ್ಷಣ ಆ ಬಾಲಕನನ್ನು ಹತ್ತಿರ ಕರೆದು ಮೈದಡವಿ ಈ ಬಾಲಕನನ್ನು ನನ್ನ ಜೊತೆ ಕರೆದೊಯ್ಯಲು ಬಿಡಿರಿ, ಕಂಪನಿ ಇಲ್ಲಿರುವವರೆಗೆ ನಾನು ಇವನಿಗೆ ಸಂಗೀತದ ತಾಲೀಮು ನೀಡಿ ಗವಾಯಿ ಮಾಡುತ್ತೇನೆಂದು ಖಾನರು ಹೇಳಿದರು. ಅಂದಿನಿಂದ ಬಾಲಕ ಭಾಸ್ಕರ ಖಾನರ ಮಾರ್ಗದರ್ಶನದಲ್ಲಿ ಸಂಗೀತ ಸಾಧನೆ ಮಾಡಿ ಭಾಸ್ಕರ ಬುವಾ ಎನಿಸಿದರು.

ಇಂದೋರಿನಿಂದ ನಾಟಕ ಕಂಪನಿ ಬೇರೆಡೆ ಕ್ಯಾಂಪ ಮಾಡಿದ ಮೇಲೆ ಭಾಸ್ಕರ ಬುವಾ ಅವರಿಂದ ಸಂಗೀತ ಶಿಕ್ಷಣ ಕಲಿಕೆಗೆ ಸಂಚಕಾರ ಒದಗಿತು. ಈ ಹೊತ್ತಿಗೆ ಭಾಸ್ಕರ ಬುವಾ ವಯಸ್ಕರಾಗಿದ್ದರು. ಶರೀರ ಬೆಳೆದಂತೆ ಧ್ವನಿಯಲ್ಲಿ ಕರ್ಕಶ ಕಾಣಹತ್ತಿತು. ಅದನ್ನು ನಿಗ್ರಹಿಸಲು ಸ್ವರ ಸಾಧನೆಯೊಂದೇ ಮಾರ್ಗವೆಂದರಿತ ಬುವಾ ಅವರು ನಾಟಕ ಕಂಪನಿಯಲ್ಲಿ ಯಥೇಚ್ಛವಾಗಿ ಸ್ವರ ಸಾಧನೆಯಲ್ಲಿ ನಿರತರಾದರು. ಇದು ಕಂಪನಿಯ ಮಾಲೀಕರಿಗೆ ಸರಿ ಕಾಣಲಿಲ್ಲ. ಹಾಗಾಗಿ ಬುವಾ ಕಂಪನಿ ಬಿಟ್ಟು ಬಡೋದೆಗೆ ಬಂದು ಫಯಾಜ ಮಹಮ್ಮದ್‌ಖಾನರಲ್ಲಿ ಮತ್ತೆ ತಮ್ಮ ಸಂಗೀತ ಸಾಧನೆ ಮುಂದುವರಿಸಿದರು. ಕಠಿಣತಮ ಸಾಧನೆ, ಅವಿಶ್ರಾಂತ ಪರಿಶ್ರಮದಿಂದಾಗಿ ಭಾಸ್ಕರ ಬುವಾ ತುಂಬ ಹೆಸರು ಪಡೆದರು.

ಭಾಸ್ಕರ ಬುವಾ ಅವರು ಬಡೋದೆಯಿಂದ ಮುಂಬೈಗೆ ಬಂದು ಪ್ರಸಿದ್ಧ ಸಂಗೀತಗಾರ ಅಲ್ಲಾದಿಯಾಖಾನರಲ್ಲಿ ಸಂಗೀತ ಶಿಕ್ಷಣ ಪಡೆದರು. ಅಲ್ಲಿಂದ ಪುಣೆಗೆ ಬಂದು ಗಂಧರ್ವ ನಾಟಕ ಕಂಪನಿಯಲ್ಲಿ ಸಂಗೀತ ನಿರ್ದೇಶಕರಾಗಿ ಕೆಲಸ ಮಾಡಿದರು. ಪುಣೆಯಲ್ಲಿ ಭಾರತೀಯ ಸಂಗೀತ ಸಮಾಜ ಎಂಬ ಸಂಸ್ಥೆಯನ್ನು ಸ್ಥಾಪಿಸಿದರು. ಅದು ಈಗಲೂ ಅಸ್ತಿತ್ವದಲ್ಲಿದೆ.

ಕೆಲದಿನಗಳ ನಂತರ ಭಾಸ್ಕರ ಬುವಾ ಅವರನ್ನು ಆಗಿನ ಮುಂಬೈ ಸರಕಾರ ಧಾರವಾಡದ ಟ್ರೇನಿಂಗ್ ಕಾಲೇಜಿಗೆ ಸಂಗೀತ ಶಿಕ್ಷಕರಾಗಿ ನೇಮಿಸಿತು. ಬಹುಶಃ ಒಬ್ಬ ಗವಾಯಿ ಸರಕಾರಿ ಸಂಗೀತ ಶಿಕ್ಷಕರಾಗಿ ನೇಮಕಗೊಂಡುದು ಉತ್ತರ ಕರ್ನಾಟಕದ ಭಾಗದಲ್ಲಿ ಅದೇ ಪ್ರಥಮವಿರಬಹುದೇನೋ. ಅಂತೂ ಭಾಸ್ಕರ ಬುವಾ ಅವರು ಧಾರವಾಡದಲ್ಲಿ ಸಂಗೀತ ಶಿಕ್ಷಕರಾಗಿ ಬಂದ ಮೇಲೆ ಅದುವರೆಗೆ ಕರ್ನಾಟಕೀ ಸಂಗೀತದ ಗಾಳಿ ಹೆಚ್ಚಾಗಿದ್ದ ಉತ್ತರ ಕರ್ನಾಟಕದ ಭಾಗದ ಧಾರವಾಡ, ಹುಬ್ಬಳ್ಳಿಗಳಲ್ಲಿ ಹಿಂದುಸ್ತಾನಿ ಸಂಗೀತ ನೆಲೆಯೂರಲು ಸಹಕಾರಿಯಾಯಿತು.

ಈ ದಿನಗಳಲ್ಲಿ ಮೈಸೂರಿನಲ್ಲಿ ಕೃಷ್ಣರಾಜ ಒಡೆಯರು ಪ್ರಸಿದ್ಧ ಸಂಗೀತಗಾರ ನತ್ಥುಖಾನರನ್ನು ಮುಂಬೈನಿಂದ ಆಹ್ವಾನಿಸಿ ಮೈಸೂರಿನ ಆಸ್ತಾನ ಸಂಗೀತಗಾರರನ್ನಾಗಿ ನಿಯುಕ್ತಗೊಳಿಸಿದ್ದರು. ನತ್ಥಖಾನರಲ್ಲಿ ಸಂಗೀತ ಶಿಕ್ಷಣ ಪಡೆದಿದ್ದ ಭಾಸ್ಕರಬುವಾ ಅವರಿಗೆ ನತ್ಥನ್‌ಖಾನರು ಮೈಸೂರಿಗೆ ಬಂದಿದ್ದು ತುಂಬ ಅನುಕೂಲವೇ ಆಯಿತು. ನತ್ಥಖಾನರು ಧಾರವಾಡಕ್ಕೆ ಬಂದಾಗ ಶಿಷ್ಯ ಭಾಸ್ಕರ ಬುವಾರಲ್ಲಿಯೇ ವಾಸ್ತವ್ಯ ಮಾಡುತ್ತಿದ್ದರು. ಭಾಸ್ಕರ ಬುವಾ ಹಾಗೂ ನತ್ಥಖಾನರು ಹುಬ್ಬಳ್ಳಿ-ಧಾರವಾಡಗಳಲ್ಲಿ ಅನೇಕ ಸಂಗೀತ ಕಚೇರಿ ನೀಡಿ ಹಿಂದುಸ್ತಾನಿ ಸಂಗೀತದ ಬೆಳವಣಿಗೆಗೆ ಚಾಲನೆ ನೀಡಿದರು.

೧೯೧೦ ರ ಸುಮಾರಿಗೆ ಭಾಸ್ಕರ ಬುವಾ ಅವರ ಕೀರ್ತಿ ಉತ್ತರ ಭಾರತದತ್ತ ಹರಡಿತು. ಅದರ ಪರಿಣಾಮವಾಗಿ ಬುವಾ ಅವರು ಪಂಜಾಬ, ಸಿಂಧ ಮುಂತಾದೆಡೆಗಳಲ್ಲಿ ಸಂಗೀತ ಕಾರ್ಯಕ್ರಮ ನೀಡಿದರು. ಪಂಜಾಬದ ಅಲಿಭಕ್ಷ ಖಾನರಂತಹ ಹೆಸರಾಂತ ಸಂಗೀತಗಾರರು ಬುವಾ ಅವರ ಸಂಗೀತ ಕೇಳಿ ಪ್ರಭಾವಿತರಾದರು.

''ವಿಷ್ಣು ಬುವಾ ಪಿಂಗಳೆಯವರಲ್ಲಿ ಪ್ರಾರಂಭಗೊಂಡ ಭಾಸ್ಕರ ಬುವಾ ಅವರ ಸಂಗೀತ ಕಲಿಕೆಯ ನಾದಯಾತ್ರೆ ಫಯಾಜ ಮಹಮದ್‌ಖಾನ ಅಲ್ಲಾದಿಯಾಖಾನ, ನತ್ಥಖಾನ ಮುಂತಾದ ಘಟಾನುಘಟಿಗಳ ಗರಡಿಮನೆಯಲ್ಲಿ ಸಿದ್ಧಿಪಡೆಯಿತು. ಹೀಗೆ ತಯಾರಾದ ಭಾಸ್ಕರ ಬುವಾ ಅವರ ಹಾಡುಗಾರಿಕೆಯಲ್ಲಿ ವಿವಿಧ ಘರಾಣೆಯ ಅನೇಕ ಉತ್ತಮಾಂಶಗಳು ಸಮಾವೇಶಗೊಂಡಿದ್ದವು. ಸಂಗೀತ ಸಾಧನೆ, ಬೋಧನೆಯಲ್ಲಿ ಬುವಾ ಅವರದೇ ಒಂದು ವೈಶಿಷ್ಟ್ಯವಾಗಿತ್ತು. ಅವರ ಸಂಗೀತಕ್ಕೆ ಮಾರು ಹೋಗಿ ಅನೇಕ ಜನ ಶಿಷ್ಯರು ಅವರ ಬಳಿ ಬಂದರು. ಸಂಗೀತ ವಿದ್ಯೆ ಕಲಿತು ಹೆಸರಾಂತ ಸಂಗೀತಗಾರರೆನಿಸಿದರು''[೫೦] ಎಂದು ಶ್ರೀ/ಸಿದ್ಧರಾಮಯ್ಯ ಮಠಪತಿ ಬರೆದಿದ್ದಾರೆ. ಅಂಥವರಲ್ಲಿ ಮಾಸ್ಟರ್ ಕೃಷ್ಣರಾವ, ದಿಲೀಪಚಂದವೇದಿ, ಗೋವಿಂದರಾವ ಟೇಂಬೆ, ಭಾಯಿಲಾಲ ಮಹಮ್ಮದ್, ಯಶವಂತ ಬುವಾ ಶುಕ್ಲ, ಪಿತ್ರೇವಕೀಲ, ಶಂಕರ ದೀಕ್ಷಿತ ಜಂತಲಿ ಮುಂತಾದವರು ಉಲ್ಲೇಖನೀಯರು.

ನಾಡಿನುದ್ದಕ್ಕೂ ಸಂಗೀತ ಸಂಚಾರಿಗಳಾಗಿ ಸಂಚರಿಸಿ, ಸಂಗೀತ ಶಿಕ್ಷಕರಾಗಿ, ಖ್ಯಾತಗಾಯಕರಾಗಿ, ಸಂಗೀತ ಸಂಸ್ಥೆಗಳ ಸಂಸ್ಥಾಪಕರಾಗಿ ಕೆಲಸ ಮಾಡಿದ ಪಂ. ಭಾಸ್ಕರ ಬುವಾ ಬಖಲೆಯವರು ರಕ್ತಕ್ಷಯ ವ್ಯಾಧಿಯ ತೊಂದರೆಯಿಂದಾಗಿ೧೯೨೨ರ ಏಪ್ರಿಲ೮ ರಂದು ಪುಣೆಯಲ್ಲಿ ನಿಧನ ಹೊಂದಿದರು. ಅವರು ನಿಧನರಾದ ನಂತರ ಪ್ರತಿವರ್ಷ ಆ ದಿನದಂದು ಅವರ ನೆನಪಿನಲ್ಲಿ ಸಂಗೀತ ಶ್ರದ್ಧಾಂಜಲಿ ಕಾರ್ಯಕ್ರಮವನ್ನು ನಿರಂತರವಾಗಿ ನಡೆಸುತ್ತ ಬರುತ್ತಿದ್ದಾರೆ. ಅವರ ನಿಧನದಿಂದಾಗಿ ಹಿಂದುಸ್ತಾನಿ ಸಂಗೀತದ ಭಾಸ್ಕರ ಅಸ್ತನಾದನೆಂದು ಪ್ರಸಿದ್ಧ ಸಂಗೀತಗಾರ ಪಂ. ವಿಷ್ಣು ದಿಗಂಬರ ಪುಲಸ್ಕರ ಅವರು ನುಡಿದದ್ದು ಅಕ್ಷರಶಃ ಸತ್ಯವಾದ ಮಾತು.

---

೫೦. ಹಿಂದುಸ್ತಾನ ಸಂಗೀತಗಾರರು : ಶ್ರೀ ಸಿದ್ಧರಾಮಯ್ಯ ಮಠಪತಿ, ಪುಟ-೮

## ೫.೨೦.ಪಂ. ಚಂದ್ರಶೇಖರ ಪುರಾಣಿಕಮಠ

ಹಿಂದುಸ್ತಾನಿ ಸಂಗೀತ ಕ್ಷೇತ್ರದ ವ್ಯಾಪ್ತಿ ತುಂಬ ವಿಸ್ತಾರ. ಕರ್ನಾಟಕವನ್ನೊಳಗೊಂಡು ಅದರ ಹರವು ರಾಷ್ಟ್ರದ ತುಂಬ ವ್ಯಾಪಕ. ಹಿಂದುಸ್ತಾನಿ ಹಾಡುಗಾರಿಕೆಯಲ್ಲಿ ಅಧಿಕ ಸಂಖ್ಯೆಯ ಗಾಯಕರು ಕನ್ನಡಿಗರು. ಆ ಸಾಲಿನಲ್ಲಿ ವಿರಾಜಮಾನವಾದ ಒಂದು ಹೆಸರು ಪಂ. ಚಂದ್ರಶೇಖರ ಪುರಾಣಿಕಮಠ.

ಗ್ವಾಲಿಯರ್ ಘರಾಣೆಯ ಅದ್ವಿತೀಯ ಗಾಯಕ ಪಂ. ಚಂದ್ರಶೇಖರ ಪುರಾಣಿಕ ಮಠರು ಜನಿಸಿದ್ದು ಹಾವೇರಿಯಲ್ಲಿ ೧೯೨೬ ರ ಜನೇವರಿ ೨ ರಂದು. ಸಂಗೀತ ಪರಿಸರದ ಮನೆಯಲ್ಲಿ ಜನಿಸಿದ ಅವರಿಗೆ ಎಳೆಯಲ್ಲಿಯೇ ನಾದದಲ್ಲಿ ಮನಸ್ಸು ಹರಿಯಿತು. ಪ್ರಾಥಮಿಕ ಶಾಲಾ ಹಂತದಲ್ಲಿಯೇ ಶಾಲೆಗೆ ಶರಣು ಹೊಡೆದು ಸಂಗೀತದತ್ತ ಒಲಿದು ಬಂದ ಚಂದ್ರಶೇಖರರಿಗೆ ಅವರ ಅಣ್ಣ ಪಂ. ಮೃತ್ಯುಂಜಯ ಬುವಾ ಅವರೇ ಮೊದಲ ಗುರು. ಅವರು ಗಾನಯೋಗಿ ಪಂ.ಪಂಚಾಕ್ಷರ ಗವಾಯಿಗಳ ಹಿರಿಯ ಶಿಷ್ಯರಲ್ಲೊಬ್ಬರು.

ಅಣ್ಣನ ಬಳಿ ಸಂಗೀತ ಶಿಕ್ಷಣಕ್ಕೆ ನಾಂದಿ ಹಾಕಿಸಿಕೊಂಡ ಚಂದ್ರಶೇಖರರವರು ಸಂಗೀತದಲ್ಲಿ ಹೆಚ್ಚಿನ ವಿದ್ಯೆ ಸಂಪಾದಿಸಬೇಕೆಂಬ ಉದ್ದೇಶದಿಂದ ಗದುಗಿನ ವೀರೇಶ್ವರ ಪುಣ್ಯಾಶ್ರಮಕ್ಕೆ ಬಂದು ಪಂ. ಪಂಚಾಕ್ಷರ ಗವಾಯಿಗಳ ಶಿಷ್ಯತ್ವ ವಹಿಸಿ ಸಂಗೀತ ಕಲಿಕೆಗೆ ತೊಡಗಿದರು. ಗವಾಯಿಗಳ ನೆಚ್ಚಿನ ಶಿಷ್ಯರಾಗಿ ಗುರುವಿನ ಗರಡಿಯಲ್ಲಿ ಕಠಿಣತಮ ಸಾಧನೆಗೈದರು. ಪಂ.ಪುಟ್ಟರಾಜ ಕವಿ ಗವಾಯಿಗಳಲ್ಲೂ ಕೆಲವು ವರ್ಷ ಸಂಗೀತ ಸಾಧನೆ ಮಾಡಿದರು. ನಂತರ ಅವರು ಪಂಢರಪುರದ ಪಂ.ಜಗನ್ನಾಥ ಬುವಾ ಅವರಲ್ಲಿ ಮೂರು ವರ್ಷ ಸಂಗೀತ ಶಿಕ್ಷಣ ಪಡೆದುಕೊಂಡರು. ಹೀಗೆ ದೀರ್ಘಕಾಲದವರೆಗೆ ಸಂಗೀತ ಶಿಕ್ಷಣ ಪಡೆದು, ಅವಿರತ ಸಾಧನೆಯ ಮೂಲಕ ಚಂದ್ರಶೇಖರರವರು ಹಿಂದುಸ್ತಾನಿ ಹಾಡುಗಾರಿಕೆಯಲ್ಲಿ ಹೆಸರು ಪಡೆದುಕೊಂಡರು. ಗುರುವಿನ ಮಾರ್ಗದರ್ಶನ, ನಿಷ್ಠೆಯ ಸಾಧನೆಯ ಫಲವಾಗಿ ಇಂದು ಪಂ. ಚಂದ್ರಶೇಖರ ಪುರಾಣಿಕ ಮಠರು ಹಿಂದುಸ್ತಾನಿ ಸಂಗೀತದ ಸುಪ್ರಸಿದ್ಧ ಗಾಯಕರ ಪಂಕ್ತಿಯಲ್ಲಿ ಒಬ್ಬರೆನಿಸಿದ್ದಾರೆ.

ಸಂಗೀತದಲ್ಲಿ ಅಪಾರ ಸಾಧನೆ ಹಾಗೂ ಸಿದ್ಧಿಯನ್ನು ಪಡೆದ ಪಂ. ಚಂದ್ರಶೇಖರವರು ೧೯೫೧ ರಲ್ಲಿ ವೃತ್ತಿ ಜೀವನಕ್ಕೆ ನಾಂದಿ ಹಾಡಿದರು. ಉತ್ತರ ಕನ್ನಡದ ಶಿರಸಿಯ ಶ್ರೀ ಮಾರಿಕಾಂಬಾ ಹೈಸ್ಕೂಲಿನಲ್ಲಿ ಹನ್ನೊಂದು ವರ್ಷ, ೧೯೬೩ ರಲ್ಲಿ ಹಾವೇರಿಯಲ್ಲಿ ಹನ್ನೆರಡು ವರ್ಷ ಸಂಗೀತ ಶಿಕ್ಷಕರಾಗಿ ಸೇವೆ ಮಾಡಿ, ೧೯೭೫ ರಲ್ಲಿ ಧಾರವಾಡ ಆಕಾಶವಾಣಿಯ ನಿಲಯದ ಕಲಾವಿದರಾಗಿ ಸೇರಿ ಅಲ್ಲಿ ಹನ್ನೊಂದು ವರ್ಷ ಸಂಗೀತ ಸೇವೆ ಮಾಡಿ, ೧೯೮೬ ರಲ್ಲಿ ಸೇವೆಯಿಂದ ನಿವೃತ್ತಿ ಹೊಂದಿದರು. ಸಂಗೀತ ಶಿಕ್ಷಕ ವೃತ್ತಿಯೊಂದಿಗೆ ಮುಂಬೈಯ ಅಖಿಲ ಭಾರತ ಗಂಧರ್ವ ಮಹಾಮಂಡಳದಿಂದ ಸಂಗೀತ ವಿಶಾರದ ಪದವಿಯನ್ನು ಪಡೆದು ೧೯೮೦ ರಿಂದಲೇ ಧಾರವಾಡ ಆಕಾಶವಾಣಿಯ ಅಧಿಕೃತ ಶಾಸ್ತ್ರೀಯ ಹಾಗೂ ಸುಗಮ ಸಂಗೀತ ಕಲಾವಿದರೆನಿಸಿದ್ದ ಪಂ. ಚಂದ್ರಶೇಖರರವರು ನಿವೃತ್ತಿ ಹೊಂದಿದ

ನಂತರ ಕೆಲವು ವರ್ಷ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಸ್ನಾತಕೋತ್ತರ ಸಂಗೀತ ಅಧ್ಯಯನ ಪೀಠದಲ್ಲಿ ಗೌರವ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿ, ಈಗ ಧಾರವಾಡದಲ್ಲಿ ವಿಶ್ರಾಂತಿ ಜೀವನ ನಡೆಸುತ್ತಿದ್ದಾರೆ.

''ಪಂ. ಚಂದ್ರಶೇಖರ ಪುರಾಣಿಕಮಠರು ತುಂಬ ಸಾಧು ಸ್ವಭಾವದ ವ್ಯಕ್ತಿ, ಸಾದಾ ಉಡುಪುದಾರಿ, ಅಷ್ಟೇನು ಎತ್ತರವಲ್ಲದ ದೇಹ, ಕೆಂಪುಬಣ್ಣದ ಶರೀರ, ಕಚ್ಚೆ ಪಂಚೆ, ಬಿಳಿ ನೆಹರು ಶರ್ಟ, ತಲೆಯ ಮೇಲೆ ಕಪ್ಪು ಟೊಪ್ಪಿಗೆ, ಬಗಲಿಗೊಂದು ಉದ್ದನೆಯ ಚೀಲ, ಮೇಲ್ನೋಟಕ್ಕೆ ಅವರೊಬ್ಬ ಶ್ರೀಸಾಮಾನ್ಯ. ಆದರೆ ಅಂತರಂಗದಲ್ಲಿ ಅವರೊಬ್ಬ ಸಂಗೀತದ ಮೇರು ವ್ಯಕ್ತಿ. ಅನೇಕ ರಾಗಗಳ, ಹಲವು ಚೀಜ್‌ಗಳ ಖಜಾನೆ. ಅವರೊಂದು ತುಂಬಿದ ಕೊಡ. ಸಂಗೀತ ಕ್ಷೇತ್ರದ ಒಬ್ಬ ಅಜಾತಶತ್ರು. ಮಿತಭಾಷಿ, ಸ್ನೇಹಜೀವಿ, ಸದ್ವಿನಯದ ಸಾಕಾರಮೂರ್ತಿ ಸಂಗೀತದ ಭಂಡಾರವೇ ತಮ್ಮಲ್ಲಿ ತುಂಬಿಕೊಂಡಿದ್ದರೂ ಸಹ ಅವರೆಂದೂ ಅದನ್ನು ಹಾಗೆಂದು ಭಾವಿಸಿಕೊಂಡವರಲ್ಲ. ಹಾಲನ್ನರಸಿ ಬಂದವರಿಗೆ ಅವರದು ಸಕ್ಕರೆಯ ಸ್ನೇಹ. ಅವರದು ಮಗುವಿನಂತಹ ಮನಸ್ಸು, ಹಾಲಿನಂತಹ ಭಾವ''[೫೧] ಎಂದು ಶ್ರೀ ಸಿದ್ಧರಾಮಯ್ಯ ಮಠಪತಿ ಬರೆದಿದ್ದಾರೆ.

ಅವರ ಹಾಡುಗಾರಿಕೆ ತುಂಬ ಪರಿಣಾಮಕಾರಕ. ಆದರೆ ಹಾಡುಗಾರಿಕೆಯಲ್ಲಿ ಗ್ವಾಲಿಯರ್ ಘರಾಣೆಯ ವೈಶಿಷ್ಟ್ಯಗಳು ಸುಸ್ಪಷ್ಟ. ಗಂಭೀರ ಸ್ವರವಿನ್ಯಾಸ, ನಿಚ್ಚಳ ತಾನ ವಿಸ್ತಾರ, ಲಯದ ಬಿಗಿಬಂಧ ಅವರ ಗಾಯಕಿಯಲ್ಲಿ ಸಮೃದ್ಧ. ಖಯಾಲ್ ಮೊದಲ್ಗೊಂಡು ಧ್ರುಪದ್, ಧಮಾರ್, ಠುಮ್ರಿ, ಭಜನ್, ವಚನ, ದಾಸರಪದ, ತತ್ವಪದ, ರಂಗಗೀತೆ ಮುಂತಾದ ಗಾಯನ ಪ್ರಕಾರಗಳು ಅವರ ಗಾಯಕಿಯಲ್ಲಿ ನಿಚ್ಚಳ. ಮೂರು ಸಪ್ತಕಗಳ ಪಂಚಮ ಸ್ವರದವರೆಗೂ ಅವರ ಧ್ವನಿ ವಿಸ್ತಾರ. ಸರಳ ಗಾಯನ, ಸ್ಪಷ್ಟ ಉಚ್ಚರಣೆ, ನಿಖರತಾನ ಬಾಜಿ ಅವರ ಕಂಠದಲ್ಲಿ ಮುಪ್ಪುರಿಗೊಂಡಿವೆ.

ಗ್ವಾಲಿಯರ್ ಘರಾಣೆಯ ಸುಪ್ರಸಿದ್ಧ ಗಾಯಕ ಪಂ. ಚಂದ್ರಶೇಖರ ಪುರಾಣಿಕ ಮಠರು ಸಂಗೀತ ಕಲೆಯಲ್ಲಿ ಶ್ರೀಮಂತರು. ಆದರೆ ಆರ್ಥಿಕವಾಗಿ ಬಡವರು. ಸಂಗೀತ ಕ್ಷೇತ್ರದಲ್ಲಿ ಹೆಸರು ಮಾಡಿ, ನಾದಲೋಕಕ್ಕೆ ತಮ್ಮ ಜೀವನವನ್ನೇ ಸವೆಸುತ್ತಿರುವ ಅವರೀಗ ಎಪ್ಪತ್ತು ವರ್ಷದ ವೃದ್ಧಾಪ್ಯದಲ್ಲಿ ಸ್ವಂತ ಮನೆಯಿಲ್ಲದೆ ಧಾರವಾಡದ ಸಾಧನಕೇರಿಯಲ್ಲಿ ಬಾಡಿಗೆ ಮನೆಯೊಂದರಲ್ಲಿ ಬದುಕಿನ ಉತ್ತರಾರ್ಧ ದಿನಗಳನ್ನು ಕಳೆಯುತ್ತಿರುವುದು ಸಂಗೀತಗಾರರ ದಯನೀಯ ಸ್ಥಿತಿಯನ್ನು ಎತ್ತಿ ತೋರಿಸುತ್ತದೆ.

ತಮ್ಮ ಸಂಗೀತದಿಂದ ಜಗದ ಜೀವಿಗಳಿಗೆ ಆನಂದವನ್ನು ಉಣಬಡಿಸುತ್ತಿರುವ ಒಬ್ಬ ಕಲಾವಿದನಿಗೆ ಸರಕಾರದ ಹಾಗೂ ಸಮಾಜದ ಆಸರೆ, ಆಶ್ರಯ ಅಗತ್ಯ. ಆದರೆ ಅವರು ಜಗವೆಲ್ಲ ನಗುತಿರಲು ಜಗದಳುವು ನನಗಿರಲಿ ಎಂಬ ಕವಿವಾಣಿಯಂತೆ ಬದುಕಿನ ಕಹಿಯನ್ನು ತಾವುಂಡು ಸಂಗೀತದ ಸವಿಯನ್ನು ಇತರರಿಗೆ ಹಂಚುತ್ತಿರುವುದು ಒಬ್ಬ ಮಹಾನ್ ಕಲಾವಿದನ ಮಹಾನ್ ವ್ಯಕ್ತಿತ್ವಕ್ಕೆ ದಿವ್ಯ ನಿದರ್ಶನ.

---

೫೧. ಹಿಂದುಸ್ತಾನಿ ಸಂಗೀತಗಾರರು : ಶ್ರೀ ಸಿದ್ಧರಾಮಯ್ಯ ಮಠಪತಿ, ಪುಟ- ೫೪

ಪಂ. ಚಂದ್ರಶೇಖರರವರ ಶಿಷ್ಯ ಸಂಪತ್ತು ಅಪಾರ. ಅವರ ಬಳಿ ಸಂಗೀತ ಕಲಿತ ಅನೇಕ ಕಲಾವಿದರು ಇಂದು ಸಂಗೀತ ಕ್ಷೇತ್ರದಲ್ಲಿ ಹೆಸರು ಮಾಡಿದ್ದಾರೆ. ಮಾಡುತ್ತಿದ್ದಾರೆ. ನಿತ್ಯ ಬೆಳಗಿನ ಐದು ಗಂಟೆಯಿಂದ ರಾತ್ರಿ ಒಂಬತ್ತರವರೆಗೆ ಸಂಗೀತದ ಪಾಠ ನಿರಂತರ. ಅವರ ಶಿಷ್ಯರಲ್ಲಿ ಆರ್. ಟಿ. ಹೆಗಡೆ, ಪರಮೇಶ್ವರ ಹೆಗಡೆ, ಶಾಂತರಾಮ ಹೆಗಡೆ, ಕು.ಶಾರದಾ ಭಟ್, ರಘುಪತಿ ಎನ್. ಭಟ್, ಎಸ್. ಎಮ್. ಭಟ್, ವಿದ್ವಾನ್ ಕೆ. ಗಣಪತಿ ಭಟ್, ವಿರೇಶ ಹಿರೇಮಠ, ಕು. ವಿದ್ಯಾ ಉಡಪ, ಕು. ಪ್ರತಿಭಾ ಕವಡೀಮಟ್ಟಿ, ಕು. ನಾಗರತ್ನಾ ನವಲಗುಂದ, ಕು. ಸೀಮಾ ರಾಯಕರ, ಕು. ಪ್ರತಿಭಾ ಮೂಲಿಮನಿ.

ಪಂ. ಚಂದ್ರಶೇಖರರು ಧಾರವಾಡ-ಹುಬ್ಬಳ್ಳಿ ಮೊದಲ್ಗೊಂಡು ಬೆಂಗಳೂರು, ಮೈಸೂರು, ಉಡುಪಿ, ಹೈದ್ರಾಬಾದ, ಭೂಪಾಲ, ಮದ್ರಾಸ, ಮುಂಬೈ ಮುಂತಾದೆಡೆಗಳಲ್ಲಿ ಸಂಗೀತ ಕಚೇರಿ ನೀಡಿ, ಅಪಾರ ಸಂಖ್ಯೆಯ ಅಭಿಮಾನಿಗಳನ್ನು ಹೊಂದಿದವರಾಗಿದ್ದಾರೆ. ಇಂಥಹ ಕ್ರಿಯಾಶೀಲ ಕಲಾವಿದ ಪಂ. ಚಂದ್ರಶೇಖರರವರಿಗೆ ಅನೇಕ ಪ್ರಶಸ್ತಿ ಪುರಸ್ಕಾರಗಳು ಸಂದಿವೆ. ಅಂಥವುಗಳಲ್ಲಿ ೧೯೬೩ ರಲ್ಲಿ ಸೊರಬದ ಎಚ್. ಗುರುಶಾಂತ ಗವಾಯಿ ಪುಣ್ಯ ತಿಥಿಯಲ್ಲಿ ಸನ್ಮಾನ, ೧೯೮೦ ರ ಹೊನ್ನಾವರ ತಾಲೂಕಾ ಸಂಗೀತ ಸಮ್ಮೇಳನದ ಸನ್ಮಾನ, ೧೯೮೩ ರಲ್ಲಿ ಬಸವಲಿಂಗ ಶಿವಯೋಗಿಗಳಿಂದ 'ಸಂಗೀತ ಕಲಾಸಾಗರ', ೧೯೯೨ ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ನೀಡಿದ 'ಕರ್ನಾಟಕ ಕಲಾ ತಿಲಕ', ೧೯೯೩ ರಲ್ಲಿ ಸೊರಬ ಸಂಗೀತ ಸಮಿತಿಯ 'ಚಂದ್ರಹಾಸ', ೧೯೯೬ ರಲ್ಲಿ ದಾವಣಗೆರೆಯಲ್ಲಿ ನೀಡಿದ ಪಂಚಾಕ್ಷರ ಗವಾಯಿ ಪ್ರಶಸ್ತಿ ಹಾಗೂ ೧೯೯೬ ಕ್ಕೆ ಎಪ್ಪತ್ತು ವರ್ಷ ತುಂಬಿದ ಸಂದರ್ಭದಲ್ಲಿ ಧಾರವಾಡದಲ್ಲಿ ಸಂಗೀತ ವಿದೂಷಿ ಡಾ.ಗಂಗೂಬಾಯಿ ಹಾನಗಲ್ಲ ಅವರ ಅಧ್ಯಕ್ಷತೆಯಲ್ಲಿ (೧೯೯೬ ಜನೇವರಿ ೧೧) ನಡೆದ ನಾಗರಿಕ ಸನ್ಮಾನ ಮುಂತಾದವು ಉಲ್ಲೇಖನೀಯ. ಇಂತಹ ಮೇರು ಸದೃಶ ಕಲಾವಿದರಿಗೆ ರಾಷ್ಟ್ರೀಯ ಮಟ್ಟದ ಪ್ರಶಸ್ತಿಗಳು ದೊರೆಯಬೇಕಾದುದು ನ್ಯಾಯೋಚಿತ.

### ೩.೨೧.ಪಂ. ಗುರುರಾವ ದೇಶಪಾಂಡೆ

ಒಮ್ಮೆ ಕೊಲ್ಲಾಪುರದಲ್ಲಿ ಜೈಪುರ ಘರಾಣೆಯ ಅದ್ವಿತೀಯ ಗಾಯಕ ಉಸ್ತಾದ್ ಅಲ್ಲಾದಿಯಾಖಾನರ ಮನೆಯಲ್ಲಿ ಸುಪ್ರಸಿದ್ಧ ಸರೋದವಾದಕ ಉಸ್ತಾದ್ ಹಾಫೀಜ್ ಅಲಿಖಾನರ ವಾದನ ಕಚೇರಿ ಏರ್ಪಾಡಾಗಿತ್ತು. ಅಂದಿನ ಸಂಗೀತ ಕಾರ್ಯಕ್ರಮ ಕೇಳಲು ಅತ್ಯಧಿಕ ಸಂಖ್ಯೆಯಲ್ಲಿ ಸಂಗೀತಗಾರರು ರಸಿಕ ಶ್ರೋತೃಗಳು ಸೇರಿದ್ದರು. ಆ ಕಾರ್ಯಕ್ರಮಕ್ಕೆ ಧಾರವಾಡದಿಂದ ಆಗಮಿಸಿದ್ದ ಒಬ್ಬ ತರುಣ ಸಂಗೀತ ಸಾಧಕ ಶ್ರೋತೃಗಳ ಮೊದಲ ಸಾಲಿನಲ್ಲಿ ಕುಳಿತಿದ್ದ. ಕಾರ್ಯಕ್ರಮದ ಸಂಚಾಲಕರು ಹಾಫೀಜ್ ಅಲಿಖಾನರು ವೇದಿಕೆಗೆ ಬರುವುದನ್ನು ಇದಿರು ನೋಡುತ್ತಿದ್ದರು. ಆದರೆ ಅವರು ಬೇಗ ಬರಲಿಲ್ಲ. ನೆರೆದ ಶ್ರೋತೃಗಳನ್ನು ಕಾಯಿಸುವಂತಾದುದನ್ನು ಗಮನಿಸಿದ ಅಲ್ಲಾದಿಯಾಖಾನರ ಹಿರಿಯ ಮಗ ಉಸ್ತಾದ್ ಮಂಜೀಖಾನರು ಶ್ರೋತೃಗಳ ಮೊದಲ ಸಾಲಿನಲ್ಲಿ ಕುಳಿತಿದ್ದ

ಧಾರವಾಡದ ತರುಣ ಸಂಗೀತ ಸಾಧಕನನ್ನು ವೇದಿಕೆಗೆ ಕರೆದುಕೊಂಡು ಬಂದು ಹಾಡಲು ಹೇಳಿದರು. ಇದ್ದಕ್ಕಿದ್ದಂತೆ ನೆರೆದ ಶ್ರೋತೃಗಳ ಸಮ್ಮುಖದಲ್ಲಿ ಹಾಡೆಂದಾಕ್ಷಣ ಆ ತರುಣ ತಬ್ಬಿಬ್ಬಾಗಿದ್ದ ತಂಬೂರಿ ಶ್ರುತಿಗೊಳಿಸಿ ನಟಬಿಹಾಗ್ ರಾಗ ಹಾಡಿದ. ನೆರೆದ ಶ್ರೋತೃಗಳು ಕ್ಷಣಕಾಲ ಮೂಕವಿಸ್ಮಿತರಾಗಿ ತರುಣಗಾಯಕನ ಸಂಗೀತಕ್ಕೆ ಮೈಮರೆತರು. ತರುಣನ ಹಾಡು ಕೇಳಿ ಸಂತುಷ್ಟಗೊಂಡ ಉಸ್ತಾದ್ ಮಂಜೀಖಾನರು ಹುಡುಗನ ಬೆನ್ನು ಚಪ್ಪರಿಸಿ ಭೇಷ್ ಎಂದು ಹರಸಿದರು. ಅಂಥ ಎಳೆ ವಯಸ್ಸಿನಲ್ಲೆ ಜೈಪುರ ಘರಾಣೆಯ ಪಿತಾಮಹರೆನಿಸಿಕೊಂಡ ಉಸ್ತಾದ್ ಅಲ್ಲಾದಿಯಾಖಾನರ ಸಮ್ಮುಖದಲ್ಲಿ, ಉಸ್ತಾದ ಮಂಜೀಖಾನರಿಂದ ಭೇಷ್ ಎನಿಸಿಕೊಂಡ ತರುಣಗಾಯಕರೇ ಪಂ. ಗುರುರಾವ ದೇಶಪಾಂಡೆಯವರು.

ಗ್ವಾಲಿಯರ್ ಘರಾಣೆಯ ಕರ್ನಾಟಕದ ದಿಗ್ಗಜರಲ್ಲೊಬ್ಬರಾದ ಪಂ. ಗುರುರಾವ ದೇಶಪಾಂಡೆಯವರು ಜನಿಸಿದ್ದು ಧಾರವಾಡದಲ್ಲಿ ೧೯೪೯ ರಲ್ಲಿ. ಸುಸಂಸ್ಕೃತ ದೇಶಪಾಂಡೆ ಮನೆತನದ ನಾರಾಯಣರಿಗೆ ಮೂರು ಜನ ಗಂಡುಮಕ್ಕಳು. ಎರಡನೆಯ ಮಗನೇ ಗುರುರಾಯರು. ಹಿರಿಯ ಮಗ ಪದವೀಧರನಾಗಿ ಶಿಕ್ಷಕನಾಗಿದ್ದ. ಗುರುರಾಯರು ಹೆಚ್ಚಿನ ಅಭ್ಯಾಸ ಕಲಿತು ವಕೀಲನಾಗಬೇಕೆಂಬುದು ತಂದೆ ನಾರಾಯಣ ರಾಯರ ಇಚ್ಛೆಯಾಗಿತ್ತು. ಹುಟ್ಟಿನೊಂದಿಗೆ ಮಧುರ ಕಂಠ ಪಡೆದುಕೊಂಡು ಬಂದಿದ್ದ ಗುರುರಾಯರ ಒಲವು ಸಂಗೀತದತ್ತ ಹರಿಯುತ್ತಿತ್ತು. ನಾರಾಯಣರಾಯರೂ ಸಹ ಸಂಗೀತ ಅಭಿಮಾನಿಗಳಾಗಿದ್ದರು. ಸ್ವತಃ ಕರ್ನಾಟಕೀ ಸಂಗೀತವನ್ನು ಬಲ್ಲವರಾಗಿದ್ದರು. ಆದರೆ ತಮ್ಮ ಮಗ ವಕೀಲನಾಗಬೇಕೆಂಬುದು ಅವರ ಅಭಿಲಾಷೆಯಾಗಿತ್ತು.

ಶಾಲಾದಿನಗಳಲ್ಲಿಯೇ ಸಂಗೀತದ ಬಗ್ಗೆ ವಿಶೇಷ ಆಸಕ್ತಿ ತಳೆದ ತರುಣ ಗುರುರಾಯರು ಕಾಲೇಜು ಕಟ್ಟೆ ಹತ್ತುವುದರೊಳಗಾಗಿ ಸಂಪೂರ್ಣ ಸಂಗೀತದತ್ತ ತಮ್ಮ ಮನಸ್ಸನ್ನು ಹರಸಿದ್ದರು. ಕಾಲೇಜು ದಿನಗಳಲ್ಲಿ ಗುರುರಾಯರು ತಮ್ಮ ಮನೆಯ ಸಮೀಪವಿದ್ದ ಪಿತ್ರೆ ವಕೀಲರ ಬಳಿ ತಂದೆಗೆ ತಿಳಿಯದಂತೆಯೇ ಸಂಗೀತಾಭ್ಯಾಸಕ್ಕೆ ತೊಡಗಿದ್ದರು. ಮಗನ ಸಂಗೀತಾಸಕ್ತಿಯನ್ನು ಗಮನಿಸಿದ ತಂದೆ ನಾರಾಯಣರಾಯರು ಮಗನ ಸಂಗೀತ ಯಾತ್ರೆಗೆ ಸಕಲ ಏರ್ಪಾಡು ಮಾಡಿಕೊಟ್ಟರು.

ಆರಂಭದಲ್ಲಿ ಪಿತ್ರೆ ವಕೀಲರಲ್ಲಿ ಹಾಗೂ ದತ್ತೋಪಂತ ಜೋಶಿಯವರಲ್ಲಿ ಸಂಗೀತ ವಿದ್ಯೆಯಾರಂಭಿಸಿದ ಗುರುರಾಯರು ಮುಂದೆ ಜೈಪುರ ಘರಾಣೆಯ ಗುರುವನ್ನರಸಿಕೊಳ್ಳಬೇಕೆಂದು ಅಭೀಪ್ಸೆಪಟ್ಟರು. ಆದರೆ ಅವರಿಗೆ ಗುರುವಾಗಿ ದೊರೆತವರು ಗ್ವಾಲಿಯರ್ ಘರಾಣೆಯ ಅದ್ವಿತೀಯ ಗಾಯಕ ಪಂ. ರಾಮಕೃಷ್ಣ ಬುವಾ ವಝೆಯವರು. ವಝೇ ಬುವಾ ಅವರು ಮಹಾರಾಷ್ಟ್ರದ ಮೂಲದವರು. ಗ್ವಾಲಿಯರ್ ಘರಾಣೆಯ ಅಧ್ವರ್ಯುಗಳಲ್ಲೊಬ್ಬರಾದ ಉಸ್ತಾದ್ ನತ್ಥೂಖಾನರ ದತ್ತುಪುತ್ರರಾದ ಉಸ್ತಾದ್ ನಿಸ್ಸಾರ್ ಹುಸೇನಖಾನರಲ್ಲಿ ವಝೇ ಬುವಾ ಅವರು ಸಂಗೀತ ಅಭ್ಯಾಸ ಮಾಡಿ ಸಂಗೀತ ಕ್ಷೇತ್ರದಲ್ಲಿ ಹೆಸರು ಗಳಿಸಿದ್ದರು. ವಝೇ ಬುವಾ ಅವರು ಗ್ವಾಲಿಯರ್‌ದಲ್ಲಿ ಸಂಗೀತ ಕಲಿತು ನೇಪಾಳ ಮಹಾರಾಜರಲ್ಲಿ ಆಸ್ಥಾನ ಸಂಗೀತಗಾರರಾಗಿ ಸೇವೆ ಸಲ್ಲಿಸಿ ಮುಂಬೈಗೆ ಬಂದು ಅಲ್ಲಿ ಕೆಲ ಕಾಲ ಇದ್ದು ಅನೇಕ ಶಿಷ್ಯರನ್ನು ತಯಾರು ಮಾಡಿ ಬೆಳಗಾವಿಗೆ ಬಂದು ಖಾಯಂ ಆಗಿ ನೆಲೆಸಿದರು.

ರಾಮಕೃಷ್ಣ ಬುವಾ ವಝೆಯವರು ಬೆಳಗಾವಿಗೆ ಬಂದು ನೆಲೆಸಿದ ಮೇಲೆ ಗುರುರಾವ ದೇಶಪಾಂಡೆಯವರು ಬೆಳಗಾವಿಗೆ ಹೋಗಿ ಗುರುವಿನ ಸೇವೆ ಮಾಡಿ ಭಕ್ತಿಯಿಂದ ಸಂಗೀತ ಕಲಿತು ನಿಷ್ಠೆಯಿಂದ ಸಂಗೀತ ಸಾಧನೆ ಮಾಡಿ ಸಂಗೀತ ಕ್ಷೇತ್ರದಲ್ಲಿ ಹೆಸರು ಪಡೆದುಕೊಂಡರು. ವಝೇ ಬುವಾ ಅವರು ಬೆಳಗಾವಿಯಲ್ಲಿ ನೆಲೆಸಿದ ಪರಿಣಾಮವಾಗಿ ಕರ್ನಾಟಕದಲ್ಲಿ ಗ್ವಾಲಿಯರ್ ಸಂಗೀತ ಇನ್ನಷ್ಟು ಬೆಳೆಯಲು ಸಹಕಾರಿಯಾಯಿತು. ಫಲವಾಗಿ ಗುರುರಾವ ದೇಶಪಾಂಡೆಯವರಂತಹ ಮಹಾನ್ ಸಂಗೀತ ದಿಗ್ಗಜರು ಕರ್ನಾಟಕದಲ್ಲಿ ಬೆಳೆಯಲು ಸಾಧ್ಯವಾಯಿತು. ೧೯೩೦ ರ ದಶಕದ ಆರಂಭಕ್ಕೇ ಗುರುರಾವ ದೇಶಪಾಂಡೆಯವರು ಪ್ರತಿಷ್ಠಿತ ಗಾಯಕರೆಂದು ಹೆಸರು ಮಾಡಿದರು.

ವಿವಾಹ ಬಂಧನದಲ್ಲಿ ಸಿಲುಕಿದ ಮೇಲೆ ಗುರುರಾಯರು ಜೀವನೋಪಾಯಕ್ಕಾಗಿ ರಂಗಭೂಮಿಯನ್ನವಲಂಭಿಸಬೇಕಾಯಿತು. ಆಗಿನ ಕಾಲದ ನಾಟಕ ಕಂಪನಿಗಳು ಒಂದರ್ಥದಲ್ಲಿ ಹಿಂದುಸ್ತಾನಿ ಶಾಸ್ತ್ರೀಯ ಸಂಗೀತದ ವೇದಿಕೆಯಾಗಿದ್ದವು. ಹೆಸರಾಂತ ಸಂಗೀತಗಾರರು ನಾಟಕ ಕಂಪನಿಗಳಲ್ಲಿ ನಟರಾಗಿ, ಗಾಯಕರಾಗಿ, ಸಂಗೀತ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದರು. ಆರಂಭದಲ್ಲಿ ವಾಮನರಾವ್ ನಾಟಕ ಕಂಪನಿ ಸೇರಿದ ಗುರುರಾಯರು ನಟನೆ ಹಾಗೂ ಗಾಯನದಲ್ಲಿ ರಂಗಭೂಮಿಯ ಆಕರ್ಷಣೆಯಾಗಿದ್ದರು. ವಾಮನರಾವ ಕಂಪನಿಯ ಕೃಷ್ಣಾರ್ಜುನ ಕಾಳಗ ನಾಟಕದಲ್ಲಿ ಅರ್ಜುನನ ಪಾತ್ರದಲ್ಲಿ ಗುರುರಾಯರು, ಕೃಷ್ಣನ ಪಾತ್ರದಲ್ಲಿ ವಾಮನರಾಯರು ನೀಡಿದ ಅಭಿನಯ ಆ ದಿನಗಳಲ್ಲಿ ಒಂದು ಅವಿಸ್ಮರಣೀಯ ಸನ್ನಿವೇಶಗಳಾಗಿದ್ದವು. ಮೊದಲು ವಾಮನರಾಯರ ವಿಶ್ವ ಗುಣಾದರ್ಶ ನಾಟಕ ಕಂಪನಿಯಲ್ಲಿ, ನಂತರ ಹತ್ತು ವರ್ಷ ಸುವಿಖ್ಯಾತ ಗುಳೇದಗುಡ್ಡ ಗಂಗೂಬಾಯಿ ಅವರ ಶ್ರೀಕೃಷ್ಣ ಸಂಗೀತ ನಾಟಕ ಮಂಡಳಿಯಲ್ಲಿ, ಆ ನಂತರ ಈ ಕಂಪನಿ ಮುಚ್ಚಲು ಅಬ್ಬಿಗೇರಿ ನಾಟಕ ಮಂಡಳಿಯಲ್ಲಿ ಸಂಗೀತ ನಿರ್ದೇಶಕರಾಗಿ ಗುರು ರಾಯರು ಮಾಡಿದ ರಂಗಭೂಮಿಯ ಸಂಗೀತ ಸೇವೆ ಅವಿಸ್ಮರಣೀಯ.

೧೯೩೪ ರಲ್ಲಿ ಅಬ್ಬಿಗೇರಿ ನಾಟಕ ಕಂಪನಿ ಮುಚ್ಚುವುದಕ್ಕಿಂತ ಮೊದಲು ಆ ಕಂಪನಿಯಲ್ಲಿ ಸಂಗೀತ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದ ಸಂದರ್ಭದಲ್ಲಿ ಗುರುರಾಯರು, ಆ ಕಂಪನಿಯ ಹುಕುಂ ಎಕ್ಕಾದಂತಿದ್ದ ಕಿತ್ತೂರು ಚೆನ್ನಮ್ಮ ನಾಟಕಕ್ಕೆ ಲೈಸೆನ್ಸ ಸಿಗದಾಯಿತು. ಇತ್ತ ಚೆನ್ನಮ್ಮನ ಪಾತ್ರಕ್ಕಾಗಿಯೇ ಖ್ಯಾತಿವೆತ್ತ ನಟಿ ರತ್ನಮ್ಮ ರಾಜಕೀಯ ವ್ಯಕ್ತಿ ರೋಣದ ಅಂದಾನಪ್ಪ ದೊಡ್ಡಮೇಟಿ ಅವರ ಕೈ ಹಿಡಿದು ಕಂಪನಿಗೆ ವಿದಾಯ ಹೇಳಿದರು. ಇಂತಹ ಸಂದರ್ಭದಲ್ಲಿ ಸ್ವತಃ ಗುರುರಾಯರೇ ಬಣ್ಣ ಹಚ್ಚಿಕೊಂಡು ತಮ್ಮ ಶಿಷ್ಯೆ ಭಾಗೀರಥಮ್ಮ ಜೊತೆ ಮಹಾನಂದಾ ನಾಟಕವನ್ನು ಕೂಡಿಸಿ ಜನಪ್ರಿಯತೆ ಗಳಿಸಿದರು. ಆದರೆ ಸಾಕಷ್ಟು ಹಣ ಗಳಿಸುವುದಾಗಲಿಲ್ಲ. ಮುಂದೆ ಬಣ್ಣದ ಬದುಕಿಗೇ ಮಂಗಳಹಾಡಿ ಗುರುರಾಯರು ಧಾರವಾಡದಲ್ಲಿ ನೆಲೆ ನಿಂತರು.

ಸಂಗೀತದಲ್ಲಿ ಹಣ ಹಾಗೂ ಹೆಸರು ಎರಡನ್ನು ಗಳಿಸಬೇಕಾದರೆ ಮುಂಬೈಗೆ ಹೋಗಬೇಕೆಂದು ನಿರ್ಧರಿಸಿದ ಗುರುರಾಯರು ಪ್ರಾಯದಲ್ಲಿಯೇ ಪತ್ನಿಯನ್ನು ಕಳೆದುಕೊಂಡು ಚಿಕ್ಕ ಚಿಕ್ಕ ಮಕ್ಕಳನ್ನು ಧಾರವಾಡದಲ್ಲಿ ತಂಗಿ ಶಾರದಕ್ಕನ ಕಾಳಜಿಗೆ ಬಿಟ್ಟು ಮುಂಬೈಗೆ ಬಂದರು. ಅಲ್ಲಿ ಅನೇಕ ಘಟಾನುಘಟಿ ಸಂಗೀತಗಾರರ ನೇರ ಸಂಪರ್ಕ ಗುರುರಾಯರಿಗೆ ದೊರೆಯಿತು. ೧೯೪೫-೫೦ರ ಅವಧಿಯಲ್ಲಿ ಫೈಯಾಜ್‌ಖಾನ, ಬಡೇಗುಲಾಮ ಅಲಿಖಾನ, ಕೇಸರಿಬಾಯಿ ಕೇರಕರ, ಮೋಘೂಬಾಯಿ ಕರಡೀಕರ, ಲಕ್ಷ್ಮೀಬಾಯಿ ಜಾಧವ ಇಂಥ ಗ್ವಾಲ್ಹೇರ ಮತ್ತು ಜೈಪುರ ಘರಾಣೆಗಳ ಘಟಾನುಘಟಿ ಸಂಗೀತಗಾರರ ಸಂಗೀತ ಕೇಳಿ, ತಮ್ಮ ಸ್ವಂತ ಹಾಡುಗಾರಿಕೆಯನ್ನು ವೈವಿಧ್ಯಮಯವಾಗಿ ಬೆಳೆಸಿಕೊಳ್ಳುವ ಅವಕಾಶ ಗುರುರಾಯರಿಗೆ ದೊರೆಯಿತು. ಅದರ ಫಲವಾಗಿ ಆಕಾಶವಾಣಿಯ ಗಾಯಕರ ಪಂಕ್ತಿಯಲ್ಲಿ ಗುರುರಾಯರ ಹೆಸರು ವಿರಾಜಮಾನವಾಯಿತು. ಆ ದಿನಗಳಲ್ಲಿ ಮುಂಬೈ ಆಕಾಶವಾಣಿ ಕೇಂದ್ರದಲ್ಲಿ ಕೆಲಸ ಮಾಡುತ್ತಿದ್ದ ಕನ್ನಡದ ಪ್ರಸಿದ್ಧ ಸಾಹಿತಿ ಶ್ರೀ ಎನ್.ಕೆ.ಕುಲಕರ್ಣಿಯವರ ಸಂಪರ್ಕ ಗುರುರಾಯರಿಗೆ ತುಂಬ ಸಹಕಾರಿಯಾಗಿತ್ತು.

ಮುಂಬೈ ಸಹವಾಸದಿಂದ ಗುರುರಾಯರ ಸಂಗೀತಕ್ಕೆ ಇನ್ನಷ್ಟು ಮೆರಗು ಬಂದಿತು. ತಮ್ಮ ಗ್ವಾಲಿಯರ್ ಗಾಯಕಿಗೆ, ಜೈಪುರ ಹಾಗೂ ಆಗ್ರಾ ಘರಾಣೆಯ ಸುಂದರ ಮೆರಗು ಪಡೆಯಿತು. ಗುರುರಾಯರ ಗಾಯಕಿ ಕಂಡು ಮುಂಬೈಯ ಗ್ರಾಮೋಫೋನ್ ರಿಕಾರ್ಡ್ ಕಂಪನಿ ಇವರ ಗಾನ ಮುದ್ರಿಕೆಗಳನ್ನು ಬಿತ್ತರಿಸಿತು. ಯಮನರಾಗದ 'ಮೌಂದರ ಬಾಜೋರೆ' ಹಾಗೂ ತೋಡಿ ರಾಗದ 'ಬರ ಸರಸತಿ ಸಮಾಗಮ' ಈ ಗಾನ ಸುರುಳಿಗಳು ಮಾರ್ಕೇಟಿನಲ್ಲಿ ಬಿಸಿಬಿಸಿ ದೋಸೆಯಂತೆ ಜನಪ್ರಿಯತೆ ಪಡೆದವು. ಆ ನಂತರ ಅವರು ಹಾಡಿದ ಮನಸನಿಟ್ಟಿಹಳೋ ಎನ್ನೊಳು ಬಾಲೆ ಎನ್ನುವ ರಂಗಗೀತೆ ದಾಖಲೆ ಪಡೆಯಿತು.

೧೯೫೦ ರಲ್ಲಿ ಧಾರವಾಡದಲ್ಲಿ ಆಕಾಶವಾಣಿ ಕೇಂದ್ರ ಸ್ಥಾಪನೆಯಾದ ಮೇಲೆ ಗುರುರಾಯರು ಅಲ್ಲಿ ಮ್ಯೂಜಿಕ್ ಪ್ರೊಡ್ಯೂಸರ್ ಆಗಿ ಬಂದರು. ಅದೇ ಸಮಯಕ್ಕೆ ಮುಂಬೈ ಆಕಾಶವಾಣಿಯಲ್ಲಿ ಕೆಲಸ ಮಾಡುತ್ತಿದ್ದ ಸಾಹಿತಿ ಕಲಾವಿಮರ್ಶಕ ಶ್ರೀ ಎನ್.ಕೆ.ಕುಲಕರ್ಣಿಯವರು ಧಾರವಾಡದ ಆಕಾಶವಾಣಿಗೆ ವರ್ಗವಾಗಿ ಬಂದರು. ಈ ಉಭಯರ ಸಮ್ಮಿಲನ ಆಕಾಶವಾಣಿಗೊಂದು ಹೊಸ ಆಯಾಮವನ್ನು ಕಲ್ಪಿಸಿಕೊಟ್ಟಿತು. ಹೊಸ ಹೊಸ ಸಾಹಿತ್ಯ ಸಂಗೀತ ಆಧಾರಿತ ಕಾರ್ಯಕ್ರಮಗಳು ಪ್ರಸಾರವಾದವು.

ಚುರಮುರಿ ಶೇಷಗಿರಿರಾಯರ ಕನ್ನಡ ಶಾಕುಂತಲ ನಾಟಕದ ಎಲ್ಲ ಹಾಡುಗಳೂ ಗುರುರಾಯರಿಗೆ ಕಂಠಸ್ಥವಾಗಿದ್ದವು. ಅವರು ಆಕಾಶವಾಣಿ ಮ್ಯೂಜಿಕ್ ಪ್ರೊಡ್ಯೂಸರ್ ಆಗಿ ಬಂದಮೇಲೆ ಕನ್ನಡ ಶಾಕುಂತಲ ನಾಟಕಕ್ಕೆ ಸಂಗೀತ ನಿರ್ದೇಶಿಸಿ ಪ್ರಸಾರ ಮಾಡಿದುದು ಕನ್ನಡ ಶಾಕುಂತಲ ನಾಟಕದ ಪುನರಾರಂಭವಾಯಿತೆನ್ನಬೇಕು. ಭಾರತ ಬಿಂದೂ ರಾಯರ ಗಮನಕ್ಕೆ ಮನಸೋತ ಗುರುರಾಯರು ತಮ್ಮ ಆತ್ಮಶಾಂತಿಗಾಗಿ ಗದುಗಿನ ಭಾರತದ ಗಮಕ ವಾಚನಕ್ಕೆ ತೊಡಗಿದರು. ಗಮಕಕ್ಕೆ ಹಿಂದುಸ್ತಾನಿ ರಾಗಗಳನ್ನು ಜೋಡಿಸಿರುವುದು ಗುರುರಾಯರ ಗಮಕದ ವೈಶಿಷ್ಟ್ಯ. ಗುರುರಾಯರ ಗಮಕ, ಬೆಟಗೇರಿ ಕೃಷ್ಣಶರ್ಮರ ವ್ಯಾಖ್ಯಾನ ಹಾಲುಜೇನಿನ ಸಂಗಮವಾಗಿತ್ತು.

ಕುಂದಗೋಳದ ಸವಾಯಿ ಗಂಧರ್ವರ ಸಮಕಾಲೀನರು ಹಾಗೂ ಅವರ ಪರಮ ಮಿತ್ರರಾಗಿದ್ದ ಗುರುರಾವ ದೇಶಪಾಂಡೆಯವರು, ಡಾ.ಗಂಗೂಬಾಯಿ ಹಾನಗಲ್ಲ, ಪಂ. ಭೀಮಸೇನ ಜೋಶಿ ಅವರುಗಳ ಆದರಣೀಯ ವ್ಯಕ್ತಿಗಳಾಗಿದ್ದರು. ಗುರು ರಾಯರ ಮೂರು ಜನ ಹೆಣ್ಣು ಮಕ್ಕಳು ಹಿರಿಯ ಮಗಳು ಸೌ. ಸುನಂದಾ ಕಡಪಾ, ಎರಡನೆಯ ಪ್ರೊ. ಮಾಲಾ ದೀಕ್ಷಿತ, ಕಿರಿಯ ಸೌ. ವಿಜಯಾ ಲಿಂಗಸೂರು ಎಲ್ಲರೂ ತಂದೆಯ ಹಾದಿಯಲ್ಲಿ ಮುನ್ನಡೆದಿದ್ದಾರೆ. ತಂದೆಯವರ ಸಂಗೀತ ಸಂಪತ್ತನ್ನು ಸಮರ್ಥವಾಗಿ ನಿರ್ವಹಿಸುತ್ತಿದ್ದಾರೆ.

೧೯೬೬ ರಲ್ಲಿ ಆಕಾಶವಾಣಿ ಕೆಲಸದಿಂದ ನಿವೃತ್ತಿಯಾದ ಮೇಲೆ ಗುರುರಾಯರು ತಮ್ಮ ಮಗನ ಹತ್ತಿರ ಜೀವನದ ಕೊನೆ ದಿನಗಳನ್ನು ಕಳೆದರು. ಆಗಾಗ ಧಾರವಾಡಕ್ಕೆ ಬರುತ್ತಿದ್ದರು. ಜೀವನದ ಅಂತಿಮ ದಿನಗಳಲ್ಲಿ ಅವರು ಗುರುದೇವ ರಾನಡೆಯವರ ಪರಮಭಕ್ತರಾಗಿಬಿಟ್ಟಿದ್ದರು.

''ಗುರುರಾಯರ ಸಂಗೀತ ಹಲವು ಘರಾಣೆಗಳ ಸಂಗಮವಾಗಿತ್ತು. ಆದರೆ ಅದು ಅವೆಲ್ಲವುಗಳನ್ನೂ ಮೀರಿದ ಉತ್ಕೃಷ್ಟವಾದ ಮೇಲ್ಮಟ್ಟವನ್ನು ಹೊಂದಿತ್ತು. ಇವುಗಳ ಹೊಳಹಿನಲ್ಲಿ ಕಟ್ಟಳೆಗಳ ಗಡಿರೇಖೆಯನ್ನು ಮೀರಿನಿಂತ ಸಂಗೀತ ಅವರದು. ಹಿಂದುಸ್ತಾನಿ ರಾಗದಲ್ಲಿ ಗಮಕವಾಚನ ಗೈಯುತ್ತಿರುವ ಅವರ ಗಮಕಕಲೆ ಕನ್ನಡ ಸಾಹಿತ್ಯಕ್ಕೊಂದು ವಿಶಿಷ್ಟ ಪ್ರಯೋಗವೆನಿಸಿತು''[೫೨] ಎಂದು ಶ್ರೀ ಸಿದ್ಧರಾಮಯ್ಯ ಮಠಪತಿಯವರು ಬರೆದಿದ್ದಾರೆ. ಹುಬ್ಬಳ್ಳಿಯಲ್ಲಿ ನಡೆದ ಗಮಕ ಸಂಗೀತ ಸಮ್ಮೇಳನದಲ್ಲಿ ಗುರುರಾಯರನ್ನು 'ಗಮಕ ಗೌರಿಶಂಕರ' ಎಂದು ಬಿರುದು ನೀಡಿ ಗೌರವಿಸಲಾಯಿತು. ಪಂಡಿತ ಭೀಮಸೇನ ಜೋಶಿಯವರು ಪುಣೆಯಲ್ಲಿ ಗುರುರಾಯರ ೬೦ ನೇ ಹುಟ್ಟುಹಬ್ಬದ ಷಷ್ಠಿಪೂರ್ತಿ ಸಮಾರಂಭ ಏರ್ಪಡಿಸಿ ಸನ್ಮಾನಿಸಿ ಗೌರವಿಸಿದರು. ಡಾ.ಗಂಗೂಬಾಯಿ ಹಾನಗಲ್ಲ ಅವರು ಕುಂದಗೋಳದ ತಮ್ಮ ಗುರು ಸವಾಯಿ ಗಂಧರ್ವರ ಪುಣ್ಯ ಸ್ಮರಣೆಯ ಸಂಗೀತೋತ್ಸವದಲ್ಲಿ ಗುರುರಾಯರಿಗೆ 'ಗಾಯನಾಚಾರ್ಯ' ಎಂಬ ಬಿರುದು ನೀಡಿ ಸನ್ಮಾನಿಸಿದರು. ೧೯೭೧ ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಗುರುರಾಯರನ್ನು ಸನ್ಮಾನಿಸಿ ಪ್ರಶಸ್ತಿ ನೀಡಿ ಗೌರವಿಸಿತು.

ನಮ್ಮ ನಾಟಕ ಸಂಗೀತ ಕಲೆಗಳು ಸುಶಿಕ್ಷಿತರಲ್ಲದವರ ಸೊತ್ತಾಗಿವೆ ಎಂಬ ಅಪವಾದವನ್ನು ದೂರ ಮಾಡಿ, ಸಂಗೀತ ಹಾಗೂ ರಂಗಭೂಮಿ ಎರಡೂ ಕ್ಷೇತ್ರಗಳಲ್ಲಿ ಸಮಾನ ಗೌರವಕ್ಕೆ ಪಾತ್ರರಾಗಿ, ಆಕಾಶವಾಣಿ ಹಾಗೂ ಸಾರ್ವಜನಿಕ ರಂಗಗಳೆರಡರಲ್ಲಿ ಗೌರವಯುತ ಸ್ಥಾನ ಪಡೆದು ೮೩ ವರ್ಷ ತುಂಬು ಜೀವನವನ್ನು ಬಾಳಿದ ಗುರುರಾವ ದೇಶಪಾಂಡೆಯವರು ೧೯೮೨ ರ ಡಿಸೆಂಬರ ೩ ರಂದು ಕೊನೆಯುಸಿರೆಳೆದರು.

ಗುರುರಾಯರು ಬಿಟ್ಟು ಹೋದ ಸಂಗೀತ ಸಂಪತ್ತೆಂದರೆ ಅವರ ಶಿಷ್ಯರು, ನಾರಾಯಣರಾವ ಮುಜುಮದಾರ್, ಲೋಣಕಡೆ, ಎಚ್. ಹಾವನೂರ, ಶ್ರೀಮತಿ ಲಕ್ಷ್ಮೀಬಾಯಿ ದಾತಾರ, ಶ್ರೀ ವಿನಾಯಕ ತೊರವಿ,

---

೫೨. ಹಿಂದುಸ್ತಾನಿ ಸಂಗೀತಗಾರರು : ಶ್ರೀ ಸಿದ್ಧರಾಮಯ್ಯ ಮಠಪತಿ, ಪುಟ-೨೮

ಶ್ರೀಮತಿ ಪ್ರೊ. ಲತಾ ನಾಡಗೇರ ಈ ಮೊದಲಾದ ಶಿಷ್ಯರು ಗುರುರಾಯರ ಪರಂಪರೆಯನ್ನು ಮುಂದುವರೆಸಿಕೊಂಡು ಬಂದಿದ್ದಾರೆ. ಶ್ರೀ ವಿನಾಯಕ ತೊರವಿಯವರು ಕರ್ನಾಟಕದ ಯುವ ಪ್ರತಿಭಾವಂತ ಗಾಯಕರ ಸಾಲಿನಲ್ಲಿ ಒಬ್ಬರಾಗಿದ್ದಾರೆ. ಅವರು ಪ್ರತಿವರ್ಷ ಬೆಂಗಳೂರಿನಲ್ಲಿ ತಾವೇ ಗುರುಗಳ ಪುಣ್ಯಸ್ಮರಣೆಯ ನಿಮಿತ್ತ ಸಂಗೀತ ಸಮಾರಾಧನೆ ನಡೆಸುತ್ತ ಗುರುಸೇವೆಯಲ್ಲಿ ನಿರತರಾಗಿದ್ದಾರೆ.

## ೫.೨೨.ಪ್ರೊ. ಅಜ್ಜಣ್ಣ ಪಾಟೀಲ

''ಸಾಹಿತ್ಯ, ಸಂಗೀತ ಮತ್ತು ಚಿತ್ರಕಲೆ ಇವು ಮೂರು ಸ್ವತಂತ್ರ ಕಲೆಗಳು. ಒಂದೊಂದು ಕಲೆಯಲ್ಲಿ ಪ್ರಬುದ್ಧತೆ ಪಡೆಯಲು ಅನೇಕ ವರ್ಷಗಳೇ ಬೇಕು. ಒಬ್ಬ ವ್ಯಕ್ತಿಯಲ್ಲಿ ಈ ಮೂರು ಕಲೆಗಳು ಸುಗಮಗೊಂಡು ಪ್ರತಿ ಕಲೆಯಲ್ಲಿ ಪ್ರೌಢಿಮೆ ಪಡೆಯುವುದು ತೀರಾ ಅಪರೂಪ. ಅಂತಹ ಅಪರೂಪದ ಕಲಾವಿದರಲ್ಲಿ ಪ್ರೊ. ಅಜ್ಜಣ್ಣ ಪಾಟೀಲ ಒಬ್ಬರು. ಅವರು ಹವ್ಯಾಸಿ ಚಿತ್ರಕಲಾವಿದರಾಗಿ, ಸಂಗೀತ ಉಪನ್ಯಾಸಕರಾಗಿ, ಪ್ರಾಧ್ಯಾಪಕರಾಗಿ, ಸ್ನಾತಕೋತ್ತರ ಸಂಗೀತ ವಿಭಾಗದ ಮುಖ್ಯಸ್ಥರಾಗಿ, ಸಂಶೋಧನೆಯ ಮಾರ್ಗದರ್ಶಕರಾಗಿ, ಮೂವತ್ತೈದು ವರ್ಷಕ್ಕೂ ಮಿಕ್ಕಿ ಸಂಗೀತ ಕ್ಷೇತ್ರದ ಸೇವೆ ಮಾಡಿ, ಹದಿನೈದಕ್ಕೂ ಮಿಕ್ಕಿ ಸಂಗೀತ ಗ್ರಂಥಗಳನ್ನು ರಚಿಸಿ, ಸಂಗೀತ ಲೋಕದಲ್ಲಿ ಹೆಸರು ಪಡೆದಿರುವುದು ಅವರ ಬಹುಮುಖ ವ್ಯಕ್ತಿತ್ವಕ್ಕೆ ದಿಟ್ಟ ನಿದರ್ಶನ''[೫೩] ಎಂದು ಶ್ರೀ ಸಿದ್ಧರಾಮಯ್ಯ ಮಠಪತಿಯವರು ಅವರ ವ್ಯಕ್ತಿತ್ವವನ್ನು ಗುರುತಿಸಿದ್ದಾರೆ.

ಸಂಗೀತ ಕ್ಷೇತ್ರದಲ್ಲಿ ಅಜ್ಜಣ್ಣ ಎಂದೇ ಪರಿಚಿತರಾಗಿರುವ ಪ್ರೊಫೆಸರ್ ಎ. ಯು. ಪಾಟೀಲ ಅವರು ಮೂಲತಃ ಬೆಳಗಾವಿ ಜಿಲ್ಲೆಯ ಬೈಲಹೊಂಗಲ ತಾಲೂಕಿನ ದೇಗಾಂವ ಗ್ರಾಮದವರು. ಅವರು ಜನಿಸಿದ್ದು ೧೯೩೧ ರ ಜನೇವರಿ ೨ ರಂದು ಅವರ ತಂದೆ ಶ್ರೀ ಉಳುವನಗೌಡರು ಗ್ರಾಮದ ಪೋಲೀಸ್‌ಪಾಟೀಲರು. ಸಂಗೀತ ಪ್ರೇಮಿಗಳು. ಬಾಲಗಂಧರ್ವರ ನಾಟ್ಯಗೀತೆಗಳ ಮೇಲೆ ಅವರಿಗೆ ಅಪಾರ ಒಲವು. ಮನೆಯಲ್ಲಿ ಸದಾಕಾಲ ಸಂಗೀತಚರ್ಚೆ. ವಿವಿಧ ಸಂಗೀತಗಾರರ ಹಾಡುಗಾರಿಕೆಯ ಧ್ವನಿಮುದ್ರಿಕೆಗಳು ಇವರಲ್ಲಿದ್ದವು. ಇಂತಹ ಸಂಗೀತಮಯ ವಾತಾವರಣದಲ್ಲಿ ಜನ್ಮ ತಳೆದ ಪ್ರೊ. ಅಜ್ಜಣ್ಣ ಪಾಟೀಲರಿಗೆ ಎಳೆತನದಿಂದಲೇ ಸಂಗೀತದಲ್ಲಿ ಆಸಕ್ತಿ ಮೂಡಿತು.

ಹುಟ್ಟೂರಿನಲ್ಲಿ ಪ್ರಾಥಮಿಕ ಶಿಕ್ಷಣ ಹಾಗೂ ಚನ್ನಮ್ಮನ ಕಿತ್ತೂರಿನಲ್ಲಿ ಪ್ರೌಢ ಶಿಕ್ಷಣ ಪಡೆದ ಅಜ್ಜಣ್ಣನವರು ಕಾಲೇಜು ಶಿಕ್ಷಣಕ್ಕಾಗಿ ಬೆಳಗಾವಿಗೆ ಬಂದರು. ಅಲ್ಲಿಯ ಲಿಂಗರಾಜ ಕಾಲೇಜಿನಲ್ಲಿ ಇಂಗ್ಲೀಷ ವಿಷಯದಲ್ಲಿ ಬಿ. ಎ. ಹಾಗೂ ಎಂ. ಎ. ಪದವಿ ಪಡೆದುಕೊಂಡರು. ಎಳವೆಯಿಂದಲೇ ಸಂಗೀತದ ಬಗ್ಗೆ ಆಸಕ್ತಿ ಹೊಂದಿದ್ದ ಅಜ್ಜಣ್ಣನವರಿಗೆ ಕಾಲೇಜಿನ ದಿನಗಳಲ್ಲಿ ಸಂಗೀತ ಕಲಿಯುವ ಅವಕಾಶ ದೊರೆಯಿತು. ಪಂ. ಪಂಚಾಕ್ಷರ

---

೫೩. ಹಿಂದುಸ್ತಾನಿ ಸಂಗೀತಗಾರರು : ಶ್ರೀ ಸಿದ್ಧರಾಮಯ್ಯ ಮಠಪತಿ, ಪುಟ- ೩೧

ಗವಾಯಿಗಳ ಹಿರಿಯ ಶಿಷ್ಯರಲ್ಲಿ ಒಬ್ಬರಾದ ಪಂ. ಮೃತ್ಯುಂಜಯ ಬುವಾ ಪುರಾಣಿಕಮಠರಿಂದ ಸಂಗೀತ ಶ್ರೀಕಾರವಾಯಿತು. ಗ್ವಾಲಿಯರ್ ಘರಾಣೆಯ ಹೆಸರಾಂತ ಗಾಯಕರೆನಿಸಿದ ಪಂ. ಮೃತ್ಯುಂಜಯ ಬುವಾ ಅವರಲ್ಲಿ ಅಜ್ಜಣ್ಣ ನಾಲ್ಕೈದು ವರ್ಷ ಕಠಿಣತಮ ಸಂಗೀತ ತಾಲೀಮು ಪಡೆದುಕೊಂಡರು. ಗುರುಗಳ ಮಾರ್ಗದರ್ಶನದಲ್ಲಿ ಶ್ರದ್ಧೆಯಿಂದ ಸಂಗೀತ ಸಾಧನೆ ಮಾಡುತ್ತ ಅಜ್ಜಣ್ಣನವರು ಮುಂಬೈಯ ಅಖಿಲ ಭಾರತ ಗಾಂಧರ್ವ ಮಹಾವಿದ್ಯಾಲಯ ಮಂಡಳದಿಂದ ಸಂಗೀತ ಅಲಂಕಾರ ಹಾಗೂ ಗುಜರಾತದ ಬಡೋದಾ ವಿಶ್ವವಿದ್ಯಾಲಯದಿಂದ ಸಂಗೀತದಲ್ಲಿ ಎಂ. ಎ. ಪದವಿ ಪಡೆದುಕೊಂಡರು.

ಇಂಗ್ಲೀಷ ವಿಷಯದಲ್ಲಿ ಎಂ. ಎ. ಪದವಿ ಪಡೆದು ಧಾರವಾಡಕ್ಕೆ ಆಗಮಿಸಿ, ಅಲ್ಲಿಯ ಕರ್ನಾಟಕ ಕಲಾ ಕಾಲೇಜಿನಲ್ಲಿ ಇಂಗ್ಲೀಷ ಉಪನ್ಯಾಸಕರಾಗಿ ವೃತ್ತಿ ಜೀವನಕ್ಕಿಳಿದ ಪ್ರೊ. ಅಜ್ಜಣ್ಣ ಪಾಟೀಲರಿಗೆ, ವಿಖ್ಯಾತ ಗಾಯಕ ಪಂ. ಮಲ್ಲಿಕಾರ್ಜುನ ಮನಸೂರ ಅವರ ಸಂಪರ್ಕ ದೊರೆಯಿತು. ಪಂ. ಮನ್ಸೂರರಲ್ಲಿ ಹೆಚ್ಚಿನ ಸಂಗೀತ ಸಾಧನೆ ಮಾಡಬೇಕೆಂದು ಪ್ರೊ. ಅಜ್ಜಣ್ಣನವರು ಬಯಸಿದರು. ಅದಕ್ಕೆ ಪಂ. ಮನ್ಸೂರರರು ಸಮ್ಮತಿಸಿದರು. ಆಗಲೇ ಪಂ. ಮೃತ್ಯುಂಜಯ ಬುವಾ ಅವರಲ್ಲಿ ಗ್ವಾಲಿಯರ್ ಘರಾಣೆಯ ತಾಲೀಮು ಪಡೆದಿದ್ದ ಪ್ರೊ. ಅಜ್ಜಣ್ಣನವರಿಗೆ ಪಂ. ಮಲ್ಲಿಕಾರ್ಜುನ ಮನ್ಸೂರವರು ಗಂಡಾಕಟ್ಟಿ ಶಿಷ್ಯನನ್ನಾಗಿಸಿ ಜೈಪುರ ಘರಾಣೆಯ ಸಂಗೀತವನ್ನೂ, ಅದರೊಂದಿಗೆ ತಮ್ಮ ಮಗಳು ಸೌ. ಲಕ್ಷ್ಮಿದೇವಿಯನ್ನೂ ಪ್ರೊ. ಅಜ್ಜಣ್ಣನವರಿಗೆ ಧಾರೆಯೆರೆದರು. ಡಾ. ಮನ್ಸೂರ ಅವರ ಸಮರ್ಥ ಮಾರ್ಗದರ್ಶನದಲ್ಲಿ ಪ್ರೊ. ಅಜ್ಜಣ್ಣನವರು ಸಿದ್ಧಹಸ್ತ ಗಾಯಕರಾದರು. ಪ್ರೊ. ಅಜ್ಜಣ್ಣನವರು ಬೆಳಗಾವಿ ಜಿಲ್ಲೆಯ ಜೈಪುರ ಘರಾಣೆಯ ಏಕಮೇವ ಸಂಗೀತ ಕಲಾವಿದರೆನಿಸಿದರು.

ಪ್ರೊ. ಅಜ್ಜಣ್ಣ ಪಾಟೀಲರು ಕರ್ನಾಟಕ ಕಾಲೇಜಿನಲ್ಲಿ ಇಂಗ್ಲೀಷ ಉಪನ್ಯಾಸಕರಾಗಿ ಕೆಲಸ ಮಾಡುತ್ತಿರುವ ದಿನಗಳಲ್ಲಿ ಸಂಗೀತ ವಿಭಾಗ ಆರಂಭಗೊಂಡಿತು. ಡಾ. ಡಿ. ಸಿ. ಪಾವಟೆಯವರ ಮಾರ್ಗದರ್ಶನದಂತೆ, ಪ್ರೊ. ಅಜ್ಜಣ್ಣನವರು ೧೯೫೪ ರಲ್ಲಿ ಸಂಗೀತ ವಿಭಾಗದಲ್ಲಿ ಸಂಗೀತ ಉಪನ್ಯಾಸಕರಾಗಿ ಸಂಗೀತ ಕ್ಷೇತ್ರದ ಸೇವೆ ಆರಂಭಿಸಿದರು. ಅಲ್ಲಿಯೇ ಅವರು ಪ್ರಾಧ್ಯಾಪಕರಾಗಿ ಮುಂದೆ ೧೯೮೨ ರಲ್ಲಿ ಕ.ವಿ.ವಿ. ಸ್ನಾತಕೋತ್ತರ ಸಂಗೀತ ವಿಭಾಗದ ಪ್ರಾಧ್ಯಾಪಕರಾಗಿ, ಮುಖ್ಯಸ್ಥರಾಗಿ ಸೇವೆ ಸಲ್ಲಿಸಿ ೧೯೯೧ ರಲ್ಲಿ ಸೇವೆಯಿಂದ ನಿವೃತ್ತಿ ಹೊಂದಿದರು. ಪ್ರೊ. ಅಜ್ಜಣ್ಣ ಅವರು ಸಂಗೀತ ವಿಭಾಗದ ಮುಖ್ಯಸ್ಥರಾಗಿ ಕೆಲಸ ಮಾಡಿದ ಅವಧಿಯಲ್ಲಿ ಸಂಗೀತ ಬೋಧನೆಯ ಜೊತೆಗೆ ಸಂಗೀತದಲ್ಲಿ ಸಂಶೋಧನಾ ಕಾರ್ಯಕ್ಕೂ ಅವಕಾಶ ಮಾಡಿಕೊಟ್ಟಿದ್ದಾರೆ. ಅನೇಕ ಸಂಶೋಧನಾ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡಿದ್ದಾರೆ. ಅವರ ಮಾರ್ಗದರ್ಶನದಲ್ಲಿ ಈಗಾಗಲೇ ಡಾ. ಮೀರಾಗುಂಡಿ ಹಾಗೂ ಡಾ. ವೀರಣ್ಣ ಹೂಗಾರ ಪಿಎಚ್.ಡಿ. ಪದವಿ ಪಡೆದಿದ್ದಾರೆ.

ಕನ್ನಡ ಹಾಗೂ ಇಂಗ್ಲೀಷ ಭಾಷೆಗಳಲ್ಲಿ ಅಧಿಕೃತವಾಗಿ ಬರೆಯಬಲ್ಲ ಹಾಗೂ ಮಾತನಾಡಬಲ್ಲ ಪ್ರೊ. ಅಜ್ಜಣ್ಣನವರು ಸುಮಾರು ೧೫ ಕ್ಕೂ ಮಿಕ್ಕಿ ಸಂಗೀತ ಪುಸ್ತಕಗಳನ್ನು ಇಂಗ್ಲೀಷ ಹಾಗೂ ಕನ್ನಡ ಭಾಷೆಗಳಲ್ಲಿ

ಬರೆದಿದ್ದಾರೆ. ಸಂಗೀತಶಾಸ್ತ್ರ ಪರಿಚಯ, ಸಂಗೀತಶಾಸ್ತ್ರ ದರ್ಪಣ, ಪಂಚಾಕ್ಷರ ಗವಾಯಿ, ಹಿಂದುಸ್ತಾನಿ ಸಂಗೀತ ಪದ್ಧತಿಯ ರೂಪ ರೇಷೆಗಳು ಉಲ್ಲೇಖನೀಯವಾಗಿವೆ. ಸಂಗೀತಶಾಸ್ತ್ರ ದರ್ಪಣ ಗ್ರಂಥಕ್ಕೆ ೧೯೮೫-೮೬ ನೇ ಸಾಲಿನ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಪುಸ್ತಕ ಬಹುಮಾನ ದೊರೆತಿದೆ. ಅವರು ಬರೆದ ಪುಸ್ತಕಗಳನ್ನು ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ,ಕ.ವಿ.ವಿ. ಪಠ್ಯಪುಸ್ತಕ ನಿರ್ದೇಶನಾಲಯ ಪ್ರಕಟಿಸಿದೆ. ಯು.ಜಿ.ಸಿ.ಯ ವಿನಂತಿಯ ಮೇರೆಗೆ ಅವರು (ಹಿಂದುಸ್ತಾನಿ ಸಂಗೀತದಲ್ಲಿ ಭವ್ಯ ಸೌಂದರ್ಯಾನುಭೂತಿ ಎಂಬ ವಿಷಯ ಕುರಿತು) ಮೂರು ಬೃಹತ್ ಪ್ರಮಾಣದ ಪುಸ್ತಕಗಳನ್ನು ಬರೆದುಕೊಟ್ಟಿದ್ದಾರೆ. ಸಂಗೀತ ಕಲೆ ಕುರಿತು ಅವರು ಬರೆದ ಅನೇಕ ಸಂಶೋಧನಾತ್ಮಕ ಪ್ರಬಂಧಗಳು ಅನೇಕ ನಿಯತಕಾಲಿಕೆಗಳಲ್ಲಿ ಪ್ರಕಟಗೊಂಡಿವೆ.

ಪ್ರೊ. ಅಜ್ಜಣ್ಣ ಪಾಟೀಲರು ಒಬ್ಬ ಸೃಜನಶೀಲ ಕವಿಯೂ ಹೌದು. ಹೈಸ್ಕೂಲು ವಿದ್ಯಾರ್ಥಿಯಾಗಿದ್ದಾಗಲೇ ಅವರು ಅನೇಕ ಕವನಗಳನ್ನು ರಚಿಸಿದ್ದಾರೆ. 'ನಿನ್ನ ಧರ್ಮ' ಎನ್ನುವ ಕವನವೊಂದನ್ನು ಕಂಡ ಮಧುರಚೆನ್ನರು ಇವರನ್ನು ತುಂಬಾ ಮೆಚ್ಚಿಕೊಂಡು ಹರಸಿದರಂತೆ. ಸುಮಾರು ೩೦೦ ಕ್ಕೂ ಮಿಕ್ಕಿ ಕವನಗಳನ್ನು ಅವರು ರಚಿಸಿದ್ದಾರೆ. ಶಬರಿ, ಶಯನಸುಂದರಿ, ದ್ರೌಪದಿ ಮುಂತಾದ ಗೀತನಾಟಕಗಳನ್ನು ರಚಿಸಿದ್ದಾರೆ. ಅವರ ನಾಟಕ ಹಾಗೂ ಕವನಗಳು ಪುಸ್ತಕ ರೂಪದಲ್ಲಿ ಪ್ರಕಟಗೊಂಡರೆ ಕನ್ನಡ ಸಾಹಿತ್ಯ ಲೋಕಕ್ಕೆ ಮತ್ತಷ್ಟು ಲಾಭವಾಗುವುದರಲ್ಲಿ ಸಂದೇಹವಿಲ್ಲ.

ಪ್ರೊ. ಅಜ್ಜಣ್ಣ ಪಾಟೀಲರು ಒಬ್ಬ ಪ್ರಬುದ್ಧ ಪೂರ್ಣ ಚಿತ್ರಕಲಾವಿದರು. ಚಿತ್ರ ಕಲೆ ಅವರಿಗೆ ಶಾಲಾ ದಿನಗಳಲ್ಲಿಯೇ ಅಂಟಿಕೊಂಡದ್ದು. ಅವರಿಗೆ ಚಿತ್ರಕಲೆಯಲ್ಲಿ ಪ್ರೇರಣೆ ನೀಡಿದ್ದು ಅವರ ಊರಲ್ಲಿರುವ ಹನ್ನೊಂದನೇ ಶತಮಾನದ್ದೆಂದು ಹೇಳಲಾದ ಕದಂಬ ಕಾಲದ ಕಮಲನಾರಾಯಣ ದೇವಾಲಯದ ವಿವಿಧ ಶಿಲ್ಪ ಕಲಾಕೃತಿಗಳು ಅವುಗಳನ್ನೇ ಮಾದರಿಯಾಗಿಸಿಕೊಂಡು ಚಿತ್ರಬಿಡಿಸುತ್ತ ಸಾಗಿ ಚಿತ್ರಕಲೆಯಲ್ಲಿ ಆಸಕ್ತಿ ತಳೆದ ಅವರು ಅದರಲ್ಲಿ ಪರಿಣತಿ ಪಡೆಯಲು ಅವಿರತ ಶ್ರಮಿಸಿದರು. ಬೆಳಗಾವಿಯ ಮರಾಠಾ ಮಂಡಳ ಹೈಸ್ಕೂಲಿನ ಚಿತ್ರಕಲಾ ಶಿಕ್ಷಕರಾಗಿದ್ದ ಶ್ರೀ ಪವಾರ ಮತ್ತು ಶ್ರೀ ಕೆ.ಬಿ.ಕುಲಕರ್ಣಿ ಅವರಲ್ಲಿ ಚಿತ್ರಕಲೆಯ ಬಗ್ಗೆ ಅಭ್ಯಾಸ ಮಾಡಿ ಮುಂದೆ ಚಿತ್ರ ಕಲೆಯಲ್ಲಿ ಹೆಚ್ಚಿನ ಅಭ್ಯಾಸಕ್ಕಾಗಿ ಮುಂಬೈನ ಸರ್.ಜೆ. ಜೆ. ಸ್ಕೂಲ್ ಆಫ್ ಆರ್ಟ್ಸ್‌ದಿಂದ ಜಿ.ಡಿ. ಆರ್ಟ್ಸ್‌ದಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾದರು.

ಆರಂಭದಲ್ಲಿ ಹವ್ಯಾಸವಾಗಿ ಬೆಳೆದ ಚಿತ್ರಕಲೆ ಮುಂದೆ ಅವರ ಬದುಕಿನ ಭಾಗವೂ ಆಯಿತು. ಚಿತ್ರಕಲಾವಿದರಾಗಿ ಅಜ್ಜಣ್ಣ ಅವರ ಸಾಧನೆ ಗಮನಾರ್ಹವಾದುದು. ತೈಲವರ್ಣ ಮತ್ತು ಜಲವರ್ಣ ಎರಡೂ ಮಾಧ್ಯಮಗಳಲ್ಲಿ ಹೊಂದಿದ ವಿಶೇಷ ಪರಿಣತಿ ಅವರ ಕಲಾಕೃತಿಗಳಲ್ಲಿ ಎದ್ದು ಕಾಣುತ್ತದೆ. ಪಾರದರ್ಶಕ ವರ್ಣಪದ್ಧತಿಯಂತೆ ರಚಿಸಿದ ಹಲವಾರು ಭಾವಚಿತ್ರಗಳು, ನಿಸರ್ಗ ಚಿತ್ರಗಳು ಅಪರೂಪದ ಕೃತಿಗಳಾಗಿವೆ. ಜಲವರ್ಣ ಹಾಗೂ ತೈಲವರ್ಣಗಳಲ್ಲಿ ರಚಿಸಿದ ಭಾವಚಿತ್ರ ಹಾಗೂ ಸಂಯೋಜನಾ ಚಿತ್ರಗಳಲ್ಲಿ ಅವರಿಗಿರುವ

ರೇಖಾಚಿತ್ರಣ ಹಾಗೂ ವರ್ಣವಿನ್ಯಾಸಗಳ ಪ್ರಭುತ್ವವನ್ನೂ, ಆಯಾ ಮಾಧ್ಯಮಗಳನ್ನು ಸಮರ್ಪಕವಾಗಿ ಬಳಸಿಕೊಳ್ಳುವ ಪ್ರಾವಿಣ್ಯವನ್ನೂ ಕಾಣಬಹುದು.

ಪ್ರೊ. ಅಜ್ಜಣ್ಣ ಪಾಟೀಲರ ಕಲಾಕೃತಿಗಳ ಮೇಲೆ ಪಾಶ್ಚಾತ್ಯ ಕಲಾವಿದರ ನೈಜ ಚಿತ್ರಗಳ ಪ್ರೇರಣೆ, ಅದರಲ್ಲೂ ರೆಂಬ್ರಾಂಟ್, ರೇನಿಯರ್ ಮುಂತಾದ ಕಲಾವಿದರ ಪ್ರಭಾವವನ್ನು ಗುರುತಿಸಬಹುದು. ಅನೇಕ ಕಡೆಗಳಲ್ಲಿ ಅವರ ಏಕವ್ಯಕ್ತಿ ಕಲಾಪ್ರದರ್ಶನ ಜರುಗಿವೆ. ಪುಣೆಯ ರೋಟರಿ ಕ್ಲಬ್ ಏರ್ಪಡಿಸಿದ ಚಿತ್ರಕಲಾ ಪ್ರದರ್ಶನದಲ್ಲಿ ಇವರು ರಚಿಸಿದ No Body Love Me, ಕ್ಷಿತಿಜದಾಚೆ, ಮುಂತಾದ ಕಲಾ ಕೃತಿಗಳು ಬಹುಮಾನ ಪಡೆದಿವೆ.

ಪ್ರೊ. ಅಜ್ಜಣ್ಣ ಪಾಟೀಲರು ಕೇವಲ ಸಂಗೀತಗಾರರಷ್ಟೇ ಅಲ್ಲ ಅವರೊಬ್ಬ ಉತ್ತಮ ಸಾಹಿತಿ ಅತ್ಯುತ್ತಮ ಚಿತ್ರಕಲಾವಿದ. ಸಂಗೀತ, ಸಾಹಿತ್ಯ, ಚಿತ್ರರಚನೆ ಈ ಮೂರು ಕಲೆಗಳು ಒಬ್ಬ ಕಲಾವಿದನಲ್ಲಿ ಮೈದಳೆಯುವುದು ತುಂಬಾ ಅಪರೂಪ. ಅಂತಹ ಅಪರೂಪದ ಕಲಾವಿದರು ಪ್ರೊ. ಅಜ್ಜಣ್ಣ ಪಾಟೀಲರು.

ಪ್ರೊ. ಅಜ್ಜಣ್ಣ ಪಾಟೀಲರ ತ್ರಿಕೂಟಕಲೆ ಕುರಿತು ವಿಮರ್ಶಕರು ಹೀಗೆ ಹೇಳಿದ್ದಾರೆ "Noe less absorbing Prof. Patil's innate quality and maturity in the Art of Drawing and Painting each of his paintings reputes with rhythmic patterns woven with colourful light and shade and hears affinity to this Music.

In Proff. Patil one can see a rare combination of three arts Music Literature and Painting.

ಪ್ರೊ. ಅಜ್ಜಣ್ಣನವರ ಹಾಡುಗಾರಿಕೆಯಲ್ಲಿ ಗ್ವಾಲಿಯರ್ ಹಾಗೂ ಜೈಪುರ ಘರಾಣೆಯ ಮುಖ್ಯ ಅಂಶಗಳು ಎದ್ದು ಕಾಣುತ್ತವೆ. ಜೈಪುರ ಘರಾಣೆಯ ಅತ್ಯಂತ ಕ್ಲಿಷ್ಟ ರಾಗಗಳಾದ ಮೀರಾಬಾಯಿ ಮಲ್ಹಾರ, ದೂಲಿಯಾ ಮಲ್ಹಾರ, ಚರ್ಜುಕಿ ಮಲ್ಹಾರ, ಚಂಚಲಸಾ ಮಲ್ಹಾರ, ಬಹಾದ್ದೂರಿ ತೋಡಿ, ಲಕ್ಷ್ಮೀ ತೋಡಿ, ಖಟ್ ಮುಂತಾದ ಕಠಿಣ ರಾಗಗಳನ್ನು ಅವರು ಅತ್ಯಂತ ಸುಲಲಿತವಾಗಿ ಹಾಡಬಲ್ಲರು. ಅವರು ಬೆಂಗಳೂರು, ಮೈಸೂರು, ಕಲಕತ್ತಾ, ನಾಗಪೂರ, ಕೊಲ್ಲಾಪೂರ ಮುಂತಾದ ಕಡೆಗಳಲ್ಲಿ ಸಂಗೀತ ಕಚೇರಿ ನೀಡಿದ್ದಾರೆ. ಶ್ರೀ ಪಾಂಡುರಂಗ ಪಾಟೀಲ, ಸೀಮಾ ಪಾಟೀಲ ಡಾ. ಮೀರಾ ಗುಂಡಿ, ಡಾ. ಶ್ರೀಮತಿ ಸರಯೂ ಸೊನ್ನಿ, ಪ್ರೊ. ಸಿದ್ಧರಾಮಯ್ಯ ಮಠಪತಿ ಮುಂತಾದವರು ಅವರ ಶಿಷ್ಯರಾಗಿದ್ದಾರೆ.

ಪ್ರೊ. ಅಜ್ಜಣ್ಣ ಪಾಟೀಲರ ವಿದ್ವತ್ತನ್ನು ಗಮನಿಸಿ ಕಿತ್ತೂರು, ಬೆಳಗಾವಿ, ನಾಗಪೂರ ಮುಂತಾದ ಸಂಘ ಸಂಸ್ಥೆಗಳು ಅವರನ್ನು ಸತ್ಕರಿಸಿ ಗೌರವಿಸಿದೆ. ಕರ್ನಾಟಕ ಸರ್ಕಾರದ ಸಂಗೀತ ಮತ್ತು ನೃತ್ಯ ಅಕಾಡೆಮಿ ೧೯೯೩-೯೪ ನೇ ಸಾಲಿನ ಅಕಾಡೆಮಿ ಪ್ರಶಸ್ತಿಯೊಂದಿಗೆ 'ಕರ್ನಾಟಕ ಕಲಾ ತಿಲಕ' ಎಂಬ ಬಿರುದನ್ನಿತ್ತು ಅವರನ್ನು ಗೌರವಿಸಿದೆ.

## ೫.೨೩. ಪಂ. ದೇವೇಂದ್ರಪ್ಪ ಭಾಸ್ಕರ

ಶಿಶುನಾಳ ಶರೀಫರ ಶಿಷ್ಯರಾದ ಗುರುಪಾದಪ್ಪನೆಂಬುವರು ಚಿಕ್ಕನರ್ತಿ ಗ್ರಾಮದವರು. ಶರೀಫರಲ್ಲಿ ರಿವಾಯತ್ ಪದ ಹಾಗೂ ಅಲಾಪಿ ಪದಗಳನ್ನು ಅಭ್ಯಸಿಸಿದ ಗುರುಪಾದಪ್ಪನವರ ಪ್ರೀತಿ ಶಿಷ್ಯ ಶ್ರೀಯುತ ದೇವೇಂದ್ರಪ್ಪ ಭಾಸ್ಕರ.

ಇವರು ಬಾಲ್ಯದಲ್ಲಿ ಜಾನಪದಗೀತೆ ಹಾಗೂ ಆಲಾವಿಪದ, ರಿವಾಯತ್ ಪದಗಳು, ನಾಟ್ಯಗೀತೆ ಮತ್ತು ನಾಟಕದಲ್ಲಿ ಪಾತ್ರ, ದೊಡ್ಡಾಟ, ಹೀಗೆ ಸಂಗೀತ ಕಲೆಯು ಇವರಿಗೆ ದೈವದತ್ತವಾಗಿ ಬಂದಂತ ಕಲೆ. ಇಷ್ಟರಲ್ಲಿ ಇವರ ಹೆಸರು ಪ್ರಸಿದ್ಧಿಗೆ ಬಂದಿತ್ತು. ಮುಂದೆ ದೇವೇಂದ್ರಪ್ಪನವರು ಕೆಲ ಕಲಾವಿದರನ್ನು ಕೂಡಿಕೊಂಡು ಒಂದು ನಾಟಕ ಕಂಪನಿಯನ್ನು ಪ್ರಾರಂಭ ಮಾಡಿದರು. ತಮ್ಮ ಗುರುಗಳಾದ ಗುರುಪಾದಪ್ಪನವರ ಹೆಸರಿಸಿ ಶ್ರೀಗುರುಪಾದೇಶ್ವರ ಪ್ರಸಾದಿತ ನಾಟಕ ಮಂಡಳಿ ಹಿರೇನರ್ತಿ ಎಂಬ ಹೆಸರಿನ ನಾಟಕ ಕಂಪನಿ ಕಟ್ಟಿ ಅದರಲ್ಲಿ ನಾಮಾಂಕಿತ ನಟರನ್ನು ಇರಿಸಿಕೊಂಡಿದ್ದರು. ಇದರಲ್ಲಿ ಶಿರಹಟ್ಟಿಯ ಶ್ರೀನಾಗಪ್ಪನವರ ಶಿಷ್ಯರಾದ ಶಿವಲಿಂಗಸ್ವಾಮಿ ಪುರಾಣಿಕ ಮಠ ಇವರು ಹಾರ್ಮೋನಿಯಂ ವಾದಕರು. ವೀರಭದ್ರಪ್ಪ ಹುಬ್ಬಳ್ಳಿ ಹಾಗೂ ನಲವಡಿ ನೀಲಕಂಠಶಾಸ್ತ್ರಿಗಳು ಇವರೀರ್ವರು ನಾಟಕ ರಚನೆ ಮತ್ತು ಗೀತ ರಚನೆಕಾರರು. ಪಾತ್ರಧಾರಿಗಳು ಶ್ರೀಲಿಂಗರಾಜಬುವಾ ಯರಗುಪ್ಪಿ, ವೀರಭದ್ರಪ್ಪನವರು ಕಮ್ಮಾರ, ಫಕ್ಕೀರಪ್ಪ ತಳವಾರ, ಹುಸೇನಸಾಬ ಅಣ್ಣಿಗೇರಿ, ಮಾನಪ್ಪ ಪತ್ತಾರ, ಕುಬೇರಪ್ಪ ಅರ್ಕಸಾಲಿ, ಕಟ್ಟಯ್ಯನವರು ರೊಟ್ಟಿಗವಾಡ ಮುಂತಾದವರು ಮುಖ್ಯಪಾತ್ರಧಾರಿಗಳಾಗಿ ದೇವೇಂದ್ರಪ್ಪನವರು ಭಾಗವಹಿಸುತ್ತಿದ್ದರು.

ಶ್ರೀದೇವೇಂದ್ರಪ್ಪನವರು ನಾಟಕ ಪ್ರಯೋಗಿಸುತ್ತ ಅಲ್ಲಲ್ಲಿ ಸಂಚಾರ ಕೈಕೊಂಡರು. ಮುಂದೆ ಖರ್ಜಗಿಯ ಕ್ಯಾಂಪಿನಲ್ಲಿ ಶ್ರೀಕೃಷ್ಣಲೀಲಾ 'ಎಂಬ ನಾಟಕ ಪ್ರಯೋಗ ನಡೆದಿತ್ತು. ಆ ನಾಟಕದಲ್ಲಿ ಮುಖ್ಯ ಪಾತ್ರವೆಂದರೆ ಕಂಸನದು ಅದನ್ನು ದೇವೇಂದ್ರಪ್ಪನವರೇ ಮಾಡುತ್ತಿದ್ದರು. ಇವರ ಪಾತ್ರವನ್ನು ನೋಡಲಿಕ್ಕೆ ಬಹು ಸಂಖ್ಯೆಯಲ್ಲಿ ಜನರು ಸೇರುತ್ತಿದ್ದರು. ಒಂದು ಪ್ರಯೋಗದಲ್ಲಿ ದೇವೇಂದ್ರಪ್ಪನವರು ತಮ್ಮ ಮಾತನ್ನು ಹೇಳುತ್ತ ಆರ್ಭಟಿಸುತ್ತ ರಂಗ ಪ್ರವೇಶಿಸಿದಾಗ ನಾಟಕವನ್ನು ನೋಡಲು ಬಂದ ಒಬ್ಬ ಗರ್ಭವತಿ ಹೆಣ್ಣು ಮಗಳು ಆ ಪಾತ್ರದ ಆರ್ಭಟಕ್ಕೆ ಅಲ್ಲಿಯೇ ಒಂದು ಗಂಡು ಮಗುವಿಗೆ ಜನ್ಮವಿತ್ತಳು.

ದೇವೇಂದ್ರಪ್ಪನವರು ಅನೇಕ ವಾದ್ಯಗಳನ್ನು ನುಡಿಸುವದರಲ್ಲಿ ಪರಿಣಿತರಿದ್ದರು. ಆಗ ಬಾಲಕನಾದ ಲಿಂಗರಾಜು ಬುವಾ ಯರಗುಪ್ಪಿಯವರಿಗೆ ಸಂಗೀತದ ಮೊದಲ ಗುರುಗಳಾಗಿ ಮತ್ತು ಅವರನ್ನು ಒಳ್ಳೆಯ ಸಂಗೀತಗಾರನನ್ನಾಗಿ ಮಾಡುವ ಹೊಣೆ ಹೊತ್ತು ಹೆಚ್ಚಿನ ಶಿಕ್ಷಣಕ್ಕಾಗಿ ನೀಲಕಂಠಬುವಾ ಮಿರಜಿ ಇವರಲ್ಲಿಗೆ ಕಳುಹಿಸಿ ಮಾರ್ಗದರ್ಶನ ಮಾಡಿದವರಾಗಿದ್ದರು.

## ೫.೨೪. ಶ್ರೀ ಎ. ಕರೀಮ್‌ಖಾನ

ಸಿತಾರರತ್ನ ರಹಿಮತ್‌ಖಾನ ಹಿಂದುಸ್ತಾನಿ ಸಂಗೀತ ಕ್ಷೇತ್ರದಲ್ಲಿ ಬಹು ಎತ್ತರದ ಒಂದು ಹೆಸರು. ಅವರು ಉತ್ತರದಲ್ಲಿ ಜನಿಸಿ ದಕ್ಷಿಣಕ್ಕೆ ಬಂದು ನೆಲೆಸಿ ಕರ್ನಾಟಕ ಸಿತಾರವಾದನ ಪರಂಪರೆಗೆ ನಾಂದಿ ಹಾಡಿದವರು. ಅಂತಹ ಮಹಾನ್‌ಕಲಾವಿದರ ಮೂರು ಜನ ಗಂಡು ಮಕ್ಕಳಲ್ಲಿ ಮೊದಲನೆವಯರೇ ಪ್ರೊ. ಎ. ಕರೀಮ್‌ಖಾನ.

ಅಬ್ದುಲ್ ಕರೀಮ್‌ಖಾನರು ಜನಿಸಿದ್ದು ಧಾರವಾಡದಲ್ಲಿ ೧೯೧೪ ರಲ್ಲಿ ಅವರದು ಪರಂಪರಗಾತ ಸಂಗೀತ ಮನೆತನ. ತಂದೆ ಸಿತಾರ ರತ್ನ ರಹಿಮತ್‌ಖಾನ ವಿಖ್ಯಾತ ಸಿತಾರವಾದಕ. ಅಜ್ಜ ಗುಲಾಮ್ ಹುಸೇನಖಾನ ಗ್ವಾಲಿಯರ್ ಘರಾಣೆಯ ಬಹು ದೊಡ್ಡ ಗಾಯಕ ಹಾಗೂ ಭಾವನಗರದ ಆಸ್ಥಾನ ಕಲಾವಿದ. ಮುತ್ತಜ್ಜ ಮದಾರ ಭಕ್ಷ್ ಹೆಸರಾಂತ ಗಾಯಕ-ಸಿತಾರವಾದಕ ಹಾಗೂ ರತ್ಲಮ್ ಆಸ್ಥಾನದ ಕಲಾವಿದ. ಇಂತಹ ಸಂಗೀತ ಕುಟುಂಬದಲ್ಲಿ ಹುಟ್ಟಿದ ಕರೀಮ್‌ಖಾನರಿಗೆ ಸಂಗೀತ ರಕ್ತಗತವಾಗಿಯೇ ಬೆಳೆದು ಬಂದಿತು.

ತಂದೆ ರಹಿಮತ್‌ಖಾನ, ತಾಯಿ ಸಕೀನಾ ಬಿ. ರಹಿಮತ್‌ಖಾನರು ಮೂಲತಃ ಉತ್ತರದ ಭಾವನಗರದವರು ಅವರು ವಿಖ್ಯಾತ ಸಿತಾರವಾದಕರಾಗಿ ಮುಂಬೈ, ಪುಣೆ, ಮೈಸೂರು ಮುಂತಾದೆಡೆ ಸಂಚರಿಸಿ, ಸಂಗೀತದಲ್ಲಿ ಜಯಭೇರಿ ಮೊಳಗಿಸಿ೧೯೧೨ ರಲ್ಲಿ ಧಾರವಾಡಕ್ಕೆ ಬಂದು ಅಲ್ಲಿಯೇ ಖಾಯಂ ನೆಲೆ ನಿಂತರು. ಕರೀಮ್‌ಖಾನರು ಹುಟ್ಟಿದಾಗ ಅವರು ಧಾರವಾಡ ನಿವಾಸಿಯೇ ಆಗಿದ್ದರು.

ಕರೀಮ್‌ಖಾನರು ನಾಲ್ಕನೇ ತರಗತಿಯಲ್ಲಿಯೇ ಶಾಲಾ ಶಿಕ್ಷಣಕ್ಕೆ ವಿದಾಯ ಹೇಳಿ ಸಂಗೀತಕ್ಕೆ ತಮ್ಮನ್ನು ಸಂಪೂರ್ಣ ತೊಡಗಿಸಿಕೊಂಡರು. ತಮ್ಮ ಆರನೇ ವಯಸ್ಸಿನಲ್ಲಿಯೇ ಅವರು ತಮ್ಮ ತಂದೆ ರಹಿಮತ್‌ಖಾನರಿಂದ ಸಿತಾರವಾದನ ಶಿಕ್ಷಣ ಆರಂಭಿಸಿದರು. ಬೆಳಗಿನ ಜಾವ ನಾಲ್ಕು ಗಂಟೆಗೆ ಸಿತಾರ ರಿಯಾಜ್ ಆರಂಭಗೊಂಡು ರಾತ್ರಿ ಎಂಟುಗಂಟೆಯವರೆಗೆ ಅವ್ಯಾಹತವಾಗಿ ನಡೆಯುತ್ತಿತ್ತು. ಮುಂಜಾನೆಯ ಉಪಹಾರ, ಮಧ್ಯಾಹ್ನದ ಊಟ, ಸಾಯಂಕಾಲದ ಚಹಾ, ರಾತ್ರಿಯ ವಿಶ್ರಾಂತಿ ಎಲ್ಲವೂ ಅವರಿಗೆ ಸಂಗೀತವೇ ಆಗಿದ್ದವು. ಇಂದು ಹೇಳಿದ ರಾಗವನ್ನು ಹತ್ತು ತಾಸು ರಿಯಾಜ್ ಮಾಡಿ ಮಾರನೇ ದಿನ ತಂದೆಯ ಸಮ್ಮುಖದಲ್ಲಿ ಒಪ್ಪಿಸುತ್ತಿದ್ದರು. ಹೀಗೆ ನಿರಂತರ ಏಳೆಂಟು ವರ್ಷ ತಂದೆ ರಹಿಮತ್‌ಖಾನರು ಗುರುವಾಗಿ ಮಗ-ಶಿಷ್ಯ ಕರೀಮ್‌ಖಾನರಿಗೆ ಸಂಗೀತ ವಿದ್ಯೆ ಧಾರೆಯೆರೆದರು.

ಧಮನಿಧಮನಿಗಳಲ್ಲಿ ಹರಿಯುತ್ತ ಬಂದಿರುವ ರಹಿಮತ್‌ಖಾನರ ವಂಶಾವಳಿಯ ಕರೀಮ್‌ಖಾನರಿಗೆ ಸಂಗೀತವೇ ಪ್ರಧಾನವಾಯಿತು. ಹಗಲು ರಾತ್ರಿ ಸಂಗೀತವೇ ಸಂಗೀತ. ಹತ್ತು-ಹನ್ನೆರಡು ವರ್ಷ ಕಠಿಣತಮ ಸಾಧನೆ ಮಾಡಿ ಕರೀಮ್‌ಖಾನರು ಸಿತಾರವಾದನದಲ್ಲಿ ಪ್ರಭುತ್ವ ಗಳಿಸಿದರು. ಕಿರಾಣಾ ಘರಾಣೆಯ ಅಧ್ವರ್ಯು ಉಸ್ತಾದ್ ಖಾನಸಾಹೇಬ್ ಅಬ್ದುಲ್ ಕರೀಮ್‌ಖಾನ, ವಿಲಾಯತ್ ಹುಸೇನಖಾನ, ಅಜಿಮತ್‌ಹುಸೇನಖಾನ,

ತದ್ದುಕ್ ಹುಸೇನಖಾನ ಮುಂತಾದ ಘಟಾನುಘಟಗಳ ಸಂಗೀತ ಕರೀಮಖಾನರ ವಾದನ ಶೈಲಿಯ ಮೇಲೆ ಪ್ರಭಾವ ಬೀರಿದವು. ಅವರೆಲ್ಲರ ಪ್ರಭಾವದಿಂದಾಗಿ ಪ್ರೊ. ಕರೀಮ್ ಖಾನರ ಸಿತಾರವಾದನ ಪರಂಪರಾಗತವಾದ ಸೊಗಡನ್ನು, ಪಾಂಡಿತ್ಯಪೂರ್ಣವಾದ ವಿದ್ವತ್ತನ್ನು ಹೊಂದಿತು.

ಸಿತಾರವಾದನದಲ್ಲಿ ಪ್ರೌಢಿಮೆ ಪಡೆದುಕೊಂಡ ಕರೀಮ್ ಖಾನರು ೧೯೩೭ ರಲ್ಲಿ ಮುಂಬೈ ಆಕಾಶವಾಣಿಯ ನಿಲಯ ಕಲಾವಿದರಾಗಿ ಸೇವೆಗೆ ಸೇರಿದರು. ಬೆಳಿಗ್ಗೆ ಏಳರಿಂದ ಹತ್ತು ಗಂಟೆ ಮತ್ತೆ ಸಂಜೆ ನಾಲ್ಕು ಗಂಟೆಯಿಂದ ರಾತ್ರಿ ಹತ್ತರವರೆಗೆ ಕೆಲಸ. ಅಷ್ಟೇ ಸಾಲದೆಂಬಂತೆ ವಾರದ ಏಳೂ ದಿನ ಕೆಲಸ. ನಮಾಜ ಮಾಡಲಿಕ್ಕೂ ಅವರಿಗೆ ಸಮಯದ ಕೊರತೆ. ಆಕಾಶವಾಣಿಯ ಅತಿಯಾದ ನಿಬಂಧನೆ ಹಾಗೂ ಸಮಯದ ಅಭಾವದಿಂದಾಗಿ ಕರೀಮ್ ಖಾನರು ೧೯೪೨ ರಲ್ಲಿ ಆಕಾಶವಾಣಿ ಹುದ್ದೆಗೆ ರಾಜೀನಾಮೆ ನೀಡಿ ಧಾರವಾಡಕ್ಕೆ ಮರಳಿದರು. ಆ ದಿನಗಳಲ್ಲಿ ವಿಖ್ಯಾತ ತಬಲಾ ಕಲಾವಿದ ಉಸ್ತಾದ್ ಅಲ್ಲಾರಖಾ ಮುಂಬೈ ಆಕಾಶವಾಣಿ ನಿಲಯದ ತಬಲಾ ಕಲಾವಿದರಾಗಿ ಕೆಲಸ ಮಾಡುತ್ತಿದ್ದರು.

ಮುಂಬೈ ಬಿಟ್ಟು ಧಾರವಾಡಕ್ಕೆ ಮರಳಿದ ಕರೀಮ್ ಖಾನರು ತಮ್ಮ ತಂದೆ ರಹಿಮತ್ ಖಾನರು ಸ್ಥಾಪಿಸಿದ ಭಾರತೀಯ ಸಂಗೀತ ವಿದ್ಯಾಲಯ ಸಂಸ್ಥೆಯನ್ನು ಮುನ್ನಡೆಸುತ್ತ ಆಸಕ್ತರಿಗೆ ಸಂಗೀತಪಾಠ ಹೇಳಲಾರಂಭಿಸಿದರು. ಆದಾದ ನಂತರ ಅವರು ೧೯೪೫ ರಲ್ಲಿ ಪುಣೆಗೆ ಬಂದರು. ಅಲ್ಲಿ ತೇಜೋಮಲ್ಲ ಪಟವರ್ಧನರ ವಿಶೇಷ ಆದರದ ಪರಿಣಾಮವಾಗಿ ಅವರು ಪುಣೆಯಲ್ಲಿ ಸಿತಾರಕ್ಲಾಸ್ ನಡೆಸಿ ಅನೇಕ ಜನ ಶಿಷ್ಯರನ್ನು ತಯಾರಿಸಿದರು. ರಸಿಕರು ಪುಣೆಯಲ್ಲಿ ಅವರಿಗೆ ವಾಸಿಸಲು ಒಂದು ಮನೆ ಕಟ್ಟಿಸಿಕೊಟ್ಟರು. ಪುಣೆಯಲ್ಲಿ ನೆಮ್ಮದಿ ಜೀವನ ನಡೆಸುತ್ತಿರುವಷ್ಟರಲ್ಲಿ ಅಲ್ಲಿಯ ಪಾನಸೆಟ್ ಡ್ಯಾಂ ಒಡೆದು ಪುಣೆ ನಗರಕ್ಕೆ ತುಂಬ ಹಾನಿ ಮಾಡಿತು. ನೀರಿನ ರಭಸಕ್ಕೆ ಕರೀಮಖಾನರ ಮನೆ ಹರಿದುಕೊಂಡು ಹೋಯಿತು. ಕರೀಮಾನರು ಅಪಾಯದಿಂದ ಪಾರಾಗಿ ಬದುಕುಳಿದುದೊಂದು ಪುಣ್ಯ. ಮಹಾಪೂರದ ಹಾವಳಿನಂತರ ಕರೀಮ್ ಖಾನರು ಪುಣೆಬಿಟ್ಟು ಮತ್ತೆ ಮರಳಿ ಧಾರವಾಡಕ್ಕೆ ಬಂದರು.

ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಅದೇ ತಾನೇ ಸಂಗೀತ ವಿಭಾಗ ಆರಂಭವಾಗಿತ್ತು. ಕ.ವಿ.ವಿ..ಯ ಅಂದಿನ ಕುಲಪತಿ ರ್‍ಯಾಂಗ್ಲರ ಡಾ. ಡಿ.ಸಿ.ಪಾವಟೆಯವರ ಆಗ್ರಹದಂತೆ ಸಂಗೀತ ವಿಭಾಗದಲ್ಲಿ ಗಾಯನ ಮತ್ತು ತಬಲಾ ವಾದನ ಜೊತೆಗೆ ಸಿತಾರ ವಾದನ ವಿಭಾಗ ಪ್ರಾರಂಭವಾಯಿತು. ಹೊಸದಾಗಿ ಪ್ರಾರಂಭವಾದ ಈ ಸಿತಾರ ವಿಭಾಗಕ್ಕೆ ಕರೀಮ್ ಖಾನರು ೧೯೬೨ ರಲ್ಲಿ ಸಿತಾರ ಪ್ರಾಧ್ಯಾಪಕರಾಗಿ ಸೇವೆಗೆ ಸೇರಿದರು. ಅನೇಕ ಆಸಕ್ತ ವಿದ್ಯಾರ್ಥಿಗಳಿಗೆ-ವಿದ್ಯಾರ್ಥಿನಿಯರಿಗೆ ಕಾಲೇಜಿನಲ್ಲಿ ಸಿತಾರವಾದನ ಕಲಿಸಿ ಶಿಷ್ಯರನ್ನು ತಯಾರು ಮಾಡಿದರು. ಕಾಲೇಜಿನಲ್ಲಿ ಹದಿಮೂರು ವರ್ಷ ಸೇವೆ ಮಾಡಿ ೧೯೭೫ ರಲ್ಲಿ ಸೇವೆಯಿಂದ ನಿವೃತ್ತಿ ಹೊಂದಿದರು.

ಕಾಲೇಜಿನ ಸೇವೆಯಿಂದ ನಿವೃತ್ತರಾದ ಕರೀಮ್ ಖಾನರು ಗೋವಾದ ಮುಖ್ಯಮಂತ್ರಿ ಶ್ರೀ ಪ್ರತಾಪಸಿಂಗ್ ರಾಣೆಯವರ ವಿಶೇಷ ಆಗ್ರಹದ ಮೇರೆಗೆ ಕೇಂದ್ರ ಸರಕಾರ ನಡೆಸುವ ಗೋವಾದ ಕಲಾ ಅಕಾಡೆಮಿಯಲ್ಲಿ ಸಿತಾರ

ಪ್ರಾಧ್ಯಾಪಕರಾಗಿ ಸೇವೆಗೆ ಸೇರಿದರು. ಆದರೆ ಗೋವಾದ ವಾತಾವರಣ ತಮ್ಮ ಶರೀರಕ್ಕೆ ಒಗ್ಗದ್ದರಿಂದ ಅವರು ೧೯೬೨ ರಲ್ಲಿ ಗೋವಾ ಬಿಟ್ಟು ಧಾರವಾಡಕ್ಕೆ ಬಂದು ವಿಶ್ರಾಂತ ಜೀವನ ನಡೆಸುತ್ತಿದ್ದರು.

ಶ್ರೀ ಎ. ಕರೀಮ್‌ಖಾನರ ಕಿರಿಯ ಸಹೋದರರಾದ ಗುಲಾಮ್ ಕಾದಿರಖಾನರು ಪ್ರಸಿದ್ಧ ಸಿತಾರವಾದಕರು. ಅವರು ದೆಹಲಿ ಆಕಾಶವಾಣಿ ಕೇಂದ್ರದ ನಿಲಯದ ಸಿತಾರ ಕಲಾವಿದರಾಗಿ ಕೆಲಸ ಮಾಡಿದ್ದಾರೆ. ಮತ್ತೊಬ್ಬ ಸಹೋದರ ಗುಲಾಮ್ ದಸ್ತಗೀರಖಾನರು ಸಹ ಜನಪ್ರಿಯ ಸಿತಾರವಾದಕರು. ಅವರು ಈಗ ಮುಂಬೈ ಸಿನಿಮಾ ರಂಗದಲ್ಲಿ ಸಂಗೀತ ನಿರ್ದೇಶಕರಾಗಿ ಕೆಲಸ ಮಾಡುತ್ತಿದ್ದಾರೆ. ಶ್ರೀ. ಕರೀಮ್‌ಖಾನರು ಪರಂಪರಾಗತ ಸಿತಾರವಾದನದಲ್ಲಿ ಐದನೆಯ ತಲೆಮಾರಿನವರು.

ಶ್ರೀ ಕರೀಮ್‌ಖಾನರು ಸಂಗೀತ ಕ್ಷೇತ್ರಕ್ಕೆ ನೀಡಿದ ಕೊಡುಗೆಯೆಂದರೆ ಅವರ ಕಲಾವಂತ ಮಕ್ಕಳು. ಕರೀಮ್ ಖಾನರಿಗೆ ಒಂಬತ್ತು ಜನ ಗಂಡು ಮಕ್ಕಳು. ಅವರಲ್ಲಿ ನಜೀರಖಾನ ಹಾಗೂ ಮೆಹಮೂದ್‌ಖಾನ ಇಬ್ಬರನ್ನು ಹೊರತುಪಡಿಸಿ ಉಳಿದ ಏಳು ಜನರು ಇಂದು ಸಂಗೀತ ಕ್ಷೇತ್ರದಲ್ಲಿ ಹೆಸರು ಪಡೆದ ಸಿತಾರ ಕಲಾವಿದರು. ನಜೀರಖಾನ ಭಾರತೀಯ ಸೇನೆಯಲ್ಲಿ ಸೇವೆ ಮಾಡಿದವರು. ಮೆಹಮೂದಖಾನ ಆಟೋಮೋಬೈಲ್ ಉದ್ಯೋಗಿ. ಇನ್ನುಳಿದ ಉಸ್ಮಾನಖಾನ, ಬಾಲೇಖಾನ, ಮೆಹಬೂಬ್‌ಖಾನ, ಹಮೀದ್‌ಖಾನ, ಛೋಟೆರಹಿಮತ್‌ಖಾನ ಹಾಗೂ ಅವಳಿ ಜವಳಿಯಾಗಿ ಹುಟ್ಟಿದ ರಫಿಕ್‌ಖಾನ ಹಾಗೂ ಶಫೀಕ್‌ಖಾನ ಏಳು ಜನ ಮಕ್ಕಳು ಸಿತಾರವಾದನದಲ್ಲಿ ಹೆಸರು ಪಡೆದ ಕಲಾವಿದರು.

ಉಸ್ಮಾನಖಾನ ಪುಣೆಯಲ್ಲಿ ನೆಲೆಸಿ ಅಲ್ಲಿ ಸಂಗೀತ ಕ್ಲಾಸ್ ನಡೆಸುತ್ತ ಶಿಷ್ಯರನ್ನು ತಯಾರಿಸುತ್ತಿದ್ದಾರೆ. ಬಾಲೇಖಾನರು ಆಕಾಶವಾಣಿಯ ಎ ಶ್ರೇಣಿಯ ಸಿತಾರ ಕಲಾವಿದರಾಗಿ ಧಾರವಾಡದ ಆಕಾಶವಾಣಿ ಕೇಂದ್ರದಲ್ಲಿ ನಿಲಯ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಮೆಹಬೂಬ್‌ಖಾನ ಮುಂಬೈದಲ್ಲಿ ನೆಲೆಸಿ ಸಿತಾರ ಕ್ಲಾಸ್ ನಡೆಸುತ್ತ ಶಿಷ್ಯರನ್ನು ತಯಾರಿಸುತ್ತಿದ್ದಾರೆ. ಶ್ರೀ ಹಮೀದ್‌ಖಾನ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಸಂಗೀತ ಕಾಲೇಜಿನಲ್ಲಿ ಸಿತಾರ ಪ್ರಾಧ್ಯಾಪಕರಾಗಿ ಕೆಲಸ ನಿರ್ವಹಿಸುತ್ತಿದ್ದಾರೆ. ಛೋಟೆ ರಹಿಮತ್‌ಖಾನರು ಗೋವಾದ ಕಲಾ ಅಕಾಡೆಮಿಯಲ್ಲಿ ಸಿತಾರ ಪ್ರಾಧ್ಯಾಪಕರಾಗಿ, ರಫೀಕ್‌ಖಾನ ಮಂಗಳೂರು ಆಕಾಶವಾಣಿ ಕೇಂದ್ರದ ನಿಲಯದ ಸಿತಾರ ಕಲಾವಿದರಾಗಿ, ಶಫೀಕ್‌ಖಾನರು ಸಿತಾರವಾದನದ ಎ ಶ್ರೇಣಿಯ ಕಲಾವಿದರಾಗಿ ಗುಲಬರ್ಗಾ ಆಕಾಶವಾಣಿಯ ನಿಲಯ ಕಲಾವಿದರಾಗಿ ಕೆಲಸ ಮಾಡುತ್ತಿದ್ದಾರೆ. ಹೀಗೆ ಒಬ್ಬ ತಂದೆಯ ಏಳು ಜನ ಮಕ್ಕಳು ತಂದೆಯ ಪರಂಪರೆಯಲ್ಲಿ ಮುನ್ನಡೆದು ಸಿತಾರವಾದನದಲ್ಲಿ ಅಪಾರ ಹೆಸರು ಪಡೆದಿರುವುದು ಯಾರಿಗಾದರೂ ಹೆಮ್ಮೆ ತರುವ ಸಂಗತಿಯೇ ಸರಿ.

"ಶ್ರೀ ಕರೀಮ್‌ಖಾನರು ನೀಡಿದ ಕಚೇರಿಗಳು ಸಂಖ್ಯೆಯಿಂದ ಕಡಿಮೆಯಿದ್ದರೂ ಗುಣಮಟ್ಟದಿಂದ ತುಂಬ ಪರಿಣಾಮಕಾರಕವಾಗಿವೆ. ಅವರು ನೀಡಿದ ಅವಿಸ್ಮರಣೀಯ ಸಂಗೀತ ಕಾರ್ಯಕ್ರಮವೆಂದರೆ ೧೯೬೧ ರಲ್ಲಿ

ಪು ಕೆಯಲ್ಲಿ ಜರುಗಿದ ಪಂ. ಭಾಸ್ಕರಬುವಾ ಬಖಲೆಯವರ ಸ್ಮೃತಿ ಸ್ಮರಣೆಯ ಸ್ವರ ಶ್ರದ್ಧಾಂಜಲಿ ಕಾರ್ಯಕ್ರಮದಲ್ಲಿ ನೀಡಿದ ಸಿತಾರ ಕಚೇರಿ, ಅಂದು ಎರಡು ತಾಸಿಗೂ ಮಿಕ್ಕಿ ನುಡಿಸಿದ ಬಿಹಾರ ಮತ್ತು ಪೀಲೂ ರಾಗಗಳ ನಾದ ಝೇಂಕಾರ ಶ್ರೋತೃಗಳಿಗೊಂದು ಅಮೃತ ಘಳಿಗೆ. ಪ್ರೊ. ಕರೀಮ್ ಖಾನರ ಸಿತಾರ ವಾದನ ಗಾಯಕಿ ಅಂಗದಿಂದ ಕೂಡಿರುವುದರಿಂದ ಅದನ್ನು ನುಡಿಸುವಾಗ ಅವರು ಸಿತಾರದೊಂದಿಗೆ ಹಾಡುತ್ತಿದ್ದಾರೆಂದೇ ಭಾವನೆಯಾಗುತ್ತದೆ. ಅವರು ತಮ್ಮ ರಹಿಮತ್ ಖಾನಿ ಬಾಜ್‌ನ್ನು ತುಂಬ ಪರಿಣಾಮಕಾರಕವಾಗಿ ನುಡಿಸಬಲ್ಲವರು''[೫೪] ಎಂದು ಶ್ರೀ ಸಿದ್ಧರಾಮಯ್ಯನವರು ಬರೆದಿದ್ದಾರೆ.

ಶ್ರೀ ಕರೀಮ್ ಖಾನರ ಶಿಷ್ಯ ಸಂಪತ್ತು ಅಪಾರ. ಅವರ ಏಳು ಜನ ಮಕ್ಕಳೂ ಸೇರಿದಂತೆ ಅನೇಕರು ಸೀತಾರವಾದನದಲ್ಲಿ ಅಪಾರ ಹೆಸರು ಸಂಪಾದಿಸಿದ್ದಾರೆ. ಅವರ ಶಿಷ್ಯರಲ್ಲಿ ಜಿ.ಬಿ. ಜಠಾರ, ತಗರ್ಸೆ, ಕೊಪ್ಪಿಕರ, ನಾಡಗೀರ, ರವಿಂದ್ರಚಾರಿ, ರೇಖಾ ಕಾರ್ಕಶೀ, ಯೋಗರಾಜ ನಾಯಕ್, ಪ್ರಿಯಾ ಕಾಮತ್, ಅರುಂಧತಿ ದೇಶಪಾಂಡೆ ಮುಂತಾದವರು ಉಲ್ಲೇಖನೀಯರಾಗಿದ್ದಾರೆ. ರೇಖಾ, ಯೋಗರಾಜ ಗೋವಾ ಆಕಾಶವಾಣಿಯ ಅಧಿಕೃತ ಸಿತಾರ ಕಲಾವಿದರಾಗಿದ್ದಾರೆ. ಪ್ರಿಯಾ ಮತ್ತು ಅರುಂಧತಿ ಬೆಳಗಾವಿಯಲ್ಲಿ ಸಿತಾರ ಕ್ಲಾಸ್ ನಡೆಸುತ್ತ ಶಿಷ್ಯರನ್ನು ತಯಾರಿಸುತ್ತಿದ್ದಾರೆ.

ಶ್ರೀ ಕರೀಮ್ ಖಾನರಿಗೆ ಅನೇಕ ಪ್ರಶಸ್ತಿ ಪುರಸ್ಕಾರ ದೊರೆತಿವೆ. ಗೋವಾದ ನಾಗರಿಕರು ಸಲ್ಲಿಸಿದ ಸನ್ಮಾನ ಹಾಗೂ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ನೀಡಿದ 'ಕರ್ನಾಟಕ ಕಲಾ ತಿಲಕ' ಪ್ರಶಸ್ತಿ ಅವುಗಳಲ್ಲಿ ಉಲ್ಲೇಖನೀಯ.

### ೫.೨೫. ಶ್ರೀ ಆರ್. ಪಿ. ಹೂಗಾರ

ಪ್ರತಿಭೆಯಿದ್ದೂ ಪುರಸ್ಕಾರದಿಂದ ವಂಚಿತರಾದ ಅನೇಕ ಕಲಾವಿದರು ಸಂಗೀತ ಕ್ಷೇತ್ರದಲ್ಲಿದ್ದಾರೆ. ಸಂಗೀತ ಕ್ಷೇತ್ರದ ಬೆಳವಣಿಗೆಗಾಗಿ ತಮ್ಮ ಜೀವನವನ್ನೇ ಮುಡುಪಾಗಿಟ್ಟು ತಾವು ಮಾತ್ರ ಎಲೆ ಮರೆಯ ಕಾಯಿಯಂತಿದ್ದಾರೆ. ಅಂತಹ ಕಲಾವಿದರಲ್ಲಿ ಗ್ವಾಲಿಯರ್ ಘರಾಣೆಯ ಗಾಯಕ ಶ್ರೀ ಆರ್.ಪಿ.ಹೂಗಾರ ಒಬ್ಬರು.

ಹೂಗಾರ ಮಾಸ್ತರ ಎಂದೇ ನಾದಲೋಕದಲ್ಲಿ ಪರಿಚಿತರಾಗಿದ್ದ ಶ್ರೀ. ರಾಚಪ್ಪ ಪರಪ್ಪ ಹೂಗಾರರವರು ಜನಿಸಿದ್ದು ಧಾರವಾಡ ಜಿಲ್ಲೆಯ ರೋಣ ತಾಲೂಕಿನ ಇಟಗಿ ಗ್ರಾಮದಲ್ಲಿ, ೧೯೨೨ ರ ಮಾರ್ಚ ತಿಂಗಳ ೬ ರಂದು. ತಂದೆ ಪರಪ್ಪ ತಾಯಿ ಗಿರಿಯಮ್ಮ. ಇಟಗಿಯ ಹೂಗಾರ ಮನೆತನ ಸಂಗೀತ ಹಾಗೂ ಸಂಸ್ಕೃತಿಗೆ ಹೆಸರಾದುದು. ಪರಪ್ಪನವರು ಆ ಭಾಗದ ನಾಮಾಂಕಿತ ಸಂಗೀತ ಕಲಾವಿದರು. ಗಾಯನ ಕಲೆಯ ಜೊತೆಗೆ ಪಿಟೀಲು, ಸಾರಂಗಿ,

---

೫೪. ಹಿಂದುಸ್ತಾನಿ ಸಂಗೀತಗಾರರು : ಶ್ರೀ ಸಿದ್ಧರಾಮಯ್ಯ ಮಠಪತಿ, ಪುಟ-೮೪

ಮದ್ದಳೆ ಮತ್ತು ಸಿತಾರ ನುಡಿಸುವುದರಲ್ಲಿ ನಿಷ್ಣಾತರು. ಕುದುರೆಯ ಮೇಲೆ ಕುಳಿತುಕೊಂಡು ಒಂದು ಹೆಗಲಿಗೆ ಪಿಟೀಲು, ಇನ್ನೊಂದು ಹೆಗಲಿಗೆ ಸಾರಂಗಿ ವಾದ್ಯಗಳನ್ನು ಹಾಕಿಕೊಂಡು ಹಳ್ಳಿಯಿಂದ ಹಳ್ಳಿಗೆ ಸಂಗೀತ ಕಾರ್ಯಕ್ರಮಕ್ಕೆ ಹೊರಡುತ್ತಿದ್ದ ಇವರನ್ನು ಕಂಡ ಜನ ಬಂದೂಕುಧಾರಿ ಢಕಾಯಿತನೆಂದೇ ಭಾವಿಸುತ್ತಿದ್ದರು. ಅವರೊಬ್ಬ ಉತ್ತಮ ಸಂಗೀತ ಕಲಾವಿದರೆಂಬುದು ಗೊತ್ತಾದ ಮೇಲೆ ಜನ ಅಚ್ಚರಿಪಡುತ್ತಿದ್ದರು.

ಈ ಶತಮಾನದ ಹೆಸರಾಂತ ಸಾಹಿತಿ ಡಾ. ಸಿದ್ಧಯ್ಯ ಪುರಾಣಿಕರ ತಂದೆ ದ್ಯಾಂಪುರದ ಪಂ. ಕಲ್ಲಿನಾಥ ಶಾಸ್ತ್ರಿಗಳ ಪುರಾಣ ಕೀರ್ತನಕ್ಕೆ ಪರಪ್ಪನವರ ಸಂಗೀತ ಸಾಥಿ ಹೇಳಿ ಮಾಡಿಸಿದಂತಹ ಜೋಡಿ. ಕಲ್ಲಿನಾಥ ಶಾಸ್ತ್ರಿಗಳ ಪುರಾಣ ಇದ್ದಲ್ಲೆಲ್ಲ ಪರಪ್ಪನವರ ಸಂಗೀತ ಇದ್ದದ್ದೇ.

ಪರಪ್ಪನವರ ತಂದೆ ರುದ್ರಪ್ಪನವರೂ ಉತ್ತಮ ಸಂಗೀತಗಾರರಾಗಿದ್ದರು. ಸಿತಾರ ವಾದನದಲ್ಲಿ ಅವರಿಗೆ ವಿಶೇಷ ಪಾಂಡಿತ್ಯವಿತ್ತು. ಇಂತಹ ಸಂಗೀತ ಹಾಗೂ ಸಾಂಸ್ಕೃತಿಕ ವಾತಾವರಣದ ಮನೆತನದಲ್ಲಿ ಹುಟ್ಟಿದ ರಾಚಪ್ಪನವರಿಗೆ ಸಂಗೀತದ ಗೀಳು ಹುಟ್ಟನೊಂದಿಗೇ ಬಂದು ಬಿಟ್ಟಿತು. ಮನೆಯ ವಾತಾವರಣ ಅವರ ಹುಟ್ಟು ಪ್ರತಿಭೆಗೆ ಚಾಲನೆ ನೀಡಿತು.

ರಾಚಪ್ಪನವರ ಸಂಗೀತ ಶಿಕ್ಷಣಕ್ಕೆ ತಂದೆಯಿಂದ ಶ್ರೀಕಾರ. ತಂದೆಯೇ ಸಂಗೀತದ ಪ್ರಥಮ ಗುರು. ರಾಚಪ್ಪನವರ ಬದುಕಿಗೆ ಬೆಳಕನ್ನಿತ್ತವರು ಹಾಲಕೇರಿಯ ಶ್ರೀ ಮ.ನಿ.ಪ್ರ.ಲಿಂ. ಅನ್ನದಾನೇಶ್ವರ ಮಹಾಸ್ವಾಮಿಗಳು. ಪರಪ್ಪ ಹಾಗೂ ಶ್ರೀ ಅನ್ನದಾನೇಶ್ವರ ಮಹಾಸ್ವಾಮಿಗಳು ಬಾಲ್ಯದ ಗೆಳೆಯರು, ಸಹಪಾಠಿಗಳು. ಸ್ವಾಮಿಗಳ ಜನ್ಮ ಸ್ಥಳ ಇಟಗಿ. ಹೀಗಾಗಿ ಇವರ ಮನೆತನದ ಮೇಲೆ ಎಲ್ಲಿಲ್ಲದ ಪ್ರೀತಿ ವಿಶ್ವಾಸ. ಸ್ವಾಮಿಗಳ ಆಶೀರ್ವಾದ ಪರಪ್ಪನವರ ಮನೆತನಕ್ಕೊಂದು ದಿವ್ಯ ವರದಾನ.

ಇಟಗಿಯಲ್ಲಿ ಕನ್ನಡ ನಾಲ್ಕನೇ ತರಗತಿ ಮುಗಿಸಿದ ರಾಚಪ್ಪನವರು ಮಾಧ್ಯಮಿಕ ಶಿಕ್ಷಣಕ್ಕಾಗಿ ನರಗುಂದದ ಎ.ವ್ಹಿ. ಸ್ಕೂಲಗೆ ಬಂದರು. ಶಾಲೆಯ ಅಭ್ಯಾಸದೊಂದಿಗೆ ಸಂಗೀತ ಕಲೆಯ ವಿಕಾಸಕ್ಕೆ ವಿಶೇಷ ವೇಳೆ ಕಳೆದರು. ನರಗುಂದದ ಪಂ. ನಾರಾಯಣಾಚಾರ ದಂಡಾಪೂರ ಹೆಸರಾಂತ ಗಾಯಕರೆನಿಸಿದ್ದರು. ಅವರು ಗ್ವಾಲಿಯರ್ ಘರಾಣೆಯ ಪಂ. ಬಾಲಕೃಷ್ಣ ಬುವಾ ಇಚಲಕರಂಜೀಕರ ಅವರ ಶಿಷ್ಯರು. ಶ್ರೀ ನಾರಾಯಣಾಚಾರ್ಯರು ಸಂಸ್ಕೃತ ವಾಙ್ಮಯದಲ್ಲಿ ಮಹಾನ್ ಪಂಡಿತರೆನಿಸಿಕೊಂಡಿದ್ದರು. ರಾಚಪ್ಪನವರು ಶ್ರೀ ನಾರಾಯಣಾಚಾರ್ಯ ದಂಡಾಪೂರ ಅವರಲ್ಲಿ ಸಂಗೀತ ಕಲಿಕೆಗೆ ಪ್ರಾರಂಭಿಸಿದರು. ಗುರುಗಳ ನೆಚ್ಚಿನ ಶಿಷ್ಯರಾಗಿ ಸಂಗೀತ ಸಾಧನೆಯಲ್ಲಿ ತೊಡಗಿದರು.

ರಾಚಪ್ಪನವರು ನರಗುಂದದ ಶಾಲಾ ವಿದ್ಯಾರ್ಥಿಯಾಗಿದ್ದಾಗ ಒಮ್ಮೆ ಶಾಲೆಯ ಜುಬಿಲಿ ಉತ್ಸವ ಏರ್ಪಾಡಾಗಿತ್ತು. ಆ ಉತ್ಸವದ ನಿಮಿತ್ತ ಅಲೌಕಿಕ ರಾಜನಿಷ್ಠಾ ಎಂಬ ನಾಟಕ ಅಭಿನಯಿಸಲ್ಪಟ್ಟಿತ್ತು. ಆ ನಾಟಕದ ಬಸವಾಚಾರ್ಯನ ಪಾತ್ರದಲ್ಲಿ ರಾಚಪ್ಪನವರ ಪ್ರಬುದ್ಧ ಅಭಿನಯ ಮತ್ತು ಸುಮಧುರ ಕಂಠದ ಹಾಡುಗಾರಿಕೆ

ಕೇಳದ ಅಂದಿನ ಸಮಾರಂಭದ ಮುಖ್ಯ ಅತಿಥಿ, ಮುಂಬೈ ಕರ್ನಾಟಕದ ಅಂದಿನ ಶಿಕ್ಷಣ ಸಚಿವ ಸರ್ ಸಿದ್ಧಪ್ಪ ಕಂಬಳಿಯವರು ರಾಚಪ್ಪನವರನ್ನು ಕರ್ನಾಟಕದ ಕಿನ್ನರರೆಂದು ಉದ್ಗರಿಸಿ ಹರಸಿದರು. ಬೆಳೆಯುವ ಪೈರನ್ನು ಮೊಳಕೆಯಲ್ಲಿಯೇ ಅಂದು ಅವರು ಗುರುತಿಸಿದ್ದರು.

ಹೈಸ್ಕೂಲ್ ಶಿಕ್ಷಣಕ್ಕಾಗಿ ಗದುಗಿಗೆ ಆಗಮಿಸಿದ ರಾಚಪ್ಪನವರು ಮುಲ್ಕಿ ಪರೀಕ್ಷೆಯಲ್ಲಿ ಉತ್ತಮ ಶ್ರೇಣಿಯಲ್ಲಿ ತೇರ್ಗಡೆಯಾದರು. ಮುಂದೆ ಅವರು ಸಂಗೀತ ವಿದ್ಯೆಯಲ್ಲಿ ಹೆಚ್ಚಿನ ಸಾಧನೆ ಮಾಡಿ ಮುಂಬೈಯ ಅಖಿಲ ಭಾರತ ಗಂಧರ್ವ ಮಹಾವಿದ್ಯಾಲಯದಿಂದ ಸಂಗೀತ ವಿಶಾರದ, ವಿಜಾಪೂರದ ಕರ್ನಾಟಕ ಪ್ರದೇಶ ಸಂಗೀತ ಸೇವಾ ಸಮಿತಿ ಕೇಂದ್ರದಿಂದ ಸಂಗೀತ ಅಲಂಕಾರ ಪದವಿ ಪಡೆದುಕೊಂಡರು.

ಸಂಗೀತದಲ್ಲಿ ಉತ್ತಮ ಸಾಧನೆ ಮಾಡಿ ಪ್ರಬುದ್ಧತೆ ಪಡೆದುಕೊಂಡ ಶ್ರೀ ಆರ್ ಪಿ. ಹೂಗಾರ ಅವರು ವಿಜಾಪೂರಕ್ಕೆ ಬಂದು ಅಲ್ಲಿ ತಿರುಡಕರ್ ಎಂಬುವರ ಮನೆಯಲ್ಲಿ ಸಂಗೀತ ಪಾಠ ಹೇಳಲು ಆರಂಭಿಸಿದರು. ವಿಜಾಪೂರದ ಶಾಲೆಯೊಂದರಲ್ಲಿ ಸಂಗೀತ ಶಿಕ್ಷಕರಾಗಿ ತಮ್ಮ ವೃತ್ತಿಗೆ ನಾಂದಿ ಹಾಡಿದರು. ಅಲ್ಲಿ ಕೆಲವು ದಿನ ಸಂಗೀತ ಶಿಕ್ಷಕರಾಗಿ ಕೆಲಸ ಮಾಡಿ ಮುಂದೆ ೧೯೫೩ ರಲ್ಲಿ ಧಾರವಾಡಕ್ಕೆ ಬಂದರು. ಅಂದು ಎ. ಕೆ. ಗರ್ಲ್ಸ ಸ್ಕೂಲ್ ಆಗಿದ್ದ ಇಂದಿನ ಕರ್ನಾಟಕ ಯುನಿವರ್ಸಿಟಿ ಪಬ್ಲಿಕ್ ಸ್ಕೂಲ್‌ದಲ್ಲಿ ಪೂರ್ಣಾವಧಿ ಸಂಗೀತ ಶಿಕ್ಷಕರಾಗಿ ಕೆಲಸಕ್ಕೆ ಸೇರಿದರು. ೧೯೬೪ ರಿಂದ ೧೯೭೫ ರ ವರೆಗೆ ಅಲ್ಲಿ ಸಂಗೀತ ಶಿಕ್ಷಕರಾಗಿ, ಮುಂದೆ ಕರ್ನಾಟಕ ವಿಶ್ವವಿದ್ಯಾಲಯದ ಸಂಗೀತ ಮಹಾವಿದ್ಯಾಲಯದಲ್ಲಿ ಸಂಗೀತ ಉಪನ್ಯಾಸಕರಾಗಿ ೧೯೮೨ ರ ವರೆಗೆ ಸೇವೆ ಸಲ್ಲಿಸಿ ಅದೇ ವರ್ಷ ಸೇವೆಯಿಂದ ನಿವೃತ್ತಿ ಹೊಂದಿದರು. ಇವರ ಕಾರ್ಯದಕ್ಷತೆ, ಸಂಗೀತ ಕ್ಷೇತ್ರದಲ್ಲಿನ ಸೇವಾಕಾರ್ಯವನ್ನು ಪರಿಗಣಿಸಿ ಕರ್ನಾಟಕ ವಿಶ್ವವಿದ್ಯಾಲಯವು ಇವರಿಗೆ ಸ್ನಾತಕೋತ್ತರ ಸಂಗೀತ ವಿಭಾಗದ ಗೌರವ ಪ್ರಾಧ್ಯಾಪಕ ಹುದ್ದೆ ನೀಡಿತು. ೧೯೮೨ ರಿಂದ ೧೯೮೫ ರ ವರೆಗೆ ಮೂರು ವರ್ಷ ಅಲ್ಲಿ ಸಂಗೀತ ಪ್ರಾಧ್ಯಾಪಕರಾಗಿ ಸೇವೆ ಸಲ್ಲಿಸಿದರು.

ಉತ್ತಮ ಕಲಾವಿದ ಉತ್ತಮ ಶಿಕ್ಷಕನಾಗಿರುವುದು ವಿರಳ. ಆದರೆ ಈ ಮಾತಿಗೆ ಪ್ರೊ. ಆರ್‌ಪಿ. ಹೂಗಾರ ಅಪವಾದ ೧೯೫೦ ರಲ್ಲಿ ಧಾರವಾಡದಲ್ಲಿ ಆಕಾಶವಾಣಿ ಕೇಂದ್ರ ಸ್ಥಾಪನೆಗೊಂಡಂದಿನಿಂದಲೂ ಇವರ ಹಾಡುಗಾರಿಕೆ ಆಕಾಶವಾಣಿಯಲ್ಲಿ ಪ್ರಸಾರವಾಗುತ್ತಿದೆ. ಖ್ಯಾತ ಗಾಯಕ ಪಂ. ಗುರುರಾವ ದೇಶಪಾಂಡೆಯವರೊಂದಿಗೆ ಇವರು ಆಕಾಶವಾಣಿಯ ಧ್ವನಿಪರೀಕ್ಷಾ ಕಮೀಟಿಯ ಸದಸ್ಯರಾಗಿ ಕೆಲಸ ನಿರ್ವಹಿಸಿದ್ದಾರೆ. ಕೆಲವು ರೂಪಕಗಳಿಗೆ ಸಂಗೀತ ಸಂಯೋಜಿಸಿದ್ದಾರೆ. ಆಕಾಶವಾಣಿಯಲ್ಲಿ ರೇಡಿಯೋ ಸಂಗೀತ ಪಾಠ ನೀಡಿದ್ದಾರೆ.

ಶ್ರೀ ಆರ. ಪಿ. ಹೂಗಾರ ಅವರದು ಸಮೃದ್ಧ ಹಾಗೂ ಸಂತೃಪ್ತ ಬದುಕು. ಅವರ ಮಡದಿ ಶ್ರೀಮತಿ ಲಕ್ಷ್ಮೀಬಾಯಿ (ಸೌ. ಲಕ್ಷ್ಮಮ್ಮ) ಪತಿಗೆ ತಕ್ಕಸತಿ : ಸದ್ಗೃಹಿಣಿ. ರಾಚಪ್ಪ-ಲಕ್ಷ್ಮೀಬಾಯಿಯವರಿಗೆ ಬಸವರಾಜ, ವೀರಣ್ಣ ಎಂಬ ಇಬ್ಬರು ಗಂಡು ಮಕ್ಕಳು ಹಾಗೂ ಒಬ್ಬಳೇ ಮಗಳು. ಹಿರಿಯ ಮಗ ಶ್ರೀ ಬಸವರಾಜ ಹೂಗಾರ

ಎಂ. ಎ. (ಕನ್ನಡ) ಪದವೀಧರರು. ಅವರು ಧಾರವಾಡದ ಕ.ವಿ.ವಿ. ಕನ್ನಡ ಅಧ್ಯಯನ ಪೀಠದಲ್ಲಿ ಹಸ್ತಪ್ರತಿ ವಿಭಾಗದಲ್ಲಿ ಸಂಶೋಧನ ಸಹಾಯಕರಾಗಿ ಕೆಲಸ ಮಾಡುತ್ತಿದ್ದಾರೆ. ಕಿರಿಯ ಮಗ ಡಾ. ವೀರಣ್ಣ ಹೂಗಾರ ಎಂ. ಎ(ಮನೋವಿಜ್ಞಾನ) ಎಂ. ಎ(ಸಂಗೀತ) ಪದವೀಧರರು. ಅವರು ಧಾರವಾಡದ ಕ.ವಿ.ವಿ. ಸ್ನಾತಕೋತ್ತರ ಸಂಗೀತ ವಿಭಾಗದಲ್ಲಿ ಸಂಗೀತ ಉಪನ್ಯಾಸಕರಾಗಿ ಕೆಲಸ ಮಾಡುತ್ತಿದ್ದಾರೆ. ಅವರು ಪ್ರೊ. ಎ. ಯು.ಪಾಟೀಲ ಅವರ ಮಾರ್ಗದರ್ಶನದಲ್ಲಿ ಗಾನಯೋಗಿ ಪಂ. ಪಂಚಾಕ್ಷರಿ ಗವಾಯಿಗಳ ಜೀವನ ಹಾಗೂ ಸಂಗೀತ ಕುರಿತು ಪಿಎಚ್.ಡಿ. ಪದವಿ ಸಂಪಾದಿಸಿದ್ದಾರೆ. ಶ್ರೀಮತಿ ಗಿರಿಜಾ ಅವರು ಶ್ರೀ ಚೆನ್ನಪ್ಪ ಹೂಗಾರ ಇವರ ಕೈ ಹಿಡಿದು ಸದ್ಗೃಹಿಣಿಯಾಗಿ ಬಾಳುತ್ತಿದ್ದಾರೆ.

ಶ್ರೀ ಆರ್.ಪಿ. ಹೂಗಾರರು ಅನೇಕ ಜನ ಶಿಷ್ಯರನ್ನು ತಯಾರು ಮಾಡಿದ್ದಾರೆ. ಅಂಥವರಲ್ಲಿ ಶ್ರೀಮತಿ ಗೀತಾ ಜಾವಡೇಕರ, ಶ್ರೀಜಯಶ್ರೀ ರಂಗನಾಥ, ಶ್ರೀಮತಿ ಭಾರತಿ ಮೇಸ್ತ್ರಾ, ಶ್ರೀ. ಸಿದ್ಧರಾಮಯ್ಯ ಮಠಪತಿ, ಡಾ. ವೀರಣ್ಣ ಹೂಗಾರ ಪ್ರಮುಖರಾಗಿದ್ದಾರೆ. ಅವರ ಶಿಷ್ಯರನೇಕರು ಈಗ ಸಂಗೀತ ಕ್ಷೇತ್ರದಲ್ಲಿ ಅಪಾರ ಹೆಸರು ಹಾಗೂ ಉನ್ನತ ಸ್ಥಾನಮಾನ ಪಡೆದುಕೊಂಡಿದ್ದಾರೆ.



# ಅಧ್ಯಾಯ-ಆರು

# ಕುಂದಗೋಳ ಪರಿಸರದಲ್ಲಿ ಪ್ರವರ್ಧಮಾನಕ್ಕೆ ಬಂದ ಹಿಂದುಸ್ತಾನಿ ಸಂಗೀತ ಘರಾಣೆಗಳು

## ೬.೧. ಹಿಂದುಸ್ತಾನಿ ಘರಾಣೆಗಳ ಪರಿಚಯ

ಹಿಂದುಸ್ಥಾನೀ ಸಂಗೀತದಲ್ಲಿ 'ಘರಾಣಾ' ಎಂಬ ಶಬ್ದಕ್ಕೆ ಒಂದು ವಿಶೇಷ ಮಹತ್ವವಿದೆ. 'ಘರಾಣೆ' ಅಂದರೆ ಪರಂಪರೆ, ಪಂಥ, ಪಂಗಡ ಎಂದು ಅರ್ಥ. ಮೂಲಧ್ಯೇಯ ಒಂದೇ ಇದ್ದರೂ ಪ್ರತಿಯೊಂದು ಕಲಾಪರಂಪರೆಯಲ್ಲಿ ಬೇರೆ ಬೇರೆ ವೈಶಿಷ್ಟ್ಯಗಳು ಕಂಡು ಬರುತ್ತವೆ. ಅಂದರೆ ಬೇರೆ ಬೇರೆ ಮನೆತನಗಳಲ್ಲಿ ಕುಲದೇವರು, ಕುಲಾಚಾರಗಳು, ಮುಂತಾದವುಗಳಲ್ಲಿ ಯಾವ ರೀತಿ ವಿಭಿನ್ನತೆಯು ಕಂಡು ಬರುತ್ತದೆಯೋ ಅದೇ ರೀತಿ ಸಂಗೀತ ಸಾಧಕರಲ್ಲಿಯೂ ಕೂಡ ಭಿನ್ನತೆ ಕಂಡು ಬರುತ್ತದೆ.

ಹಿಂದಿನ ಸಂಗೀತಕಾರರು ಬುದ್ಧಿ ಮತ್ತು ಭಾವನೆಗಳಲ್ಲಿ ಯಾವುದಾದರೊಂದರ ಪ್ರಭಾವಕ್ಕೆ ಗುರಿಯಾಗಿ ಆ ಮಾರ್ಗದಲ್ಲಿಯೇ ಸಂಗೀತ ಸಾಧನೆಗೈದರು, ಕೆಲವರು ಸ್ವರ ಪ್ರಾಧಾನ್ಯವಾಗಿರುವ ಮಾರ್ಗದತ್ತ ನಡೆದರೆ ಇನ್ನೂ ಕೆಲವರು ಲಯ ತಾಲದ ಬೌದ್ಧಿಕ ಅಭಿವ್ಯಕ್ತಿಗೆ ಲಕ್ಷ್ಯಕೊಟ್ಟರು. ಇನ್ನೂ ಕೆಲವರು ಸ್ವರ ಮತ್ತು ಲಯ ಈ ಎರಡೂ ಅಂಗಗಳ ಮಧುರ ಸಂಗಮದಲ್ಲಿ ಆನಂದಪಡೆದರು. ಈ ಪ್ರಕಾರ ಕೇವಲ ಸ್ವರದ ಆನಂದ ಪಡೆಯುವ, ಕೇವಲ ಲಯದ ಆನಂದ ಪಡೆಯುವ ಹಾಗೂ ಸ್ವರ ಮತ್ತು ಲಯ ಇವುಗಳ ಸಮನ್ವಯ ಸಾಧಿಸಿ ಆನಂದಪಡೆಯುವ ಬೇರೆ ಬೇರೆ ಪಂಥಗಳು ನಿರ್ಮಾಣವಾದವು.

''ಸ್ವರ ಮತ್ತು ತಾಲ ಇವುಗಳ ವೈಚಿತ್ರ್ಯಪೂರ್ಣ ಪ್ರಯೋಗಗಳಿಂದ ವಿವಿಧ ಸಂಗೀತ ಶೈಲಿಗಳು ನಿರ್ಮಾಣವಾದವು. ಒಂದರಲ್ಲಿ ಸ್ವರ ಪ್ರಕಾರದ ಪ್ರಾಬಲ್ಯ ಕಂಡು ಬಂದರೆ ಮತ್ತೊಂದರಲ್ಲಿ ತಾಲ ಕ್ರಿಯೆಗಳ ಬಾಹುಲ್ಯವು ಕಂಡು ಬರುತ್ತದೆ. ರಾಗದ ಸ್ವರಗಳು ನಿಯತವಾಗಿದ್ದರೂ ರಾಗವನ್ನು ಪ್ರಸ್ತುತ ಪಡಿಸುವ ವೈಚಿತ್ರ್ಯದ ಮೂಲಕ ಆ ರಾಗವು ಬೇರೆ ಬೇರೆಯಾಗಿ ಗೋಚರಿಸುತ್ತದೆ. ಬೇರೆ ಬೇರೆ ಗಾನ ಪ್ರಕಾರಗಳು ನಿರ್ಮಿತವಾದವು. ಇಂಥಹ ಪ್ರಕಾರಗಳನ್ನು ಇಂದು ನಾವು ವಿವಿಧ ಗಾಯಕೀ ಪದ್ಧತಿಯ ರೂಪದಲ್ಲಿ ಗುರುತಿಸುತ್ತೇವೆ. ಈ ಗಾನ ಪ್ರಕಾರಗಳ ಪರಂಪರೆಗೆ ನಾವು ಘರಾಣಾ ಎಂದು ನಾಮಕರಣ ಮಾಡಿದ್ದೇವೆ''[೫೫] ಎಂದು ಡಾ. ಪಾಠಕ ಅವರು ಬರದಿದ್ದಾರೆ.

---

೫೫. ಇಂಚರ : (ಹಿಂದುಸ್ತಾನಿ ಸಂಗೀತ ಘರಾಣೆಗಳು) : ಡಾ. ಬಿಂದುಮಾಧವ ಪಾಠಕ, ಪುಟ- ೧೩೨

ಮೊಟ್ಟಮೊದಲು ದ್ರುಪದ ಎಂಬ ಗಾಯನ ಪ್ರಕಾರವು ಪ್ರಚಾರದಲ್ಲಿತ್ತು. ಈ ಗಾನ ಪ್ರಕಾರದಲ್ಲಿಯೂ ಕೂಡಾ ಬೇರೆ ಬೇರೆ ವಾಣಿಗಳು ಅಂದರೆ ಶೈಲಿಗಳು ಇದ್ದವು. ಉದಾಹರಣೆಗಾಗಿ ಗೋಬರ ಹರವಾಣಿ, ನೌಹಾರವಾಣಿ, ಢಾಗುರವಾಣಿ ಹಾಗೂ ಖಂಡಾರವಾಣಿ ಎಂಬ ಹೆಸರುಗಳಿಂದ ಅವು ಪ್ರಚಾರದಲ್ಲಿದೆ. ಖ್ಯಾಲ ಗಾಯನದಲ್ಲಿ ಈ ಧ್ರುಪದ ವಾಣಿಗಳ ಆಧಾರದ ಮೇಲೆಯೇ ಬೇರೆ ಬೇರೆ ಘರಾಣೆಗಳ ಉತ್ಪತ್ತಿ ಆಯಿತೆಂದು ಹೇಳಲಾಗುತ್ತದೆ.

ಖ್ಯಾಲ ಗಾಯನದ ಘರಾಣೆಗಳ ಕೆಲವು ಲಕ್ಷಣಗಳು ಹೀಗಿವೆ

೧.ಘರಾಣೆಗೆ ಒಂದು ನಿರ್ದಿಷ್ಟ ರೂಪರೇಷೆ ಇರಬೇಕು.

೨. ಪ್ರತಿಯೊಂದು ಘರಾಣೆಗೆ ಸ್ವತಂತ್ರವಾದ ಶೈಲಿ ಇರಬೇಕು.

೩. ಘರಾಣೆಯ ವೈಶಿಷ್ಟ್ಯಗಳನ್ನು ಪ್ರಸ್ತುತ ಪಡಿಸುವ ಅನುಯಾಯಿ ಕಲಾವಿದ ಇರಬೇಕು.

೪. ನಿರ್ಧಿಷ್ಟವಾದ ಅಭ್ಯಾಸ ಕ್ರಮ, ರಾಗ ಪ್ರಸ್ತುತ ಪಡಿಸುವ ವೈಶಿಷ್ಟ್ಯ ಘರಾಣೆಯಲ್ಲಿ ಇರಬೇಕು.

ಹಿಂದುಸ್ಥಾನೀ ಸಂಗೀತದಲ್ಲಿ ವಿವಿದ ಘರಾಣೆಗಳು ಪ್ರಚಾರದಲ್ಲಿವೆ. ಗ್ವಾಲಿಯರ್ ಘರಾಣೆ, ಆಗ್ರಾ ಘರಾಣೆ, ಕಿರಾಣಾ ಘರಾಣೆ, ಜೈಪುರ ಘರಾಣೆ, ರಾಮಪುರ ಘರಾಣೆ, ಷೆಹಸ್ವಾನ ಘರಾಣೆ, ಮೇವಾತಿ ಘರಾಣೆ, ಭೆಂಡಿ ಭಜಾರ ಘರಾಣೆ ಮುಂತಾದ ಘರಾಣೆಗಳು ಲೋಕಪ್ರಿಯವಾಗಿವೆ. ಈ ಲೇಖನದಲ್ಲಿ ಕೇವಲ ಗ್ವಾಲಿಯರ್, ಆಗ್ರಾ, ಕಿರಾಣಾ ಮತ್ತು ಜೈಪುರ ಈ ನಾಲ್ಕು ಪ್ರಮುಖ ಘರಾಣೆಗಳ ಚರ್ಚೆಯನ್ನು ಮಾಡಲಾಗಿದೆ. ಉಳಿದ ಘರಾಣೆಗಳು ಈ ನಾಲ್ಕು ಮುಖ್ಯ ಘರಾಣೆಗಳ ಕೆಲವು ಅಂಶಗಳನ್ನು ಪಡೆದುಕೊಂಡು ಉತ್ಪನ್ನವಾಗಿವೆ. ಅಂದರೆ ಈ ಘರಾಣೆಗಳಿಗೆ ಯಾವ ಮಹತ್ವವಿಲ್ಲವೆಂದಲ್ಲ. ಅವುಗಳಿಗೂ ಮಹತ್ವವಿದೆ, ವೈಶಿಷ್ಟ್ಯವಿದೆ, ಉಳಿದ ಘರಾಣೆಗಳಿಗೂ ಈ ನಾಲ್ಕು ಘರಾಣೆಗಳಿಗೂ ಒಂದಲ್ಲ ಒಂದು ರೀತಿಯಲ್ಲಿ ಸಂಬಂಧ ಪಟ್ಟಿವೆ.

### ೬.೧.೧. ಗ್ವಾಲ್ಹೇರ್ ಘರಾಣಾ

ಖ್ಯಾಲ ಗಾಯನದ ಪ್ರಪ್ರಥಮ ಪ್ರಚಾರವು ದಿಲ್ಲಿಯ ಮಹಮ್ಮದ ಶಹಾ ರಂಗೀಲೆ ಇವನ ದರ್ಬಾರದಲ್ಲಿ ಆಯಿತೆಂದು ಹೇಳಲಾಗುತ್ತಿದೆ. ಆದರೆ ಗ್ವಾಲ್ಹಿಯರದ ದರ್ಬಾರದಲ್ಲಿ ಖ್ಯಾಲ ಗಾಯನ ವಿಶೇಷ ಪ್ರಗತಿ ಸಾಧಿಸಿದೆ. ಗ್ವಾಲ್ಹಿಯರದ ದರ್ಬಾರದ ಆಶ್ರಯದಲ್ಲಿ ನಥನ್‌ಪೀರಭಕ್ಷ, ಬಡೇಮಹಮ್ಮದಖಾನ್ ಎಂಬ ವಿಖ್ಯಾತ ಗಾಯಕರು ಇದ್ದರು. ನಥನ್‌ಪೀರ್ ಭಕ್ಷರವರು, ಮಹಮ್ಮದಖಾನ್‌ರವರು ತಾನ್‌ಗಳಲ್ಲಿ ಪ್ರಸಿದ್ಧಿ ಪಡೆದಿದ್ದರು. ನಥನ್‌ಪೀರ ಭಕ್ಷರಿಗೆ ಹದ್ದೂಖಾನ್, ಹಸ್ಸೂಖಾನ್ ಹಾಗೂ ನದ್ದೂಖಾನ್ ಎಂಬ ಮೂರು ಮೊಮ್ಮಕ್ಕಳಿದ್ದರು. ಈ ಮೂವರು ಸುಪ್ರಸಿದ್ಧ ಗಾಯಕರಾಗಿದ್ದರು. ಹದ್ದೂಖಾನ್ ಮತ್ತು ಹಸ್ಸೂಖಾನ್ ಇವರ ಶಿಷ್ಯ ಪರಂಪರೆ ವಿಶಾಲವಾಗಿತ್ತು.

ಇವರಲ್ಲಿ ಹದ್ದೂಖಾನರ ಘೂಗಂಧರ್ವ ರಹಿಮತ್‌ಖಾನ್ ಸಾಹೇಬರು, ವಿಲಾಯತ ಹುಸೇನ ಮುಸ್ತಾಕ್‌ಹುಸೇನಖಾನ್, ಚುನ್ನಾಬಾಯಿ, ಶಂಕರಪಂಡಿತ, ಏಕನಾಥಪಂಡಿತ, ರಾಮಕೃಷ್ಣ ಬುವಾ, ಸನೇಘ, ರಾಜಾಭಯ್ಯಾ ಪೂಛವಾಲೆ, ಗ್ವಾಲ್ಹೇರದ ವಾಸುದೇವ ಬುವಾ ಮತ್ತು ಅವರ ಶಿಷ್ಯಂದಿರರಾದ ರಾಮಕೃಷ್ಣಾ ಭುವಾ, ಇಚಲಕರಂಜೀಕರ ಮುಂತಾದವರ ಹೆಸರುಗಳು ವಿಶೇಷ ಉಲ್ಲೇಖನೀಯವಾಗಿದೆ. ಬಾಲಕೃಷ್ಣಾ ಬುವಾ ಇವರ ಶಿಷ್ಯಂದಿರರಲ್ಲಿ ಪಂಡಿತ ವಿಷ್ಣು ದಿಗಂಬರ ಪಲೂಸ್ಕರ ಹಾಗೂ ಮಿರಜದ ಪಂಡಿತ ನೀಲಕಂಠ ಬುವಾ, ಮಿರಾಶಿ ಬುವಾ ಇವರು ಪ್ರಸಿದ್ಧ ಗಾಯಕರಾಗಿದ್ದರು. ಕೃಷ್ಣರಾವ ಶಂಕರಪಂಡಿತ ಹಾಗೂ ಅವರ ಶಿಷ್ಯಂದಿರಾದ ಶರದ್‌ಚಂದ್ರ ಆರೋಳಕರ ಮುಂತಾದವರು ಈ ಘರಾಣೆಯ ಶ್ರೇಷ್ಠ ಗಾಯಕರೆಂದೆನಿಸಿದ್ದಾರೆ. ವಿಷ್ಣುದಿಗಂಬರ ಪಲೂಸ್ಕರವರ ಶಿಷ್ಯ ಪರಂಪರೆಯಲ್ಲಿ ಪಟವರ್ಧನ, ಪ್ರೊಫೆಸರ್ ಬಿ. ಆರ್. ದೇವಧಾರ ಮುಂತಾದವರು ಉಲ್ಲೇಖನೀಯರಾಗಿದ್ದಾರೆ.

"ಗ್ವಾಲ್ಹೇರ ಘರಾಣೆಯ ಗಾಯಕಿಯು ಅಷ್ಟಾಂಗ ಪ್ರಧಾನವಾಗಿದೆ. ಆಲಾಪ, ಬೋಲ್, ಬೋಲ್‌ತಾನ, ವಿವಿಧ ತಾನದ ಪ್ರಕಾರಗಳು, ಲಯಕಾರಿ, ಮೀಂಡ, ಗಮಕ ಹಾಗೂ ಮುರ್ಕಿ ಮುಂತಾದ ಸಂಗತಿಗಳು ವಿಶೇಷ ರೂಪದಿಂದ ಗ್ವಾಲ್ಹೇರ ಗಾಯಕಿಯಲ್ಲಿ ಕೇಳಿಬರುತ್ತವೆ. ಈ ಗಾಯಕಿಯಲ್ಲಿ ಆಗುವಷ್ಟು ಗಮಕಗಳ ಪ್ರಯೋಗವು ಇನ್ನುಳಿದ ಘರಾಣೆಗಳಲ್ಲಿ ಕಂಡು ಬರುವದಿಲ್ಲ. ಮೀಂಡ ಹಾಗೂ ಆರೋಹ ಮತ್ತು ಅವರೋಹದಲ್ಲಿ ಸರಳ ತಾನಗಳು ಈ ಘರಾಣೆಯ ವೈಶಿಷ್ಟ್ಯವಾಗಿವೆ. ಬಹುತರವಾಗಿ ಈ ಘರಾಣೆಯಲ್ಲಿ ಮಧ್ಯಲಯದಲ್ಲಿ ಖ್ಯಾಲಗಳನ್ನು ಹಾಡಲಾಗುತ್ತದೆ. ಈ ಘರಾಣೆಯ ಗಾಯಕರು ಭೈರವ, ಲಲಿತ, ದರ್ಬಾರಿ, ಬಾಗೇಶ್ರೀ, ಅಸಾವರೀ, ಶ್ರೀ, ಗೌಡ, ಮಲ್ಹಾರ್, ಬಸಂತ ಮುಂತಾದ ರಾಗಗಳನ್ನು ಪ್ರಭಾವ ಪೂರ್ಣವಾಗಿ ಹಾಡುತ್ತಾರೆ. ಗ್ವಾಲ್ಹೇರ ಘರಾಣೆಯಲ್ಲಿ ತರಾನಾ ಎಂಬ ಗಾನ ಪ್ರಕಾರದ ಒಂದು ಅಪೂರ್ವ ಖಜಾನೆ ಇದೆ. ಈ ತರಾನಾಗಳು ವಿವಿಧ ಲಯಗಳಲ್ಲಿ ಅಂದರೆ ವಿಲಂಬಿತ, ಮಧ್ಯ ಹಾಗೂ ಧೃತ್ ಲಯಗಳಲ್ಲಿ ದೊರೆಯುತ್ತವೆ"[೫೬] ಎಂದು ಡಾ. ಪಾಠಕ ಅಭಿಪ್ರಾಯಪಡುತ್ತಾರೆ.

### ೬.೧.೨. ಕಿರಾಣಾ ಘರಾಣಾ

ಉತ್ತರಪ್ರದೇಶದಲ್ಲಿ ದಿಲ್ಲಿಯ ಹತ್ತಿರ ಕಿರಾಣಾ ಎಂಬ ಗ್ರಾಮವಿದೆ. ಈ ಗ್ರಾಮದ ಸುವಿಖ್ಯಾತ ಬೀನವಾದಕ ಉಸ್ತಾದ ಬಂದೇ ಅಲಿಖಾನ್ ಸಾಹೇಬರು ಈ ಘರಾಣೆಯ ಪ್ರವರ್ತಕರೆಂದು ಮನ್ನಿಸಲಾಗುತ್ತದೆ. ಮುಂದೆ ಸುಪ್ರಸಿದ್ಧ ಗಾಯಕರಾದ ಉಸ್ತಾದ ಕರೀಮಖಾನರು ಈ ಘರಾಣೆಯ ಹೆಸರನ್ನು ಉಜ್ವಲಗೊಳಿಸಿದರು.

ಈ ಘರಾಣೆಯ ಪರಂಪರೆ ಭವ್ಯವಾಗಿದೆ. ಇವರಲ್ಲಿ ಮುಖ್ಯವಾಗಿ ಉಸ್ತಾದ ಅಬ್ದುಲ್ ಕರೀಮ್‌ಖಾನ್, ಉಸ್ತಾದ ವಹೀದಖಾನ್, ಪಂಡಿತ ಸವಾಯಿ ಗಂಧರ್ವ, ಶ್ರೀಮತಿ ಹೀರಾಬಿಯ ಬಡೋದೇಕರ, ಡಾ. ಶ್ರೀಮತಿ

---

೫೬. ಇಂಚರ : (ಹಿಂದುಸ್ತಾನಿ ಸಂಗೀತ ಘರಾಣೆಗಳು) : ಡಾ. ಬಿಂದುಮಾಧವ ಪಾಠಕ, ಪುಟ- ೧೩೪

ಗಂಗೂಬಾಯಿ ಹಾನಗಲ್, ರೋಷನಾರಾಬೇಗಂ. ಪಂಡಿತ ಭೀಮಸೇನ ಜೋಶಿ, ಬೆಹಲೇಬುವಾ, ಬಾಲಕೃಷ್ಣ ಬುವಾ, ಕಪಿಲೇಶ್ವರ, ಸರಸ್ವತಿ ರಾಣಿ, ಮಾಣಿಕವರ್ಮಾ, ಪಂಡಿತ ಫಿರೋಜ್ ದಸ್ತೂರ್, ಪಂಡಿತ ಬಸವರಾಜ ರಾಜಗುರು, ಡಾ.ಪ್ರಭಾ ಅತ್ರೆ ಮುಂತಾದವರು ಶ್ರೇಷ್ಠ ಕಲಾವಿದರಾಗಿ ಖ್ಯಾತಿ ಹೊಂದಿದ್ದಾರೆ. ಈ ಗಾಯಕರ ಶಿಷ್ಯ ಸಮುದಾಯ ಸಾಕಷ್ಟು ದೊಡ್ಡದಿದೆ.

ಕಿರಾಣಾ ಘರಾಣಾದ ಗಾಯಕಿಯು ಮುಖ್ಯತಃ ತಂತು ವಾದ್ಯದ ಅಂಗವಾಗಿದೆ. ಸಾರಂಗಿ ಹಾಗೂ ಬೀನ ಮುಂತಾದ ತಂತು ವಾದ್ಯಗಳಲ್ಲಿ ಪ್ರಯೋಗಿಸಲ್ಪಡುವ ಮೀಂಡ, ಗಮಕ, ಖಟಕಾ, ಮುರ್ಕಿ ಮುಂತಾದ ಅಂಗಗಳು ವಿಶೇಷ ರೂಪದಿಂದ ಈ ಗಾಯಕಿಯಲ್ಲಿ ಕಂಡು ಬರುತ್ತದೆ. ಈ ಗಾಯಕಿಯಲ್ಲಿ ಭಾವಪೂರ್ಣ ಸ್ವರಗಳನ್ನು ಹಚ್ಚುವುದು. ವಿಸ್ತಾರವಾಗಿ ಹಾಡಲ್ಪಡುವ ರಾಗಾಲಾಪನೆ, ಸರಗಮ್ ಹೇಳುವ ಪರಿಪಾಠ ವೈಚಿತ್ರಪೂರ್ಣವಾಗಿವೆ. ಕಿರಾಣಾ ಗಾಯಕೀ ಪದ್ಧತಿಯು ಅಲಾಪ ಪ್ರಧಾನ ಗಾಯಕಿ ಆಗಿದೆ.

ಧ್ರುಪದ ವಾಣಿಗಳ ಗೋಬರಿಹಾರಿ ವಾಣಿಯ ಪ್ರಭಾವದಿಂದ ಉತ್ಪನ್ನವಾದ ಈ ಘರಾಣೆಯಲ್ಲಿ ರಾಗದ ವಿಸ್ತಾರವನ್ನು ಒಂದೊಂದು ಸ್ವರವನ್ನು ಕ್ರಮಬದ್ಧವಾಗಿ ಹಚ್ಚಿ ಮಾಡಲಾಗುತ್ತದೆ. ಕೇವಲ ಅಲಾಪದ ಕೆಲಸ ಸುಗಮವಾಗಿ ಮಾಡಲು ಯೋಗ್ಯವಾಗಿರುವಂಥ ರಾಗಗಳನ್ನೇ ಈ ಘರಾಣೆಯ ಗಾಯಕರು ಹಾಡುತ್ತಾರೆ.

ಈ ಘರಾಣೆಯ ಗಾಯಕೀ ಪದ್ಧತಿಯಲ್ಲಿ ವಿಶೇಷವಾಗಿ ವಿಲಂಬಿತ ಲಯದ ಖ್ಯಾಲಗಳು ಹಾಡಲ್ಪಡುತ್ತವೆ. ಲಯವೂ ಕೂಡ ಸ್ವರಗಳಿಗೆ ಅನುಗುಣಾಗಿ ಇರುತ್ತದೆ.

### ೬.೧.೩. ಆಗ್ರಾ ಘರಾಣಾ

ಹಿಂದುಸ್ಥಾನೀ ಸಂಗೀತದಲ್ಲಿ ಆಗ್ರಾ ಘರಾಣೆಯು ತನ್ನದೇ ಆದ ಒಂದು ವೈಶಿಷ್ಟ್ಯದಿಂದ ಪರಿಪೂರ್ಣವಾಗಿದೆ. ಗಗ್ಗೇಖುದಾ ಭಕ್ಷ ಎಂಬುವರು ಈ ಘರಾಣೆಯ ಸಂಸ್ಥಾಪಕರು. ಕೆಲವು ವಿದ್ವಾಂಸರ ಅಭಿಪ್ರಾಯದಂತೆ ಗ್ವಾಲಿಯರ್ ಘರಾಣಾದಿಂದಲೇ ಆಗ್ರಾ ಘರಾಣೆಯ ಉತ್ಪತ್ತಿಯಾಗಿದೆ.

ಗಗ್ಗೇಖುದಾ ಭಕ್ಷರು ಚಿಕ್ಕವರಿದ್ದಾಗ ತಮ್ಮ ಊರಾದ ಆಗ್ರಾವನ್ನು ಬಿಟ್ಟು ಗ್ವಾಲ್ಹೇರಿಗೆ ವಥನ್‌ಖಾನ್ ಪೀರಭಕ್ಷ ಇವರ ಬಳಿ ಸಂಗೀತ ಕಲಿಯಲು ಹೋದರು. ಗ್ವಾಲ್ಹೇರದಲ್ಲಿ ಹಲವು ವರ್ಷಗಳವರೆಗೆ ಶಿಕ್ಷಣವನ್ನು ಪಡೆದು ಪುನಃ ಆಗ್ರಾಕ್ಕೆ ಹಿಂತಿರುಗಿದರು. ಗಗ್ಗೇಖುದಾ ಭಕ್ಷರ ಪೂರ್ವದಲ್ಲಿ ಆಗ್ರಾದ ಗಾಯಕರು ಕೇವಲ ಧ್ರುಪದ ಧಮಾರವನ್ನೇ ಹಾಡುತ್ತಿದ್ದರು. ಗಗ್ಗೇಖುದಾ ಭಕ್ಷರ ಖ್ಯಾಲ ಗಾಯನದಿಂದ ಪ್ರಭಾವಿತರಾಗಿ ಆಗ್ರಾದ ಎಲ್ಲ ಗಾಯಕರು ಆಮೇಲೆ ಖ್ಯಾಲ ಹಾಡಲು ಪ್ರಾರಂಭಿಸಿದರು. ಗಗ್ಗೇಖುದಾ ಭಕ್ಷರು ಗ್ವಾಲ್ಹೇರ ಶೈಲಿಯ ಗಾಯನ ಪದ್ಧತಿ ಕಲಿತರೂ ತಮ್ಮ ಬುದ್ಧಿ ಮತ್ತೆ ಹಾಗು ಕಠೋರ ಸಾಧನೆಯಿಂದಾಗಿ ತಮ್ಮದೇ ಆದ ಒಂದು ಸ್ವತಂತ್ರ ಗಾಯನ

ಶೈಲಿಯನ್ನು ರೂಢಿಗೆ ತಂದರು. ಈ ಗಾಯನ ಶೈಲಿಯೇ ಆಗ್ರಾ ಘರಾಣಾ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಗಗ್ಗೇಖುದಾ ಭಕ್ಷರು ಅತ್ಯಂತ ಪ್ರಸಿದ್ಧ ಗಾಯಕರಾಗಿದ್ದರು. ಅವರ ಶಿಷ್ಯ ಪರಂಪರೆ ಅತ್ಯಂತ ವಿಶಾಲವಾಗಿತ್ತು. ಇವರಲ್ಲಿ ಶೀರಖಾನ್, ಆಲೀಭಕ್ಷ ಖಾನ್, ಭರತ್ ಪೂರವಾಲೆ, ಪಂಡಿತ ಶಿವಧೀನ್ ಹಾಗು ಪಂಡಿತ ವಿಶ್ವಂಭರನಾಥ ಮುಂತಾದವರ ಹೆಸರುಗಳು ವಿಶೇಷ ಉಲ್ಲೇಖನಿಯವಾಗಿವೆ.

ಶೇರಖಾನರ ಏಕಮೇವ ಪುತ್ರರಾದ ನಥನ್‌ಖಾನರವರು ಶ್ರೇಷ್ಠ ಕಲಾವಿದರಾಗಿದ್ದರು. ಇವರು ತಮ್ಮ ಅದ್ವಿತೀಯ ಗಾಯನ ಶೈಲಿಯಿಂದ ಇಡೀ ಭಾರತದ ಮೇಲೆ ಪ್ರಭಾವ ಬೀರಿದರು. ಮೈಸೂರು ದರ್ಬಾರಿನಲ್ಲಿ ಸುಮಾರು ಹನ್ನೊಂದು ವರ್ಷಗಳ ಕಾಲದವರೆಗೆ ಆಸ್ಥಾನ ಗಾಯಕರಾಗಿ ಆಶ್ರಯ ಪಡೆದರು. ನಥನ್‌ಖಾನರವರ ಶಿಷ್ಯ ಪರಂಪರೆ ದೊಡ್ಡದು. ಇವರ ಸುಪುತ್ರರಾದ ಮಹಮ್ಮದಖಾನ್ ಹಾಗು ಅಬ್ದುಲ್ಲಾಖಾನ್ ಮನಹರಪಿಯಾ ಮತ್ತು ಪಂಡಿತ ಭಾಸ್ಕರ ಬುವಾ ಭಾಕಲೆ ಇವರ ಹೆಸರುಗಳು ವಿಶೇಷ ಉಲ್ಲೇಖನೀಯವಾಗಿವೆ. ಈ ಘರಾಣೆಯ ಶ್ರೇಷ್ಠ ಗಾಯಕರೆಂದು ಉಸ್ತಾದ ಫಯಾಜ ಖಾನ್ ವಿಲಾಯತ್ ಹುಸೇನಖಾನ್, ಖಾದೀಮಹುಸೇನ ಮುಂತಾದವರ ಹೆಸರುಗಳು ಸುಪ್ರಸಿದ್ಧವಾಗಿವೆ.

''ದ್ರುಪದ ವಾಣಿಗಳಲ್ಲಿ ಒಂದಾದ ನೌಹಾರ ವಾಣಿಯಿಂದ ಆಗ್ರಾ ಘರಾಣೆಯ ಉತ್ಪತ್ತಿಯಾಗಿದೆ. ಈ ಘರಾಣೆಯಲ್ಲಿ ಲಯ ಅಂಗದ ಗಾಯಕೀ ವಿಶೇಷ ರೂಪದಿಂದ ಹಾಡಲ್ಪಡುತ್ತದೆ. ಲಯದ ಚಮತ್ಕಾರವನ್ನು ತೋರಿಸುವಂಥಾ ಅನೇಕ ಬಂದಿಶ್ ರಚನೆಗಳು ಈ ಘರಾಣೆಯಲ್ಲಿವೆ. ಈ ಘರಾಣೆಯ ಮತ್ತೊಂದು ವೈಶಿಷ್ಟ್ಯವೆಂದರೆ ಅಲಾಪವನ್ನು ನೋಂತೋಂದಲ್ಲಿ ಹಾಡಲಾಗುತ್ತದೆ. ಹಾಗೂ ಖ್ಯಾಲ ಗಾಯನದ ಪ್ರಾರಂಭದಲ್ಲಿ ದ್ರುಪದ ಮತ್ತು ಧಮಾರ ಗಾಯನವನ್ನು ಹಾಡಲಾಗುತ್ತದೆ. ಸ್ಪಷ್ಟ ಮತ್ತು ಜೋರ ಧ್ವನಿಯಿಂದ ಹಾಡಲ್ಪಡುವ ಈ ಗಾಯನ ಶೈಲಿಯಲ್ಲಿ ಬೋಲ್ ತಾನಗಳ ಪ್ರಯೋಗ ವಿಶೇಷವಾಗಿರುತ್ತದೆ''[೫೭] ಎಂದು ಡಾ. ಪಾಠಕ ಬರೆಯುತ್ತಾರೆ.

### ೬.೧.೪. ಜೈಪುರ ಘರಾಣಾ

ಗಾಯನ ಸಾಮ್ರಾಟ್ ಉಸ್ತಾದ ಅಲ್ಲಾದಿಯಾಖಾನ ಸಾಹೇಬರು ಈ ಘರಾಣೆಯ ಪ್ರವರ್ತಕರೆಂದು ಹೆಸರಾಗಿದ್ದಾರೆ. ಖಾನ ಸಾಹೇಬರು ಜೈಪುರದ ನಿವಾಸಿಯಾಗಿದ್ದರು. ಆದ್ದರಿಂದ ಅವರು ಪ್ರತಿಪಾದಿಸಿದ ಘರಾಣೆಯೂ ಕೂಡಾ ಜೈಪುರ ಎಂಬ ಹೆಸರಿನಿಂದ ಪ್ರಸಿದ್ಧವಾಗಿದೆ. ಕೆಲವರು ಈ ಘರಾಣೆಯನ್ನು ಅತ್ರಾಲೀ ಘರಾಣೆ ಎಂದು ಸಹ ಕರೆಯುತ್ತಾರೆ.

---

೫೭. ಇಂಚರ : (ಹಿಂದುಸ್ತಾನಿ ಸಂಗೀತ ಘರಾಣೆಗಳು) : ಡಾ. ಬಿಂದುಮಾಧವ ಪಾಠಕ, ಪುಟ- ೧೩೬

ಅಲ್ಲಾದಿಯಾಖಾನ್ ಸಾಹೇಬರಿಗೆ ಸಂಗೀತದ ಶಿಕ್ಷಣವು ಅವರ ಚಿಕ್ಕಪ್ಪ ಉಸ್ತಾದ ಜಹಾಂಗೀರಖಾನ್ ಅವರಿಂದ ದೊರೆಯಿತು. ಜಹಾಂಗೀರಖಾನರು ಅಲ್ಲಾದಿಯಾಖಾನ್ ಸಾಹೇಬರಿಗೆ ಖ್ಯಾಲ ಮತ್ತು ನೂರಾರು ಚೀಜುಗಳನ್ನು ಕಲಿಸಿದರು. ಅಲ್ಲಾದಿಯಾಖಾನ್‌ಸಾಹೇಬರು ತಮ್ಮ ಪ್ರಭಾವಕ್ಕೆ ಅನುಕೂಲವಿರುವಂಥ ಒಂದು ವಿಲಕ್ಷಣ ಗಾಯಕೀ ಪದ್ಧತಿಯನ್ನು ರೂಢಿಗೆ ತಂದರು. ಕಠಿಣ ಪರಿಶ್ರಮ ಹಾಗೂ ಪ್ರಚಂಡ ಬುದ್ಧಿಮತ್ತೆಯಿಂದಾಗಿ ಖಾನ ಸಾಹೇಬರ ಈ ಹೊಸ ಗಾಯನ ಶೈಲಿಯು ಅತ್ಯಂತ ಲೋಕಪ್ರಿಯವಾಯಿತು.

ಅಲ್ಲಾದಿಯಾಖಾನ್ ಸಾಹೇಬರ ಶಿಷ್ಯ ಪರಂಪರೆಯೂ ಕೂಡಾ ಸಾಕಷ್ಟು ವಿಶಾಲವಾಗಿದೆ. ಇವರ ಪುತ್ರರಾದ ಮಂಜೀಖಾನ್ ಹಾಗು ಬುರ್ಜೀಖಾನ್ ಮತ್ತು ಶ್ರೀಮತಿ ಕೇಸರಬಾಯಿ ಕೇರಕರ, ನಿವೃತ್ತಿ ಬುವಾಸರ್ ನಾಯಕ, ಹಾಮಖಾನ್ ಸಾಹೇಬರ ಬಂಧುಗಳಾದ ಹೈದರಖಾನ್, ಪಂಡಿತ ಗೋವಿಂದ ಬುವಾ ಸಾಲಿಗ್ರಾಮ, ಶ್ರೀಮತಿ ಲಕ್ಷ್ಮೀಬಾಯಿ ಜಾಧವ, ಮೋಹನ ಪಾಲೇಕರ, ಪಂಡಿತ ವಾಮನರಾವ ಸರೋಲಿಕರ, ಕಾಳಿದಾಸ ಪ್ರಶಸ್ತಿ ವಿಜೇತರಾದ ಡಾ. ಮಲ್ಲಿಕಾರ್ಜುನ ಮನ್ಸೂರ, ಧೊಂಡೂತಾಯಿ ಕುಲಕರ್ಣಿ, ಪದ್ಮಾವತಿ ಗೋಖಲೆ, ಕಿಶೋರೀ ಅಮೋಣಕರ ಮುಂತಾದ ಗಾಯಕರ ಹೆಸರುಗಳನ್ನು ಮರೆಯುವಂತಿಲ್ಲ.

ಜೈಪುರ ಘರಾಣೆಯ ಗಾಯಕೀ ಧ್ರುಪದಲ್ಲಿಯೇ ಡಾಗೋರ ಹಾಗು ಗೌಹಾರ ವಾಣಿಯಿಂದ ಉತ್ಪನ್ನವಾಗಿದೆಯೆಂದು ಹೇಳಲಾಗುತ್ತಿದೆ. ಈ ಗಾಯಕಿಯಲ್ಲಿ ಅಲಾಪ ಹಾಗು ಪದ ರಚನೆಯು ತಂತು ವಾದ್ಯದ ಅಂಗದಿಂದ ನಡೆಯುತ್ತಿದೆ. ಇದಲ್ಲದೇ ಒಂದು ಸ್ವರದಿಂದ ಮತ್ತೊಂದು ಸ್ವರದ ಪ್ರಾರಂಭ ಮಾಡುವುದು, ಶೃತಿಸ್ಥಾನ ಸರಿಯಾಗಿ ಹೆಚ್ಚುವುದು, ಅಸ್ತಾಯಿ ತುಂಬುವುದು, ಮುಂತಾದ ಸಂಗತಿಗಳು ವೈಶಿಷ್ಟ್ಯ ಪೂರ್ಣವಾಗಿದೆ.

ಈ ಘರಾಣೆಯಲ್ಲಿ ಒಂದು ಕಡ್ಡಾಯವಾದ ನಿಯಮವಿದೆ. ಅದಾವುದೆಂದರೆ ಒಂದು ಸಲ ಯಾವ ಲಯದಲ್ಲಿ ಚೀಜ್ ಆರಂಭವಾಗುತ್ತದೆಯೋ ಅದೇ ಲಯದಲ್ಲಿ ಅದನ್ನು ಸಮಾಪ್ತಗೊಳಿಸಬೇಕು. ಲಯ ಹೆಚ್ಚಿಸುತ್ತಾ ಹಾಡುವುದಕ್ಕೆ ಹಾಗು ತಿಹಾಯಿಗಳನ್ನು ಹಾಡುವುದಕ್ಕೆ ಈ ಘರಾಣೆಯಲ್ಲಿ ಆಸ್ಪದವಿಲ್ಲ.

ಈ ಘರಾಣೆಯಲ್ಲಿ ವಿಶೇಷವಾಗಿ ವಿಲಂಬಿತ ತೀನತಾಲ, ಬಡಾಚೌತಾಲ, ರೂಪಕ, ಝಪತಾಲ ಮುಂತಾದ ತಾಲಗಳಲ್ಲಿ ಚೀಜ್‌ಗಳನ್ನು ಹಾಡಲಾಗುತ್ತದೆ. ಈ ಗಾಯಕಿ ಪದ್ಧತಿಯಲ್ಲಿ ಸ್ವರ ಹಾಗೂ ಲಯಗಳಿಗೆ ಸಮಾನ ಮಹತ್ವ ಕೊಡಲಾಗುತ್ತದೆ. ಈ ಘರಾಣೆಯ ಗಾಯಕರು ಜೋಡಿ ರಾಗಗಳನ್ನು, ವಕ್ರ ರಾಗಗಳನ್ನು ಕ್ಲಿಷ್ಟರಾಗಗಳನ್ನು ಅತಿ ಸಹಜತೆಯಿಂದ ಹಾಡುತ್ತಾರೆ. ದೇಶೀ, ಖಟ್, ಶುದ್ಧ ಕಲ್ಯಾಣ, ರಾಮಕಲಿ, ಬಹಾಗಡಾ ಮತ್ತು ಕಾನಾಡಾ, ವಟ

ಹಾಗು ಜಿಲಾವಲದ ಅನೇಕ ಪ್ರಕಾರಗಳನ್ನು ಹೇಮ್, ಸೊಹನೀ, ಪರಜ, ಸಾವನೀ ಮುಂತಾದ ರಾಗಗಳನ್ನು ಅಪೂರ್ವ ಸಿದ್ಧಿಯೊಂದಿಗೆ ಈ ಘರಾಣೆಯ ಗಾಯಕರು ಹಾಡುತ್ತಾರೆ. ಅವರ ಗಾಯಕೀಯ ತಾನಗಳಲ್ಲಿ ಟಪ್ಪಾ ಅಂಗದ ತಿರುವು ಮುರುವು ತಾನಗಳು, ಅಚರಕ ತಾನಗಳು ಹಾಗು ಸುಸಂಬದ್ಧ ತಾನಗಳು ವಿಶೇಷವಾಗಿ ಕಂಡು ಬರುತ್ತವೆ. ಸಮ್ಮಿನಮೇಲೆ ಬರುವ ಅವರ ಪದ್ಧತಿಯೂ ಕೂಡಾ ವೈಚಿತ್ರ್ಯಪೂರ್ಣವಾಗಿರುತ್ತದೆ. ಒಟ್ಟಾರೆ ಜೈಪುರ ಘರಾಣೆಯ ಶೈಲಿಯು ಕಲಾಪೂರ್ಣವಾಗಿದೆ ಹಾಗು ರಂಜಕ ತತ್ವಗಳಿಂದ ಸಮೃದ್ಧವಾಗಿದೆ.

### ೬.೨. ಕೆಲವು ಹಾಡುಗಾರರ ಘರಾಣೆಗಳ ವೈಶಿಷ್ಟ್ಯ

ಈ ಮೂರು ಮುಖ್ಯ ಹಿಂದುಸ್ತಾನಿ ಘರಾಣೆಗಳ ವಿವರಣೆಯ ಹಿನ್ನಲೆಯಲ್ಲಿ ಕೆಲವು ಪ್ರಮುಖ ಹಾಡುಗಾರರ ಘರಾಣೆಗಳ ವೈಶಿಷ್ಟ್ಯವನ್ನು ವಿವರಿಸಬಹುದು.

### ೬.೨.೧. ಕಿರಾಣೆ ಘರಾಣೆ

### ಉಸ್ತಾದ ಅಬ್ದುಲ್ ಕರೀಮಖಾನ

''ಅಬ್ದುಲ್ ಕರೀಮಖಾನರದು ಇಂಥ ಒಂದು ಹೊಸ ಹಾದಿ. ಅವರದು ಸ್ವರಪ್ರಧಾನವಾದ ಗಾಯನ. ಎಷ್ಟೊಂದು ಸ್ವರಪ್ರಧಾನವೆಂದರೆ ಇನ್ನೊಂದು ಪ್ರಮುಖ ಅಂಗವಾದ ಲಯವನ್ನು ಕಡೆಗಣಿಸುವಷ್ಟರ ಮಟ್ಟಿಗೆ ಸ್ವರಪ್ರಧಾನ. ಸ್ವರವೇ ಸರ್ವಸ್ವ. ತಾಲ ಗಯಾ ತೊ ಬಾಲ ಗಯಾ, ಸೂರಗಯಾ ತೊ ಸಿರ ಗಯಾ (ತಾಲ ಹೋದರೆ ಕೂದಲೆಳೆ ಹೋದಂತೆ, ಸ್ವರ ಹೋದರೆ ತಲೆಯೇ ಹೋದಂತೆ) ಎನ್ನುವ ಛಲ. ಯಾವುದೇ ಹೊಸ ಗಾಯನಶೈಲಿ ಮೂಲಪುರುಷನ ಧ್ವನಿಗುಣವನ್ನೇ ಅವಲಂಬಿಸಿರುತ್ತದೆ. ಅಬ್ದುಲ್ ಕರೀಮಖಾನರದು ನವುರಾದ, ಮೊನಚಾದ ಧ್ವನಿ. ತಾರ ಸಪ್ತಕದಲ್ಲಿ ಎದ್ದು ಕಾಣುವ ಧ್ವನಿ. ಖರ್ಜ (ಮಂದ್ರ ಸಪ್ತಕ) ದ ಅಭಾವ. ಸ್ವರಗಳ ಶುದ್ಧತೆ ಹಾಗೂ ಖಚಿತತೆಗಳಿಗೆ ಆದ್ಯಗಮನ. ಸ್ವರಗಳ ಸೂಕ್ಷ್ಮಾನುಸೂಕ್ಷ್ಮ ವ್ಯತ್ಯಾಸಗಳನ್ನು ತೋರುವ ಪರಿಣತಿ. ಸರಗಮ್‌ಗಳ ಸುರಿಮಳೆ. ಬೀನ, ಸಾರಂಗಿ, ಜಲತರಂಗ, ತಬಲಾ ನುಡಿಸಬಲ್ಲ ಬಹುಶ್ರುತರು. ಅವರ ಧ್ವನಿಯ ಸಮಧುರತೆಯೇ ಸುಮಧುರತೆ. ಅವರು ರಾಗಗಳನ್ನು ಕೇವಲ ಹಾಡುತ್ತಿರಲಿಲ್ಲ. ಅವುಗಳೊಂದಿಗೆ ತಾದಾತ್ಮ್ಯ ಹೊಂದುತ್ತಿದ್ದರು. ರಾಗವೇ ತಾವಾಗಿ ಬಿಡುತ್ತಿದ್ದರು. ಪರಿಮಳ ಬೀರುವ ಹೂದೋಟದಲ್ಲಿ ತಂಪಾದ ಬೆಳದಿಂಗಳ ರಾತ್ರಿ ಸುಳಿದಾಡಿದಂತಿರುತ್ತಿತ್ತು ಅವರ ಗಾಯನ. ಶ್ರೋತೃಗಳನ್ನು ರಸಲೋಕದಲ್ಲಿ ಮೈಮರೆಸುತ್ತಿದ್ದರು. ಅವರ ಗಾಯನವೊಂದು ಮೋಡಿ. ಮೇಲಾಗಿ, ಸಂಗೀತ ಈಶ್ವರ ಸೇವೆಯೆಂದು ನೆರೆನಂಬಿದ ಮಹಾನುಭಾವರು''[೫೪] ಎಂದು ಡಾ. ಕನವಳ್ಳಿ ಬರೆಯುತ್ತಾರೆ.

---

೫೪. ಸವಾಯಿಗಂಧರ್ವ : ಡಾ. ಸದಾನಂದ ಕನವಳ್ಳಿ, ಪುಟ-೧೧

ಅಬ್ದುಲ್ ಕರೀಮಖಾನರು ಕಿರಾಣಾ ಘರಾಣೆಯ ಪ್ರವರ್ತಕರು. ಅವರ ಹುಟ್ಟೂರು ಉತ್ತರ ಪ್ರದೇಶದ ಕರ್ಣನಗರ ಎಂಬ ಹಳ್ಳಿ. ಅದು ಅಪಭ್ರಂಶಗೊಂಡು ಕಿರಾಣಾ ಆಗಿದೆ. ಸಂಸ್ಥಾಪಕನ ಊರಿನಿಂದಲೇ ಘರಾಣೆಗೆ ಹೆಸರು ಬಂದಿರುವುದು ವಾಡಿಕೆ. ಜಯಪುರ ಘರಾಣಾ, ಗ್ವಾಲಿಯರ ಘರಾಣಾ, ಆಗ್ರಾ ಘರಾಣಾ ಇತ್ಯಾದಿ. ಹಿಂದುಸ್ತಾನಿ ಸಂಗೀತದಲ್ಲಿ ಘರಾಣಾ ಪದ್ಧತಿ ವಿಶಿಷ್ಟವಾದುದು. ಘರಾನಾ ಎಂದರೆ ಮನೆತನ, ಕುಟುಂಬ ಹೇಗೆ ಒಂದು ಕುಟುಂಬದ ಸದಸ್ಯರಲ್ಲಿ ಊಟ, ಉಡುಗೆ, ಆಚಾರ, ವಿಚಾರ, ಸಂಸ್ಕಾರಗಳಲ್ಲಿ ಸಾಮಾನ್ಯ ಅಂಶಗಳಿರುತ್ತವೆಯೊ ಹಾಗೆಯೆ ಒಂದು ಸಂಗೀತ ಘರಾಣೆಯಲ್ಲಿ ಗಾಯನ ಯಾ ವಾದನದ ಸಾಮಾನ್ಯ ಅಂಶಗಳಿರುತ್ತವೆ. ಒಂದೊಂದು ಘರಾಣಾ ತನ್ನದೇ ವಿಶಿಷ್ಟವಾದ ಗಾಯನ ಶೈಲಿಯನ್ನು ಹೊಂದಿರುತ್ತದೆ.

**ಪಂ. ಸವಾಯಿ ಗಂಧರ್ವ**

ರಾಮಭಾವು ಕುಂದಗೋಳಕರರ ಅಂದರೆ ಸವಾಯಿ ಗಂಧರ್ವರ ಗಾಯನ ಆಲಾಪ, ಮೀಂಡ್, ಬಢತ, ಘಸೀಟ್, ಬೋಲತಾನ್ ಖಟಕಾ, ಮುರ್ಕಿ, ಫಿರತ್, ಡೌಲದಾರ ತಾನಗಳ ಅಮೋಘ ಸಂಗಮ. ಯಾವುದೊಂದು ರಾಗದ ಸ್ವರಗಳನ್ನು ಒಂದಾದ ಮೇಲೊಂದರಂತೆ ನಿಧಾನವಾಗಿ ವಿಸ್ತರಿಸುತ್ತಿದ್ದರು. ಒಂದೊಂದೇ ಇಟ್ಟಿಗೆ ಇಟ್ಟು ಕಟ್ಟುವ ಸೌಧದಂತಿರುತ್ತಿತ್ತು ಅವರ ರಾಗ ರಚನೆ. ರಾಗದ ಜೀವಸ್ವರ ತಲುಪುವಲ್ಲಿ ಅವಸರ ಮಾಡುತ್ತಿರಲಿಲ್ಲ. ಅವಸರ ಮಾಡಿದರೆ ಶ್ರೋತೃಗಳ ಆತುರದ ಪ್ರತಿಕ್ಷೆ ಇಲ್ಲವಾಗಿ ಆಸಕ್ತಿ ಉಳಿಯದು. ಬೇರೆ ಬೇರೆ ಆಕರ್ಷಣೆಗಳನ್ನು ಅಳವಡಿಸಿ ಕಿರಾಣಾ ಗಾಯಕಿಯನ್ನು ಒಂದು ಹೆಜ್ಜೆ ಮುಂದಡಿಯಿಡಿಸಿದರು. ಅಬ್ದುಲ್ ಕರೀಮಖಾನರ ಗಾಯನದಲ್ಲಿ ಕರುಣರಸ ಉಕ್ಕುತ್ತಿದ್ದರೆ ರಾಮಭಾವುರ ಗಾಯನದಲ್ಲಿ ಭಕ್ತಿರಸ ಹೊರಸೂಸುತ್ತಿತ್ತು. ಗೋಪಾಲಾ ಮೇರೆ ಕರುಣಾಕ್ಯೋಂನ ಆವೆ, ರಾಮ ಹರಿಕಾ ಭೇದ ನ ಪಾಯೊ ಎಂಬ ಭಜನಗಳನ್ನು ರಾಮಭಾವು ಹಾಡಿದರೆ ಅಬ್ದುಲ್‌ಕರೀಮಖಾನರೆ ಹಾಡುತ್ತಿರುವರೇನೊ ಎನಿಸುತ್ತಿತ್ತು. ಠುಮರಿ ಹಾಡುವ ಕಲೆಯನ್ನೂ ಕರಗತ ಮಾಡಿಕೊಂಡರು. ರಾಮಭಾವುರ ಧ್ವನಿ ಬಲು ಇಂಪು. ಆದರೆ, ಧ್ವನಿ ಕೂಡಲೇ ಹತ್ತುತ್ತಿರಲಿಲ್ಲ. ಸ್ವಲ್ಪ ಸಮಯಾನಂತರ ಧ್ವನಿ ಹತ್ತಿತೆಂದರೆ ಅವರನ್ನು ಹಿಡಿದವರಿಲ್ಲ.

''ಸವಾಯಿ ಗಂಧರ್ವರದ್ದು ಗುರು ಅಬ್ದುಲ್ ಕರೀಮಖಾನರ ಗೌರಿಹರವಾಣಿ (ಇಂದ್ರಿಯಗಳನ್ನು ಅಪಹರಿಸುವ ಎಂಬರ್ಥ) ಗಾಯನ ಶೈಲಿ. ಸವಾಯಿ ಗಂಧರ್ವರು ಒಂದೊಂದು ಸ್ವರವನ್ನು ಮುಖ್ಯ ಸ್ವರದೊಂದಿಗೆ ಜೋಡಿಸುತ್ತಿದ್ದುದು ವರ್ಣಿಸಲಸದಳ. ವಿಲಂಬಿತದಲ್ಲಿ ಸ್ವರಾಲಾಪ ಮಾಡುತ್ತಿದ್ದಂತೆ ಗುರುಗಳೆ ಹಾಡುತ್ತಿರುವರೇನೊ ಎಂದು ಭಾಸವಾಗುತ್ತಿತ್ತು. ಸವಾಯಿ ಗಂಧರ್ವರ ವಿಲಂಬಿತವೆಂದರೆ ಶ್ರೋತೃಗಳಿಗೆ ಬೆಳುದಿಂಗಳ ರಾತ್ರಿ, ನೌಕಾ ವಿಹಾರದ ಅನುಭವ. ತಾನಕ್ರಿಯೆ ಆರಂಭಗೊಂಡಾಗ ಒಮ್ಮಿಂದೊಮ್ಮೆಲೆ ಗಾಯನ ಬೇರೆ ಸ್ವರೂಪ ಪಡೆಯುತ್ತಿತ್ತು. ಅವರ ಆಕ್ರಮಕ ಶಕ್ತಿಯ ಪರಿಚಯವಾಗುತ್ತಿತ್ತು. ಸರಳ, ವಕ್ರ, ಪೇಚದಾರ ತಾನಗಳ ವೃಷ್ಟಿ. ಪುಷ್ಪವೃಕ್ಷದ ಮೇಲೆ ಸುಗಂಧಿಪುಷ್ಪ ಸುರಿದಂತೆ ತಮ್ಮ ಹಾಡುಗಾರಿಕೆಗೆ ವಿವಿಧ ಬಣ್ಣಗಳನ್ನು ಹುಟ್ಟಿಸಿ

ಸಮೃದ್ಧಗೊಳಿಸಿದ್ದರು. ಈ ಬಣ್ಣಗಳು ಎಷ್ಟೊಂದು ಏಕಜೀವವಾಗಿರುತ್ತಿದ್ದವೆಂದರೆ ಹಣ್ಣಿನ ಬಣ್ಣ ಹಣ್ಣಿಗಾಗಿಯೇ ಹುಟ್ಟಿದ್ದು ಎನಿಸುತ್ತಿತ್ತು. ಇವರು ಅಬ್ದುಲ್ ಕರೀಮಖಾನರ ಗಾಯನಶೈಲಿಗೆ ಹೊಸ ಹೊಳಪನ್ನು, ಹೊಸ ಆಯಮವನ್ನು ತಂದುಕೊಟ್ಟರು''[೫೯] ಎಂದು ಡಾ. ಕನವಳ್ಳಿಯವರು ಸರಿಯಾಗಿಯೇ ಅವರ ಪ್ರತಿಭೆಯನ್ನು ಗುರುತಿಸಿದ್ದಾರೆ.

ಸವಾಯಿ ಗಂಧರ್ವರದು ಅಬ್ದುಲ್ ಕರೀಮಖಾನರಂತೆ ಮೇಣದಂಥ ಧ್ವನಿಯಲ್ಲ. ಆದರವರದು ಪ್ರಚಂಡ ಸಾಧನೆ. ದಿನವೂ ೮ ತಾಸು ಅಭ್ಯಾಸ ಮಾಡಿ ಅದನ್ನು ಹದಗೊಳಿಸಿದ್ದರು. ಆದರೂ ಕೂಡ ಧ್ವನಿಯನ್ನು ಹತೋಟಿಗೆ ತಗಲೋಸುಗ ಪ್ರತಿ ಬಾರಿಯೂ ಹೋರಾಡಬೇಕಿತ್ತು. ನಿತ್ಯ ಅಭ್ಯಾಸ ಇದ್ದುದೇ. ನಸುಕಿನಲ್ಲಿ ಖರಜ (ಮಂದ್ರ ಸಪ್ತಕ) ಅಭ್ಯಾಸ. ಮಧ್ಯಾಹ್ನದಲ್ಲಿ ಗಾಯನದ ವಿವಿಧ ಅಂಗಗಳಾದ ಆಲಾಪ, ಘಸೀಟ, ಮುರ್ಕಿ, ಖಟಕಾ, ಗಮಕ, ತಾನ, ಪಲ್ಟಾ, ಫಿರತ್ ಇತ್ಯಾದಿಗಳ ಅಭ್ಯಾಸ. ಒಮ್ಮೊಮ್ಮೆ ದಿನವಿಡಿ ಖರಜ ವಿಲಂಬಿತದಿಂದ ಮಧ್ಯ ಷಡ್ಜಕ್ಕೆ ಬರುವ ಕ್ರಮವನ್ನಷ್ಟೆ ಅಭ್ಯಾಸ ಮಾಡುತ್ತಿದ್ದರು. ಯಾವುದೆ ಆಗಲಿ ತಮಗೆ ಸಮಾಧಾನವಾಗುವವರೆಗೆ ಅಭ್ಯಾಸದಲ್ಲಿ ಮಗ್ನರಾಗಿರುತ್ತಿದ್ದರು. ಒಮ್ಮೆ ಕೇಳಿದ ಸ್ವರ ವಿನ್ಯಾಸ ಇನ್ನೊಮ್ಮೆ ಕೇಳಿಸದ ರೀತಿಯಲ್ಲಿ ನಿರೂಪಿಸುತ್ತಿದ್ದರು. ಒಂದು ತಾಸಿನವರೆಗೂ ಮಧ್ಯಷಡ್ಜಕ್ಕೆ ಹೊಂದುವ ಎಡಬಲ ಸ್ವರಗಳನ್ನು ಬೇರೆ ಬೇರೆ ರೀತಿಯಲ್ಲಿ ಹಚ್ಚಿ ಅದರ ಸೌಂದರ್ಯವನ್ನು ಎತ್ತಿ ತೋರಿಸುವ ಕಲಾತ್ಮಕತೆ ಸವಾಯಿ ಗಂಧರ್ವರಲ್ಲದೆ ಇನ್ನಾರೂ ಸಾಧಿಸಿರಲಿಲ್ಲವೆಂದೇ ಹೇಳಬೇಕು. ಮಧ್ಯಸಪ್ತಕದಿಂದ ತಾರಸಪ್ತಕದವರೆಗೆ ಹಾಡಲು ಅವರಿಗೆ ಒಂದು ತಾಸು ಸಾಕಾಗುತ್ತಿರಲಿಲ್ಲ. ಒಳ್ಳೆಯ ಶ್ರೋತೃಗಳು ಸಿಕ್ಕರೆ ಒಂದು ರಾಗವನ್ನು ಎರಡು ಎರಡೂವರೆ ಘಂಟೆ ಹಾಡಬಲ್ಲವರಾಗಿದ್ದರು. ಅವರ ಗಮಕ ತಾನಗಳಿಗೆ, ತಾರಸಪ್ತಕದ ಸ್ವರಗಳನ್ನು ಹಚ್ಚುವ ಪದ್ಧತಿಗೆ, ಮಹಾನ್ ಸಂಗೀತಗಾರರೂ ತಲೆದೂಗುತ್ತಿದ್ದರು. ಇವೆಲ್ಲ ಅಂಶಗಳು ಸೂರ್ಯರಶ್ಮಿಯಲ್ಲಿ ಏಳು ಬಣ್ಣಗಳು ಮಿಳಿತಗೊಂಡಂತೆ ಏಕಜೀವವಾಗಿದ್ದವು. ಸ್ವರದಿಂದ ಸ್ವರಕ್ಕೆ ನಿಧಾನವಾಗಿ ಸಾಗುತ್ತ ಪ್ರತಿ ಸ್ವರದ ಸೌಂದರ್ಯ ಹಿಂಡುತ್ತ ರಾಗವನ್ನು ವಿಸ್ತರಿಸುವ ಸವಾಯಿ ಗಂಧರ್ವರ ಪದ್ಧತಿ ಅನನ್ಯವಾಗಿತ್ತು. ತಮ್ಮ ಮಧುರ ಸ್ವರಗಳಿಂದ ಶ್ರೋತೃಗಣ ಮಂತ್ರಮುಗ್ಧರಾದಾಗ ಸವಾಯಿ ಗಂಧರ್ವರ ಕಣ್ಣಲ್ಲಿ ಆನಂದಾಶ್ರುಗಳು ಸುರಿಯುತ್ತಿದ್ದವು. ರಾತ್ರಿಯೆಲ್ಲಾ ಅವರ ಗಾಯನ ಆಲಿಸಿದರೂ ಶ್ರೋತೃಗಳಿಗೆ ಓ ! ಇಷ್ಟು ಬೇಗ ಮುಗಿಯಿತೆ ? ಅನಿಸುತ್ತಿತ್ತು.

## ಪಂ. ಭೀಮಸೇನ ಜೋಶಿ

ಭೀಮಸೇನರ ಗಾಯನ ಅಬ್ದುಲ್ ಕರೀಮಖಾನರು ಜನಪ್ರಿಯಗೊಳಿಸಿದಂತಹ ಕಿರಾಣಾ ಘರಾಣೆಯ ಮುದ್ರೆ ಪಡೆದಿತ್ತು. ಈ ಗಾಯನದಲ್ಲಿನ ಧ್ಯಾನಪರ ಮತ್ತು ಆತ್ಮನಿರೀಕ್ಷಕ ಸ್ಪರ್ಶವನ್ನು ಉಸ್ತಾದರ ಕೆಲವು ಶಿಷ್ಯರಲ್ಲಿ, ವಿಶೇಷತಃ ಸವಾಯಿ ಗಂಧರ್ವ, ದಶರಥಬುವಾ ವಳೆ ಮತ್ತು ಗಣಪತ ಬುವಾ ಬೆಹರೆಯವರಲ್ಲಿ ಕಾಣಬಹುದು.

---

೫೯. ಸವಾಯಿಗಂಧರ್ವ : ಡಾ. ಸದಾನಂದ ಕನವಳ್ಳಿ, ಪುಟ-೩೦

ಬದಲಾಗುತ್ತಿದ್ದ ಸಂಗೀತ ಸನ್ನಿವೇಶಕ್ಕೆ ಮಹಾ ಸಂಪ್ರದಾಯವಾದಿಯಾದ ಭೀಮಸೇನರು ಸಾಂಪ್ರದಾಯಿಕವೆಂದು ಹೇಳಬಹುದಾದ ಮೌಲ್ಯ ಮತ್ತು ಸಮೂಹ ಸಂಸ್ಕೃತಿ ಅಭಿರುಚಿಗಳ ಮಧ್ಯ ಸಮತೋಲನ ಸಾಧಿಸುವಂಥ ಶೈಲಿಯನ್ನು ರೂಢಿಸಿಕೊಂಡರು.

ಭೀಮಸೇನರು ರಾಷ್ಟ್ರೀಯ ಖ್ಯಾತಿಗೇರುವ ಮೊದಲು ಹಳೆಯ ಮುಂಬಯಿ ರಾಜ್ಯದಲ್ಲಿಯ ಮರಾಠಿ ಮಾತನಾಡುವ ಶ್ರೋತೃಗಳು ಅವರಿಗೆ ಧಾರಾಳ ಆಶ್ರಯವಿತ್ತಿದ್ದರು. ಒಂದು ಶತಮಾನದವರೆಗೆ ಈ ಶ್ರೋತೃವರ್ಗ ತಾನಪ್ರಧಾನವಾದ ನಾಟ್ಯ ಸಂಗೀತದ ಸತ್ವಪೂರ್ಣ ಆಹಾರ ತಿಂದು ಬೆಳೆದ ವರ್ಗ. ಅವರ ಈ ಅಭಿರುಚಿ ಎಷ್ಟಿತ್ತೆಂದರೆ ಪರಿಶುದ್ಧ ಖಯಾಲ ಗಾಯನದಲ್ಲೂ ರಂಗ ಸಂಗೀತದ ಅವಶ್ಯಕ ಅಂಶಗಳಿಗೆ ಒಲವು ತೋರಿಸುತ್ತಿದ್ದರು. ಅವರ ಈ ತಾನಕಾರಿಗಾಗಿ ಹೊಂದಿದ್ದ ಅತಿ ಒಲವನ್ನು ಭೀಮಸೇನರು ತಮ್ಮ ವಿಪುಲ ಧ್ವನಿ ಸಂಪತ್ತಿನಿಂದ ತಾನಕಾರಿಯಿಂದ ರಸಿಕರನ್ನು ತಣಿಸುತ್ತಿದ್ದರು.

''ಗ್ವಾಲಿಯರ್, ಅತ್ರೌಳಿ, ಜೈಪುರ ಮತ್ತು ಪಟಿಯಾಳಾಗಳಂತಹ ಭಿನ್ನ ಭಿನ್ನ ಗಾಯಕಿಗಳ ರಸಮಿಶ್ರಣ ಭೀಮಸೇನರ ದೃತ್ ಗಾಯನದಲ್ಲಿ ದೊರೆಯುತ್ತದೆ. ಉದಾಹರಣೆಗೆ, ಅವರು ಪಟಿಯಾಳಾ ಶೈಲಿಯ ಸಪಾಟ್ ತಾನಿನ ಮಧ್ಯದಲ್ಲಿಯೆ ಅತ್ರೌಳಿ ಜೈಪುರ ಘರಾಣೆಯ ಸಂಕೀರ್ಣ, ವಕ್ರವಾದರಿಗಳ ಮಿಂಚಿನ ವೈಭವ ಶ್ರೇಣಿಯೊಂದಿಗೆ ತಮ್ಮ ಶ್ರೋತೃಗಳನ್ನು ಚಕಿತಗೊಳಿಸುತ್ತಾರೆ. ಕಿರಾಣಾ ಘರಾಣೆಯ, ಸಾರಂಗಿಯಂತಿರುವ, ನುಣುಚಿಕೊಳ್ಳುವ ಅಲಂಕಾರವನ್ನು ಕೂಡಲೆ ಗ್ವಾಲಿಯರ್ ಶೈಲಿಯ ಲಯಪ್ರಧಾನ ತಾನಕಾರರಿಗೆ ಚಾಣಾಕ್ಷತನದಿಂದ ಕಸಿ ಮಾಡುವರು. ವಸ್ತು ನಿರೂಪಣೆಯಲ್ಲಿ ಇಂಥ ಅದ್ಭುತ ಸಮರೂಪತೆಯನ್ನು ಸಾಧಿಸುವದು ಅವರಂತೆ ಪ್ರತಿಭೆ ಮತ್ತು ಹುಟ್ಟು ಶಕ್ತಿಯುಳ್ಳ ಪ್ರಭೃತಿಗಲ್ಲದೆ ಇನ್ನಾರಿಗೆ ಸಾಧ್ಯ?''[೬೦] ಎಂದು ಶ್ರೀ ಮೋಹನ ನಾಡಕರ್ಣಿ ಬರೆಯುತ್ತಾರೆ.

ತಮ್ಮ ಗುರುಗಳ ಅಲ್ಲದೆ ಹಿಂದಿನ ತಲೆಮಾರಿನ ಇತರ ಮಾರ್ಗದರ್ಶಕರ ಆದರ್ಶಗಳಲ್ಲದೆ ಪ್ರಮುಖ ಸಮಕಾಲೀನ ಗಾಯಕಿಗಳನ್ನು ಆಲಿಸಿ ತಮ್ಮ ಶೈಲಿಗೆ ಹೊಂದಾಣಿಕೆಯಾಗುವ ಅಂಶಗಳನ್ನು ಆಯ್ದುಕೊಂಡು ತಮ್ಮ ಸಂಗೀತವನ್ನು ಶಕ್ತಿಯುತವಾಗಿ ಮಾಡಿಕೊಂಡಿದ್ದಾರೆ.

ಭೀಮಸೇನರು ಯಾವಾಗಲೂ ತಮ್ಮ ಘರಾಣೆಯ ಪೂರ್ವಜರಂತೆ ಶ್ರೋತೃಗಳಿಗೆ ಪರಿಚಿತವಿರುವ ರಾಗಗಳನ್ನೆ ಹೆಚ್ಚಾಗಿ ಆಯ್ದುಕೊಳ್ಳುತ್ತಾರೆ. ಅವುಗಳಲ್ಲಿ ಬಹುತೇಕ ದರಬಾರಿ ಅಥವಾ ಅಭೋಗಿ ಮಾಲಕಂಸ ಯಮನ್ (ಅಥವಾ ಯಮನ್ ಕಲ್ಯಾಣ) ಶುದ್ಧ ಕಲ್ಯಾಣ ರಾಗಗಳಾಗಿರುತ್ತವೆ. ಅದರಲ್ಲೂ ಅತ್ಯಂತ ಸಂಭವನೀಯ ಆಯ್ಕೆ ಎಂದರೆ ಪೂರಿಯಾ ಕಲ್ಯಾಣವೆ.

---

೬೦. ಭೀಮಸೇನ ಜೋಶಿ ವ್ಯಕ್ತಿ ಮತ್ತು ಸಂಗೀತ: ಶ್ರೀ ಮೋಹನ ನಾಡಕರ್ಣಿ, ಪುಟ-೫೦

ತಮ್ಮ ಸ್ವಭಾವ ಹಾಗೂ ತಮ್ಮ ಸಂಗೀತದ ಸ್ವರೂಪಗಳಿಗೆ ಈ ರಾಗಗಳು ತಕ್ಕಂತಿರುವದರಿಂದ ತಾವು ಅವುಗಳನ್ನು ಆಯ್ದುಕೊಳ್ಳುವುದಾಗಿ ಹೇಳುತ್ತಾರೆ. ಅವರಂದಂತೆ ಆ ರಾಗಗಳನ್ನು ಅವರು ಪ್ರತಿಬಾರಿ ಹಾಡಿದಾಗಲೂ ಚೇತೋಹಾರಿಯಾಗಿ ನೂತನವಾಗಿ ಕಾಣುತ್ತವೆ.

ಸಂಕೀರ್ಣ ಮತ್ತು ವಿಚಿತ್ರವಾಗಿ ಕೇಳುವ ರಾಗಗಳನ್ನು ಕಚೇರಿ ವೇದಿಕೆಗಳ ಮೇಲೆ ಅವರು ನಿರೂಪಣೆ ಮಾಡುವದಿಲ್ಲ. ಅವರ ಧ್ವನಿಮುದ್ರಿಕೆಗಳಲ್ಲಿ ಲಭ್ಯವಿರುವ ಛಾಯಾ, ಛಾಯಾ-ಮಲ್ಹಾರ ಮತ್ತು ಕೋಮಲ ರಿಷಭ ಅಸಾವರಿ ತೋಡಿ, ಅವರದೇ ಸೃಷ್ಟಿಯಾದ ಕಲಾಶ್ರೀ, ಇವೆಲ್ಲ ಆವಿಷ್ಕಾರಗಳು ಪ್ರಯೋಗ ಮಾತ್ರ. ಕಚೇರಿ ನಿರೂಪಣೆಗಲ್ಲ.

## ಡಾ. ಗಂಗೂಬಾಯಿ ಹಾನಗಲ್

ಗಂಗೂಬಾಯಿ ಅವರ ಕಂಠ ಹಾಗೆ ಕೈಕೊಟ್ಟ ಸಂದರ್ಭಗಳೇ ಕ್ವಚಿತ. ಒಮ್ಮೆ ಸ್ವರ ಹಚ್ಚಿದರೆಂದರೆ ಆಯಿತು. ರಾಕೆಟ್ ಬಿಟ್ಟಂತೆ ಅದು ತಂತಾನೆ ಗಗನವಿಹಾರಿ. ಸ್ವರದ ಕೆಲಸದಲ್ಲಿ, ಶ್ರುತಿ ಪಾವಿತ್ರ್ಯದಲ್ಲಿ, ಖಯಾಲ್ ಗಾಯಕಿಯ ಸೊಗಸುಗಾರಿಕೆಯಲ್ಲಿ, ಲಯಕಾರಿಕೆಯಲ್ಲಿ ವೈಶಿಷ್ಟ್ಯ ಪೂರ್ಣವಾದ ಪದ್ಧತಿಯನ್ನು ಗಂಗೂಬಾಯಿ ತಮ್ಮ ಗುರುಪ್ರಸಾದವೆಂಬಂತೆ ಮೈಗೂಡಿಸಿಕೊಂಡಿದ್ದಾರೆ (ತಾವು ಗುರುಗಳಿಂದ ಪಡೆದದ್ದು ಎರಡಾಣೆಯಷ್ಟು ವಿದ್ಯೆ ಮಾತ್ರ ಎಂದು ಹೇಳುವರು). ಗಮಕ, ಮೀಂಡ್, ಬೋಲ್ತಾನಗಳನ್ನು ಕೇಳಿದಾಗ ಒಮ್ಮೊಮ್ಮೆ ಸವಾಯಿ ಗಂಧರ್ವರೇ ಹಾಡುತ್ತಿರುವರೇನೊ ಎನಿಸದಿರದು (ಈ ಮಾತು ಭೀಮಸೇನ್ ಜೋಶಿ ಅವರಿಗೂ ಅನ್ವಯಿಸುವುದು).

ಸವಾಯಿಗಂಧರ್ವರು ಶಿಷ್ಯರನ್ನು ಆರಿಸಿಕೊಳ್ಳುವಲ್ಲಿ ಬಹಳಷ್ಟು ಚಿಕಿತ್ಸೆ ಮಾಡುವರು. ಧ್ವನಿ ಪರೀಕ್ಷೆಯಲ್ಲಿ ಹೇಗೊ ಹಾಗೆ ಸಂಗೀತ ಪರಿಶ್ರಮದಲ್ಲಿಯೂ ಶಿಷ್ಯರನ್ನು ಸತ್ವ ಪರೀಕ್ಷೆಗೆ ಹಚ್ಚುವರು. ಸವಾಯಿಗಂಧರ್ವರ ಶಿಷ್ಯತ್ವ ವಹಿಸುವುದೆಂದರೆ ಉತ್ತಂಕನ (ಉದಂಕ ಎಂದೂ ಹೇಳುವುದುಂಟು) ಗುರುಭಕ್ತಿಯನ್ನು ನೆನಪಿಗೆ ತರುವಂತಹುದು. ಎಲ್ಲ ನಿಷ್ಠುರದ ಅಗ್ನಿ ದಿವ್ಯದಲ್ಲಿ ಗುರುಗಳು ತನುವನಲ್ಲಾಡಿಸಿ ನೋಡುವರು ಮನವನಲ್ಲಾಡಿಸಿ ನೋಡುವರು, ಧನವನಲ್ಲಾಡಿಸಿ ನೋಡುವರು ಇವೆಲ್ಲ ಕಂಜದಿದ್ದರೆ ಭಕ್ತಿ ಕಂಪಿತ ರಾಗುವರು.

ವರ್ಷಾನುಗಟ್ಟಲೆ ಪೂರಿಯಾರಾಗವೊಂದನ್ನೆ ಸಾಧನೆ ಮಾಡುತ್ತ ಕಿರಾನಾ ಗಾಯಕಿಯ ನೆಲೆ ಹಿನ್ನೆಲೆಯನ್ನು ಕಟ್ಟಿಕೊಂಡು ಮುಂದಿನ ರಾಗ-ರಾಗಿಣಿಗಳನ್ನು ಕೈವಶಮಾಡಿಕೊಳ್ಳುವಂತೆ ಗುರುಗಳು ತರಬೇತಿ ನೀಡಿದರು. ಪೂರಿಯಾದ ತರುವಾಯ ತೋಡಿ, ಆಸಾವರಿ, ಯಮನ, ಶುದ್ಧಕಲ್ಯಾಣಗಳನ್ನು ಅಳವಡಿಸಿಕೊಂಡು ಮಿಶ್ರರಾಗ, ಜೋಡು ರಾಗಗಳಾದ ಮಿಯಾಮಲ್ಹಾರ, ದರ್ಬಾರಿ ಕಾನಡಾ, ಪೂರಿಯಾ ಧನಾಶ್ರೀ ಮೊದಲಾದುವನ್ನು ಒಲಿಸಿಕೊಂಡರು. ಇತ್ತೀಚೆಗೆ ಕೆಲವರು ಸ್ವಂತ ರಚನೆಗಳೆಂದು ಹೊಸ ಹೊಸ ಹೆಸರುಗಳಲ್ಲಿ ಜೋಡು ಜೋಡು ರಾಗಗಳನ್ನು ಸೃಷ್ಟಿಸುತ್ತಿರುವ ಬಗ್ಗೆ ಅಷ್ಟೊಂದು ನಂಬುಗೆಯುಳ್ಳವರಾಗಿಲ್ಲ. ಇದ್ದಷ್ಟು ಶುದ್ಧ ರಾಗಗಳನ್ನೇ ಕಲಿತು ಪಚನ ಮಾಡಿಕೊಂಡರೆ ಸಾಕು ಎಂಬುದು ಗಂಗೂಬಾಯಿ ಅವರ ಅನುಭವದ ಸಲಹೆ.

ಗುರುಗಳ ಬಳಿ ತಮ್ಮ ಶಿಕ್ಷಣ ಮುಗಿದ ಮೇಲೂ ಕೆಲವೊಂದು ಕಚೇರಿಗಳಲ್ಲಿ ಗುರುಗಳು ಹಾಜರ ಇದ್ದರೆ ಸಣ್ಣ ಸಣ್ಣ ದೋಷಗಳನ್ನು ಎತ್ತಿ ಹೇಳುತ್ತಿದ್ದರೆಂದು ಗಂಗೂಬಾಯಿಯವರು ಅದು ಯಾವುದೆ ಕಡಿಮೆತನವಲ್ಲವೆಂದು ಪ್ರಾಮಾಣಿಕವಾಗಿ ಇಂದಿಗೂ ತೆರದ ಮನದಿಂದ ತೋಡಿಕೊಳ್ಳುತ್ತಾರೆ. ಮೊದಲಬಾರಿಗೆ ತಾಳಕಚ್ಚಾ ಇದ್ದಿತ್ತು ಎಂಬ ಪ್ರಾಮಾಣಿಕ ಒಪ್ಪಿಗೆ ಅವರದು. ಕೋಮಲ ತೀವ್ರ ಸ್ವರಗಳಲ್ಲಿ ಸ್ವಲ್ಪ ಹೆಚ್ಚು ಕಡಿಮೆ ಆದಾಗ ಗುರುಗಳಿಂದ ಬೈಸಿಕೊಂಡುದಕ್ಕೆಯೆ ತಮಗೆ ಸಂಗೀತ ಶಾರದೆ ಅನುಗ್ರಹಿಸಿದಳೆಂಬ ಪ್ರಾಂಜಲಶ್ರದ್ಧೆ ಗಂಗೂಬಾಯಿ ಅವರದು.

ಕ್ರಮಬದ್ಧವಾಗಿ ನಿಗದಿಪಡಿಸಿದ ದಿನಗಳಲ್ಲಿ ಕುಂದಗೋಳಕ್ಕೆ ಪ್ರಯಾಣ, ಅಲ್ಲಿ ಗುರುಸೇವೆ, ಸಂಗೀತ ಸೇವೆಗಳು ಈ ಶಿಷ್ಯೆಗೆ ಒಂದು ದಿವ್ಯ ಅನುಭವವೇ. ಒಂದು ಪೂರಿಯಾರಾಗದ ಸಾಧನೆಯು ವರ್ಷ ಪರ್ಯಂತ ನಡೆಯಿತು. ರಾಗ ಒಂದೇ ಆದರೂ ಖಯಾಲ್ ಗಾಯಕಿಯ ಭದ್ರ ಬುನಾದಿಯನ್ನೇ ಅದು ಹಾಕಿತು. ಭಾವಪೂರ್ಣವಾಗಿ ಸ್ವರ ಹೆಚ್ಚುವುದೆಂದರೆ ಕಂಠವನ್ನು ಗಂಧದ ಕೊರಡಿನಂತೆ ಸಾಣೆಕಲ್ಲಿನ ಮೇಲೆ ತೇದಂತೆ. ಸುರೇಲಪಣವೆ ಕಿರಾನಾ ಘರಾಣೆಯ ಜೀವ ಲಕ್ಷಣ. ಆಲಾಪನೆಯಲ್ಲಿ ರಾಗದ ಸ್ವರಗಳ ಮೇಲೆ ಸಂಚಾರ. ಒಂದು ರಾಗದ ಜೀವಾಳ ಸ್ವರಗಳನ್ನು ಒಮ್ಮೆಲೆ ಹಚ್ಚುವಂತಿಲ್ಲ. ಶ್ರೋತೃಗಳ ಕುತೂಹಲವನ್ನು ಹೆಚ್ಚಿಸುತ್ತ ಹೋಗುವುದೇ ಗಾಯಕಿಯ ರಹಸ್ಯ. ರಾಗದ ಇತರ ಸ್ವರಗಳ ಮೇಲೆ ಕೆಲಸ ಮಾಡುತ್ತ ಮಾಡುತ್ತ ಶ್ರೋತೃಗಳು ನಿರೀಕ್ಷಿಸುವ ಜೀವಾಳದ ಸ್ವರಗಳ ಸ್ಪರ್ಶ ಮಾಡಿದಾಗ ರಾಗದ ಮಂಡನೆಯ ಕ್ರಮದಲ್ಲಿ ಒಂದು ಸೌಂದರ್ಯ, ರಸಾನುಭೂತಿ ಕಂಡು ಬರುತ್ತವೆ.

ಕ್ರಮಬದ್ಧವಾಗಿ ಕಲಿಸುವಲ್ಲಿ ಸವಾಯಿಗಂಧರ್ವರು ಅನುಭವಿಕರು. ತಾವು ತಮ್ಮ ಗುರುಖಾನ್ ಸಾಹೇಬ ಅಬ್ದುಲ್ ಕರೀಂಖಾನರಲ್ಲಿ ಕಲಿತ ಪದ್ಧತಿಗನುಸಾರವಾಗಿಯೇ ಶಿಕ್ಷಣವನ್ನು ಮುಂದುವರಿಸಿದರು. ಇದರಿಂದಾಗಿ ಗುರುವಿನ ಒಂದು ಛಾಪು ಶಿಷ್ಯನ ಗಾಯಕಿಯಲ್ಲಿ ಪಡಿಯಚ್ಚಿನಂತೆ ಮೂಡುತ್ತದೆ. ಗಂಗೂಬಾಯಿ, ಭೀಮಸೇನ ಜೋಶಿ ಅವರು ಎಡಗಿವಿಯ ಮೇಲೆ ಎಡಗೈ ಇಟ್ಟುಕೊಂಡು ಸ್ವರಲೀನರಾಗಿ ಸ್ವರಹಚ್ಚುವುದನ್ನು ನೋಡಿದಾಗ ಆ ಭಂಗಿಯಲ್ಲಿ ಗುರು ಸವಾಯಿ ಗಂಧರ್ವರ ಪ್ರತಿಮೆಯನ್ನೆ ಕಾಣುತ್ತೇವೆ. ಈ ಸ್ವರಸಾಧನೆಯಿಂದ ಮೊದಲಾಗಿ ಮೀಂಡ, ಗಮಕ, ಖಟಕಾ, ಮುರ್ಕಿ, ತಾನ, ಬೋಲ್ತಾನ ಮೊದಲಾದ ಅಲಂಕಾರಗಳನ್ನು ಗುರುಗಳು ಕಲಿಸಿದರು.

ಮುಂದೆ ಕ್ರಮೇಣ ಯಮನ, ಭೈರವ, ಪೂರಿಯಾ ಧನಾಶ್ರೀ, ಮೀಯಾಕೀ ಮಲ್ಹಾರ, ತೋಡಿ, ಮುಲ್ತಾನೀ, ದರ್ಬಾರಿಕಾನಡಾ, ಅಢಾನಾ, ಹೀಗೆ ರಾಗದ ಮೇಲೆ ರಾಗಗಳು ಕರಗತವಾಗತೊಡಗಿದವು. ಈ ಮೊದಲು ಅಲ್ಲಲ್ಲಿ ಗಂಗೂಬಾಯಿ ಏಕಾಕಿಯಾಗಿ ಕಾರ್ಯಕ್ರಮಗಳನ್ನು ನಡೆಸಿದ್ದರೂ ಗುರುಸಮ್ಮುಖದಲ್ಲಿ ಸಾರ್ವಜನಿಕವಾಗಿ ಬೈಠಕ್ ಮಾಡಲು ಅವರಿಗೆ ಧೈರ್ಯ ಸಾಲುತ್ತಿದ್ದಿಲ್ಲ. ಇವರ ಸಂಗೀತ ಶಿಕ್ಷಣ ಪ್ರಾರಂಭವಾದ ವರ್ಷವೆ ಹುಬ್ಬಳ್ಳಿಯಲ್ಲಿ ಗುರುಬಂಧು ಫಕೀರಪ್ಪ ಕುಂದಗೋಳ ಅವರು ನಡೆಸುತ್ತಿದ್ದ ಸಂಗೀತ ಕ್ಲಾಸಿನ ವಾರ್ಷಿಕೋತ್ಸವದಲ್ಲಿ ದತ್ತೋಪಂತ

ದೇಸಾಯಿ ಅವರ ಮಧ್ಯಸ್ಥಿಕೆಯಿಂದ ಸವಾಯಿಗಂಧರ್ವರ ಕಾರ್ಯಕ್ರಮ ಏರ್ಪಟ್ಟಿತ್ತು. ಪ್ರಾರಂಭಕ್ಕೆ ಶಿಷ್ಯರಿಂದ ಸೇವಾರಂಭ. ಮೊದಲ ಪಾಳಿಯೆ ಗಂಗೂಬಾಯಿ ಅವರದು. ಗುರುಗಳೆದುರಿಗೆ, ಸಾರ್ವಜನಿಕ ವೇದಿಕೆಯ ಮೇಲೆ ತಂಬೂರಿ ಮೀಟುತ್ತ ಸಾ ಹಚ್ಚುವುದಕ್ಕೂ ಆಗದೆ ಗಾಬರಿಯಾಗಿ, ಬೆವೆತು ವೇದಿಕೆ ಬಿಟ್ಟು ಎದ್ದು ಬಂದರು.

### ೬.೨.೨. ಗ್ವಾಲೀಯರ ಘರಾಣೆ

### ಪಂ. ಲಿಂಗರಾಜ ಬುವಾ ಯರಗುಪ್ಪಿ

ಇವರು ಗ್ವಾಲಿಯರ ಘರಾಣೆಯ ಪ್ರಮುಖ ಗಾಯಕರು. ಗ್ವಾಲಿಯರ್ ಘರಾಣೆಯ ಪಕ್ಕಾ ಅಂಶಗಳು ಇವರ ಗಾಯನದಲ್ಲಿ ಕಾಣುತ್ತಿದ್ದವು. ಸ್ಪಷ್ಟ ಉಚ್ಛಾರಣೆ, ಲಯಕ್ಕನುಸಾರವಾಗಿ ಬಂದೀಶ್ ಹೇಳುವರು ಲಯಕ್ಕನುಸಾರವಾಗಿ ರಾಗದ ಚೀಜ್, ಬಂದೀಶಗಳೊಂದಿಗೆ ರಾಗದ ಬಡತ್. ಲಯಕಾರಿ, ಬೋಲ್ತಾನ್ ಈ ವೈಶಿಷ್ಟ್ಯಗಳನ್ನು ಹೊಂದಿದ ಇವರು ಲಯಬ್ರಹ್ಮರೆಂದೇ ಪ್ರಖ್ಯಾತಿಯನ್ನು ಹೊಂದಿದ್ದರು. ಇವರ ಗುರುಗಳಾದ ನೀಲಕಂಠ ಬುವಾ ಮಿರಜ. ಇವರಲ್ಲಿ ಮಲ್ಲಿಕಾರ್ಜುನ ಮನಸೂರ ಹಾಗೂ ಇವರು ಗುರುಕುಲ ಪದ್ಧತಿಯಲ್ಲಿ ಒಟ್ಟಿಗೆ ಸಂಗೀತಾಭ್ಯಾಸ ಮಾಡಿದವರು. ಇವರ ತಾನ ಪದ್ಧತಿಗಳು ತುಂಬಾ ವಿಶಿಷ್ಟ ಹಾಗೂ ಕ್ಲಿಷ್ಟಕರವಾಗಿದ್ದವು. ಇವರ ಅನಾಗತ್ ಇವರ ತುಂಬಾ ವೈಶಿಷ್ಟ್ಯತೆಯನ್ನು ಹೊಂದಿದ್ದವು. ಈ ಘರಾಣೆಯ ವೈಶಿಷ್ಟ್ಯವನ್ನು ಹೊಂದಿದ ಇವರ ಶಿಷ್ಯ ಪರಂಪರೆ ಅನೇಕ. ಶ್ರೀ ಅಶೋಕ ಹುಗ್ಗಣ್ಣವರ, ಹುಸೇನಸಾಬ ನಧಾಪ್, ಬಸಯ್ಯ ಕುದರಿ, ಹನುಮಂತಪ್ಪ ಅಗಳವಾಡಿ, ಫಕೀರಪ್ಪ ಶಾನವಾಡ, ಎಚ್. ಎಫ್. ಹಂಡಿ ಪ್ರಮುಖರು ಹಾಗೂ ಕುಂದಗೋಳ ಪರಿಸರದವರೇ ಆಗಿದ್ದಾರೆ. ಆಗಿನ ದಿನಗಳಲ್ಲಿ ಶಿಶುನಾಳ ಶರೀಫರ ಪದ್ಯಗಳನ್ನು ಜನಪ್ರಿಯಗೊಳಿಸಿದ ಶ್ರೇಯಸ್ಸು ಲಿಂಗರಾಜ ಬುವಾ ಅವರಿಗೆ ಸಲ್ಲುತ್ತದೆ.

### ಡಾ. ಪುಟ್ಟರಾಜ ಗವಾಯಿಗಳು

ಹಿಂದುಸ್ತಾನಿ ಸಂಗೀತದ ಖ್ಯಾತ ಗಾಯನದಲ್ಲಿಯ ಕೃತಿಗಳು ಸದಾರಂಗ, ಅದಾರಂಗ, ಮನರಂಗ, ಸವರಂಗ, ಗುಣಿದಾಸ, ಪ್ರೇಮಪಿಯು ಮುಂತಾದವರು ರಚಿಸಿದ್ದು ಅವುಗಳಲ್ಲಿ ಬಹುತೇಕವಾಗಿ ನಾರಿಯ ಅಂಗಾಂಗ ವರ್ಣನೆ, ನಾಯಕ ನಾಯಕಿಯರ ಶೃಂಗಾರ ಭಾವ ಮುಂತಾದ ವರ್ಣನೆ ಇರುವಂತ ರಚನೆಗಳು ಸಿಗುತ್ತವೆ. ಆದರೆ ಡಾ. ಪುಟ್ಟರಾಜ ಗವಾಯಿಗಳ ಕೃತಿಗಳಲ್ಲಿ ಅಧ್ಯಾತ್ಮಿಕ, ನಾದಬ್ರಹ್ಮ ಸ್ವರೂಪಿಯಾದ ಪರಶಿವನ ವರ್ಣನೆ, ತಮ್ಮ ಗುರುಗಳ ಬಗೆಗಿನ ಆದರ ಭಾವ ಕಂಡು ಬರುತ್ತವೆ. ಅವರು ತಮ್ಮ ಗುರುಗಳಾದ ಗಾನಯೋಗಿ ಪಂಡಿತ ಪಂಚಾಕ್ಷರ ಗವಾಯಿಯವರ ನಾಮಾಂಕಿತವನ್ನು ರಚನೆಯ ಕೊನೆಯಲ್ಲಿ ಕಾಣಿಸಿ ಗುರುವಿನ ಬಗ್ಗೆ ತಮಗೆ ಇರುವ ನಿಷ್ಠಾಯುಕ್ತ ಗುರುಭಕ್ತಿಯ ಪರಿಚಯ ಮಾಡಿಕೊಟ್ಟಿದ್ದಾರೆ. ಅವರು ರಚಿಸಿದ ರಚನೆಗಳು ನಮ್ಮ ನಾಡಿನ ಶ್ರೇಷ್ಠ ಗಾಯಕರಾದ ಡಾ. ಬಸವರಾಜ ರಾಜಗುರು, ಪಂಡಿತ ಅರ್ಜುನಸಾ ನಾಕೋಡ, ಪಂಡಿತ ಪಂಚಾಕ್ಷರಿ ಸ್ವಾಮಿಮತ್ತಿಗಟ್ಟಿ, ಪಂಡಿತ

ಚಂದ್ರಶೇಖರ ಪುರಾಣಿಕ ಮಠ, ಪಂಡಿತ ಶೇಷಾದ್ರಿ ಗವಾಯಿ, ಪಂಡಿತ ಮೃತ್ಯುಂಜಯ ಪುರಾಣಿಕ ಮಠ ಮುಂತಾದವರು ದೊಡ್ಡ ದೊಡ್ಡ ಸಂಗೀತ ಕಛೇರಿಗಳಲ್ಲಿ ಹಾಗೂ ಆಕಾಶವಾಣಿಯಲ್ಲಿ ಹಾಡಿದ್ದುಂಟು.

ಉದಾರಣಾರ್ಥವಾಗಿ ಅವರು ರಚಿಸಿದ ಕೆಲ ರಾಗಗಳ ಕೃತಿಗಳನ್ನು ಇಲ್ಲಿ ಕಾಣಬಹುದು.

**ರಾಗ ಸೂರಮಲ್ಲಾರ** **ತಾಲ : ಝುಮರಾ**

*೧. ಸ್ಥಾಯಿ*

*ರೆ ಲಮಾ ಮನ ಮನ ಮೈರಾ ಯಾದನ ಕರೆ*

*ಅಂತರಾ*

*ಅತ ಚಪಲಾ ಬತುವೆ ಗುರುಪಂಚಾಕ್ಷರ ನಹಿ ಆವೆ ॥*

**ತಾಲ : ತಿನ ತಾಲ**

*೨. ಸ್ಥಾಯಿ*

*ದ್ರೌಪದಿ ಕಿ ಲಾಜ ರಖೀ ।*

*ಹರಿ ತುಮೆ ಬೀನ ಕೀನ್ಹೋ ಲನೆ ಗಿ ॥*

*ಅಂತರಾ*

*ರೀಸ್ತೆ ದಾರ ಸಲು ದೇಖನ ಬೈಟೇ।*

*ಪಂಚಾಕ್ಷರ ನೇ ಹರಿ ಹೋ ರಕ್ಷಾ ತಿ ॥*

**ರಾಗ- ಬಹುರ** **ತಾಲ : ಏಕತಾಲ ವಿಲಂಬಿತ**

*೩. ಸ್ಥಾಯಿ*

*ಐ ಋತುಬಸಂತ ಆಯೋ ರೀ ।*

*ದಿಲ ಹಾರಿ ಸುಖ ಭರಿ ರಂಗಿಲೇ ॥*

*ಅಂತರಾ*

*ದುಃಖ ಬಹಾ ರೀ ಪಂಚಾಕ್ಷರ ।*

*ಪೂವನ ತೇ ಪೂಲವಾ ಲೇ ॥*

ರಾಗ- ಅಭೋಗಿಕಾನಡಾ ತಾಲ : ತೀಲವಾಡ

೪. ಸ್ಥಾಯಿ

ಕೌನ ಕರತೆ ಹೈಯೇ ಜಗತಿ ಲಾಜ,

ಅಜರಜ ಕಿ ಬಾತ ಯುಹಿ।

ಅಂತರಾ

ಗುರುಪಂಚಾಕ್ಷರಿ ಕು ತೇಜ॥

ಸ್ಥಾಯಿ

ಬನ್ಸಿ ಬಜಾಯೋ ಶ್ರೀ ಹರಿ।

ಎ ರಾಜ ನವರಸ ಮಾಧುರಿ॥

ಅಂತರಾ

ಮನ ಮಧಕರಿ ಮಗ ನ ಲಗಾಯಿ।

ತುಮ ಹೈ ಗುರು ಪಂಚಾಕ್ಷರಿ॥

ರಾಗ ಶ್ಯಾಮ ಕಲ್ಯಾಣ ತಾಲಾ - ದೃತ್ ಏಕತಾಲ

೫. ಸ್ಥಾಯಿ

ಬಾರ ಬಾರ ಬಾರ ರಘೂ।

ನಜರ ಸೇ ಮೇ ಹರ ಕಿ॥

ಅಂತರಾ

ತುಮ ಬೀನ ಮುಝೇ ಕೌನ ರಿಜಾವೇ।

ಪಂಚಾಕ್ಷಾರ ತುಮ ಹೋ ಸುಖಿ॥

ತಾಲ : ತೀಲವಾಡು

ಸ್ಥಾಯಿ

ದರಶನ ದೋ ಮುಝು ದಯಾ ಕರೋ ಏಕ ಬಾರ।

ಅಂತರಾ

ಮತುಭುಲೇನ ಬಟೋ ಮೈಯ

ಪಂಚಾಕ್ಷರ ಕೃಪಾ ಕರೋ॥

ರಾಗ - ಬಿಹಾಗ ತಾಲ - ತೀನತಾಲ

ಸ್ಥಾಯಿ

ಜೋ ಜೋ ಆನ ಜಾನ ಜಗಮೋ।

ಉನಕೋ ಧಾರೋ ಸುಜಾನ ಕರಲೋ॥

ಅಂತರಾ

ಮಾಯಾ ಕಾ ಪರದಾ ಹಟಾಲೋ॥

ಪಂಚಾಕ್ಷರ ತೇರಿ ಪೂರ್ತಿ ದಿಖಾ ದೋ॥

ರಾಗ ಹಮೀರ ತಾಲ : ತೀನತಾಲ

ಸ್ಥಾಯಿ

ಸುಖ ದೇ ಸುಖದೇ ಸುಖ ದೇ ಹೊ।

ಜಗ ಮೇ ಜೋಗಿ ಸುಖ ಲಹಿ ಹೈ

ಅಂತರಾ

ಸುಖ ಮೆ ದುಃಖ ಕಿ ನಹಿ ಆಸ।

ಪಂಚಾಕ್ಷರ ತು ತುಸರ ಹೈ॥

ರಾಗ -ತಿಲಕಕಾಮೋದ ತಾಲ: ದೃತ್ ಏಕತಾಲ

ಸ್ಥಾಯಿ

ಮೋರಿ ಬೀನತಿ ಆರಜ ಸುನತ।

ಭಾಗತ ಆವೋ ಜಯೋ॥

ಅಂತರಾ

ಗುರುದೇವ ಮಹಾದೇವ।

ಪಂಚಾಕ್ಷರ ಕಹೇ ಜಿಯಾ॥

ರಾಗ- ಅಹೀರಬೈರವ ತಾಲ- ಮತ್ತತಾಲ

ಬಾನ್ಪೋರೆ ಹರದಮ ಮನ ಮಾತಂಗ ತುಮ।

ಅಂತರಾ

ಭಕ್ತಿ ತೇ ಸಂಕೋಲೆ ಸೇ ಪಂಚಾಕ್ಷರಿ ಜಾನ

ತೇ ಘರ ಮೇ॥

ರಾಗ : ರಾಗಶ್ರೀ | ತಾಲ- ಮತ್ತತಾಲ

ಸ್ಥಾಯಿ

ಬ್ರಿಜಲಾಲ ಬೋಲೆ ಹಮ ಸೇ ಘಷಿ ತರನೆ

ಜೋಷ ಸೇ ।

ಅಂತರಾ

ಸಗರಿ ರಹೀನ ಮೈನೆ ವೀತಾಯಿ

ಪಂಚಾಕ್ಷ ರ ತೇ ಧ್ಯಾನ ಸೇ ॥

ರಾಗ- ಕೇದಾರ | ತಾಲ- ತಿಲವಾಡ

ಸ್ಥಾಯಿ

ಮನ ರಂಗೀಲೆ ಮೋರೇ ಸಾಖೇ ದುಲಾರೆ ।

ಅಂತರಾ ಪೈದು ಹು, ಪಂಚಾಕ್ಷ ರ ಕೇ ರಹಮ ಕರೇ ॥

ರಾಗ- ಯಮನಕಲ್ಯಾಣ | ತಾಲ- ಝುಮರಾ

ಸ್ಥಾಯಿ

ಏ ಪ್ಯಾರೇ ಬನೋ ಜಗತೋ, ಆನಂದ ಕರೋ ರೇ ।

ಅಂತರಾ

ರಿಭೇ ಗುರು ಪಂಚಾಕ್ಷ ರ ಹೈ ಸಾರೇ ॥

ರಾಗ- ದೇಸಕಾರೆ | ತಾಲ- ಸವಾರಿ

ಮುಖ ಚಂದ್ರ ಏ ಆನಂದ ಸೂ ಬಿರಾಜೇ ।

ಅಂತರಾ

ಮನ ಧರ ಕೇ ಅಂಧೇರು ಪಂಚಾಕ್ಷ ರ ಬೀತು ಅರಜೇ ॥

ರಾಗ- ಲಲಿತ | ತಾಲ- ಝುಮರಾ

ಮನಸಾರೇ ಭೈಲವಾ,

ಭೋರ ಭೈಯಿ ಗುನ ಗಾವೇ ಗುರುಜಿ ಕೇ ।

ಅಂತರಾ

ಜಬ ವಿಖಾವೇ ಪಂಚಾಕ್ಷ ರ ಜೀ, ಹಮಾರೇ

ಆಧಾರ ಜಿ ಕೇ ॥

ರಾಗ-ಬಿಂದೂಸ್ ತಾಲ-ತೀನತಾಲ

ಸ್ಥಾಯಿ

ಆಯಾ ಮಂದಿರ ತುಮರೋ,

ಕೌನ ಖಬರ ತೇರೆ ಬೀನ ಹಮಾರೋ।

ನ ಕೋಯಿ ಮೊ ತಾತೆ ಭ್ರಾತ

ಪಂಚಾಕ್ಷರ ತುಮ ಸಾರಿ ಹಮಾರೋ।

ರಾಗ- ಬೈರಾಗಿಭೈರವ ತಾಲ-ರಝುಮರಾ

ಸ್ಥಾಯಿ

ಕಹೇ ಸುಜನ ಐಸೇ ಜಮದ ಜೈಗೆ ಜಲದ,

ಅಂತರಾ

ಕಾಮ ಕರೋ ನಿತ ಧರಮ ।

ತಜೋ ಮತ ಪಡೋ ಪಂಚಾಕ್ಷರ

ಸಬರ ॥

ರಾಗ ಬೈರವ ತಾಲ-ತೀನತಾಲ

ಸ್ಥಾಯಿ

ತುಮ ಸೇ ಹಿ ಮೈ ಪ್ಯಾರೆ ಕರೊ ರೇ,

ನಾರಾಜ ಹೋ ಕಾನೆ ನಹೀ ಜೀನೂ।

ಅಂತರಾ

ಕೈಸೆ ಸಕೂ ಪೀಯಾ ಕೋ ರಿಛಾಯೇ,

ಗುರು ಪಂಚಾಕ್ಷರ ಮಾನೋ॥

ರಾಗ : ಪೂರಿಯಾ ತಾಲ-ತೀಲವಾಡ

ಸ್ಥಾಯಿ

ಆನಂದ ದೇ ಹೋ, ಸಭೀ ಮಾಂಗೇ

ಅಖೀರ ತುಥೆ ।

ಅಂತರಾ

ಮನ ರಂಗೀಲೆ ಚೀಜ ಹೈ ಜಗಮೇ

ವೇ ಪಂಚಾಕ್ಷರ ಸಾರೆ ದುಃಖ

ಭಾಸೇ ಮುರೆಝು॥

ರಾಗ : ಭಿಲಸಖಾನಿ ತೋಡಿ ತಾಲ-ಆಡೆಚೌತಾಲ

ಮನ ರಂಗಿಲೇ ಆನಂದ ಬಾಹರೆ ಕಾ।

ಅಂತರಾ

ಧನ ದೌಲತ್ ಪಾಯೋ ಘಷ ಮೇ,

ಪಂಚಾಕ್ಷರ ರಂಗೀನ ಜಗ ಕಾ।

ರಾಗ ಪೂರ್ವಿ ಕಲ್ಯಾಣ ತಾಲ :ದೃಪದ್ ಚೌತಾಲ

ಪರಬ್ರಹ್ಮ ತು ಹೈ ಸನಾತನ,

ತೇರೆ ವೀನ ಲಹಿ ಅನ್ಯ ಚೇತನ,

ಅಂತರಾ

ಅಲಂಕಾರ ರಹೇ ಸಾರೇ

ಪಂಚಾಕ್ಷರ ಜಾನ ನೇಕ ಮ ಯೇ ಘನ॥

ರಾಗ-ಶ್ರೀ ತಾಲ-ಮತತಾಲ

ಸ್ಥಾಯಿ

ನಂದ ನಂದನ ಆನವಾನ ಕಿ

ಪರ ದೇ ಹೋ।

ಅಂತರಾ

ಪಂಚಾಕ್ಷರ ರಂಗ ತುಮ ಸುಖತೇ ಬೀನ

ತುಮ ಕೌನ ಬೋಲಿ॥

ರಾಗ-ಪಟದೀಪ ತಾಲ-ದೃತ್ ಏಕತಾಲ

ಬಾರ ಬಾರ ದೋ ದರಸನ

ತೌನ ಉದಾರೋ ತುಮ ವೀನ

ಅಂತರಾ

ತಾತ ಭ್ರಾತ ಆದಿ ಸಜನಿ,

ತುಮ ಗುರು ಪಂಚಾಕ್ಷಾರಿ ಘನ॥

## ಡಾ. ಬಸವರಾಜ ರಾಜಗುರು

ಇವರು ಪರಿಚಯಿಸಿದ ೧೨ ವಚನಗಳು : ಪರಚಿಂತೆ ಎಮಗೆ ಏಕೆ ಅಯ್ಯಾ, ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯಾ ತಂದೆ, ವಚನದಲ್ಲಿ ನಾಮಾಮೃತ ತುಂಬಿ, ಜಗವ ಸುತ್ತಿಪ್ಪುದು ನಿನ್ನ ಮಾಯೆ, ಮಡಕೆಯ ಮಾಡುವರ ಮಣ್ಣೆ ಮೊದಲು, ಚಕೋರಂಗೆ ಚಂದ್ರಮನ ಬೆಳಗಿನ ಚಿಂತೆ ಇತ್ಯಾದಿ. ಅವು ಎಷ್ಟು ಜನಪ್ರಿಯವಾದವೆಂದರೆ

ಹಳ್ಳಿ ಹಳ್ಳಿಯಲ್ಲಿ ಎಲ್ಲರ ನಾಲಗೆಯ ಮೇಲೆ ಅವುಗಳೇ. ವಚನಗಳನ್ನು ರಾಗಾಧಾರಿತ ಮಟ್ಟುಗಳಲ್ಲಿ ಮೊದಲು ಸಂಯೋಜಿಸಿದವರು ಗುರು ಪಂಚಾಕ್ಷರಿ ಗವಾಯಿಗಳು. ವಚನಗಳ ಮೊದಲ ಗಾನಮುದ್ರಿಕೆಗಳು ಹೊರಬಂದುದು ಬಸವರಾಜ ರಾಜಗುರು ಅವರವು. ವಚನಗಾಯನವನ್ನು ಜನಪ್ರಿಯಗೊಳಿಸುವಲ್ಲಿ ಬಸವರಾಜ ರಾಜಗುರು ಅವರ ಪಾತ್ರ ಮಹತ್ವದ್ದು.

ಬಸವರಾಜ ರಾಜಗುರು ತಮ್ಮ ಗಾಯನ ಪೌರುಷ ಮೆರೆದ ಪ್ರಸಂಗಗಳು ಹತ್ತು ಹಲವು. ಅವರಿಗೆ ತಮ್ಮ ಗಾಯನ ಸಾಮರ್ಥ್ಯದ ಬಗೆಗೆ ಅಳುಕಿಲ್ಲದ ಆತ್ಮವಿಶ್ವಾಸ. ಅವರೊಬ್ಬ ಜಿದ್ದಿ ಗಾಯಕ. ಸೋಲುವವರೆ ಅಲ್ಲ. ಒಂದೆ ಮುಂದೆ ಹಾಡುವವರಿದ್ದರೆ ಎಲ್ಲಿಲ್ಲದ ಉತ್ಸಾಹ. ಅವರನ್ನು ಮೀರುವಂತೆ ಹಾಡುತ್ತಿದ್ದರು. ೧೯೫೫ ದಿಲ್ಲಿಯ ನಗರಭವನ, ವಿಷ್ಣು ದಿಗಂಬರ ಪಲುಸ್ಕರರ ಪುಣ್ಯತಿಥಿ, ಭಾರತದ ಎಲ್ಲೆಡೆಗಳಿಂದ ಬಂದಿದ್ದ ಉದ್ದಾಮ ಸಂಗೀತಗಾರರ ಸಮಾವೇಶ. ಓಂಕಾರನಾಥ ಠಾಕೂರ ಭರ್ಜರಿ ಹಾಡಿದರು. ಆಮೇಲೆ ಹಾಡಲು ಗಾಯಕರು ನಾ ಒಲ್ಲೆ ನೀ ಒಲ್ಲೆ ಎನ್ನತೊಡಗಿದರು. ವಾದ್ಯ ಸಂಗೀತದ ಸಿದ್ಧತೆ ನಡೆಯಿತು. ಅಷ್ಟರಲ್ಲಿ ಬಸವರಾಜ ರಾಜಗುರು ನಾ ಹಾಡುವೆ ಎಂದರು. ಸಭೆ ಮೂಕವಿಸ್ಮಯ. ಆಯಿತು ನಿಮ್ಮ ಸಾಧನೆ ಪ್ರದರ್ಶಿಸಿರಿ ಎಂದು ಸಂಘಟಕರ ಕೊಂಕುನುಡಿ. ರಾಜಗುರು ನಾಯಕಿ ಕಾನಡಾ ಹಾಡಿ ಶ್ರೋತೃಗಳನ್ನು ಮಂತ್ರಮುಗ್ಧಗೊಳಿಸಿದರು. ಅದೆಂಥ ಎದೆಗಾರಿಕೆ. ಅದವರ ಪ್ರಥಮ ದಿಲ್ಲಿ ಬೈಠಕ್ ಬೇರೆ.

ಬಸವರಾಜು ರಾಜಗುರು ಅವರದು ಅಪಾರ ವೈವಿಧ್ಯ ಬಹುಶ್ರುತತೆ ಧ್ರುಪದ, ಧಮಾರ್, ಖ್ಯಾಲ, ಠುಮರಿ, ಗಝಲ್, ವಚನಗಳು, ಕನ್ನಡ ಮತ್ತು ಮರಾಠಿ ರಂಗಗೀತೆಗಳು, ಕನ್ನಡ ಮತ್ತು ಮರಾಠಿ ಭಾವಗೀತೆಗಳು, ದಾಸರ ಪದಗಳು, ಕೀರ್ತನೆಗಳು, ಬಯಲಾಟದ ಹಾಡುಗಳು, ಏನೇ ಹಾಡಿದರೂ ಇಂಚರ ಸಂಚಾರ.

ಬಸವರಾಜ ರಾಜಗುರು ಗಾಯನವೆಂದರೆ ಕಿರಾಣಾ, ಗ್ವಾಲಿಯರ, ಪಟಿಯಾಲಾ ಘರಾಣೆಗಳ ತ್ರಿವೇಣಿ ಸಂಗಮ. ಅದು ಹನ್ನೊಂದು ಗುರುಗಳಲ್ಲಿ ಅಭ್ಯಸಿಸಿದ ಫಲ. ಪಂಚಾಕ್ಷರಿ ಗವಾಯಿಗಳು, ನೀಲಕಂಠಬುವಾ ಮಿರಜಕರ, ಸವಾಯಿಗಂಧರ್ವ, ಸುರೇಶಬಾಬು ಮಾನೆ, ಬಶೀರಖಾನ, ಮುಬಾರಕ ಅಲಿ, ಅಬ್ದುಲ್ ವಹೀದಖಾನ, ಲತೀಫಖಾನ, ಇನಾಯತುಲ್ಲಾಖಾನ, ರೋಶನ ಅಲಿ, ಗೋವಿಂದರಾವ ಟೇಂಬೆ. ಹೀಗಾಗಿ, ಅವರ ಗಾಯನದಲ್ಲಿ ಎಲ್ಲಿಲ್ಲದ ಸಾರಸಂಗ್ರಹ ಗುಣ. ಇವರೆಲ್ಲರ ಪ್ರಭಾವಗಳನ್ನು ತೇಪೆಯಾಗದಂತೆ ತಮ್ಮ ಪ್ರತಿಭೆಯ ಮೂಸೆಯಲ್ಲಿ ಎರಕ ಹೊಯ್ದುದು ರಾಜಗುರು ಅವರ ದೊಡ್ಡ ಸಾಧನೆ.

ಒಮ್ಮೊಮ್ಮೆ ಇದ್ದಕ್ಕಿದಂತೆ ಹಿಂದುಸ್ತಾನಿ ಗಾಯನ ಮಧ್ಯದಲ್ಲಿ ಕರ್ನಾಟಕ ಸ್ವರಪ್ರಸ್ತಾರ ಚಿಮ್ಮಿ ಬರುತ್ತಿದ್ದುದಿದೆ. ಒಮ್ಮೆ ಅಹಿರಭೈರವ ಹಾಡಿದ ಮೇಲೆ ಸಮಾಂತರ ಕರ್ನಾಟಕ ರಾಗ ಚಕ್ರವಾಕಮ್‌ನಲ್ಲಿ ತ್ಯಾಗರಾಜ ಕೃತಿ ಹಾಡಿದ್ದುದಿದೆ. ಎರಡೂ ಪದ್ಧತಿಗಳಲ್ಲಿ ಪರಿಣತಿ.

"ಬಸವರಾಜ ರಾಜಗುರು ಅವರ ತೀವ್ರಗತಿಯ ತಾನಗಳಲ್ಲಿ ಬಡೆ ಗುಲಾಮ ಅಲಿ ಖಾನರ ಸಿರಾಯಾಸತೆ, ಸಂಕೀರ್ಣತೆ ಇವೆ. ತೀವ್ರಗತಿಯಲ್ಲೂ ಇಂಚರ ಅಬಾಧಿತ. ಕೆಲವು ಗಾಯಕರ ಧ್ವನಿಯಾದರೂ ತೀವ್ರಗತಿಯಲ್ಲಿ ಕೀರಲಾಗಿ ಬಿಡುತ್ತದೆ. ಸ್ವರಶುದ್ಧತೆಗೆ ಚ್ಯುತಿ ಬಾರದ ಸ್ಪಷ್ಟೋಚ್ಚಾರಣೆ ರಾಜಗುರು ಅವರ ಗಾಯನದಲ್ಲಿ. ವೃದ್ಧ ಶ್ರೋತೃಗಳು ರಾಜಗುರು ಗಾಯನ ಆಲಿಸುವಾಗ ಇದು ದೀನಾನಾಥ ಅಂಥದು, ಇದು ನಾರಾಯಣಬುವಾ ಅವರ ಮುರ್ಕಿ, ಇದು ಕೇಶರಾವ್‌ರ ಚಕ್ರಿತಾನ, ಇದು ಶಂಕರರಾವ್‌ರ ಸ್ವರ ಇತ್ಯಾದಿಯಾಗಿ ಗುರುತಿಸುತ್ತಿದ್ದರು. ರಾಜಗುರು ಗಾಯನದಲ್ಲಿ ಘಸೀಟ್, ಮುರ್ಕಿ, ಗಮಕ್, ಮೀಂಡ್, ಸರಗಮ್, ಬೋಲ್‌ತಾನ್ ಏನೆಲ್ಲ ಮಸಾಲೆಗಳು! ಇವೆಲ್ಲಕ್ಕೆ ಉಪ್ಪಿನಕಾಯಿಯಂತೆ ಅದ್ಭುತ ಅಶುಚಮತ್ಕಾರ. ಅದೊಂದು ನಳಪಾಕ!!"[೬೧] ಎಂದು ಡಾ. ಸದಾನಂದ ಕನವಳ್ಳಿಯವರು ಬರೆಯುತ್ತಾರೆ.

### ೬.೨.೩. ಜಯಪುರ ಘರಾಣೆ

### ಪಂ. ಮಲ್ಲಿಕಾರ್ಜುನ ಮನಸೂರ

ಪಂ. ಮಲ್ಲಿಕಾರ್ಜುನ ಮನಸೂರ ಜೈಪುರ ಘರಾಣೆಯನ್ನು ಅಲ್ಲಾದಿಯಾ ಖಾನ ಘರಾಣೆಯೆಂದೂ ಪ್ರಸಿದ್ಧವಾಗಿರುವ ಸಂಗೀತ ಪದ್ಧತಿಯನ್ನು ಮುಗಿಲೆತ್ತರಕ್ಕೆ ನಿಲ್ಲಿಸಿ ಅದಕ್ಕೊಂದು ತಮ್ಮದೇ ಆದ ಹಿರಿಮೆಯನ್ನು ದೊರಕಿಸಿಕೊಟ್ಟ ಅಪ್ರತಿಮ ಗಾಯಕರು. ಸಂಗೀತವು ಒಂದು ಮಹಾಸಾಗರದಂತಿದೆ. ಜೀವಮಾನವೆಲ್ಲ ಅದರಲ್ಲಿ ಮುಳುಗಿ ಏಳುತ್ತಿದ್ದರೂ ನನಗೆ ಅದರ ಆಳ ಸಿಗದಾಗಿದೆ. ಅದಕ್ಕೆ ಅಂತ್ಯವೇ ಕಂಡುಬರದಾಗಿದೆ. ಮುಂದೆ ಸಾಗುತ್ತಿದ್ದಂತೆ ಅದರ ಆಳ ಮತ್ತು ವೈಶಾಲ್ಯಗಳು ಹೆಚ್ಚುತ್ತಾ ಹೋದಂತೆನಿಸಿ ನಾನು ಅದರಲ್ಲಿಯ ಒಂದು ಅಣುಮಾತ್ರ ಎಂದೆನಿಸತೊಡಗಿದೆ. ಮಲ್ಲಿಕಾರ್ಜುನರು ಸಂಗೀತವನ್ನು ಕಂಡ ರೀತಿ, ಆರಂಭಿಸಿದ ಬಗೆ ಇಂಥಹುದು. ತಾವು ಮಹಾನ್ ಗಾಯಕರೆಂಬ ಅಹಂ ಮಲ್ಲಿಕಾರ್ಜುನ ಮನಸೂರರನ್ನೆಂದೂ ಕಾಡಲಿಲ್ಲ. ಆದರೆ ಜನರು ಮಾತ್ರ ಇವರ ಗಾಯನ ಕೇಳಿ ಸಮ್ಮೋಹನಗೊಂಡರು. ಮಲ್ಲಿಕಾರ್ಜುನ ಮನಸೂರ ಸ್ವರಗಳನ್ನು ಹುಡುಕಿಕೊಂಡು ಹೋಗಬೇಕಾಗಿಲ್ಲ. ಸ್ವರಗಳೇ ಅವರನ್ನು ಹುಡುಕಿ ಕೊಂಡು ಬರುತ್ತವೆ ಎಂದು ಹಾಡಿ ಹೊಗಳಿದರು. ಕನ್ನಡದ ಕವಿಶ್ರೇಷ್ಠರಲ್ಲೊಬ್ಬರಾದ ದ.ರಾ.ಬೇಂದ್ರೆಯವರಂತೂ ಮಲ್ಲಿಕಾರ್ಜುನರ ಸಂಗೀತವನ್ನು ಕೇಳಿ ಮಂತ್ರಮುಗ್ಧರಾಗಿ ಈ ಕೆಳಗಿನಂತೆ ಕವನವೊಂದನ್ನೇ ರಚಿಸಿಬಿಟ್ಟರು.

*ಗಾಂಧರ್ವ ಮಾಯೆಯೇ*

*ಕುಣಿದಿತಪ್ಸರೆಯಂತೆ*

*ಮಿಂಚು ಬೇಲಿಗೆ ಬೆಳೆದ*

---

೬೧. ಇಂಚರ : ಡಾ. ಸದಾನಂದ ಕನವಳ್ಳಿ, ಪುಟ-೪೬

ಸ್ವಾತಿಯಾ ಹನಿಯಂತೆ
ಕನ್ನಡದ ರಾಗವೇ
ಕಾಮೋದೆಗೆದ್ದಂತೆ
ಮಲ್ಲಿಕಾರ್ಜುನ ಶಿಖರ
ಮಲ್ಲಿಗೆಯೊಳಿದ್ದಂತೆ
ಶಿವನ ತಾಂಡವ ಮುಗಿಯೆ
ಶಿವಲಾಸ್ಯಕೆದ್ದಂತೆ
ಬಿಸಿಲ್ ಹಣ್ಣನುಂಡು ಚಂ-
ದ್ರನ ಜೇನು ಮೆದ್ದಂತೆ
ಮನಸೂರೆ ಹೋಯಿತೋ
ಹೋ ಇದ್ದಕ್ಕಿದ್ದಂತೆ
ಈ ಗೀತ ಹಾಡಿದುದು
ಹೊಸ ಸ್ವಪ್ನವಿದ್ದಂತೆ
ಅಂತೆ, ಇಂತೆ, ಎನ್ನುತ್ತ
ಮನ ಮೀರಿ ನಾನಿಂತೆ
ಕಳಚಿ ಬದ್ದಿತ್ತು ಗೆಳೆಯ
ಜಗದ ಸಂತೆಯ ಚಿಂತೆ

ಮಲ್ಲಿಕಾರ್ಜುನ ಮನಸೂರರ ಗಾಯನವನ್ನು ಕೇಳಿದ ಮಧ್ಯಪ್ರದೇಶದ ಕವಿ ಅಶೋಕ ವಾಜಪೇಯಿ ಹೇಳುತ್ತಾರೆ. ಮುಂದೆ ಎಂದಾದರೂ ಈ ಶತಮಾನದ ಸೃಜನಾತ್ಮಕತೆಯನ್ನು ಅಳೆಯ ಹೊರಟರೆ, ಅಲ್ಲಿ ಮನ್ಸೂರರು ನಗುವ ಸೂರ್ಯನಂತೆ ಮೇಲೆದ್ದು ಬರುತ್ತಾರೆ. ಭಾರತೀಯ ಪರಂಪರೆ ಗಟ್ಟಿತನಕ್ಕೆ ವ್ಯಕ್ತಿಗತ ದಾಖಲೆಬೇಕೆಂದಾದರೆ ಮನ್ಸೂರರನ್ನೇ ನೆನೆಯಬೇಕಾಗುತ್ತದೆ ನಾವು.

ಹಿಂದೂಸ್ತಾನಿ ಸಂಗೀತ ಕ್ಷೇತ್ರದಲ್ಲಿನ ಅಗ್ರಮಾನ್ಯರನ್ನು ಸ್ಮರಿಸಿದ ಕೂಡಲೇ ನೆನಪಾಗುವುದು ಅಪ್ರತಿಮ ಸಂಗೀತಗಾರರನ್ನು ಬೆಳಸಿದ ಧಾರವಾಡ ಜಿಲ್ಲೆ. ದಿವಗಂತ ಪಂಡಿತ ಬಸವರಾಜ ರಾಜಗುರು ಒಮ್ಮೆ ಹೇಳಿದ್ದರಂತೆ ಈ ಪುಣ್ಯಭೂಮಿಯಲ್ಲಿ ಹುಟ್ಟಿದ ವಿದ್ವನ್ಮಣಿಗಳಾದ ಮಲ್ಲಣ್ಣ (ಪಂಡಿತ ಮಲ್ಲಿಕಾರ್ಜುನ ಮನಸೂರ), ಭೀಮಣ್ಣ (ಪಂಡಿತ ಭೀಮಸೇನ ಜೋಶಿ), ಗಂಗಮ್ಮ (ಗಂಗೂಬಾಯಿ ಹಾನಗಲ್) ಕುಮಾರ (ಕುಮಾರಗಂಧರ್ವ) ನಾನು ಹೀಗೆ ನಾವೆಲ್ಲರೂ ಒಂದೇ ಕುಟುಂಬದವರು. ನಮ್ಮ ಗುರಿ ಒಂದೇ. ಈ ಗುರಿ ಸಾಧನೆಗಾಗಿ ನಾವು ನೇರವಾಗಿ

ಗಂಧರ್ವ ಲೋಕದಿಂದ ಇಲ್ಲಿಗೆ ಬಂದವರು. ಆದರೆ ಹೀಗೆಂದ ಮಾತ್ರಕ್ಕೆ ಮಿಕ್ಕೆಡೆಗಳಲ್ಲಿ ಹಿಂದೂಸ್ತಾನಿ ಸಂಗೀತದ ಪರಿಚಯ ಇರಲಿಲ್ಲವೇನೆಂದಲ್ಲ. ಕರ್ನಾಟಕ ಹಿಂದಿನಿಂದಲೂ ಕರ್ನಾಟಕ ಹಾಗೂ ಹಿಂದೂಸ್ತಾನಿ ಎರಡೂ ಸಂಗೀತ ಪದ್ಧತಿಗಳ ಸಂಗಮಕ್ಷೇತ್ರ. ಪ್ರಾಚೀನ ಕಾಲದಿಂದಲೂ ಕರ್ನಾಟಕವು ಹಿಂದೂಸ್ತಾನಿ ಸಂಗೀತಕ್ಕೆ ಕೊಟ್ಟಷ್ಟು ಪ್ರಾಶಸ್ತ್ಯವನ್ನು ದಕ್ಷಿಣದ ಮತ್ತಾವ ರಾಜ್ಯವೂ ನೀಡಲಿಲ್ಲ. ಉದಾಹರಣೆಗೆ ಮೈಸೂರು ಮಹಾರಾಜರುಗಳು ತಮ್ಮ ಸಮ್ಮುಖದಲ್ಲಿ ನಡೆಯುತ್ತಿದ್ದ ಸಂಗೀತ ಕಚೇರಿಗಳಲ್ಲಿ, ಹಿಂದೂಸ್ತಾನಿ ಚೀಜ್‌ಗಳನ್ನು, ಆಲಾಪಗಳನ್ನು ಹಾಡಿಸಿ ಆನಂದಿಸುತ್ತಿದ್ದರು. ಪರೋಕ್ಷವಾಗಿ ಅವು ಹಳೆಯ ಮೈಸೂರಿನಲ್ಲೂ ಊರ್ಜಿತಗೊಳ್ಳಲು ಸಹಕರಿಸುತ್ತಿದ್ದರು. ವೀಣೆ ಶೇಷಣ್ಣನವರು, ಬಿಡಾರಂ ಕೃಷ್ಣಪ್ಪನವರು ದೇವರುನಾಮಗಳು ಹಾಗೂ ಚೀಜ್‌ಗಳನ್ನು ಹಾಡದೆ ಕಾರ್ಯಕ್ರಮವನ್ನು ಮುಗಿಸುತ್ತಲೇ ಇರಲಿಲ್ಲ. ಮೈಸೂರಿನ ವಿದ್ವಾಂಸರ ಮೇಲೆ ಹಿಂದೂಸ್ತಾನಿ ಸಂಗೀತ ಪ್ರಭಾವ ಬೀರಿತ್ತು ಎನ್ನುವುದಕ್ಕೆ ವೀಣೆ ಶೇಷಣ್ಣನವರ ದರ್ಬಾರಿ ಕಾನಡ ಹಾಗೂ ಪೂರ್ವಿ ರಾಗಗಳ ತಿಲ್ಲಾನಗಳು ಮತ್ತು ವಾಸುದೇವಾಚಾರ್ಯರ ಮಾಂಡ್ ಮತ್ತು ಬಿಹಾಗ್ ರಾಗಗಳ ಕೃತಿಗಳೇ ಸಾಕ್ಷಿ ಎನ್ನುತ್ತಾರೆ ಸಂಗೀತತಜ್ಞರು.

ಮನಸೂರರೇ ಒಂದೆಡೆ ಹೇಳುತ್ತಾರೆ. ಹುಬ್ಬಳ್ಳಿ ಧಾರವಾಡದಲ್ಲಿ ಮೊದಲು ಮೊದಲು, ಸುಮಾರು ಐವತ್ತು ಅರವತ್ತು ವರ್ಷಗಳ ಹಿಂದೆ ಕರ್ನಾಟಕ ಸಂಗೀತವೇ ಇದ್ದದ್ದು. ಆದರೆ ಅಲ್ಲಿ ಹಿಂದೂಸ್ತಾನಿ ಸಂಗೀತಕ್ಕೆ ಹೆಚ್ಚಿಗೆ ಪ್ರಚಾರ ಹೇಗಾಯ್ತು ಅಂದರೆ, ಈ ನಮ್ಮ ಮೈಸೂರು ದಸರಾದ ಕಾಲಕ್ಕೆ ಉತ್ತರದ ಕಡೆಯವರು ಗಾಯಕರೂ, ವಾದಕರೂ, ದೊಡ್ಡ ದೊಡ್ಡ ಸಂಗೀತಗಾರರು ಇಲ್ಲಿಗೆ ಬರ್ತಿದ್ರು. ಹಾಡಲಿಕ್ಕೆ, ಬಾರಿಸಲಿಕ್ಕೆ ಬರೋ ಕಾಲಕ್ಕೆ ಧಾರವಾಡ ಮತ್ತು ಹುಬ್ಬಳ್ಳಿಯವರು ಅವರನ್ನು ತಮ್ಮಲ್ಲಿ ಇಳಿಸಿಕೊಳ್ತಿದ್ರು. ಆಗ ಆ ದೊಡ್ಡ ಸಂಗೀತಗಾರರನ್ನು ತಿಂಗಳು ತಿಂಗಳುಗಟ್ಟಲೆ ಇರಿಸಿಕೊಂಡು ಸಂಗೀತ ಕಚೇರಿ ಮಾಡಿಸ್ತಿದ್ರು, ಕೇಳ್ತಿದ್ರು. ಇವರಲ್ಲಿ ಒಬ್ಬ ದೊಡ್ಡ ಸಂಗೀತಗಾರರು ಭಾಸ್ಕರಬುವಾ ಬಖಲೆ ಅನ್ನುವವರು, ಧಾರವಾಡದಲ್ಲಿ ಟ್ರೈನಿಂಗ್ ಕಾಲೇಜಿನಲ್ಲಿ ಸಂಗೀತ ಮಾಸ್ತರರಾಗಿದ್ದರು. ಹೀಗಾಗಿ ಆ ಹಿಂದೂಸ್ತಾನಿ ಸಂಗೀತದಲ್ಲಿ ಪಿತ್ರೇ ಬುವಾ ವಕೀಲ್, ಸುಬ್ಬರಾವ್ ವಕೀಲರು ಇಂತಹವರೆಲ್ಲ ಶಿಷ್ಯರಾದರು. ಮುಂದೆ ಆ ಹಿಂದೂಸ್ತಾನಿ ಸಂಗೀತ ಅಲ್ಲಿ ಬೆಳೀಲಿಕ್ಕೆ ಇವೆಲ್ಲಾ ಮುಖ್ಯ ಕಾರಣ. ಧಾರವಾಡದಲ್ಲಿ ಸ್ವಲ್ಪಕಾಲ ನೆಲೆಸಿದ್ದ ಹಾಗೂ ಹುಬ್ಬಳ್ಳಿ ಧಾರವಾಡಗಳಿಗೆ ಬಂದು ಹೋಗುತ್ತಿದ್ದ ಇತರರೆಂದರೆ ನಥನ್‌ಖಾನ್, ರಹಮತ್‌ಖಾನ್, ಮಿರಜದಲ್ಲಿ ನೆಲೆಸಿದ್ದ ಅಬ್ದುಲ್ ಕರೀಮಖಾನ್, ಕೊಲ್ಹಾಪುರದಲ್ಲಿ ನೆಲೆಸಿದ್ದ ಅಲ್ಲಾದಿಯಾ ಖಾನ್, ರಾಮಕೃಷ್ಣ ಬುವಾವಝೆ, ಪ್ರಸಿದ್ಧ ವೈಣಿಕ ಮುರಾದಖಾನ್ ಮುಂತಾದವರು. ಕನ್ನಡಿಗರು ಹಂಚಿಹೋಗಿದ್ದರಿಂದ ಅದರ ಪ್ರಭಾವ ಸಾಂಸ್ಕೃತಿಕ ಕ್ಷೇತ್ರದ ಮೇಲಾದರೂ ಸಂಗೀತದ ವಿವಿಧ ಪದ್ಧತಿಗಳು, ವಿವಿಧೆಡೆಗಳಲ್ಲಿ ಬೆಳೆದುಕೊಂಡು ಬಂದವು.

ಸ್ವರರಾಗ ಗೀತೆಗಳು ನಾಟ್ಯಾಭಿನೀತಿಗಳು

ಕಲೆದೇಳಿಸುವವು ಮನಸಿನಲ್ಲಿ ನಿದ್ರಿಸುವಾ

ಪರಿಪರಿಯ ಭಾವಗಳು ಗೂಢ ಸ್ವಭಾವಗಳ

ಪರಮೇಷ್ಠಿ ಟೀಕುಕಲೆ ಮಂಕುತಿಮ್ಮ :

ಎಂದು ಹಾಡಿದ್ದಾರೆ ಡಿ.ವಿ.ಜಿ. ಬದುಕು ಸತ್ಯವೂ ಸುಸೂತ್ರವೂ ಆಗಬೇಕಾದರೆ ಅದರಲ್ಲಿ ಸಂಗೀತ ಹೊರಹೊಮ್ಮ ಬೇಕು ಎಂಬ ಧ್ಯೇಯವನ್ನು ಇಟ್ಟುಕೊಂಡಾಗ ಅದನ್ನು ಪೋಷಿಸುವ ಮಹನೀಯರು ಹುಟ್ಟಿಕೊಳ್ಳುತ್ತಲೇ ಇರುತ್ತಾರೆ.

''ಮಲ್ಲಿಕಾರ್ಜುನ ಮನಸೂರರು ತಮ್ಮ ಸಂಗೀತ ಪ್ರತಿಭೆಯನ್ನು ಪ್ರಕಾಶಕ್ಕೆ ತರಲು ಕಾಯಾ, ವಾಚಾ, ಮನಸಾ ಶ್ರಮಿಸಿದ್ದು ಜೈಪುರ ಘರಾಣೆಯನ್ನು ಸ್ವಾಧೀನ ಪಡಿಸಿಕೊಳ್ಳಲು, ಸಿದ್ಧಿಗೊಳಿಸಿಕೊಳ್ಳಲು. ಘರಾಣೆ ಎನ್ನುವುದು ಉರ್ದು ಭಾಷೆಯಿಂದ ಉಗಮಿಸಿರುವ ಶಬ್ದ. ಸಾಮಾನ್ಯ ಅರ್ಥದಲ್ಲಿ ಘರ ಎಂದರೆ ಮನೆ ಅಥವಾ ಮನೆತನ ಎಂದಾಗುತ್ತದೆ. ಈ ಆಧಾರದ ಮೇಲೆ ಹುಟ್ಟಿಕೊಂಡರ್ಥವು ಗ್ವಾಲಿಯರ್, ಕಿರಾಣಾ, ಜೈಪುರ, ಆಗ್ರಾ, ಇಂದೋರ, ಕಟಿಯಾಳು, ಸಹಸ್ವಾನ, ರಾಮಪುರ ಮುಂತಾದವು. ವಿವಿಧ ಮನೆತನಗಳಿಗೆ ಸೇರಿದ ವಿದ್ವಾಂಸರು ಯಾವ ಸ್ಥಳಕ್ಕ ಸೇರಿದ್ದರೋ, ಆ ಪ್ರದೇಶದ ಹೆಸರಿನ ಮೇಲೆ ಘರಾಣೆಗಳ ಹೆಸರುಗಳು ನಿರ್ಧಾರವಾಗುತ್ತವೆ. ಪ್ರತಿಯೊಂದು ಘರಾಣೆಯಲ್ಲೂ ಕೆಲವು ಸಾಮಾನ್ಯ ಶೈಲಿ ಹಾಗೂ ಲಕ್ಷಣಗಳಿರುತ್ತವೆ. ಸಂಗೀತಗಾರರು ವಿದ್ವತ್ತನ್ನು ಕರಗತ ಮಾಡಿಕೊಳ್ಳುತ್ತ ಇರುವಂತೆಯೇ ತಮಗೆ ದಕ್ಕಿದ ಪ್ರತಿಭೆಯಿಂದ ಮೂಲವನ್ನು ಆಧರಿಸಿ ತಮ್ಮದೇ ರೀತಿಯಲ್ಲಿ ಮತ್ತೊಂದೇ ಘರಾಣೆಯನ್ನು ಸೃಷ್ಟಿಸುತ್ತಾರೆ. ಸಂಗೀತದ ಪ್ರಮುಖ ಅಂಗಗಳಾದ ಸ್ವರ ಮತ್ತು ಲಯಗಳನ್ನು ಬಳಸಿಕೊಳ್ಳುವ ರೀತಿಯಲ್ಲಿ ಘರಾಣೆಗಳ ನಡುವಣ ವ್ಯತ್ಯಾಸಗಳು ಅಡಗಿರುತ್ತವೆ. ಸದನಾಂದ ಕನವಳ್ಳಿಯವರ ಮಾತಿನಲ್ಲಿ ಉಲ್ಲೇಖಿಸುವುದಾದರೆ, ಗ್ವಾಲಿಯರ ಘರಾಣಾ ಎಲ್ಲ ಘರಾಣೆಗಳ ಮೂಲಸ್ರೋತ್ರವಾಗಿದೆ. ಕಿರಾಣಾ ಘರಾಣಾ ಸ್ವರ ಅಥವಾ ಆಲಾಪ ಪ್ರಧಾನವಾಗಿದೆ. ಈ ಘರಾಣಾ ಎಷ್ಟೊಂದು ಮಿತಿಮೀರಿದ ಸ್ವರ ಪ್ರಜ್ಞೆಯುಳ್ಳದ್ದಾಗಿದೆಯೆಂದರೆ ಸ್ವರದ ಮೇಲೆ ಆಣೆಯಿಡುತ್ತದೆ. ತಾಲ ಗಯಾ ತೊ ಬಾಲ ಗಯಾ, ಸೂರಗಯಾ ತೊ ಸಿರ ಗಯಾ (ತಾಲ ಹೋದರೆ ಕೂದಲೆಳೆ ಹೋದಂತೆ, ಸ್ವರ ಹೋದರೆ ತಲೆಯೇ ಹೋದಂತೆ) ಎಂಬುದು ಅವರ ಧ್ಯೇಯ. ಆಕ್ರಮಣಕಾರಿ ಆಗ್ರಾ ಘರಾಣಾ ಲಯಪ್ರಧಾನ. ಗ್ವಾಲಿಯರ ಘರಾಣಾ ಸ್ವರ ಮತ್ತು ಲಯಗಳ ಸಮೂಹಿತವಾಗಿದ್ದರೆ ಜೈಪುರ ಘರಾಣಾ ಸಂಕೀರ್ಣ ಬೆಸುಗೆ''[೬೨] ಎಂದು ಶ್ರೀಮತಿ ಬಿ. ಎಸ್. ವೆಂಕಟಲಕ್ಷ್ಮಿ ಬರೆದಿದ್ದಾರೆ.

೬೨. ಮಲ್ಲಿಕಾರ್ಜುನ ಮನಸೂರ: ಬಿ. ಎಸ್. ವೆಂಕಟಲಕ್ಷ್ಮಿ, ಪುಟ-೨೧

**೬.೩. ಕುಂದಗೋಳ ಪರಿಸರದ ಹಿಂದೂಸ್ತಾನಿ ಸಂಗೀತ ಪರಂಪರೆಯನ್ನು ಮುಂದುವರಿಸಿದ ಸಂಗೀತಗಾರರ ಸ್ಥೂಲ ಪರಿಚಯ**

**ಶ್ರೀ ಶರಣಪ್ಪ ಮಾಸ್ತರ್ ಭಜಂತ್ರಿ**

೧೯೩೫ ರಲ್ಲಿ ಜನಿಸಿದ ಇವರು ಸಂಗೀತದಲ್ಲಿ ಪ್ರಾರಂಭಿಕ ಶಿಕ್ಷಣ ದೊರೆತದ್ದು ಗದುಗಿನ ವೀರೇಶ್ವರ ಪುಣ್ಯಾಶ್ರಮದ ಪಂ.ಪುಟ್ಟರಾಜ ಗವಾಯಿಗಳ ಮಾರ್ಗದರ್ಶನದಲ್ಲಿ ನಂತರ ದಿ. ಬಿ.ಡಿ.ಭಜಂತ್ರಿ ಹಾಗೂ ದಿ. ಮರಿಯಪ್ಪ ರೋಣ ಇವರುಗಳ ಮಾರ್ಗದರ್ಶನದಲ್ಲಿ ಶಹನಾಯ್ ವಾದನದಲ್ಲಿ ಶಿಕ್ಷಣ.

ಸತತ ಸಂಗೀತ ವಿದ್ವಾಂಸರ ಒಡನಾಟದಲ್ಲೇ ಬೆಳೆದ ಶರಣಪ್ಪನವರು ಮೈಸೂರು ಅರಮನೆಯ ದಸರಾ ಉತ್ಸಾವವೂ ಸೇರಿದಂತೆ ಕರ್ನಾಟಕ, ಮಹಾರಾಷ್ಟ್ರ, ಉತ್ತರ ಪ್ರದೇಶ, ಆಂಧ್ರಪ್ರದೇಶ, ತಮಿಳುನಾಡು, ಮುಂಬೈನಲ್ಲಿ ಯಶಸ್ವಿ ಕಾರ್ಯಕ್ರಮಗಳನ್ನು ನೀಡಿದ್ದಾರೆ.

ಶಹನಾಯ್ ಚಕ್ರವರ್ತಿ ಎಂದೇ ಖ್ಯಾತರಾದ ಭಾರತರತ್ನ ಪಂ.ಬಿಸ್ಮಿಲ್ಲಾ ಖಾನ್ ಗದುಗಿಗೆ ಬಂದಾಗ ಅವರ ಎದುರಿನಲ್ಲಿ ಪಂ.ಬಿ.ಡಿ.ಭಜಂತ್ರಿ ಅವರ ಜೊತೆ ಶಹನಾಯ್ ಜುಗಲ್ ಬಂದಿ ನುಡಿಸಿ ಬಿಸ್ಮಿಲ್ಲಾ ಖಾನರಿಂದ ಮೆಚ್ಚುಗೆ ಪಡೆದ ಹೆಗ್ಗಳಿಕೆ ಶ್ರೀಯುತರದು.

**ಪಂ. ನಾರಾಯಣರಾವ್ ಮಜುಂದಾರ್**

೧೮-೩-೧೯೧೭ ರಂದು ಗದಗ ಜಿಲ್ಲೆಯ ಹರ್ಲಾಪುರ ಗ್ರಾಮದಲ್ಲಿ ಜನಿಸಿದರು. ೧೯೩೩ ರಲ್ಲಿ ನರಗುಂದ ಸದುಬುವಾ ಅವರಲ್ಲಿ ಪ್ರಾರಂಭಿಕ ಶಿಕ್ಷಣ. ೧೯೩೬ ರಲ್ಲಿ ಗ್ವಾಲಿಯರ್ ಘರಾಣೆಯ ಗುರುರಾವ್ ದೇಶಪಾಂಡೆಯವರಲ್ಲಿ ಪ್ರೌಢ ವ್ಯಾಸಂಗ.

ಬೆಳಗಾವಿಯಲ್ಲಿ ಪ್ರಾರಂಭಿಸಿ, ಪುಣೆ, ಕೊಲ್ಲಾಪುರ, ಧಾರವಾಡ ಮುಂತಾದ ಕಡೆ ಕಚೇರಿಗಳನ್ನು ಮಾಡಿದ್ದಾರೆ. ೧೯೫೦ ರಿಂದ ಇವರ ಕಛೇರಿಗಳು ಧಾರವಾಡ ಆಕಾಶವಾಣಿ ನಿಲಯದಿಂದ ಪ್ರಸಾರವಾಗುತ್ತಿವೆ. ಇವರಿಗೆ ಅನೇಕ ಶಿಷ್ಯರಿದ್ದಾರೆ. ೧೯೮೧-೮೨ ರಲ್ಲಿ ರಾಜ್ಯ ಸಂಗೀತ ನೃತ್ಯ ಅಕಾಡೆಮಿಯಿಂದ ಪುರಸ್ಕೃತರಾಗಿದ್ದಾರೆ. ಅನೇಕ ಸಂಘ ಸಂಸ್ಥೆಗಳ ಗೌರವ ಸನ್ಮಾನಗಳಿಗೆ ಪಾತ್ರರಾದ ಭಜಂತ್ರಿ ಅವರಿಗೆ ಈ ಬಾರಿಯ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಕರ್ನಾಟಕ ಕಲಾಶ್ರೀ ಪ್ರಶಸ್ತಿ ಸಹ ಸಂದಿದೆ.

**ಶ್ರೀ ತರಲಘಟ್ಟಿ**

ಇವರು ೨೬-೪-೧೯೨೭ ರಂದು ಹುಬ್ಬಳ್ಳಿಗೆ ಸೇರಿದ ಅದರಗುಂಚಿ ಗ್ರಾಮದಲ್ಲಿ ಜನಿಸಿದರು. ತಂದೆ ಹನುಮಂತಪ್ಪ ತರಲಘಟ್ಟಿ, ತಾಯಿ ನೀಲಮ್ಮ. ತಂದೆ-ತಾತ ಒಳ್ಳೆಯ ಗಾಯಕರು. ಜಾನಪದ ಮತ್ತು ಭಕ್ತಿ ಸಂಗೀತದಲ್ಲಿ ಹೆಸರು ಗಳಿಸಿದವರು.

ಆರಂಭದಲ್ಲಿ ಕೊಳಲು ವಾದನದಲ್ಲಿ ತರಬೇತಿ ಪಡೆದು ಮುಂದೆ ೧೯೫೦ ರಲ್ಲಿ ಸಿತಾರ್ ವಾದ್ಯದ ಮೇಲೆ ಆಸಕ್ತಿ ಹೊಂದಿ ಆಕಾಶವಾಣಿ ಕಲಾವಿದರಾದ ಆರ್.ಪಿ. ಗುಡಿಯಾಳ್ ಮತ್ತು ಉಸ್ತಾದ್ ಜೆಡ್. ಎಂ. ಡಾಗರ್ ಅವರಲ್ಲಿ ಶಿಕ್ಷಣ ಪಡೆದರು. ಅಲ್ಲದೆ ರಾಗ-ರಾಗಿಣಿಯ ಕುರಿತು ಡಾ.ಮಲ್ಲಿಕಾರ್ಜುನ ಮನ್ಸೂರ್ ರವರಲ್ಲಿ ೧೫ ವರ್ಷಗಳ ಕಾಲ ಮಾರ್ಗದರ್ಶನ ಪಡೆದಿದ್ದಾರೆ. ಹಾರ್ಮೋನಿಯಂ ವಾದನದಲ್ಲೂ ಪರಿಶ್ರಮವಿದೆ.

ಗಂಧರ್ವ ಮಹಾವಿದ್ಯಾಲಯದ ಎಂ. ಮ್ಯೂಸಿಕ್, ಕರ್ನಾಟಕ ಸರ್ಕಾರದ ವಿದ್ವತ್ ಪರೀಕ್ಷೆಯಲ್ಲಿ ಪ್ರಥಮ ರ್‍ಯಾಂಕ್‌ನೊಂದಿಗೆ ತೇರ್ಗಡೆ.

೧೯೬೭ ರಿಂದಲೂ ಸಂಗೀತ ಕಾರ್ಯಕ್ರಮಗಳನ್ನು ನೀಡುತ್ತಾ ಬಂದಿದ್ದಾರೆ. ಜೊತೆಗೆ ಆಕಾಶವಾಣಿಯಿಂದಲೂ ಇವರ ಕಾರ್ಯಕ್ರಮಗಳು ಪ್ರಸಾರವಾಗುತ್ತಿದೆ.

## ಶ್ರೀರಾಮಚಂದ್ರ ಗುಂಡೋ ದೇಸಾಯಿ

ಇವರು ೨೭-೩-೧೯೨೦ ರಂದು ಹುಬ್ಬಳ್ಳಿಯಲ್ಲಿ ಜನಿಸಿದರು. ಇವರ ತಂದೆ ಗುಂಡೋದೇಸಾಯಿ ಹವ್ಯಾಸಿ ಹಾರ್ಮೋನಿಯಂ ವಾದಕರು. ಬಾಲ್ಯದಲ್ಲಿ ತಂದೆಯಲ್ಲಿ ಆ ನಂತರ ಆರ್. ಎನ್. ದೇಸಾಯಿ, ದತ್ತೋಪಂತ ದೇಸಾಯಿ ಹಾಗೂ ಅಂದಾನಪ್ಪ ಇಂದೂರಕರ ಇವರಲ್ಲಿ ಪ್ರೌಢಶಿಕ್ಷಣ: ಶಂಕರ ದೀಕ್ಷಿತ ಜಂತಲಿ ಅವರಲ್ಲೂ ಗಾಯನ, ಹಾರ್ಮೋನಿಯಂ ವಾದನದಲ್ಲಿ ಶಿಕ್ಷಣ, ಸುರೇಶಬಾಬು ಮಾನೆ ಅವರಿಂದ ಮಾರ್ಗದರ್ಶನ ಗಂಧರ್ವ ಮಹಾವಿದ್ಯಾಲಯದ ಸಂಗೀತ ವಿಶಾರದ ಪರೀಕ್ಷೆಯಲ್ಲಿ ತೇರ್ಗಡೆ.

ಕರ್ನಾಟಕ, ಮಹಾರಾಷ್ಟ್ರ ರಾಜ್ಯಗಳ ಅನೇಕ ಊರುಗಳಲ್ಲಿ ಹಾರ್ಮೋನಿಯಂ ಸಾಥಿ ಹಾಗೂ ಗಾಯನ ಕಚೇರಿಗಳನ್ನು ಮಾಡಿದ್ದಾರೆ. ಹುಬ್ಬಳ್ಳಿಯ ಶಾಲೆಗಳಲ್ಲಿ ಸಂಗೀತ ಶಿಕ್ಷಕರಾಗಿ ಕೆಲಸ ಮಾಡಿ ಅನೇಕ ಶಿಷ್ಯರನ್ನು ತಯಾರು ಮಾಡಿದ್ದಾರೆ.

೧೯೮೧-೮೨ ನೇ ಸಾಲಿನ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಪ್ರಶಸ್ತಿಯನ್ನು ಪಡೆದಿದ್ದಾರೆ. ಇತರ ಸಂಸ್ಥೆಗಳೂ ಇವರನ್ನು ಸನ್ಮಾನಿಸಿವೆ.

## ಶ್ರೀ ರಾಮಚಂದ್ರ ಎ. ಗುಡಿಯಾಳ

೮-೭-೧೯೦೮ ರಂದು ಜನಿಸಿದ ಇವರು ಧಾರವಾಡ ಜಿಲ್ಲೆಯ ಕಲಘಟಗಿಯವರು. ಇವರ ಮನೆತನ ಹರಿದಾಸರ ಪರಂಪರೆಯನ್ನು ಹೊಂದಿತ್ತು. ಹಲಗೂರು ಕೃಷ್ಣಾಚಾರ್ಯರಲ್ಲಿ ೧೪ ವರ್ಷಗಳ ಕಾಲ ಸಿತಾರ್ ವಾದನ ಕಲಿಕೆ, ಅನಂತರ ಶಂಕರ ದೀಕ್ಷಿತ ಜಂತಲಿ ಅವರಲ್ಲಿ ಪ್ರೌಢಶಿಕ್ಷಣವನ್ನು ಮುಗಿಸಿದರು.

೧೯೩೨ ರಲ್ಲಿ ಹುಬ್ಬಳ್ಳಿಯಲ್ಲಿ ಗುರುಗಳ ಜೊತೆಗೆ ಸಿತಾರ್ ವಾದನದ ಪ್ರಥಮ ಕಚೇರಿ, ಮುಂದೆ ಬೆಳಗಾವಿ, ಮೈಸೂರು ಆಕಾಶವಾಣಿ, ಧಾರವಾಡ, ಕುಮಟ, ಗುಲ್ಬರ್ಗ ಮುಂತಾದ ಕಡೆ ಕಚೇರಿ ಮಾಡಿದ್ದಾರೆ.

೧೯೫೦ ರಿಂದ ೧೯೭೨ ರವರೆಗೆ ಧಾರವಾಡ ಆಕಾಶವಾಣಿ ಕೇಂದ್ರದ ನಿಲಯ ಕಲಾವಿದರಾಗಿದ್ದು ನಿವೃತ್ತರಾಗಿದ್ದಾರೆ. ಕುಲಕರ್ಣಿ ಶ್ರೀನಿವಾಸರಾಯರ ನಾಟ್ಯವೃಂದದಲ್ಲಿ, ಎಚ್. ಎಂ.ವಿ. ಗ್ರಾಮಫೋನ್ ಕಂಪನಿಯಲ್ಲಿ ಕೆಲವು ಕಾಲ ಸಿತಾರ್ ವಾದಕರಾಗಿ ಕೆಲಸ ಮಾಡಿದ್ದಾರೆ.

ಹಲವು ವಾಕ್ಚಿತ್ರಗಳ ಹಿನ್ನಲೆ ಸಂಗೀತದ ವಾದ್ಯ ವೃಂದದ ಕಲಾವಿದರಾಗಿ ಕೆಲಸ ಮಾಡಿದ್ದಾರೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯು ೧೯೮೭-೮೮ ರ ಪ್ರಶಸ್ತಿಯೊಂದಿಗೆ 'ಕರ್ನಾಟಕ ಕಲಾ ತಿಲಕ'ಎಂಬ ಬಿರುದನ್ನೂ ಇವರಿಗೆ ನೀಡಿ ಗೌರವಿಸಿದೆ.

## ಶ್ರೀ ಆರ್. ಎಸ್. ಜಂತಲಿ

೧೦-೧೨-೧೯೨೩ ರಂದು ಶೇಷಗಿರಿ ಗ್ರಾಮದಲ್ಲಿ ಜನಿಸಿದ ಇವರ ತಂದೆ ಶಂಕರ ದೀಕ್ಷಿತ ಜಂತಲಿ ಹಿರಿಯ ಸಂಗೀತ ವಿದ್ವಾಂಸರು. ತಂದೆಯವರಲ್ಲೇ ಪೂರ್ತಿ ಸಂಗೀತ ಶಿಕ್ಷಣ, ಸಂಗೀತ ವಿಶಾರದ ಪರೀಕ್ಷೆಯಲ್ಲಿ ತೇರ್ಗಡೆ. ೧೯೫೦ ರಿಂದ ಧಾರವಾಡ ಆಕಾಶವಾಣಿ ಕೇಂದ್ರದಿಂದ ಇವರ ಕಚೇರಿಗಳು ಪ್ರಸಾರವಾಗುತ್ತಿದ್ದವು. ಶಂಕರ ದೀಕ್ಷಿತ ಆರ್ಟ್ಸ್ ಸರ್ಕಲ್ ಎಂಬ ಸಂಸ್ಥೆಯನ್ನು ಸ್ಥಾಪಿಸಿ ನಡೆಸಿದರು.

ಮುಂಬೈ, ಸೊಲ್ಲಾಪುರ, ಬೆಂಗಳೂರು, ಮದರಾಸು, ಮೈಸೂರು, ಮಂಗಳೂರು, ಬೆಳಗಾವಿ, ಶಿವಮೊಗ್ಗ ಊರುಗಳಲ್ಲಿ ಇವರ ಕಚೇರಿ ನಡೆಯಿತು. ರೈಲ್ವೆ ಇಲಾಖೆಯಲ್ಲಿ ಉದ್ಯೋಗದಲ್ಲಿದ್ದು ೧೯೮೧ ರಲ್ಲಿ ನಿವೃತ್ತಿ ಪಡೆದರು. ೧೯೮೧ ರಲ್ಲಿ ಹುಬ್ಬಳ್ಳಿ-ಧಾರವಾಡ ಮಹಾನಗರ ಸಭೆಯಿಂದ ಸನ್ಮಾನ ೧೯೮೨ ರಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯಿಂದ ಪ್ರಶಸ್ತಿ ಸನ್ಮಾನ ಸಂದಿದೆ.

## ಶ್ರೀ ಜಿ. ಆರ್. ನಿಂಬರಗಿ

ಇವರ ಜನನ ಜಮಖಂಡಿಯಲ್ಲಿ ೨-೯-೧೯೧೯ ರಂದು ಆಯಿತು. ಕಲಾವಿದರ ಕುಟುಂಬದಲ್ಲಿ ಹುಟ್ಟಿದ ಇವರು ಪಿಟೀಲು ವಾದನದಲ್ಲಿ ಪಾರಂಗತರಾದರು. ಇವರ ಅಣ್ಣ ಡಿ. ಆರ್. ನಿಂಬರಗಿ ಸಂಗೀತ ವಿದ್ವಾಂಸರು ಅಜ್ಜ ವಿಷ್ಣುಪಂತ್ ರುದ್ರವೀಣಾ ವಾದಕರು. ಮೊದಲು ಅಣ್ಣನವರಲ್ಲಿ ಸಂಗೀತಾಭ್ಯಾಸ, ನಂತರ ಗಜಾನನರಾವ್ ಜೋಷಿಯವರಲ್ಲಿ ಶಿಷ್ಯತ್ವ ಮಾಡಿದರು. ಹನುಮಂತರಾವ್ ವಾಳ್ವೇಕರ್ ಇವರಲ್ಲಿ ಪ್ರೌಢಶಿಕ್ಷಣ ಪಡೆದಿದ್ದಾರೆ.

೧೯೪೭ ರಲ್ಲಿ ಮುಂಬೈ ಆಕಾಶವಾಣಿಯ ನಿಲಯ ಕಲಾವಿದರಾಗಿದ್ದು, ಧಾರವಾಡ ಕೇಂದ್ರಕ್ಕೆ ವರ್ಗವಾಗಿ ಬಂದು ಹಾಲಿ ಧಾರವಾಡದಲ್ಲಿ ನೆಲೆಸಿದ್ದಾರೆ. ಗ್ವಾಲಿಯರ್, ಆಗ್ರಾ, ಜಯಪುರ ಘರಾಣೆಗಳ ಪರಿಚಯ ಪಡೆದಿದ್ದಾರೆ.

ಗಜಾನನರಾವ್ ಜೋಶಿ, ಬಸವರಾಜ್ ರಾಜಗುರು, ಶಿವರಾಮ್ ಬುವಾ ವಝೆ, ಅಜಮತ್ ಹುಸೇನ್ ಖಾನ್, ಲಟಾಫತ್ ಹುಸೇನ್ ಖಾನ್, ಗಂಗೂಬಾಯಿ ಹಾನಗಲ್ ಮುಂತಾದವರ ಗಾಯನಕ್ಕೆ ಪಿಟೀಲು ಸಾಥ ನೀಡಿದ್ದಾರೆ. ಮುಂಬೈ, ಜಲಂಧರ್, ಜಯಪುರ, ರಾಜಕೋಟೆ, ನಾಗಪುರಗಳಲ್ಲಿ ಕಾರ್ಯಕ್ರಮಗಳನ್ನು ನೀಡಿದ್ದಾರೆ.

ಆಕಾಶವಾಣಿಯ ವಿವಿಧ ಕೇಂದ್ರಗಳಿಂದ ಕಾರ್ಯಕ್ರಮ ಪ್ರಸಾರವಾಗಿದೆ. ಧಾರವಾಡ ಆಕಾಶವಾಣಿ ಕೇಂದ್ರದಿಂದ ೧೯೭೭ ರಲ್ಲಿ ನಿವೃತ್ತಿ ಪಡೆದರು. ಗಾಯನದಲ್ಲೂ ತಬಲವಾದನದಲ್ಲೂ ಪರಿಶ್ರಮ ಉಂಟು : ಕರ್ನಾಟಕ ಸಂಗೀತದ ಪರಿಚಯವೂ ಇದೆ. 'ಅಭಿಜಾತ ಸಂಗೀತ' ಎಂಬ ಪುಸ್ತಕವನ್ನು ಬರೆದಿದ್ದಾರೆ.

## ಶ್ರೀ ಹನುಮಂತಪ್ಪ ಹೂಗಾರ್

ಇವರು ೯-೧೨-೧೯೪೪ ರಂದು ಜನಿಸಿದರು. ತಂದೆ ಫಕೀರಪ್ಪ ಕುಂದಗೋಳಕರ ಉಸ್ತಾದ ಅಬ್ದುಲ್ ಕರೀಂಖಾನ್ ಅವರ ಶಿಷ್ಯರು. ಹತ್ತು ವರ್ಷಗಳ ಕಾಲ ತಂದೆಯವರಿಂದಲೇ ಆರಂಭಿಕ ತಾಲೀಮು. ಅನಂತರ ಅವರ ಶಿಷ್ಯ ಜಿ. ಎಚ್. ದೇಸಾಯಿವಯರಲ್ಲಿ ೧೦ ವರ್ಷ ಶಿಷ್ಯತ್ವ ಮಾಡಿ ಸಂಗೀತ ಸಾಧನೆ. ಸಂಗೀತ ಸೀನಿಯರ್ ಮತ್ತು ವಿದ್ವತ್ ಪರೀಕ್ಷೆಗಳಲ್ಲಿ ಪ್ರಥಮ ಶ್ರೇಣಿಯಲ್ಲಿ ತೇರ್ಗಡೆಯಾಗಿದ್ದಾರೆ.

ಕುಂದಗೋಳ, ಹುಬ್ಬಳ್ಳಿ, ಧಾರವಾಡ, ಜಮಖಂಡಿ, ಹರಿಹರ, ಕಾರವಾರ, ಮೈಸೂರು, ಬೆಂಗಳೂರು ಮುಂತಾದ ನಗರಗಳಲ್ಲಿ ಕಾರ್ಯಕ್ರಮ ಜರುಗಿವೆ. ಹೊರ ರಾಜ್ಯದ ನಗರಗಳಾದ ಪುಣೆ, ಪಂಢರಪುರ, ಮೀರಜ್, ಸಾಂಗ್ಲಿ, ಮಂತ್ರಾಲಯಗಳಲ್ಲಿ ಇವರ ಸಾರ್ವಜನಿಕ ಕಚೇರಿಗಳು ನಡೆದಿವೆ.

ತಂದೆಯವರಿಂದ ಸ್ಥಾಪಿತವಾದ ಸ್ವರ ಪ್ರಕಾಶ ಸಂಗೀತ ವಿದ್ಯಾಲಯವನ್ನು ನಡೆಸುತ್ತಿದ್ದಾರೆ. ೧೯೯೧ ರಿಂದ ೯೬ ರವರೆಗೆ ಅಶ್ರಫೀ ಶಿಕ್ಷಕರ ತರಬೇತಿ ಸಂಸ್ಥೆಯಲ್ಲಿ ಶಿಕ್ಷಕರಾಗಿ ಸೇವೆ ಸಲ್ಲಿಸಿದ್ದಾರೆ.

## ಶ್ರೀ ತುಕಾರಾಮಸಾ ವಿಠ್ಠಲಸಾ ಕಬಾಡಿ

೫-೪-೧೯೩೮ ಗದಗದಲ್ಲಿ ಇವರ ಜನನವಾಯಿತು. ತಂದೆ ವಿಠ್ಠಲಸಾ ಕಬಾಡಿ ಸಂಗೀತ ವಿದ್ವಾಂಸರು. ಮೊದಲು ತಂದೆಯಿಂದ ಅನಂತರ ಬಂಧುಗಳಾದ ದಿವಂಗತ ಸಾಬಣಸಾ ಕಲ್ಬುರ್ಗಿ ಅವರಲ್ಲಿ ಪ್ರೌಢ ಸಂಗೀತ ಪಾಠ. ಗ್ವಾಲಿಯರ್ ಘರಾಣದಲ್ಲಿ ಗಜಾನನರಾವ್ ಜೋಶಿಯವರಲ್ಲಿ ಪಿಟೀಲುವಾದನ ಶಿಕ್ಷಣ. ಗಂಧರ್ವ ಮಹಾವಿದ್ಯಾಲಯದ ಸಂಗೀತ ವಿಶಾರದ ಹಾಗೂ ಕರ್ನಾಟಕ ಸರ್ಕಾರದ ವಿದ್ವತ್ ಪರೀಕ್ಷೆಗಳಲ್ಲಿ ಮೊದಲ ಸ್ಥಾನ ಪಡೆದು ತೇರ್ಗಡೆ.

ಮೈಸೂರು, ಬೆಂಗಳೂರು, ಬಳ್ಳಾರಿ, ಧಾರವಾಡ, ಬಿಜಾಪುರ, ಬಾಗಲಕೋಟೆ, ಮುಂಬಯಿ, ಬಿಹಾರ, ದೆಹಲಿ ಆಕಾಶವಾಣಿ ಮುಂತಾದ ಕಡೆ ಪಿಟೀಲು ತನಿ ಕಾರ್ಯಕ್ರಮ ನೀಡಿದ್ದಾರೆ. ಅಲ್ಲದೆ ಡಾ. ಮಲ್ಲಿಕಾರ್ಜುನ ಮನ್ಸೂರ,

ಭೀಮಸೇನಜೋಶಿ, ಬಸವರಾಜ ರಾಜಗುರು, ಪುಟ್ಟರಾಜಗವಾಯಿ, ಡಾ. ಗಂಗೂಬಾಯಿ ಹಾನಗಲ್, ಲಕ್ಷ್ಮಿಶಂಕರ ಮುಂತಾದವರಿಗೆ ಪಿಟೀಲು ಸಾಥ ನೀಡಿದ್ದಾರೆ. ಸುಮಾರು ೧೨ ವರ್ಷಗಳಿಂದ ಧಾರವಾಡ ಆಕಾಶವಾಣಿ ಕೇಂದ್ರದ ನಿಲಯ ಕಲಾವಿದರಾಗಿ ಸೇವೆ ಸಲ್ಲಿಸಿದ್ದಾರೆ.

## ಶ್ರೀಮತಿ ಉಷಾ ದಾತಾರ್

ಇವರು ೨೬-೩-೧೯೩೭ ರಂದು ವಿಜಾಪುರದಲ್ಲಿ ಜನಿಸಿದರು. ತಂದೆ ಶ್ರೀನಿವಾಸರಾವ್ ಸಂಗೀತ ಪರಿಣತರು. ಅಜ್ಜ ರಾಘವೇಂದ್ರರಾಯರು ಕೀರ್ತನಕಾರರಾಗಿದ್ದವರು. ಪ್ರಾರಂಭಿಕ ಶಿಕ್ಷಣ ವಿಜಾಪುರದ ರಂಗಾಚಾರ್ಯ ಕಾಖಂಡಕಿಯಲ್ಲಿ, ಅನಂತರ ಹುಬ್ಬಳ್ಳಿಯ ಆರ್. ಜಿ. ದೇಸಾಯಿಯವರಲ್ಲಿ ಪ್ರೌಢ ಶಿಕ್ಷಣ ಮುಗಿಸಿದರು. ಸಂಗೀತ ವಿಶಾರದ ಪರೀಕ್ಷೆಯಲ್ಲಿ ತೇರ್ಗಡೆಯಾದರು. ಪ್ರಥಮ ಕಚೇರಿ ಮಹಿಪತಿದಾಸರ ಆರಾಧನಾ ಸಂದರ್ಭದಂದು. ಮುಂದೆ ಜಮಖಂಡಿ ಆರ್ಟ್ಸ್ ಸರ್ಕಲ್, ಗದಗ ಆರ್ಟ್ಸ್ ಸರ್ಕಲ್, ರಾಯಚೂರು ಕನ್ನಡ ಸಂಘ, ಮುಂಬಯಿ ಕನ್ನಡ ಸಂಘ ಮುಂತಾದ ಸಂಸ್ಥೆಗಳ ಆಶ್ರಯದಲ್ಲಿ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಮೈಸೂರು ದಸರಾ ಉತ್ಸವ, ಹೈದ್ರಾಬಾದ್ ಮುಂತಾದ ಕಡೆಗಳಲ್ಲಿ ಇವರ ಕಚೇರಿ ನಡೆದಿವೆ. ಠುಮ್ರಿ, ಭಜನ್, ಭಾವಗೀತೆ, ರಂಗಗೀತೆಗಳಲ್ಲೂ ಪರಿಶ್ರಮವಿದೆ.

## ಶ್ರೀಮತಿ ಶಾರದಾ ಹಾನಗಲ್

೧೯೨೯ ರಲ್ಲಿ ಜನಿಸಿದ ಇವರು ಸವಾಯಿ ಗಂಧರ್ವರ ಸ್ನೇಹಿತರಾದ ಶ್ರೀದತ್ತೋಪಂತ್ ದೇಸಾಯಿ, ಜಯಪುರದ ಸಂಗೀತ ಸಾಮ್ರಾಟ್ ಅಲ್ಲಾದಿಯಾಖಾನ್ ಅವರ ಶಿಷ್ಯರಾದ ಶ್ರೀಮತಿ ಲಕ್ಷ್ಮೀಬಾಯಿ ಜಾದವ್, ಶ್ರೀ ಹನುಮಂತರಾವ್ ವಾಳ್ವೇಕರ್ ಮುಂತಾದವರ ಬಳಿ ಶಿಷ್ಯ ವೃತ್ತಿಯನ್ನು ಪೂರ್ಣಗೊಳಿಸಿದರು.

ಗಂಧರ್ವ ಮಹಾವಿದ್ಯಾಲಯದ ಸಂಗೀತ ಅಲಂಕಾರ ಪದವಿ, ಧಾರವಾಡದ ಕರ್ನಾಟಕ ಕಾಲೇಜಿನಲ್ಲಿ ಸಂಗೀತದ ಪ್ರೊಫೆಸರ್, ಕರ್ನಾಟಕ ವಿಶ್ವವಿದ್ಯಾಲಯದ ಸಂಗೀತ ವಿಭಾಗದ ಮುಖ್ಯಸ್ಥೆ ಹೀಗೆ ಹಲವು ಉನ್ನತ ಪದವಿ ಪಡೆದಿರುವರು.

೧೯೪೭ ರಿಂದಲೂ ಆಕಾಶವಾಣಿಯಲ್ಲಿ ಶಾಸ್ತ್ರೀಯ ಹಾಗೂ ಲಘುಶಾಸ್ತ್ರೀಯ ಸಂಗೀತ ಕಚೇರಿಗಳನ್ನು ನೀಡುತ್ತಾ ಬಂದಿದ್ದಾರೆ. ಅಲ್ಲದೆ ನಾಡಿನ ಬಹಳಷ್ಟು ಪ್ರತಿಷ್ಠಿತ ಉತ್ಸವಗಳಲ್ಲೂ ಇವರ ಗಾಯನ ಕಾರ್ಯಕ್ರಮಗಳು ನಡೆದಿವೆ. ಶಾರದಾ ಅವರ ಸಂಗೀತ ಸೇವೆಯನ್ನು ಗುರುತಿಸಿ ಈಚೆಗೆ ಮೈಸೂರಿನ ವಸುಂಧರ ಪರ್‌ಫಾರ್ಮಿಂಗ್ ಆರ್ಟ್ಸ್ ಸೆಂಟರ್ 'ಶೃತಿಸಾಗರ' ಬಿರುದಿನೊಂದಿಗೆ ಗೌರವಿಸಿದೆ.

**ಶ್ರೀಮತಿ ಕಮಲಾ ಪುರಂದರೆ**

೧೯೪೦ ರಲ್ಲಿ ಗದಗದಲ್ಲಿ ಜನಿಸಿದರು. ಎಂ. ಮ್ಯೂಸಿಕ್ ಪಿಎಚ್.ಡಿ. ಪದವೀಧರೆ. ಇವರ ತಂದೆ ಗೋಪಾಲರಾವ್ ಪಾಗೆ, ಚಿಕ್ಕಪ್ಪ ವಸಂತರಾವ್ ಪಾಗೆ, ತಾಯಿ ರಾಧಾಬಾಯಿ ಎಲ್ಲರೂ ಸಂಗೀತ ಬಲ್ಲವರು. ಇವರ ಪತಿ ದಿವಂಗತ ರಾಜೀವ ಪುರಂದರೆ ಅವರಲ್ಲಿ ಸಂಗೀತ ಶಿಕ್ಷಣ. ಜಯಪುರ್ ಘರಾಣೆ, ಸುಗಮ ಸಂಗೀತದಲ್ಲಿ ಪ್ರಾವೀಣ್ಯತೆ ಇದೆ. ವಿಠ್ಠಲಸಾ ಕಬಾಡಿಯವರಿಂದ ಹಾರ್ಮೋನಿಯಂ ವಾದನ ಕಲಿಕೆ. ಸಂಗೀತ ಅಲಂಕಾರ ಪರೀಕ್ಷೆಯಲ್ಲಿ ತೇರ್ಗಡೆ.

ಧಾರವಾಡ ಆಕಾಶವಾಣಿ ಕೇಂದ್ರದಿಂದ ಇವರ ಶಾಸ್ತ್ರೀಯ ಹಾಗೂ ಸುಗಮ ಸಂಗೀತ ಗಾಯನ ಪ್ರಸಾರವಾಗಿದೆ. ಕೆಲವು ಧ್ವನಿ ಮುದ್ರಿಕೆಗಳೂ ಪ್ರಸಾರವಾಗಿವೆ. ಮುಂಬಯಿ, ಧಾರವಾಡ, ಗದಗ, ಹುಬ್ಬಳ್ಳಿ, ಬೆಳಗಾವಿ, ಮಂಗಳೂರು, ಉಡುಪಿ, ರಾಯಚೂರು ನಗರಗಳ ಕಲಾ ಸಂಘಗಳ ಆಶ್ರಯದಲ್ಲಿ ಕಚೇರಿ ಮಾಡಿದ್ದಾರೆ.

ಮಹಿಳಾ ಕಾಲೇಜಿನಲ್ಲಿ ಪ್ರಾಧ್ಯಾಪಕಿ, ಕರ್ನಾಟಕ ವಿಶ್ವವಿದ್ಯಾಲಯದ ಸಂಗೀತ ವ್ಯಾಸಂಗ ಮಂಡಳಿಯ ಸದಸ್ಯೆ. ಸಂಗೀತಾ ಕಲಾ ಕುಸುಮ, ಸಂಗೀತ ಶಾಸ್ತ್ರ ಗ್ರಂಥವೇ ಅಲ್ಲದೆ ಹಲವಾರು ಸ್ಮರಣ ಸಂಚಿಕೆಗಳಲ್ಲಿ ಕೆಲವು ಲೇಖನಗಳೂ ಪ್ರಕಟವಾಗಿವೆ.

**ಶ್ರೀ ಶ್ರೀಪತಿ ಪಾಡಿಗಾರ**

೧೯೩೯ ರಲ್ಲಿ ಹುಬ್ಬಳ್ಳಿಯಲ್ಲಿ ಜನಿಸಿದರು. ಸವಾಯಿ ಗಂಧರ್ವರ ಶಿಷ್ಯ ವೆಂಕಟೇಶ್ ರಾಮದುರ್ಗ ಹಾಗೂ ಅವರ ಗುರು ಬಂಧುಗಳಾದ ಭೀಮಸೇನ್ ಜೋಶಿ ಇವರುಗಳಲ್ಲಿ ಸಂಗೀತ ಶಿಕ್ಷಣ ಪಡೆದಿದ್ದಾರೆ.

ಕುಂದಗೋಳದಲ್ಲಿ ನಡೆದ ದಿ. ಸವಾಯಿಗಂಧರ್ವರ ಪುಣ್ಯತಿಥಿಯ ಕಾರ್ಯಕ್ರಮದಲ್ಲಿ ಮೊದಲ ಕಚೇರಿ ನಡೆಯಿತು. ಅನಂತರ ಬೆಂಗಳೂರು, ಮೈಸೂರು, ಮಂಗಳೂರು, ಉಡುಪಿ ಮುಂತಾದ ಕಡೆ ಇವರ ಕಾರ್ಯಕ್ರಮಗಳು ನಡೆದಿವೆ.

ಕರ್ನಾಟಕ ಮಾತ್ರವಲ್ಲದೆ ಮುಂಬಯಿ, ಹೈದರಾಬಾದ್, ಮದರಾಸ್, ವಿಜಯವಾಡ, ಪುಣೆ, ಇಂದೂರು, ಝಾನ್ಸಿ, ದೆಹಲಿ, ಅಹಮದಾಬಾದ್ ಮುಂತಾದ ಕಡೆಗಳಲ್ಲಿ ಪ್ರವಾಸ ಮಾಡಿ ಕಾರ್ಯಕ್ರಮ ನೀಡಿದ್ದಾರೆ.

ಇವರ ಗಾಯನದಲ್ಲಿ ಕಿರಾಣಾ ಘರಾಣೆಯ ಶೈಲಿಯು ಕಂಡು ಬರುತ್ತದೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯು ಏರ್ಪಡಿಸಿದ್ದ ಕಾರ್ಯಕ್ರಮಗಳಲ್ಲಿ ಕಚೇರಿ ಮಾಡಿದ್ದಾರೆ. ೧೯೮೦ ರಲ್ಲಿ ಉಡುಪಿಯಲ್ಲಿ ನಡೆದ ಶ್ರೀ ವಾದಿರಾಜ ಕನಕದಾಸ ಮಹೋತ್ಸವ ಸಮಾರಂಭದಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಮತ್ತು ಉತ್ಸವ ಸಮಿತಿಯವರು ಸೇರಿ ಇವರಿಗೆ 'ರಾಗ ರಾಗಿಣಿ ರಸಲೋಲಾ' ಎಂಬ ಪ್ರಶಸ್ತಿಯನ್ನು ನೀಡಿದ್ದಾರೆ.

## ಶ್ರೀ ಸೋಮನಾಥ ಮರಡೂರ

ಹಾವೇರಿ ಜಿಲ್ಲೆಯ ಮರಡೂರು ಗ್ರಾಮದಲ್ಲಿ ೧೯೪೪ ರಲ್ಲಿ ಇವರ ಜನನವಾಯಿತು. ಎಂಟನೇ ವಯಸ್ಸಿಗೆ ಸಂಗೀತಾಭ್ಯಾಸ ಪ್ರಾರಂಭ. ವೃತ್ತಿ ಪ್ರವೃತ್ತಿಗಳಿಂದ ಸಂಗೀತಗಾರರು.

ಸಂಗೀತದ ಕಲಿಕೆಯ ಆರಂಭದ ಗುರುಗಳು ಶ್ರೀ ವೀರಪ್ಪಯ್ಯಸ್ವಾಮಿ ಶಿರೋಳ. ಗದುಗಿನ ಶ್ರೀ ಪುಟ್ಟರಾಜ ಗವಾಯಿಗಳವರಲ್ಲಿ ಮುಂದಿನ ಶಿಕ್ಷಣ. ಧಾರವಾಡದ ಪಂಡಿತ ಬಸವರಾಜ ರಾಜಗುರುಗಳಲ್ಲಿ ಹಿಂದೂಸ್ತಾನಿ ಸಂಗೀತದಲ್ಲಿ ಉನ್ನತಾಭ್ಯಾಸ.

ಮೈಸೂರು ದಸರಾ, ಪಟ್ಟದಕಲ್ಲು, ನವರಸಪುರ, ಹಂಪಿ, ಲಕ್ಕುಂಡಿ ಉತ್ಸವಗಳಲ್ಲಿ ಹಾಡಿದ್ದಾರೆ. ಮುಂಬಯಿ ದಿಲ್ಲಿ, ಕೊಲ್ಕತ್ತ, ಚೆನ್ನೈ, ಹೈದರಾಬಾದ್, ಗೋವ, ಕೊಚ್ಚಿನ್, ಅಹಮದಾಬಾದ್, ಭೂಪಾಲ ಮುಂತಾದ ನಗರಗಳಲ್ಲಿ ಕಾರ್ಯಕ್ರಮ ನೀಡಿದ್ದಾರೆ.

ಪ್ರತಿಭಾವಂತ ಗಾಯಕರಾದ ಶ್ರೀ ಮರಡೂರ ತಮ್ಮ ೧೭ ನೇ ವಯಸ್ಸಿನಲ್ಲಿ ಅಖಿಲ ಭಾರತ ಆಕಾಶವಾಣಿ ಸಂಗೀತ ಸ್ಪರ್ಧೆಯಲ್ಲಿ ಹಾಗೂ ೧೯೬೧ ರಲ್ಲಿ ರಾಷ್ಟ್ರಪತಿಗಳಿಂದ ಚಿನ್ನದ ಪದಕ ಗಳಿಸಿದ್ದಾರೆ.

ಮುಂಬಯಿಯ ಸೂರಸಿಂಗಾರ ಸಂಸದ್‌ನ 'ಸುರ್‌ಮಣಿ', ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯಿಂದ 'ಕರ್ನಾಟಕ ಕಲಾತಿಲಕ' ಪ್ರಶಸ್ತಿ ವಿಜೇತರು. ಕಿರಾಣಾ ಪರಂಪರೆಯ ಗಾಯಕರಾದ ಪಂ. ಮರಡೂರ ಆಕಾಶವಾಣಿ ಹಾಗೂ ದೂರದರ್ಶನ ಕಲಾವಿದರಾಗಿದ್ದಾರೆ. ಇವರ ಪುತ್ರಿಯರಾದ ವೀಣಾ ಮತ್ತು ವಾಣಿ ಮರಡೂರ, ಪುತ್ರನಾದ ಕುಮಾರ ಮರಡೂರ ಇವರು ಸಂಗೀತ ಕ್ಷೇತ್ರದಲ್ಲಿ ಖ್ಯಾತಿಗಳಿಸುತ್ತಿರುವ ಕಲಾವಿದರು.

## ಶ್ರೀ ವೆಂಕಟೇಶ ಗೋಡಖಿಂಡಿ

೧೯೪೨ ರಲ್ಲಿ ಧಾರವಾಡದಲ್ಲಿ ಜನಿಸಿದ ಇವರು ಬಾಲ್ಯದಿಂದಲೇ ಸಂಗೀತದ ಗೀಳು ಅಂಟಿಸಿಕೊಂಡು ಅದರಲ್ಲೇ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಹಾಡುಗಾರಿಕೆ, ವೇಣುವಾದನ, ಹಾರ್ಮೋನಿಯಂ ವಾದನ, ಸ್ವರ ಸಂಯೋಜನೆ, ನಾಟಕ ಹೀಗೆ ಅನೇಕ ಸೃಜನಾತ್ಮಕ ಚಟುವಟಿಕೆಗಳಲ್ಲಿ ಇವರಿಗೆ ಚಿಕ್ಕಂದಿನಿಂದಲೆ ಅಭಿರುಚಿ.

ಗಾಯನದಲ್ಲಿ ಪಂ. ನಾರಾಯಣರಾವ್ ಮುಜುಂದಾರ್ ಅವರಿಂದ ಮಾರ್ಗದರ್ಶನ. ಸತತ ಪರಿಶ್ರಮದಿಂದ ಸ್ವಂತ ಅಭ್ಯಾಸದಿಂದ ಶಾಸ್ತ್ರ ಹಾಗೂ ಕಲೆಯಲ್ಲಿ ಪರಿಣತಿ. ಏಕಲವ್ಯನಂತೆ ತಪಸ್ಸು ಸಾಧನೆಯಿಂದ ಬಾನ್ಸುರಿ ವಾದನದಲ್ಲೂ ಪ್ರಾವೀಣ್ಯತೆ ಪಡೆದಿದ್ದಾರೆ. ವಿದ್ವತ್ ಹಾಗೂ ಅಲಂಕಾರ ಪರೀಕ್ಷೆಗಳಲ್ಲಿ ಪ್ರಥಮ ಸ್ಥಾನಗಳಿಸಿ ಹಾಗೂ ಆಕಾಶವಾಣಿಯ ಕಲಾವಿದರಾಗಿ ಸೇವೆ ಸಲ್ಲಿಸಿದ್ದಾರೆ. ಪ್ರಸ್ತುತ ಆಕಾಶವಾಣಿ ಧಾರವಾಡ ಕೇಂದ್ರದ ನಿಲಯ ನಿರ್ದೇಶಕರಾಗಿದ್ದಾರೆ.

ಕರ್ನಾಟಕದ ಪ್ರಮುಖ ನಗರಗಳಾದ ಧಾರವಾಡ, ಹುಬ್ಬಳ್ಳಿ, ಕುಂದಗೋಳ, ಬೆಳಗಾವಿ, ಗದಗ, ಬೆಂಗಳೂರು, ಮೈಸೂರು ಮುಂತಾದೆಡೆಗಳಲ್ಲಿ ಇವರ ಕಾರ್ಯಕ್ರಮಗಳು ನಡೆದಿವೆ. ಹೊರನಾಡಿನ ಚಂಡೀಘಡ, ಭೂಪಾಲ್, ಇಂದೂರ್, ನಾಗಪುರ, ಪುಣೆ, ಮದ್ರಾಸ್, ದಿಲ್ಲಿಯಲ್ಲಿ ಸಾರ್ವಜನಿಕ ಕಚೇರಿಗಳು ನಡೆದಿವೆ.

ಬಾನುಲಿ ಹಾಗೂ ದೂರದರ್ಶನದ ರಾಷ್ಟ್ರೀಯ ಕಾರ್ಯಕ್ರಮಗಳು, ಆಕಾಶವಾಣಿ ಸಂಗೀತ ಸಮ್ಮೇಳನಗಳಲ್ಲಿ ಇವರ ಸಂಗೀತ ರಾಷ್ಟ್ರಾದ್ಯಂತ ಬಿತ್ತರಗೊಂಡಿದೆ. ೧೯೭೭-೭೮ ರ ಸಾಲಿನ ರಾಜ್ಯ ಸಂಗೀತ ನೃತ್ಯ ಅಕಾಡೆಮಿಯ 'ಕರ್ನಾಟಕ ಕಲಾಶ್ರೀ' ಪ್ರಶಸ್ತಿ ಇವರಿಗೆ ಸಂದಿದೆ.

## ಉಸ್ತಾದ ಬಾಲೇಖಾನ್

೨೯-೯-೧೯೪೨ ರಂದು ಧಾರವಾಡದಲ್ಲಿ ಜನಿಸಿದರು. ಸಂಗೀತ ಪರಂಪರೆಯ ಮನೆತನ. ತಂದೆ ಉಸ್ತಾದ್ ಅಬ್ದುಲ್ ಕರೀಂ ಖಾನ್ ಪ್ರಸಿದ್ಧ ಸಿತಾರ್ ವಾದಕರು. ತಾತ ರಹಮತ್ ಖಾನರು ಸುಪ್ರಸಿದ್ಧ ಬೀನ್ ಮತ್ತು ಸಿತಾರ್ ವಾದಕರು, ಬೀನ್‌ಕಾರರ ಪರಂಪರೆ. ತಂದೆ ಅಬ್ದುಲ್ ಕರೀಮಖಾನರಲ್ಲೇ ಬಾಲ್ಯದಿಂದಲೂ ಶಿಕ್ಷಣ. ಗಂಧರ್ವ ಮಹಾವಿದ್ಯಾಲಯದ ಸಂಗೀತ ಅಲಂಕಾರ ಪರೀಕ್ಷೆಯಲ್ಲಿ ತೇರ್ಗಡೆ.

ಗಾಯಕರಾಗಿ ಪುಣೆಯಲ್ಲಿ ಮೊದಲ ಕಚೇರಿ. ಅನಂತರ ಬೆಳಗಾವಿಯಲ್ಲಿ ಸಿತಾರ್ ವಾದಕರಾಗಿ ರಂಗ ಪ್ರವೇಶ. ಮುಂದೆ ಮುಂಬಯಿ, ಬೆಂಗಳೂರು, ಮೈಸೂರು, ಧಾರವಾಡ, ಹುಬ್ಬಳ್ಳಿ, ನಾಗಪುರ, ಕಲ್ಕತ್ತ, ಮಿರಜ್ ಮುಂತಾದ ನಗರಗಳಲ್ಲಿ ಅನೇಕ ಉತ್ಸವಗಳಲ್ಲಿ, ಸಂಘ ಸಂಸ್ಥೆಗಳ ಆಶ್ರಯದಲ್ಲಿ ಕಚೇರಿ ಮಾಡಿದ್ದಾರೆ.

ಆಕಾಶವಾಣಿಯಿಂದ ರಾಷ್ಟ್ರೀಯ ಸಂಗೀತ ಕಾರ್ಯಕ್ರಮವನ್ನೂ ನೀಡಿದ್ದಾರೆ. ಲಂಡನ್, ಮ್ಯಾಂಚೆಸ್ಟರ್, ಬರ್ಮಿಂಗ್‌ಹ್ಯಾಮ್ ಮುಂತಾದ ಪಾಶ್ಚಾತ್ಯ ದೇಶಗಳಲ್ಲೂ ಸಂಚಾರ ಮಾಡಿ ಕಾರ್ಯಕ್ರಮ ನೀಡಿದ್ದಾರೆ. ಲಂಡನ್‌ನಲ್ಲಿ ತಯಾರಾದ ಗೌತಮ ಬುದ್ಧ ಎಂಬ ದೂರದರ್ಶನ ಚಿತ್ರಕ್ಕೆ ಸಂಗೀತ ಸಂಯೋಜನೆ ಮಾಡಿರುವುದಲ್ಲದೆ ಸೀಸನ್ಸ್ ಆಫ್ ಇಂಡಿಯಾ ಎಂಬ ರಂಗಪ್ರದರ್ಶನಕ್ಕೂ ಸಂಗೀತ ನಿರ್ದೇಶನ ಮಾಡಿದ್ದಾರೆ.

೧೯೮೧-೮೨ ರ ಸಾಲಿನಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಸದಸ್ಯರಾಗಿದ್ದರು. ತಾತ ರಹಿಮತ್ ಖಾನರು ಸ್ಥಾಪಿಸಿದ ಭಾರತೀಯ ಸಂಗೀತ ವಿದ್ಯಾಲಯವನ್ನು ಬಾಲೇಖಾನರು ನಡೆಸಿಕೊಂಡು ಬರುತ್ತಿದ್ದಾರೆ. ಧಾರವಾಡ ಆಕಾಶವಾಣಿ ಕೇಂದ್ರದ ನಿಲಯ ಕಲಾವಿದರಾಗಿ ೧೯೭೩ ರಿಂದ ಉದ್ಯೋಗದಲ್ಲಿದ್ದಾರೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ೨೦೦೦-೨೦೦೧ ನೇ 'ಕರ್ನಾಟಕ ಕಲಾಶ್ರೀ' ಪ್ರಶಸ್ತಿ ಲಭಿಸಿದೆ.

## ಪಂ. ವಸಂತ ಕನಕಾಪೂರ

೯-೧೧-೧೯೩೭ ರಂದು ಹುಬ್ಬಳ್ಳಿಯಲ್ಲಿ ಜನಿಸಿದರು. ತಂದೆ ಭೀಮರಾವ್ ಕನಕಾಪೂರ ಹವ್ಯಾಸಿ ಸಿತಾರ್ ವಾದಕರು. ತಾಯಿ ಭಾರತಿಬಾಯಿ ಹಾರ್ಮೋನಿಯಂ ವಾದಕರು ಹಾಗೂ ಪೂರ್ವಿಕರು ವೀಣಾ ವಾದಕರು.

ಹುಬ್ಬಳ್ಳಿಯ ಆರ್. ಜಿ. ದೇಸಾಯಿಯವರಲ್ಲಿ ಹಾರ್ಮೋನಿಯಂ ವಾದನದಲ್ಲಿ ಶಿಕ್ಷಣ. ಗೋಪಾಲ ದೇಸಾಯಿಯವರಿಂದಲೂ ಮಾರ್ಗದರ್ಶನ ಹಾಗೂ ಹತ್ತು ವರ್ಷಗಳ ಸತತ ಅಭ್ಯಾಸ. ಹನುಮಂತರಾವ್ ವಾಳ್ವೇಕರ ಹಾಗೂ ವಿಠಲಸಾ ಕಬಾಡಿ ಅವರುಗಳಿಂದ ಮಾರ್ಗದರ್ಶನ. ಗಂಧರ್ವ ಮಹಾವಿದ್ಯಾಲಯದ ಸಂಗೀತ ವಿಶಾರದ ಪರೀಕ್ಷೆಯಲ್ಲಿ ತೇರ್ಗಡೆ, ಪಾಶ್ಚಾತ್ಯ ಸಂಗೀತದಲ್ಲೂ ಪರಿಶ್ರಮ ಇದೆ.

ಬಾಲ್ಯದಲ್ಲಿ ಮೈಸೂರು ಮಹಾರಾಜರ ಅರಮನೆಯಲ್ಲಿ ಹಾರ್ಮೋನಿಯಂ ಕಚೇರಿ, ಮುಂಬಯಿ, ಕಲ್ಕತ್ತ, ಮೈಸೂರು, ಮದರಾಸು, ಧಾರವಾಡ, ಪೂನಾ ಮುಂತಾದ ಕಡೆ ಅನೇಕ ಸಂಸ್ಥೆಗಳ ಆಶ್ರಯದಲ್ಲಿ ಕಚೇರಿ ಮಾಡಿದ್ದಾರೆ. ನಾಡಿನ ಸುಪ್ರಸಿದ್ಧ ಗಾಯಕ, ಗಾಯಕಿಯರಿಗೆ ಹಾರ್ಮೋನಿಯಂ ಸಾಥಿ ನೀಡಿದ್ದಾರೆ. ೧೯೭೫ ರಿಂದ ಧಾರವಾಡ ಆಕಾಶವಾಣಿ ಕೇಂದ್ರದ 'ಎ' ವರ್ಗದ ಸಂಗೀತ ಸಂಯೋಜಕ ಹುದ್ದೆಯಲ್ಲೂ ಇದ್ದರು.

ಮಂಜೂಷರತ್ನ, ವಾದನ ಗಂಧರ್ವ ಮುಂತಾದ ಪ್ರಶಸ್ತಿಗಳು ಬಂದಿವೆ. ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ಪ್ರಶಸ್ತಿಯೂ ಇವರಿಗೆ ಸಂದಿದೆ.

## ಶ್ರೀಮತಿ ಕೃಷ್ಣಾ ಹಾನಗಲ್

೧೯೩೧ ರಲ್ಲಿ ಇವರ ಜನನವಾಯಿತು. ತಾಯಿ ಡಾ. ಗಂಗೂಬಾಯಿ ಹಾನಗಲ್ ನಾಡಿನ ಪ್ರಖ್ಯಾತ ಸಂಗೀತ ವಿದುಷಿ. ಅಜ್ಜಿ ಅಂಬಾಬಾಯಿ ಕರ್ನಾಟಕ ಸಂಗೀತ ಕಲಾವಿದೆ. ತಾಯಿ ಗಂಗೂಬಾಯಿ ಅವರೇ ಇವರ ಸಂಗೀತದ ಗುರುಗಳು ಹಾಗೂ ಮಾರ್ಗದರ್ಶಕರು.

ಆಕಾಶವಾಣಿ ಸಂಗೀತ ಸಮ್ಮೇಳನದಲ್ಲೂ ಹಾಡಿರುವ ಶ್ರೀಮತಿಯವರು ಶಾಸ್ತ್ರೀಯ ಹಾಡುಗಾರಿಕೆಯಲ್ಲದೆ ಲಘು ಶಾಸ್ತ್ರೀಯ ಸಂಗೀತ ಕ್ಷೇತ್ರದಲ್ಲೂ ಹೆಸರು ಮಾಡಿದ್ದಾರೆ. ತಮ್ಮ ತಾಯಿಯೊಂದಿಗೆ ಪಾಕಿಸ್ತಾನ, ಅಮೆರಿಕ, ಕೆನಡಾ, ಫ್ರಾನ್ಸ್, ಇಂಗ್ಲೆಂಡ್ ದೇಶಗಳಲ್ಲಿ ಹಾಗೂ ಜರ್ಮನಿಯಲ್ಲಿ ನಡೆದ ಭಾರತ ಉತ್ಸವದಲ್ಲೂ ಗಾನಸುಧೆ ಹರಿಸಿದ್ದಾರೆ.

ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಸದಸ್ಯೆಯೂ ಆಗಿದ್ದ ಕೃಷ್ಣಾ ಹಾನಗಲ್ಲ ಅವರಿಗೆ ಸುರ ಸಿಂಗಾರ್ ಸಂಸದ್‌ನ 'ಸುರಮಣಿ' ಗೌರವೂ ಬಂದಿರುವುದಲ್ಲದೇ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿಯ ೧೯೯೧-೯೨ ರ 'ಕರ್ನಾಟಕ ಕಲಾ ತಿಲಕ' ಪ್ರಶಸ್ತಿಯೂ ದೊರೆತಿದೆ.

## ಪಂ. ರಾಜಶೇಖರ ಮನ್ಸೂರ್

ಧಾರವಾಡದಲ್ಲಿ ಜನಿಸಿದ ಇವರು ಆಂಗ್ಲ ಸಾಹಿತ್ಯದಲ್ಲಿ ಸ್ನಾತಕೋತ್ತರ ಪದವಿ ಹಾಗೂ ಸಂಗೀತ ವಿಶಾರದ ಪದವಿಯನ್ನು ಪಡೆದಿದ್ದಾರೆ. ಸಂಗೀತಗಾರರ, ರಂಗ ಕಲಾವಿದರ ಮನೆತನ. ತಂದೆ ರಾಷ್ಟ್ರಖ್ಯಾತಿವೆತ್ತ ಪಂಡಿತ

ಮಲ್ಲಿಕಾರ್ಜುನ ಮನ್ಸೂರರು. ರಂಗಭೂಮಿಯ ಹೆಸರಾಂತ ಗಾಯಕ ಕಲಾವಿದರಾದ ಬಸವರಾಜ ಮನ್ಸೂರರು ಇವರ ಚಿಕ್ಕಪ್ಪ.

ತಂದೆ ಮಲ್ಲಿಕಾರ್ಜುನ ಮನ್ಸೂರರಿಂದಲೇ ಜೈಪುರ ಘರಾಣಾನದ ಸಮಗ್ರ ಶಿಕ್ಷಣ. ಸಂಗೀತದ ವಾತಾವರಣದ ಮನೆತನವಾದ್ದರಿಂದ ಶ್ರದ್ಧಾಯುತ ಸಾಧನೆಗೆ ಅವಕಾಶ.

ಮೊದ ಮೊದಲಿಗೆ ತಂದೆಯವರ ಜೊತೆಯಲ್ಲಿ ಗಾಯನದ ಸಾಥಿ, ಅನಂತರ ಅದರ ಅನುಭವದ ಮೇಲೆ ಸ್ವತಂತ್ರವಾಗಿ ಕಾರ್ಯಕ್ರಮಗಳ ನಿರ್ವಹಣೆ. ರಾಷ್ಟ್ರಾದ್ಯಂತ ಪ್ರತಿಷ್ಠಿತ ಉತ್ಸವಗಳಲ್ಲೆಲ್ಲಾ ಕಾರ್ಯಕ್ರಮಗಳು ಸಂಗೀತ ಕಲೆಯ ಬಗ್ಗೆ ಅನೇಕ ಸೋದಾಹರಣೆಗಳು. ಹೀಗೆ ಪತ್ರಿಕೆಗಳಲ್ಲಿ ವಿಮರ್ಶಕರಿಂದ ಮೆಚ್ಚುಗೆ. ರಸಿಕರಿಂದ ಪ್ರಶಂಸೆ.

೧೯೬೩ ರಲ್ಲಿ ಸಂಗೀತ ವಿಶಾರದ ಪದವಿಗಳಿಗೆ ಆಕಾಶವಾಣಿ ಯುವ ಸಂಗೀತ ಸ್ಪರ್ಧೆಯಲ್ಲಿ ಪ್ರಥಮ ಸ್ಥಾನ. ಮುಂದೆ ಆಕಾಶವಾಣಿಯ 'ಎ' ದರ್ಜೆಯ ಕಲಾವಿದರಾಗಿ ಆಯ್ಕೆ. ಪ್ರಸ್ತುತ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಲ್ಲಿ ಆಂಗ್ಲ ಭಾಷಾ ಪ್ರಾಚಾರ್ಯರಾಗಿ ಸೇವೆ.

ಧಾರವಾಡದ ಅನೇಕ ಪ್ರತಿಷ್ಠಿತ ಸಂಘ ಸಂಸ್ಥೆಗಳು ಇವರನ್ನು ಗೌರವಿಸಿ ಸನ್ಮಾನಿಸಿವೆ. ೧೯೯೭ ರಲ್ಲಿ 'ಕರ್ನಾಟಕ ರಾಜ್ಯೋತ್ಸವ' ಪ್ರಶಸ್ತಿ ಸಹ ಇವರಿಗೆ ಸಂದಿದೆ.

### ಶ್ರೀ ಮಾಧವ ಗುಡಿ

೧೯೪೪ ಸೆಪ್ಟೆಂಬರ್‌ನಲ್ಲಿ ಬಾದಾಮಿ ತಾಲ್ಲೂಕಿನ ಜಾಲಿಹಾಳ ಗ್ರಾಮದಲ್ಲಿ ಜನನವಾಯಿತು. ತಂದೆ ಗುರುರಾಜಾಚಾರ್ಯ ಕೀರ್ತನಕಾರರು, ತಾಯಿ ಸುಬ್ಬಕ್ಕ.

ನಾಗೇಶರಾವ ದೇಶಪಾಂಡೆ ಅವರಲ್ಲಿ ಪ್ರಾಥಮಿಕ ಶಿಕ್ಷಣ. ಅನಂತರ ಕಿರಾಣಾ ಘರಾಣೆಯ ಮೇರು ಗಾಯಕ ಪಂಡಿತ ಭೀಮಸೇನ ಜೋಶಿಯವರಲ್ಲಿ ೨೭ ವರ್ಷ ಗುರುಕುಲ ಸಂಪ್ರದಾಯದಲ್ಲಿ ಶಿಷ್ಯ ವೃತ್ತಿ.

ಚಿಕ್ಕಂದಿನಿಂದಲೇ ಮನೆಯಲ್ಲಿ ಸಂಸ್ಕೃತ ಹಾಗೂ ಕೀರ್ತನಕಾರರ ವಾತಾವರಣವಿದ್ದು ಸಹಜವಾಗಿಯೇ ಸಂಗೀತಕ್ಕೆ ಮನವೊಲಿದು ಇಡೀ ಜೀವಮಾನವನ್ನೇ ಸಂಗೀತಕ್ಕೆ ಸಮರ್ಪಿಸಿದ್ದಾರೆ. ಕಿರಾಣಾ ಘರಾಣೆ ಪರಂಪರೆಯ ಸೂಕ್ಷ್ಮವಾದ ಅಂಶಗಳನ್ನು ತಮ್ಮಲ್ಲಿ ಧ್ವನಿಗೂಡಿಸಿಕೊಂಡಿದ್ದಾರೆ. ಶಾಸ್ತ್ರೀಯ ಸಂಗೀತ ಹಾಗೂ ದಾಸವಾಣಿ ಎರಡೂ ಶೈಲಿಯ ಗಾಯನದಲ್ಲಿ ಸಿದ್ಧಹಸ್ತರು. ಆಕಾಶವಾಣಿ ಹಾಗೂ ದೂರದರ್ಶನದ 'ಎ' ಶ್ರೇಣಿಯ ಕಲಾವಿದರು.

ಧಾರವಾಡ, ಬೆಳಗಾವಿ, ಗುಲ್ಬರ್ಗ, ಬೆಂಗಳೂರು, ಮೈಸೂರು, ಶಿವಮೊಗ್ಗ, ತಿರುಪತಿ, ಬಳ್ಳಾರಿ, ಕಾರವಾರ, ಕುಂದಗೋಳ ಎಲ್ಲ ಸ್ಥಳಗಳ ಪ್ರತಿಷ್ಠಿತ ಸಂಸ್ಥೆಯ ಆಶ್ರಯದಲ್ಲಿ ಹಾಡಿದ್ದಾರೆ. ಹೊರರಾಜ್ಯದ ನಗರಗಳಾದ

ಮುಂಬಯಿ, ಕಲ್ಕತ್ತ, ದೆಹಲಿ, ಪುಣೆ, ಹೈದರಾಬಾದ್, ಎಲ್ಲೆಡೆ ಕಚೇರಿ ನಡೆಸಿದೆ. ಗುರುಗಳ ಜೊತೆಗೆ ಸಹಗಾಯನಕ್ಕೆಂದು ಅಮೇರಿಕಾ, ಇಂಗ್ಲೆಂಡ್, ದುಬೈ ಮುಂತಾದ ಹೊರದೇಶಗಳಿಗೆ ಹೋಗಿ ಬಂದಿದ್ದಾರೆ.

೧೯೯೫ ರ ಸಾಲಿನ ರಾಜ್ಯಸಂಗೀತ ನೃತ್ಯ ಅಕಾಡೆಮಿಯ 'ಕರ್ನಾಟಕ ಕಲಾಶ್ರೀ' ಪ್ರಶಸ್ತಿ ಇವರಿಗೆ ಸಂದಿದೆ. ಉತ್ತಮ ಗುರುಗಳಾಗಿ ಹಲವಾರು ಶಿಷ್ಯರಿಗೆ ವಿದ್ಯಾದಾನ ಮಾಡುತ್ತಿದ್ದಾರೆ.

**ಶ್ರೀಹನುಮಂತಸಿಂಗ್ ಹಾನಗಲ್**

೧-೧೦-೧೯೪೪ ರಂದು ಹಾನಗಲ್‌ದಲ್ಲಿ ಜನಿಸಿದರು. ಎಸ್. ಎಸ್. ಎಲ್. ಸಿ. ಸಂಗೀತ ವಿಶಾರದ ಮತ್ತು ವಿದ್ವತ್ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿದ್ದರು. ತಂದೆ ಜಾನಪದ ಗಾಯಕರು, ಬಾಲ್ಯದಲ್ಲಿ ಭಜನೆ, ನಾಟಕ ಹಾಡುಗಳನ್ನು ಹಾಡುತ್ತಿದ್ದರು. ಮರೋಳ ನೀಲಕಂಠಬುವಾ ಅವರಲ್ಲಿ ಶಿಷ್ಯ ವೃತ್ತಿ ಮಾಡಿ ಗಾಯನ, ಹಾರ್ಮೋನಿಯಂ ವಾದನವನ್ನು ಕಲಿತರು. ಗದುಗಿನ ವೀರೇಶ್ವರ ಪುಣ್ಯಾಶ್ರಮದಲ್ಲಿ ಪುಟ್ಟರಾಜ ಗವಾಯಿಗಳ ಆಶ್ರಮದಲ್ಲಿ ಸಂಗೀತ ಸಾಧನೆ ನಡೆಸಿದರು. ಅಲ್ಲೇ ಪ್ರಾಧ್ಯಾಪಕರಾಗಿದ್ದಾರೆ. ಬಸವರಾಜ ರಾಜಗುರುಗಳಲ್ಲಿಯೂ ಸಂಗೀತದಲ್ಲಿ ಉನ್ನತ ಶಿಕ್ಷಣ ಪಡೆದಿದ್ದಾರೆ.

ಕುಂದಗೋಳದಲ್ಲಿ ೧೯೬೪ ರಲ್ಲಿ ಮೊದಲ ಕಚೇರಿ ನಡೆಯಿತು. ಆಕಾಶವಾಣಿ ಧಾರವಾಡದಿಂದ ಇವರ ಕಾರ್ಯಕ್ರಮಗಳು ಪ್ರಸಾರವಾಗುತ್ತಿವೆ. ಎಚ್. ಎಂ.ವಿ. ಕಂಪನಿಯಿಂದ ಇವರ ಕೆಲವು ಧ್ವನಿ ಮುದ್ರಿಕೆಗಳು ಪ್ರಕಟವಾಗಿವೆ. 'ಗಾಯನ ಕಲಾ ಕುಶಲ' ಎಂಬ ಪ್ರಶಸ್ತಿ ದೊರೆತಿದೆ.

**ಶ್ರೀಮತಿ ನೀಲಾ ಎಂ. ಕೊಡ್ಲಿ**

ಇವರ ತಂದೆ ಮಲ್ಲಿಕಾರ್ಜುನ್ ಮನ್ಸೂರ್. ಇವರು ಸುಗಮ ಸಂಗೀತ ಹಾಗೂ ಶಾಸ್ತ್ರೀಯ ಸಂಗೀತ ಹಾಡುಗಾರಿಕೆಯಲ್ಲಿ ಪ್ರಾವಿಣ್ಯತೆಯನ್ನು ಪಡೆದಿದ್ದರು. ಇವರ ಪತಿ ಡಾ. ಎಂ. ಸಿ. ಕೊಡ್ಲಿ. ಇವರು ತಮ್ಮ ಸಂಗೀತ ಶಿಕ್ಷಣವನ್ನು ಚಿಕ್ಕಪ್ಪ ಬಸವರಾಜ್ ಅವರಲ್ಲಿ ನಂತರ ತಂದೆ ಶ್ರೀ ಮಲ್ಲಿಕಾರ್ಜುನ ಮನ್ಸೂರ ಅವರಲ್ಲಿ ಪಡೆದರು.

ಜೈಪುರ್ ಘರಾಣೆಯನ್ನು ಸುಮಾರು ೩೦ ವರ್ಷಗಳಿಂದ ಕಲಿತು ಸೇವೆ ಸಲ್ಲಿಸುತ್ತಿದ್ದಾರೆ. ಇವರು ಸಂಗೀತ ರತ್ನ ಪರೀಕ್ಷೆಯಲ್ಲಿ ತೇರ್ಗಡೆಯಾಗಿದ್ದು, ಆಕಾಶವಾಣಿ ಕಲಾವಿದರೂ ಆಗಿರುತ್ತಾರೆ. ಸುಗಮ ಸಂಗೀತದ ಎಲ್ಲ ಪ್ರಕಾರಗಳನ್ನು ಇವರು ಬಲ್ಲವರಾಗಿದ್ದು ಅನೇಕ ಶಿಷ್ಯರಿಗೆ ಸಂಗೀತ ಶಿಕ್ಷಣ ನೀಡುತ್ತಿದ್ದಾರೆ.

ದೇಶದ ಅನೇಕ ಕಡೆ ತಮ್ಮ ಸಂಗೀತ ಕಾರ್ಯಕ್ರಮ ನೀಡದ್ದಾರೆ. ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಆಶ್ರಯದಲ್ಲಿ ಅನೇಕ ಕಾರ್ಯಕ್ರಮಗಳನ್ನು ನೀಡಿದ್ದಾರೆ. ಇವರಿಗೆ ಕರ್ನಾಟಕ ವಿಶ್ವವಿದ್ಯಾಲಯ 'ಸಂಗೀತ ರತ್ನ' ಪ್ರಶಸ್ತಿಯನ್ನು ನೀಡಿ ಗೌರವಿಸಿದೆ.

### ಶ್ರೀಮತಿ ಅಕ್ಕಮಹಾದೇವಿ

೨೮-೪-೧೯೫೬ ರಂದು ಧಾರವಾಡದಲ್ಲಿ ಜನಿಸಿದ ಇವರ ತಂದೆ ದಿವಂಗತ ಜಿ. ಎಸ್ ಹಿರೇಮಠ ಪ್ರಸಿದ್ಧ ತಬಲಾ ವಾದಕರಾಗಿದ್ದರು. ಧಾರವಾಡ ಆಕಾಶವಾಣಿಯಲ್ಲಿ ನಿಲಯ ಪಿಟೀಲು ಕಲಾವಿದರಾದ ಜಿ. ಎಸ್ ಮಠ ಇವರಿಂದ ಪಿಟೀಲು ವಾದನದಲ್ಲಿ ಶಿಕ್ಷಣ: ತಂದೆಯಿಂದಲೂ ಮಾರ್ಗದರ್ಶನ.

೧೯೭೭ ರಲ್ಲಿ ಆಕಾಶವಾಣಿ ಸಂಗೀತ ಸ್ಪರ್ಧೆಯಲ್ಲಿ ಮೊದಲನೆಯ ಸ್ಥಾನಗಳಿಕೆ, ಕರ್ನಾಟಕ ಸರ್ಕಾರದಿಂದ ಪ್ರೌಢ ಸಂಗೀತಾಭ್ಯಾಸಕ್ಕೆ ಶಿಷ್ಯವೇತನ, ಗೋವಾ ಆಕಾಶವಾಣಿ ಕೇಂದ್ರದಲ್ಲಿ ನಿಲಯ ಪಿಟೀಲು ಕಲಾವಿದೆಯಾಗಿ ಉದ್ಯೋಗ. ಹುಬ್ಬಳ್ಳಿಯ ಕಲಾಕಾರ ಮಂಡಳಿ, ಕಲ್-ಕೆ-ಕಲಾಕಾರ ಉತ್ಸವ, ಕುಂದಗೋಳ, ಗದಗ, ಧಾರವಾಡ, ಬಾದಾಮಿ, ಬಿಜಾಪುರ, ಶಿವಮೊಗ್ಗ, ಹೈದರಾಬಾದ್, ದೆಹಲಿ, ಬೆಂಗಳೂರು, ಮಹಾರಾಷ್ಟ್ರದ ಪೂನಾ, ಔರಂಗಾಬಾದ್, ಜಳಗಾಂವ್, ನಾಗಪುರ ಕೇಂದ್ರಗಳಿಂದಲೂ ಇವರ ಪಿಟೀಲು ಕಾರ್ಯಕ್ರಮ ಪ್ರಸಾರವಾಗಿವೆ. ಅನೇಕ ಉತ್ಸವಗಳಲ್ಲಿ ಭಾಗವಹಿಸಿದ್ದಾರೆ. ಪ್ರಸ್ತುತ ಆಕಾಶವಾಣಿ ಗೋವಾ ಕೇಂದ್ರದಲ್ಲಿ ನಿಲಯದ ಕಲಾವಿದೆಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

### ಶ್ರೀಮತಿ ಶಾಮಲಾ ಕೆ.ಕುಲಕರ್ಣಿ

೨೬-೭-೧೯೫೨ ರಂದು ಗದಗ ಜಿಲ್ಲೆಯ ಹರ್ತಿಯಲ್ಲಿ ಜನಿಸಿದ ಇವರು ಬಾಲ್ಯದಲ್ಲಿ ತಾಯಿಯಿಂದ ಶಿಕ್ಷಣ, ಅನಂತರ ಬೆಳಗಾವಿಯ ಆರ್.ಕೆ. ಬಿಜಾಪುರೆ ಅವರ ಬಳಿಯಲ್ಲಿ, ಹುಬ್ಬಳ್ಳಿಯ ಆರ್. ಎಸ್. ಜಂತಲಿಯವರಲ್ಲಿ ಪ್ರೌಢ ಸಂಗೀತಾಭ್ಯಾಸ ಮುಂದುವರಿಕೆ.

೧೯೬೬ ನೆಯ ಇಸವಿಯಲ್ಲಿ ಹುಬ್ಬಳ್ಳಿಯಲ್ಲಿ ಮೊದಲ ಕಚೇರಿ. ಮುಂದೆ ಕೊಪ್ಪಳ, ದಾವಣಗೆರೆ, ಧಾರವಾಡ, ಹುಬ್ಬಳ್ಳಿ, ಅಣ್ಣಿಗೇರಿ ಮುಂತಾದ ಕಡೆ ಅನೇಕ ಉತ್ಸವಗಳಲ್ಲಿ, ವಿಶೇಷ ಸಂದರ್ಭಗಳಲ್ಲಿ ಗಾಯನ ಕಚೇರಿ ಮಾಡಿದ್ದಾರೆ. ಹಾರ್ಮೋನಿಯಂ ವಾದನದಲ್ಲೂ ಪರಿಶ್ರಮ ಉಂಟು ಆಕಾಶವಾಣಿಯ ಮೂಲಕ ಸುಗಮ ಸಂಗೀತವೂ ಪ್ರಸಾರವಾಗುತ್ತಿದೆ. ಹುಲಕೋಟೆಯಲ್ಲಿ ಶಾಲೆಯೊಂದರಲ್ಲಿ ಶಿಕ್ಷಕಿ, ಹವ್ಯಾಸಿ ಕಲಾವಿದೆ.

### ಶ್ರೀ ರವೀಂದ್ರ ಆರ್. ಯಾವಗಲ್

೨೭-೧೧-೧೯೫೫ ಹುಬ್ಬಳ್ಳಿಯಲ್ಲಿ ಜನಿಸಿದ ಇವರು ಬಿ. ಎಸ್ಸಿ. ಪದವೀಧರರು. ಪ್ರಾರಂಭದಲ್ಲಿ ತಂದೆಯಿಂದಲೇ ತಬಲಾವಾದನಲ್ಲಿ ಶಿಕ್ಷಣ. ಅನಂತರ ವೀರಣ್ಣ ಕಾವಕಾರ ಹಾಗೂ ಶೇಷಗಿರಿ ಹಾನಗಲ್ ಅವರಲ್ಲಿ ೧೩. ವರ್ಷಗಳು ಸತತ ಪ್ರೌಢಶಿಕ್ಷಣ.

ಬಾಲ್ಯದಲ್ಲಿ ಕುಂದಗೋಳದಲ್ಲಿ ನಡೆದ ಉತ್ಸವದಲ್ಲಿ ಮೊದಲ ಕಚೇರಿ. ಮುಂದೆ ದೆಹಲಿ, ಭೂಪಾಲ್, ಗ್ವಾಲಿಯರ್, ಪುಣೆ, ಕಲ್ಕತ್ತೆ, ಮುಂಬೈ, ಬೆಂಗಳೂರು, ಬರೋಡ, ಕೊಚ್ಚಿ, ಕಲ್ಲಿಕೋಟೆ, ಮೈಸೂರು, ಹುಬ್ಬಳ್ಳಿ, ಧಾರವಾಡ ಮುಂತಾದ ನಗರಗಳಲ್ಲಿ ನಡೆದ ಉತ್ಸವಗಳಲ್ಲಿ ಪ್ರಮುಖ ಸಂಸ್ಥೆಗಳ ಆಶ್ರಯದಲ್ಲಿ ಪ್ರಖ್ಯಾತ ಕಲಾವಿದರಿಗೆ ತಬಲಾ ಸಾಥಿ ನೀಡಿದ್ದಾರೆ.

೧೯೭೭ ರಲ್ಲಿ ಧಾರವಾಡ ಆಕಾಶವಾಣಿ ಕೇಂದ್ರದ ತಬಲಾ ನಿಲಯ ಕಲಾವಿದರಾಗಿದ್ದು, ೧೯೮೧ ರಿಂದ ಬೆಂಗಳೂರು ಆಕಾಶವಾಣಿ ನಿಲಯ ಕಲಾವಿದರಾಗಿ ಕೆಲಸ ಮಾಡುತ್ತಿದ್ದಾರೆ. ಅತ್ಯಂತಪ್ರತಿಭಾನ್ವಿತ ಕಲಾವಿದರೆನಿಸಿಕೊಂಡಿರುವ ರವೀಂದ್ರ ಯಾವಗಲ್ ಅವರು ಬಹುತೇಕ ಎಲ್ಲಾ ಮುಂಚೂಣಿಯ ಕಲಾವಿದರಿಗೆ ತಬಲಾ ನುಡಿಸಿದ್ದಾರೆ. ವಿದೇಶ ಪ್ರವಾಸ ಕೈಗೊಂಡು ಖ್ಯಾತಿ ಗಳಿಸಿದ್ದಾರೆ.

**ಶ್ರೀ ಸೂರಜ ರಾಜೀವ ಪುರಂದರೆ**

೧೦-೬-೧೯೪೯ ರಲ್ಲಿ ಗದಗದಲ್ಲಿ ಇವರ ಜನನವಾಯಿತು. ತಂದೆ ರಾಜೀವ ಮಲ್ಲಾರಿರಾವ್ ಪುರಂದರೆ ಸಂಗೀತ ಕಲಾವಿದರು. ಶೇಷಗಿರಿ ಹಾನಗಲ್ಲ ಹಾಗೂ ಬಸವರಾಜ ಬೆಂಡಿಗೇರಿ ಇವರುಗಳಲ್ಲಿ ತಬಲಾವಾದನ ಶಿಕ್ಷಣ. ಗಂಧರ್ವ ಮಹಾವಿದ್ಯಾಲಯದ ಸಂಗೀತ ವಿಶಾರದ ಪರೀಕ್ಷೆಯಲ್ಲಿ ತೇರ್ಗಡೆ, ಆಕಾಶವಾಣಿ ಸ್ಪರ್ಧೆಯಲ್ಲಿ ಬಂಗಾರದ ಪದಕ ಗಳಿಕೆ.

ಭೀಮಸೇನ ಜೋಶಿ, ಬಸವರಾಜ ರಾಜಗುರು, ಕೃಷ್ಣಾ ಹಾನಗಲ್ಲ ಮುಂತಾದ ಅನೇಕ ಖ್ಯಾತ ಗಾಯಕ-ಗಾಯಕಿಯರಿಗೆ ಸಾಥಿ ನೀಡಿದ್ದಾರೆ. ಆಕಾಶವಾಣಿಯ ಧಾರವಾಡದ ನಿಲಯದ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

**ಶ್ರೀ ರಘುನಾಥ್ ನಾಕೋಡ್**

೧೭-೧-೧೯೫೪ ರಂದು ಧಾರವಾಡದಲ್ಲಿ ಜನಿಸಿದರು. ಪ್ರಸಿದ್ಧ ಸಂಗೀತಗಾರರ ಮನೆತನ. ತಂದೆ ಪಂ. ಅರ್ಜುನ್ ಸಾ ನಾಕೋಡ, ತಮ್ಮಂದಿರುಗಳಾದ ವಿಶ್ವನಾಥ್, ರಾಜೇಂದ್ರ ಪ್ರಸಿದ್ಧ ತಬಲಾ ವಾದಕರು. ಮತ್ತೊಬ್ಬ ಸಹೋದರ ಬಾಲಚಂದ್ರ ಉತ್ತಮ ಗಾಯಕರು.

ಇವರು ಪ್ರಾರಂಭಿಕ ತಬಲ ಶಿಕ್ಷಣವನ್ನು ಹುಬ್ಬಳ್ಳಿಯ ಶ್ರೀ ವೀರಣ್ಣ ಕಾಮಕರ್ ಅವರಲ್ಲಿ, ನಂತರ ಶ್ರೀ ಬಸವರಾಜ ಬೆಂಡಿಗೇರಿ ಹಾಗೂ ಹೈದರಾಬಾದಿನ ಉಸ್ತಾದ್ ಶೇಖ್ ದಾವೂದ್ ಖಾನ್ ಮತ್ತು ಅವರ ಮಗ ಶಬ್ಬೀರ್ ದಾವೂದ್ ಅಲ್ಲದೆ ದಾವೂದ್ ಖಾನರ ಶಿಷ್ಯ ನಂದಕುಮಾರ್ ಅವರಲ್ಲಿ ಪಡೆದರು. ಇವರು ಸಮರ್ಥ ತಬಲಾ ಸಾಥ್ ಹಾಗೂ ಸೋಲೋ ಕಲಾವಿದರು.

ಪೂರಬ್, ದಿಲ್ಲಿ, ಅಜರಡಾ ಹಾಗೂ ಪಂಜಾಬಿ ಬಾಜುಗಳ ಆಳವಾದ ಅಭ್ಯಾಸ ಇವರಿಗಿದೆ. ಆಕಾಶವಾಣಿಯ 'ಎ' ಟಾಪ್ ಶ್ರೇಣಿಯ ಕಲಾವಿದರು. ಹೆಸರಾಂತ ಗಾಯಕರುಗಳಾದ ಪಂ. ಮಲ್ಲಿಕಾರ್ಜುನ ಮನ್ಸೂರ್, ಡಾ. ಬಸವರಾಜ ರಾಜಗುರು, ಪಂಡಿತ ಪುಟ್ಟರಾಜ ಗವಾಯಿಗಳು, ಬೇಗಂ ಪರ್‌ವೀನ್ ಸುಲ್ತಾನ್, ಡಾ. ಎನ್. ರಾಜಂ ಅವರುಗಳಿಗೆ ಸಾಥ ಮಾಡಿದ್ದಾರೆ. ತಬಲಾ ಮಾಂತ್ರಿಕ ಉಸ್ತಾದ್ ಝಾಕೀರ್ ಹುಸೇನರೊಡನೆ ಜುಗಲಬಂದಿ ಕಾರ್ಯಕ್ರಮದಲ್ಲಿ ಭಾಗವಹಿಸಿ ಅವರಿಂದ ಪ್ರಶಂಸೆಗೆ ಪಾತ್ರರಾಗಿದ್ದಾರೆ.

೧೯೮೮ ರಲ್ಲಿ ಲಂಡನ್ನಿನ ಮ್ಯಾಂಚೆಸ್ಟರ್ ವಿಶ್ವ ಕನ್ನಡ ಸಮ್ಮೇಳನದಲ್ಲಿ ಭಾಗವಹಿಸಿದ್ದರು. ೧೯೯೪ ರಲ್ಲಿ ಫ್ರಾನ್ಸ್‌ನ ಕಲಾವಿಸ್ತಾರ ಸಂಸ್ಥೆಯವರು ಇವರನ್ನು ತಬಲಾ ಸಾಥಿಗಾಗಿ ಆಹ್ವಾನಿಸಿ ಗೌರವಿಸಿದ್ದರು. ಅನೇಕ ರಾಜ್ಯ ಮತ್ತು ರಾಷ್ಟ್ರಮಟ್ಟದ ಉತ್ಸವಗಳಲ್ಲಿ ಭಾಗವಹಿಸಿದ್ದಾರೆ.

೧೯೯೨ ರಲ್ಲಿ ಕರ್ನಾಟಕ ಸರಕಾರ 'ರಾಜ್ಯೋತ್ಸವ ಪ್ರಶಸ್ತಿ' ಯನ್ನು ನೀಡಿ ಗೌರವಿಸಿದೆ. ಸದ್ಯ ಆಕಾಶವಾಣಿಯ ಧಾರವಾಡ ಕೇಂದ್ರದ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಅಪಾರ ಶಿಷ್ಯವೃಂದವನ್ನು ಹೊಂದಿದ್ದಾರೆ.

## ಡಾ. ರಾಚಯ್ಯಾ ಎಸ್. ಹಿರೇಮಠ

ಇವರು ೨-೫-೧೯೫೧ ರಂದು ಜನಿಸಿದರು. ಧಾರವಾಡದ ಪಂ. ಬಸವರಾಜ ಬೆಂಡಿಗೇರಿ ಹಾಗೂ ಉಸ್ತಾದ ಮಮ್ಮೂಲಾಲ ಸಾವಗಾಂವಕರಿಂದ ತಬಲಾ ಮಾರ್ಗದರ್ಶನ. ಮಿರಜ್‌ನ ಅಖಿಲ ಭಾರತೀಯ ಗಂಧರ್ವ ಮಹಾವಿದ್ಯಾಲಯದಿಂದ ಸಂಗೀತ ಅಲಂಕಾರ ಮತ್ತು ಕರ್ನಾಟಕ ಸರಕಾರದ ಪರೀಕ್ಷಾ ಮಂಡಲಿಯಿಂದ ತಬಲಾ ಪ್ರೊಫಿಷಿಯೆನ್ಸಿ ಪದವಿಗಳು. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದಿಂದ ತಬಲಾದಲ್ಲಿ ಪಿಎಚ್.ಡಿ. ಪದವಿ. ಧಾರವಾಡ ವಿಶ್ವವಿದ್ಯಾಲಯದ ಸಂಗೀತ ಮಹಾ ವಿದ್ಯಾಲಯದಲ್ಲಿ ತಬಲಾ ಉಪನ್ಯಾಸಕರು.

ನಾಡಿನ ಖ್ಯಾತ ಸಂಗೀತಗಾರರರಾದ ಪಂಡಿತ ಮಲ್ಲಿಕಾರ್ಜುನ ಮನ್ಸೂರ, ಪಂಡಿತ ಬಸವರಾಜ ರಾಜಗುರು, ಪಂಡಿತ ಪಂಚಾಕ್ಷರಸ್ವಾಮಿ ಮತ್ತಿಗಟ್ಟಿ, ಪಂಡಿತ ಪ್ರಭುದೇವ ಸರದಾರ, ಪಂಡಿತ ಸಂಗಮೇಶ್ವರ ಗುರವ ಹಾಗೂ ವಿದುಷಿ ಪದ್ಮಾವತಿ ಸಾಲಿಗ್ರಾಮ, ಪ್ರಖ್ಯಾತ ಬೀನ್‌ವಾದಕ ಡಾ. ಬಿಂದುಮಾಧವ ಪಾಠಕ್, ಸರೋದ್‌ವಾದಕ ಬಿಸ್ವಜಿತ್ ರಾಯ್ ಚೌಧರಿ, ಪಿಟೀಲು ವಾದಕರುಗಳಾದ ಬಿ. ಎಸ್. ಮಠ ಹಾಗೂ ಪಂ. ವಿ.ಜಿ. ಜೋಗ್ ಇವರೆಲ್ಲರಿಗೆ ಪಕ್ಕವಾದ್ಯ ನುಡಿಸಿರುವ ಹೆಗ್ಗಳಿಕೆ.

೧೯೮೫ ರಲ್ಲಿ ಪ್ರಖ್ಯಾತ ಸಿತಾರವಾದಕ ಧಾರವಾಡದ ಶ್ರೀ ಎಸ್. ಎಚ್. ತರಲಘಟ್ಟಿಯವರೊಂದಿಗೆ ಫ್ರಾನ್ಸ್ ದೇಶಕ್ಕೆ ಪ್ರವಾಸ. ವಿದೇಶಿಯರಿಗೆ ಪೌರ್ವಾತ್ಯ ಸಂಗೀತದ ರಸದೂಟ. ೧೯೯೪ ರಲ್ಲಿ ಪ್ರಖ್ಯಾತ ಗಾಯಕ ಪಂ. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿಯವರೊಡನೆ ಇಂಗ್ಲೆಂಡ್‌ಗೆ ಪ್ರವಾಸ. ಆಕಾಶವಾಣಿಯಲ್ಲಿ 'ಬಿ-ಹೈ' ಶ್ರೇಣಿ ಕಲಾವಿದರು. ಧಾರವಾಡ ಆಕಾಶವಾಣಿಯ ಮಂಗಳವಾರದ ಸಂಗೀತ ಕಾರ್ಯಕ್ರಮದಲ್ಲಿ ತಬಲಾ ನುಡಿಸಾಣಿಕೆ ಕುರಿತು ಪ್ರಸಾರ ೧೯೮೭ ಹೈದರಾಬಾದ್ ದೂರದರ್ಶನದಿಂದಲೂ ಇವರ ಕಾರ್ಯಕ್ರಮ ಪ್ರಸಾರವಾಗಿದೆ.

**ಶ್ರೀ ಶಂಕರ ಕವಡಿಮಟ್ಟಿ**

ಇವರು ೧-೬-೧೯೫೧ ರಂದು ಗಜೇಂದ್ರಗಡದಲ್ಲಿ ಜನಿಸಿದರು. ಸಂಗೀತಗಾರರ ಮನೆತನದಲ್ಲಿ ಹುಟ್ಟಿದ ಇವರಿಗೆ ಮೊದಲಿನಿಂದಲೂ ಸಂಗೀತದ ಬಗ್ಗೆ ಆಸಕ್ತಿ ಇತ್ತು. ದೊಡ್ಡಪ್ಪ ಶೀಲಪ್ಪ ಕವಡಿಮಟ್ಟಿ ಇವರ ಸಂಗೀತ ಶಿಕ್ಷಕರಾಗಿದ್ದರು. ಎಸ್.ಎಸ್.ಎಲ್.ಸಿ. ಯವರೆಗೆ ವ್ಯಾಸಂಗ ಮುಗಿಸಿದ ಇವರು ಟಿ.ಪಿ.ಚವ್ಹಾಣ, ಕೆ. ಎಸ್. ಹಡಪದ, ಜಿ. ಎಸ್. ಬೆಂಡಿಗೇರಿ ಇವರುಗಳಲ್ಲಿ ಪ್ರೌಢ ಸಂಗೀತ ಹಾಗೂ ತಬಲಾವಾದನ ಶಿಕ್ಷಣ. ವಿದ್ವತ್ ಹಾಗೂ ಗಂಧರ್ವ ಮಹಾವಿದ್ಯಾಲಯದ ಅಲಂಕಾರ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿದೆ.

**ಶ್ರೀ ಎಂ. ವೆಂಕಟೇಶ್ ಕುಮಾರ**

ಜಾನಪದ ಕಲಾಪರಂಪರೆಯುಳ್ಳ ಕಲಾವಿದರ ಮನೆತನದಲ್ಲಿ ಎಂ. ವೆಂಕಟೇಶ್ ಕುಮಾರ ಇವರು ೧-೭-೧೯೫೩ ರಂದು ಬಳ್ಳಾರಿ ಜಿಲ್ಲೆಯ ಲಕ್ಷ್ಮೀಪುರ ಗ್ರಾಮದಲ್ಲಿ ಜನಿಸಿದರು.

ತಮ್ಮ ೧೩ ನೇ ವಯಸ್ಸಿಗೆ ಸಂಗೀತದ ಶಾಸ್ತ್ರೋಕ್ತ ಕಲಿಕೆ ಆರಂಭ. ಗದುಗಿನ ಶ್ರೀವೀರೇಶ್ವರ ಪುಣ್ಯಾಶ್ರಮದ ಪಂಡಿತ ಪುಟ್ಟರಾಜ ಗವಾಯಿಗಳ ಮಾರ್ಗದರ್ಶನ. ಗುರುಕುಲ ಮಾದರಿಯಲ್ಲಿ ಸಂಗೀತಾಭ್ಯಾಸ. ವಿದ್ವತ್ ವಿಶಾರದ ಹಾಗೂ ಅಲಂಕಾರ ಪರೀಕ್ಷೆಗಳಲ್ಲಿ ಅದ್ಭುತ ಯಶ ಸಾಧಿಸಿ, ಧಾರವಾಡದ ವಿಶ್ವವಿದ್ಯಾಲಯದಲ್ಲಿ ಸಂಗೀತ ವಿಭಾಗದಲ್ಲಿ ಉಪನ್ಯಾಸಕರಾಗಿದ್ದಾರೆ.

ಇವರು ಗದಗ, ಕುಂದಗೋಳ, ಧಾರವಾಡ, ಬೆಳಗಾವಿ, ಮೈಸೂರು, ಬೆಂಗಳೂರು, ಬಳ್ಳಾರಿ, ಗುಲ್ಬರ್ಗ, ಬೀದರ್, ಮಂಗಳೂರು, ಉಡುಪಿ, ಶಿವಮೊಗ್ಗ, ವಿಜಾಪುರ ಮುಂತಾದ ಕಡೆಗಳಲ್ಲಿ ಸಂಗೀತ ಕಾರ್ಯಕ್ರಮ ನೀಡಿ ಜನಮನ್ನಣೆಗಳಿಸಿದ್ದಾರೆ. ಹಂಪಿ, ನವರಸಪುರ, ಲಕ್ಕುಂಡಿ, ಕಿತ್ತೂರು, ಸಹ್ಯಾದ್ರಿ ಉತ್ಸವಗಳಲ್ಲಿ ಪಾಲ್ಗೊಂಡಿದ್ದಾರೆ. ಭಾರತೀಯ ಸಾಹಿತ್ಯ ಸಮ್ಮೇಳನ, ಹುಬ್ಬಳ್ಳಿ, ಕೊಪ್ಪಳಗಳಲ್ಲಿ ಆಕಾಶವಾಣಿ ಏರ್ಪಡಿಸಿದ್ದ ಸಂಗೀತ ಕಚೇರಿ, ೧೯೯೭ ರಲ್ಲಿ ರಾಷ್ಟ್ರೀಯ ಸಂಗೀತ ಕಾರ್ಯಕ್ರಮ ಜಾಲದಲ್ಲಿ ಇವರ ಕಚೇರಿ ಪ್ರಸಾರವಾಗಿದೆ.

ಪುಣೆಯ ಸವಾಯಿ ಗಂಧರ್ವ ಸಂಗೀತೋತ್ಸವ, ಅಲ್ಲಾದಿಯಾಖಾನ್ ಸಂಗೀತ ಸಮಾರೋಹ ದೆಹಲಿ, ಭೂಪಾಲ, ನಾಗಪುರ, ಔರಂಗಾಬಾದಗಳಲ್ಲೂ, ೧೯೯೮ ರಲ್ಲಿ ಮುಂಬೈನಲ್ಲಿ ನಡೆದ ಭಾಸ್ಕರ ಬುವಾ ಬಾಖಲೆ ಸಂಗೀತ ಸ್ಮರಣೋತ್ಸವ, ಅಲ್ಲದೆ, ೧೯೯೯ ರಲ್ಲಿ ಎನ್. ಸಿ. ಪಿ. ಸಿ. ಕಾರ್ಯಕ್ರಮದಲ್ಲೂ ಭಾಗವಹಿಸಿದ್ದಾರೆ. ದಾಸರ ಪದಗಳು ಹಾಗೂ ಶರಣರ ವಚನಗಳು ಈ ಕಲಾವಿದರ ಕಂಠಶ್ರೀಯಿಂದ ಮೂಡಿ ಬಂದಾಗ ಸಹೃದಯನಿಗೆ ಆಗುವ ಆನಂದ ಅಷ್ಟಿಷ್ಟಲ್ಲ. ಹಿಂದೂಸ್ತಾನೀ ರಾಗಗಳ ಬಳಕೆಯನ್ನು ಈ ಎರಡೂ ಸಾಹಿತ್ಯ ಪ್ರಕಾರಗಳಿಗೆ ಅನ್ವಯಿಸುವ ಸಾಮರ್ಥ್ಯ ಮತ್ತು ಪ್ರಸ್ತುತ ಪಡಿಸುವ ರೀತಿ ಅದ್ಭುತ.

### ಶ್ರೀ ಡಿ ಕುಮಾರದಾಸ

ಇವರು ಬಳ್ಳಾರಿ ಜಿಲ್ಲೆಯ ಎಳಬೆಂಚಿ ಗ್ರಾಮದಲ್ಲಿ ೧೨-೫-೧೯೫೪ ರಂದು ಜನಿಸಿದರು. ಎಸ್. ಎಸ್. ಎಲ್. ಸಿ. ಯವರೆಗೆ ವ್ಯಾಸಂಗ ಮುಗಿಸಿದ ಇವರು ಗದುಗಿನ ವೀರೇಶ್ವರ ಪುಣ್ಯಾಶ್ರಮದಲ್ಲಿ ಡಾ. ಪುಟ್ಟರಾಜ ಗವಾಯಿಗಳ ಶಿಷ್ಯರಾಗಿ ಶಿಕ್ಷಣ. ವಿದ್ವತ್ ಹಾಗೂ ವಿಶಾರದ ಪರೀಕ್ಷೆಗಳಲ್ಲಿ ತೇರ್ಗಡೆಯಾಗಿದ್ದು, ಇವರು ಗ್ವಾಲಿಯರ್ ಘರಾಣೆ ಶೈಲಿಯಲ್ಲಿ ಸಾಕಷ್ಟು ಶಿಕ್ಷಣವನ್ನು ಪಡೆದಿದ್ದಾರೆ.

ಧಾರವಾಡದಲ್ಲಿ ನಡೆದ ಉತ್ಸವದಲ್ಲಿ ಮೊದಲ ಕಚೇರಿ, ಮುಂದೆ ಮದ್ರಾಸ್ ಮುಂತಾದ ಕಡೆ ಕಚೇರಿ ಮಾಡಿದ್ದಾರೆ. ಧಾರವಾಡ ಆಕಾಶವಾಣಿ ಕೇಂದ್ರದಿಂದಲೂ ಇವರ ಗಾಯನ ಪ್ರಸಾರವಾಗುತ್ತಿದೆ. ಪ್ರಸ್ತುತ ಆಕಾಶವಾಣಿ ಧಾರವಾಡ ನಿಲಯದ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

### ಶ್ರೀ ಬಾಲಚಂದ್ರ ನಾಕೋಡ

೨-೬-೧೯೫೮ ರಲ್ಲಿ ಇವರ ಜನನವಾಯಿತು. ಸಂಗೀತ ಹಾಗೂ ರಂಗಕಲಾವಿದರ ಮನೆತನ. ತಂದೆ ಪಂಡಿತ ಅರ್ಜುನಸಾ ನಾಕೋಡ ಸಹೋದರರುಗಳಾದ ರಘುನಾಥ್, ವಿಶ್ವನಾಥ್, ರಾಜೇಂದ್ರ ನಾಕೋಡರು ಪ್ರಸಿದ್ಧ ತಬಲಾ ವಾದಕರು.

ಇವರು ತಮ್ಮ ಐದನೇ ವಯಸ್ಸಿನಲ್ಲಿಯೇ ಸಂಗೀತ ಶಿಕ್ಷಣವನ್ನು ತಂದೆಯವರಾದ ಪಂಡಿತ ಅರ್ಜುನ್ ಸಾ ನಾಕೋಡ ಅವರಲ್ಲೇ ಗ್ವಾಲಿಯರ್ ಹಾಗೂ ಕಿರಾಣಾ ಘರಾಣಾದ ಶೈಲಿಯಲ್ಲಿ ಪಡೆದು, ಈಗಲೂ ಅವರ ಬಳಿಯಲ್ಲಿಯೇ ಅಭ್ಯಾಸ ಮಾಡುತ್ತಿದ್ದಾರೆ.

ಇವರು ಅನೇಕ ಸಂಗೀತ ಸಭೆಗಳಲ್ಲಿ ಕಾರ್ಯಕ್ರಮ ನೀಡಿದ್ದಾರೆ. ಔರಂಗಬಾದ್, ಜಳಗಾಂವ, ನಾಗಪೂರ, ಪುಣೆ, ಭೂಪಾಲ ಮುಂತಾದ ಸ್ಥಳಗಳೇ ಅಲ್ಲದೆ ಮೈಸೂರು ದಸರಾ ಸಂಗೀತ ಮಹೋತ್ಸವ, ಆಕಾಶವಾಣಿ ಸಂಗೀತ ಸಮ್ಮೇಳನ, ಪಂಡಿತ ಸವಾಯಿ ಗಂಧರ್ವರ ಪುಣ್ಯತಿಥಿ ಕುಂದಗೋಳ ಮುಂತಾದೆಡೆಗಳಲ್ಲೂ ಕಾರ್ಯಕ್ರಮ ನೀಡಿದ್ದಾರೆ. ಪ್ರಸ್ತುತ ಆಕಾಶವಾಣಿ ಧಾರವಾಡದಲ್ಲಿ 'ಎ' ಶ್ರೇಣಿಯ ನಿಲಯದ ಕಲಾವಿದರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

### ಶ್ರೀ ಷಣ್ಮುಖಾನಂದ ಎಸ್. ಗೊಜನೂರ

ಇವರು ೧-೧-೧೯೫೦ ರಲ್ಲಿ ಜನಿಸಿದರು. ತಂದೆ ಫಕೀರೇಶ ಗೊಜನೂರ. ಪದ್ಮಭೂಷಣ ಡಾ. ಬಸವರಾಜ ರಾಜಗುರು ಅವರಲ್ಲಿ ಹಲವಾರು ವರ್ಷ ಸತತ ಸಂಗೀತಾಭ್ಯಾಸ ನಡೆಸಿದರು.

ಬಿ.ಎ., ಬಿ. ಇಡಿ. ಮತ್ತು ಎಂ. ಮ್ಯೂಸಿಕ್ ಪದವೀದರರು. ಧಾರವಾಡದ ಸಂಗೀತದ ವಾತಾವರಣದಲ್ಲೇ ಬೆಳೆದವರು. ಆಕಾಶವಾಣಿಯಿಂದ ಸುಗಮ ಸಂಗೀತ ಮತ್ತು ಶಾಸ್ತ್ರೀಯ ಸಂಗೀತ ಎರಡರಲ್ಲೂ ಮಾನ್ಯತೆ ಪಡೆದಿರುವ

ಕಲಾವಿದರು. ವೃತ್ತಿಯಿಂದ ಧಾರವಾಡದ ಶಿಕ್ಷಕ ತರಬೇತಿ ಕೇಂದ್ರದಲ್ಲಿ ಸಂಗೀತ ಶಿಕ್ಷಕರು, ಮೈಸೂರು ದಸರಾ ಹಾಗೂ ನಂಜನಗೂಡು ಸಂಗೀತ ಉತ್ಸವದಲ್ಲಿ ಪಾಲ್ಗೊಂಡಿದ್ದಾರೆ.

ರಾಜ್ಯದ ಹಲವೆಡೆ ಯಶಸ್ವಿ ಸಂಗೀತ ಕಾರ್ಯಕ್ರಮ ನೀಡುತ್ತಿದ್ದಾರೆ. ದೂರದರ್ಶನ ಬೆಂಗಳೂರು ಕೇಂದ್ರದಿಂದಲೂ ಇವರ ಕಾರ್ಯಕ್ರಮ ಪ್ರಸಾರವಾಗಿದೆ.

## ಶ್ರೀಮತಿ ಲತಾ ನಾಡಿಗೇರ

೯-೫-೧೯೫೧ ಕಾನ್‌ಗಾಂವ್‌ದಲ್ಲಿ ಜನಿಸಿದ ಇವರು ಎಂ. ಎ. ಪದವೀಧರರು. ಪಂ.ಗುರುರಾವ ದೇಶಪಾಂಡೆ ಅವರಲ್ಲಿ ಸಂಗೀತ ಶಿಕ್ಷಣ. ಕರ್ನಾಟಕ ವಿಶ್ವವಿದ್ಯಾಲಯದಿಂದ ಎಂ. ಮ್ಯೂಸಿಕ್ ಪದವಿ ಪಡೆದಿದ್ದಾರೆ. ಸುಗಮ ಸಂಗೀತ ಗಾಯನದಲ್ಲೂ ಪರಿಶ್ರಮ ಉಂಟು.

೧೯೭೭ ರಲ್ಲಿ ಹುಬ್ಬಳ್ಳಿಯಲ್ಲಿ ಮೊದಲ ಕಚೇರಿ. ರಾಯಚೂರಿನಲ್ಲಿ ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ ಆಶ್ರಯದಲ್ಲಿ, ಬೆಂಗಳೂರಿನಲ್ಲಿ ಪುರಂದರ ದಾಸರ ಆರಾಧನೋತ್ಸವದಲ್ಲಿ ಭಾಗವಹಿಸಿದ್ದಾರೆ. ೧೯೭೬ ರಿಂದ ಹುಬ್ಬಳ್ಳಿಯ ಕಾಲೇಜುವೊಂದರಲ್ಲಿ ಸಂಗೀತ ಅಧ್ಯಾಪಕಿಯಾಗಿ ಕೆಲಸ ಮಾಡುತ್ತಿದ್ದಾರೆ.

## ಡಾ. ಮೀರಾ ಶಿವಶಂಕರ ಗುಂಡಿ

೧೯೫೧ ಬಸವನದುರ್ಗದಲ್ಲಿ ಜನಿಸಿದ ಇವರ ತಂದೆ ವೀರನಗೌಡರು ಸಂಗೀತ ಕಲಾವಿದರು. ಶೈಕ್ಷಣಿಕವಾಗಿ ಬಿ.ಕಾಂ. ಪದವಿಯೊಂದಿಗೆ ಬಿ. ಮ್ಯೂಸಿಕ್ ನಂತರ ಎಂ. ಮ್ಯೂಸಿಕ್ ಪದವಿ ಪಡೆದು, ೧೯೮೪ ರಿಂದ ಕರ್ನಾಟಕ ವಿಶ್ವವಿದ್ಯಾಲಯದ ಉಪನ್ಯಾಸಕರಾಗಿ ಸೇವೆ ಸಲ್ಲಿಸುತ್ತಿದ್ದಾರೆ.

ಬಾಲ್ಯದಿಂದಲೇ ಸಂಗೀತದತ್ತ ಒಲವಿದ್ದ ಡಾ.ಮೀರಾ ಗುಂಡಿಯವರು ಮೊದಲು ಸಂಗೀತ ಕಲಿತದ್ದು ತಂದೆ ಶ್ರೀವೀರನಗೌಡರಿಂದ ಮತ್ತು ಕರ್ನಾಟಕ ಸಂಗೀತವನ್ನು ಶ್ರೀ ಟಿ.ವಿ. ರಾಂಪ್ರಸಾದ ಅವರಲ್ಲಿ. ಅನಂತರ ಹೊಸಪೇಟೆಯ ಕೊಟ್ಟೂರು ಸ್ವಾಮಿ ಮಠದ ಶ್ರೀ ಬಿದರಿ ಕುಮಾರೇಶ್ವರ ಸಂಗೀತ ಪಾಠಶಾಲೆಯಲ್ಲಿ ಶ್ರೀ ಬಸವರಾಜ ಅಮರಗೋಳರಿಂದ ಹಿಂದುಸ್ತಾನಿ ಹಾಡುಗಾರಿಕೆಯಲ್ಲಿ ಮಾರ್ಗದರ್ಶನ. ಸಂಗೀತದ ಸೂಕ್ಷ್ಮಗಳನ್ನು ಕರಗತ ಮಾಡಿಕೊಳ್ಳಲು ಧಾರವಾಡಕ್ಕೆ ಪ್ರಯಾಣ. ಪಂ. ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿಯವರಲ್ಲಿ ೧೫ ವರ್ಷಗಳ ಕಾಲ ಜೈಪುರ ಘರಾಣೆ ಶೈಲಿಯ ತಾಲೀಮು. ೧೯೯೮ ರಿಂದ ಪ್ರೊ. ರಾಜಶೇಖರ ಮನ್ಸೂರರಲ್ಲಿ ಸಂಗೀತಾಭ್ಯಾಸ ಮುಂದುವರಿಸಿದ್ದಾರೆ.

ಹಿಂದುಸ್ತಾನಿ ಸಂಗೀತ ಘರಾಣೆಗಳ ಒಂದು ಅಧ್ಯಯನ ಎಂಬ ವಿಷಯವಾಗಿ ಮಹಾ ಪ್ರಬಂಧ ರಚಿಸಿ ಪಿಎಚ್.ಡಿ. ಪದವಿ ಪಡೆದಿದ್ದಾರೆ.

## ಶ್ರೀಮತಿ ನಂದಾ ಎಂ ಪಾಟೀಲ

೨೨-೭-೧೯೬೩ ರಂದು ಧಾರವಾಡದಲ್ಲಿ ಜನಿಸಿದರು. ಶೇಷಗಿರಿ ದಂಡಾಪುರ, ವಿನಾಯಕ ತೊರವಿ, ನಾರಾಯಣರಾವ್ ಮುಜುಂದಾರ, ಸಂಗಮೇಶ್ವರ ಗುರವ, ಪಂಚಾಕ್ಷರಿಸ್ವಾಮಿ ಮತ್ತಿಗಟ್ಟಿ, ಬಸವರಾಜ ರಾಜಗುರು, ಎ.ಯು. ಪಾಟೀಲ, ಡಾ. ಜಿ.ಡಿ. ಪಾಠಕ್ ಹಾಗೂ ಜಾನಕೀ ಅಯ್ಯರ್ ಇವರುಗಳಿಂದ ಶಿಕ್ಷಣ ಹಾಗೂ ಮಾರ್ಗದರ್ಶನ.

ವಿದ್ವತ್ ಪರೀಕ್ಷೆಯಲ್ಲಿ ಪ್ರಥಮಸ್ಥಾನ, ಕರ್ನಾಟಕ ವಿಶ್ವವಿದ್ಯಾಲಯದಿಂದ ಬಿ.ಮ್ಯೂಸಿಕ್ ಪದವಿ ಗಳಿಕೆ. ಹಾರ್ಮೋನಿಯಂ ವಾದನದಲ್ಲಿ ಪರಿಶ್ರಮ ಇದೆ. ಹುಬ್ಬಳ್ಳಿಯಲ್ಲಿ ಪ್ರಥಮ ಕಚೇರಿ, ಅನಂತರ ಧಾರವಾಡ, ಬೆಂಗಳೂರು, ಕುಂದಗೋಳ, ಗದಗ, ಸವದತ್ತಿ, ಹಾವೇರಿ, ಕಿತ್ತೂರು, ದಾವಣಗೆರೆ, ಹಾನಗಲ್, ಮುಂಡಗೋಡ, ತಾಳಿಕೋಟೆ, ರಾಮದುರ್ಗ, ಕೌಜಲಗಿ ಮುಂತಾದ ಕಡೆ ಕಚೇರಿ ಮಾಡಿದ್ದಾರೆ. ೧೯೭೯ ರಲ್ಲಿ 'ಗಾನಕೋಗಿಲೆ' ಬಿರುದು ಸಂದಿದೆ. ಕರ್ನಾಟಕ ಕಾಲೇಜಿನ ಸಂಗೀತ ವಿಭಾಗದಲ್ಲಿ ಉಪನ್ಯಾಸಕಿಯಾಗಿ ಸೇವೆ ಸಲ್ಲಿಸುತ್ತಿದ್ದಾರೆ.

## ಶ್ರೀಮತಿ ಸುಲಭಾ ದತ್ತಾತ್ರೇಯ ನೀಲರಗಿ

ಪದ್ಮಭೂಷಣ ಡಾ. ಗಂಗೂಬಾಯಿ ಹಾನಗಲ್‌ರವರಲ್ಲಿ ಶಿಷ್ಯತ್ವ ಪಡೆದು, ಹಿಂದೂಸ್ತಾನಿ ಸಂಗೀತ ಗಾಯನದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದಾರೆ.

ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡದಿಂದ ಕಲಾ ಮತ್ತು ವಾಣಿಜ್ಯ ಶಾಸ್ತ್ರದಲ್ಲಿ ಪದವಿ. ಚನ್ನಮ್ಮನ ಕಿತ್ತೂರಿನಲ್ಲಿ ಉಪನ್ಯಾಸಕರು ಹಾಗೂ ಹಿಂದೂಸ್ತಾನಿ ಸಂಗೀತ ವಿಭಾಗದ ಮುಖ್ಯಸ್ಥರಾಗಿ ಸೇವೆ ಸಲ್ಲಿಸುತ್ತಿದ್ದಾರೆ. ಆಕಾಶವಾಣಿಯ 'ಬಿ ಹೈ' ಗ್ರೇಡ್ ಕಲಾವಿದೆ.

ಇವರ ಸಂಗೀತ ಗಾಯನವು ಹುಬ್ಬಳ್ಳಿ, ಧಾರವಾಡ, ಅಥಣಿ, ಶಿವಮೊಗ್ಗ, ಕುಂದಗೋಳ ಮುಂತಾದ ಕಡೆಗಳಲ್ಲದೆ, ಹೊರರಾಜ್ಯಗಳಾದ ಪುಣೆಯ ಸವಾಯಿ ಗಂಧರ್ವ ಸಂಗೀತ ಮಹೋತ್ಸವ, ನಾಗಪುರ ಸೌತ್ ಸೆಂಟ್ರಲ್ ಮ್ಯೂಸಿಕ್ಸ್ ಕಾನ್ಫರೆನ್ಸ್ ಮತ್ತು ಸ್ಪಿಕ್‌ಮ್ಯಾಕ್‌ನಂತಹ ಅನೇಕ ಪ್ರತಿಷ್ಠಿತ ವೇದಿಕೆಗಳಲ್ಲಿ ಯಶಸ್ವಿ ಗಾಯನ ಕಾರ್ಯಕ್ರಮ ನೀಡಿದ್ದಾರೆ ಮತ್ತು ಪತ್ರಿಕೆಗಳ ಪ್ರಶಂಸೆ ಗಳಿಸಿದ್ದಾರೆ.

## ಶ್ರೀ ಹುಮಾಯೂನ್ ಹರ್ಲಾಪೂರ

೧೯೬೩ ರಲ್ಲಿ ಧಾರವಾಡ ಜಿಲ್ಲೆ ಕುಂದಗೋಳ ತಾಲೂಕಿನ ಹರ್ಲಾಪುರದಲ್ಲಿ ಹುಮಾಯೂನ್ ಹುಟ್ಟಿದರು. ಬಾಲ್ಯದಲ್ಲಿದ್ದಾಗ ತಾಯಿ ಹಾಡುತ್ತಿದ್ದ ಬೀಸು ಕಲ್ಲು, ಸೋಬಾನೆ ಪದಗಳು, ತಂದೆ ಹೇಳುತ್ತಿದ್ದ ಶರೀಫರ ಪದಗಳು ಈ ಹುಡುಗ ಸಂಗೀತ ಗುನುಗುವಂತೆ ಮಾಡಿತು. ನಂತರ ಹುಮಾಯೂನ್ ಗೆಳೆಯರ ಭಜನಾ ಬಳಗದೊಂದಿಗೆ ಧ್ವನಿ ಸೇರಿಸತೊಡಗಿದರು.

ಈ ಕಂಠವನ್ನು ಕೇಳಿದವರು ಶಾಸ್ತ್ರಬದ್ಧ ಸಂಗೀತವನ್ನು ಕಲಿಸುವಂತೆ ಒತ್ತಾಯಿಸತೊಡಗಿದರು. ಪಿ.ಯು.ಸಿ. ಶಿಕ್ಷಣ ಪೂರೈಸಿದ ನಂತರ ಗದುಗಿನ ವೀರೇಶ್ವರ ಪುಣ್ಯಾಶ್ರಮದಲ್ಲಿ ನಿರಂತರ ೮ ವರ್ಷ ಹಣೆಗೆ ವಿಭೂತಿ ಹಚ್ಚಿಕೊಂಡು ಕೊರಳಲ್ಲಿ ರುದ್ರಾಕ್ಷಿ ಧರಿಸಿ ಶ್ರದ್ಧಾ ಭಕ್ತಿಯಿಂದ ಸಂಗೀತಾಭ್ಯಾಸ ನಡೆಸಿದರು. ಸಂಗೀತ ಶಾರದೆಯ ಪೂಜೆಯೊಂದಿಗೆ ವಾರಕ್ಕೆ ಎರಡು ಬಾರಿ ನಮಾಜು ಮಾಡುತ್ತ ಸಂಗೀತವನ್ನು ಕಲಿಯಲೇಬೇಕೆಂಬ ಉತ್ಕಟ ಬಯಕೆಗೆ ಧರ್ಮ ಅಡ್ಡಿ ಬರಲಿಲ್ಲ. ಪಂಡಿತ್ ಡಾ. ಪುಟ್ಟರಾಜ ಕವಿ ಗವಾಯಿಗಳ ಹಾಗೂ ಫಕ್ಕೀರೇಶ ಕಣವಿಯವರ ಶಿಷ್ಯರಾಗಿ ಸಂಗೀತ ಕಲಿತು ಕಛೇರಿಗಳನ್ನು ನೀಡತೊಡಗಿದರು.

೧೯೮೮ ರಲ್ಲಿ ಹುಟ್ಟೂರು ತೊರೆದು ಶಿವಮೊಗ್ಗಕ್ಕೆ ಬಂದರು. ಇಲ್ಲಿನ ಗಾನಯೋಗಿ ಪಂಚಾಕ್ಷರಿ ಟ್ರಸ್ಟಿನ ಸದಸ್ಯರಾಗಿ ಪಂಚಾಕ್ಷರಿ ವಿದ್ಯಾಲಯದಲ್ಲಿ ಸಂಗೀತ ಶಿಕ್ಷಕರಾಗಿ ೧೪ ವರ್ಷ ಕೆಲಸ ಮಾಡಿದರು. ಈ ಅವಧಿಯಲ್ಲಿ ಮಲೆನಾಡು ಜಿಲ್ಲೆಯಲ್ಲಿ ಅಲ್ಲಲ್ಲಿ ನಡೆಯುತ್ತಿದ್ದ ಹಿಂದುಸ್ತಾನಿ ಸಂಗೀತ ಕಛೇರಿಗಳ ಸಂಖ್ಯೆಯನ್ನು ಹೆಚ್ಚಿಸಿ ಶ್ರೋತೃಗಳ ಸೆಳೆದರಲ್ಲದೇ ಅನೇಕ ಶಿಷ್ಯಂದಿರನ್ನು ತಯಾರು ಮಾಡಿದರು.

ಪ್ರಸ್ತುತ ಶಿವಮೊಗ್ಗ ತಾಲೂಕಿನ ಆಯನೂರ ಹೋಬಳಿ ವ್ಯಾಪ್ತಿಯ ತಮ್ಮಡಿಹಳ್ಳಿಯ ಸರ್ಕಾರಿ ಶಾಲೆಯ ಸಂಗೀತ ಶಿಕ್ಷಕರಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಅಲ್ಲದೇ ಗುರುರಾಜಕೃಪಾ ಗಾನಮಂದಿರವನ್ನು ನಡೆಸುತ್ತಿದ್ದಾರೆ. ನಟ ಶಾಸಕ ಕುಮಾರ ಬಂಗಾರಪ್ಪ ಕೆಲಕಾಲ ಇವರಲ್ಲಿ ಸಂಗೀತ ಅಭ್ಯಾಸ ಮಾಡಿದ್ದಾರೆ. ಹುಮಾಯೂನ್ ಶಿವಮೊಗ್ಗಕ್ಕಷ್ಟೇ ಸಂಗೀತ ತರಗತಿಗಳನ್ನು ನಡೆಸದೆ ಜಿಲ್ಲೆಯ ತಾಲೂಕು ಕೇಂದ್ರಗಳಾದ ಸಾಗರ, ಸೊರಬ, ತೀರ್ಥಹಳ್ಳಿಯಲ್ಲೂ ಹಿಂದುಸ್ತಾನಿ ಸಂಗೀತದ ಶಿಷ್ಯ ಬಳಗ ಹೊಂದಿದ್ದಾರೆ.

ಇವರ ಸಂಗೀತ ಸೇವೆಯನ್ನು ಗುರುತಿಸಿ ಪಂಡಿತ ಪುಟ್ಟರಾಜ ಕೃಪಾ ಭೂಷಣ, ಸಂಗೀತ ಚತುರ, ಸಂಗೀತ ಕಲಾಭೂಷಣ, ಗಾನ ಸುಧಾಕರ ಹೀಗೆ ಬಿರುದುಗಳನ್ನಿತ್ತು ಗೌರವಿಸಿದೆ. ಇಷ್ಟೆಲ್ಲ ಸಾಧನೆಗಳ ನಡುವೆಯೂ ಹುಮಾಯೂನ್ ಸಂಗೀತದಲ್ಲಿ ತಾವಿನ್ನೂ ವಿದ್ಯಾರ್ಥಿ, ಕಲಿಯುವದಿನ್ನೂ ಸಾಕಷ್ಟಿದೆ ಎಂದು ನಮ್ರವಾಗಿ ಹೇಳುತ್ತಾರೆ.

## ಶ್ರೀ ಹನುಮಂತಪ್ಪ ಅಳಗವಾಡಿ

೭-೩-೧೯೫೫ ನೇ ಇಸವಿಯಲ್ಲಿ ಕುಂದಗೋಳದಲ್ಲಿ ಜನಿಸಿದರು. ತಂದೆಯವರ ಕಾಲದಿಂದ ಚಹಾ-ತಿಂಡಿ ಅಂಗಡಿ ವೃತ್ತಿಯು ನಡೆದು ಬಂದಿದ್ದು ಈಗ ಕುಂದಗೋಳದಲ್ಲಿ ಹನುಮಂತಪ್ಪ ಅಳಗವಾಡಿಯವರ ಚುರಮುರಿ ಮಿರ್ಚಿ ಅಂಗಡಿಯೆಂದೆ ಪ್ರಸಿದ್ಧಿ ಹೊಂದಿದೆ. ವೃತ್ತಿಯಿಂದ ಅಂಗಡಿ ಪ್ರವೃತ್ತಿಯಿಂದ ಸಂಗೀತಗಾರನಾಗಿ ಬೆಳೆದ ಹನುಮಂತಪ್ಪ ಅಳಗವಾಡಿ ಚಿಕ್ಕಂದಿನಲ್ಲಿ ತಂದೆಯವರ ಜೊತೆಗೆ ವಾಡೆಯಲ್ಲಿ ಅಹೋರಾತ್ರಿ ಎರಡು ದಿನ ಸಂಗೀತ ಕಾರ್ಯಕ್ರಮ ನಡೆಯುವದರ ನಿಮಿತ್ತ ಇವರ ಚಹಾ ಅಂಗಡಿಯನ್ನು ವಾಡೆಯ ಸಮೀಪದಲ್ಲಿ ಇಡುತ್ತಿದ್ದರು.

ಬಾಲಕನಿಗೆ ಅಂಗಡಿಯ ಕೆಲಸವನ್ನು ಮಾಡುತ್ತ ಸತತವಾಗಿ ಎರಡು ದಿನಗಳವರೆಗೆ ಸಂಗೀತ ದಿಗ್ಗಜರ ಕಾರ್ಯಕ್ರಮವನ್ನು ಸವಿಯುವ ಅವಕಾಶ ದೊರಕುತ್ತಿತ್ತು. ಅಲ್ಲದೇ ಕುಂದಗೋಳದ ಕುರುಬಗೇರಿ ಓಣಿಯ ಮಾರುತಿ ದೇವಸ್ಥಾನದಲ್ಲಿ ಪ್ರತಿದಿನ ನಡೆಯುವ ಭಜನೆ ಬಾಲಕನಿಗೆ ಸಂಗೀತ ಕಲಿಯಲು ಪ್ರೇರಪಣೆಯನ್ನು ನೀಡಿತು. ಸಂಗೀತದಲ್ಲಿ ಮಗನ ಆಸಕ್ತಿಯನ್ನು ತಿಳಿದು ಇವರ ತಂದೆ ಈತನಿಗೆ ಸಂಗೀತ ಕಲಿಸಲು ಕಿರಾಣಾ ಘರಾಣೆಯ ಪ್ರಸಿದ್ಧ ಗಾಯಕರಾದ ದಿ.ಫಕ್ಕಿರಪ್ಪರ ಹೂಗಾರರಲ್ಲಿ ಸಂಗೀತ ಶಿಕ್ಷಣವನ್ನು ಪಡೆಯಲು ಕಳುಹಿಸಿದರು.

ಕೆಲವು ವರ್ಷಗಳಲ್ಲಿಯೇ ಗುರುಗಳು ನಿಧನರಾದರು. ಪ್ರಯುಕ್ತ ಸಂಗೀತವನ್ನು ಮುಂದುವರಿಸುವ ಮನೋಭಾವನೆಯನ್ನು ಹೊಂದಿದ ಇವರು ಕುಂದಗೋಳದ ನೆರೆಯ ಗ್ರಾಮವಾದಂತಹ ಹಿರೇನರ್ತಿ ಹುಸೇನ ಸಾಬ ನದಾಫ್ ಇವರಲ್ಲಿ ಸಂಗೀತ ಶಿಕ್ಷಣವನ್ನು ಮುಂದುವರಿಸಿದರು. ಅಲ್ಲದೇ ಎರಗುಪ್ಪಿ ಲಿಂಗರಾಜ ಬುವಾ ಇವರಲ್ಲಿಯೂ ಕೂಡಾ ಸಂಗೀತ ಶಿಕ್ಷಣವನ್ನು ಹೊಂದಿದ ಇವರು ಗಾಯನದಲ್ಲಿ ತಮ್ಮದೇ ಆದ ಛಾಪನ್ನು ಹೊಂದಿದ್ದಾರೆ. ವಿದ್ವತ್ ಪರೀಕ್ಷೆಯನ್ನು ಕೂಡಾ ಮಾಡಿದ್ದಾರೆ. ಸತತ ಸಂಗೀತ ಸೇವೆ ಮಾಡುವ ಗುರಿ ಹೊಂದಿದ ಇವರು ಕುಂದಗೋಳದಲ್ಲಿ ಮೃತ್ಯುಂಜಯ ಸಂಗೀತ ಪಾಠಶಾಲೆಯನ್ನು ಕಳೆದ ಹತ್ತು ವರ್ಷದಿಂದಲೂ ನಡೆಸುತ್ತ ಬಂದಿದ್ದಾರೆ. ವಿಶೇಷವೆಂದರೆ ಇವರು ಇದಕ್ಕೆ ಯಾರಿಂದಲೂ ಸಂಭಾವನೆಯನ್ನು ತೆಗೆದುಕೊಳ್ಳದೇ ಇರುವುದು. ಅನೇಕ ಪ್ರತಿಷ್ಠಿತ ಸಂಗೀತ ವೇದಿಕೆಗಳಲ್ಲಿ ಕಾರ್ಯಕ್ರಮಗಳನ್ನು ನೀಡಿದ ಹೆಗ್ಗಳಿಕೆ ಇವರದಾಗಿದೆ.

**ಶ್ರೀ ಅಶೋಕ ನಾಡಿಗೇರ್**

೧೯೬೩ ನೇಯ ಇಸವಿಯಲ್ಲಿ ಜನಿಸಿದ ಇವರು ಕುಂದಗೋಳದ ಶ್ರೀಮಂತ ಮನೆತನವಾದಂತ ನಾನಾಸಾಹೇಬ ನಾಡಿಗೇರರ ವಂಶಸ್ಥರು. ಸವಾಯಿ ಗಂಧರ್ವರು ಹುಟ್ಟಿದ ಈ ಊರು ಸಂಗೀತ ಕ್ಷೇತ್ರದಲ್ಲಿ ಪ್ರಸಿದ್ಧಿಯನ್ನು ಪಡೆದಿದೆ. ಸವಾಯಿ ಗಂಧರ್ವರ ಪುಣ್ಯತಿಥಿಯ ನಿಮಿತ್ತವಾಗಿ ಪ್ರತಿವರ್ಷ ದೇಶದ ಪ್ರಸಿದ್ಧ ಸಂಗೀತಗಾರರಿಂದ ಕಾರ್ಯಕ್ರಮಗಳು ನಡೆಯುತ್ತವೆ.

ಬಾಲ್ಯದಿಂದಲೇ ಸಂಗೀತ ಪರಿಸರದಲ್ಲಿ ಬೆಳೆದ ಅಶೋಕನಿಗೆ ಮುಂದೆ ಸಂಗೀತ ಕಲಿಯಲು ಪ್ರೇರಣೆಯಾಯಿತು. ಇವರು ಮೊದಲು ಕಿರಾಣಾ ಘರಾಣೆಯ ಸಂಗೀತಗಾರರಾದ ಶ್ರೀ ಪಂಡಿತ ನಾಗನಾಥ ಒಡೆಯರ್‌ರ ಹತ್ತಿರ ಸಂಗೀತ ಕಲಿಯಲು ಪ್ರಾರಂಭಿಸಿದರು. ಗುರುಗಳ ಅಪ್ಪಣೆಯ ಮೇರೆಯೊಂದಿಗೆ ಕಿರಾಣಾ ಘರಾಣೆಯ ಪ್ರಸಿದ್ಧ ಗಾಯಕಿ ಡಾ. ಶ್ರೀಮತಿ ಗಂಗೂಬಾಯಿ ಹಾನಗಲ್ ಇವರಲ್ಲಿ ಸಂಗೀತಾಭ್ಯಾಸವನ್ನು ಮುಂದುವರಿಸಿದ್ದಾರೆ. ಯುವ ಗಾಯಕರಾದ ಇವರು ಕಿರಾಣಾ ಘರಾಣೆಯ ಒಬ್ಬ ಭರವಸೆಯ ಕಲಾವಿದರೆನಿಸಿಕೊಂಡಿದ್ದಾರೆ.

ಖಯಾಲ್, ಠುಮರಿ ಮತ್ತು ಸುಗಮ ಸಂಗೀತವನ್ನು ಸೊಗಸಾಗಿ ಹಾಡುವ ಇವರು ದೇಶದ ಅನೇಕ ಪ್ರತಿಷ್ಠಿತ ಸಂಗೀತ ವೇದಿಕೆಗಳಲ್ಲಿ ಕಾರ್ಯಕ್ರಮಗಳನ್ನು ನೀಡಿ ಮೆಚ್ಚುಗೆಯನ್ನು ಪಡೆದಿದ್ದಾರೆ. ಪ್ರತಿವರ್ಷ ಕುಂದಗೋಳ

ಸವಾಯಿಗಂಧರ್ವರ ಪುಣ್ಯತಿಥಿ ನಿಮಿತ್ತ ಸಂಗೀತ ಕಾರ್ಯಕ್ರಮವನ್ನು ನಡೆಸುವ ವಿಶ್ವಸ್ಥ ಸಂಸ್ಥೆಯ ಕಾರ್ಯದರ್ಶಿಗಳಾಗಿ ಕಳೆದ ೩೦ ವರ್ಷಗಳಿಂದ ಸಕ್ರಿಯವಾಗಿ ಪಾಲ್ಗೊಳ್ಳುತ್ತಿದ್ದಾರೆ. ಇವರು ಆಕಾಶವಾಣಿಯ ಉನ್ನತ ಶ್ರೇಣಿಯ ಕಲಾವಿದರು.

## ಶ್ರೀ ಎಚ್. ಎಫ್. ಹಂಡಿ, ಮಾಸ್ತರ

ಇವರು ಧಾರವಾಡ ಜಿಲ್ಲೆ ನವಲಗುಂದ ತಾಲೂಕಿನ ನಲವಡಿ ಗ್ರಾಮದವರು. ಜನನ ೫-೧-೧೯೪೧ ವಿದ್ಯಾರ್ಹತೆ ಪಿ.ಟಿ.ಸಿ೧೯೬೦ (ಪ್ರಾಥಮಿಕ ಶಿಕ್ಷಕರ ಟ್ರೇನಿಂಗ್ ಕೋರ್ಸ) ಹಾಗೂ ಎಸ್. ಎಸ್ ಎಲ್.ಸಿ.

ಇವರು ಸರಕಾರಿ ಪ್ರಾಥಮಿಕ ಶಾಲಾ ಶಿಕ್ಷಕರು ಬಾಲ್ಯದಿಂದಲೂ ಸಂಗೀತ ನಾಟಕಗಳ ಬಗ್ಗೆ ಒಲವೂ ಹವ್ಯಾಸಿ ನಾಟಕಗಳಲ್ಲಿ ಸ್ತ್ರೀ ಪಾತ್ರಗಳನ್ನು ಅಭಿನಯಿಸಿದ್ದು ಜಗಜ್ಯೋತಿ ಬಸವೇಶ್ವರ ನಾಟಕದಲ್ಲಿ ಬಸವೇಶ್ವರರ ಪಾತ್ರದಲ್ಲಿ ಹೆಚ್ಚು ಹೆಸರು ಮಾಡಿದರು. ಇವರಿಗೆ ನಾಟಕ ಗೀಳು ಸಂಗೀತದ ಗೀಳು ಬರಲು ಕಾರಣ. ಇದೇ ಊರಿನವರಾದ ದಿ.ನಲವಡಿ ಶ್ರೀಕಂಠಶಾಸ್ತ್ರಿಗಳ ಪ್ರಭಾವ ಇವರ ಮೇಲೆ ಬೀರಿತ್ತು. ಇವರು ಸ್ವತ ಪೌರಾಣಿಕ ನಾಟಕ ಕಲಿಸಿ ಆಡಿಸಿದವರು. ನಾಟಕದ ರಂಗ ಗೀತೆಗಳ ಮೇಲೆ ತುಂಬಾ ಹಿಡಿತ ಹೊಂದಿದ ಇವರು ದಿ.ಪಂ. ಲಿಂಗರಾಜ ಬುವಾ ಯರಗುಪ್ಪಿ ಯವರಲ್ಲಿ ಬಾಲ್ಯದಿಂದ ಸಂಗೀತ ಅಭ್ಯಾಸ ಮಾಡಿದವರು. ಈ ಭಾಗದ ಗ್ರಾಮೀಣ ಪ್ರದೇಶದಲ್ಲಿ ಜನಸಾಮಾನ್ಯರಲ್ಲಿಯೂ ಸಂಗೀತ ಅಭಿರುಚಿ ಪಡಿಸಿ ಅನೇಕರಿಗೆ ಸಂಗೀತ ಕಲಿಸಿದ್ದಾರೆ.

ಸಂಗೀತದ ಜೊತೆಗೆ ಸಾಹಿತ್ಯದಲ್ಲಿಯೂ ಕೂಡಾ ಅಭಿರುಚಿ ಹೊಂದಿದ ಇವರು ಮಹಾಭಾರತ, ರಾಮಾಯಣ, ಹರೀಶ್ಚಂದ್ರ ಕಾವ್ಯ ಅಭ್ಯಸಿಸಿದ ಇವರು ಶಿಕ್ಷಕ ವೃತ್ತಿಯಲ್ಲಿದ್ದಾಗ ಶಾಲೆಗಳಲ್ಲಿ ಸಾಂಸ್ಕೃತಿಕ ಕಾರ್ಯಕ್ರಮಗಳಿಗೆ ಮಕ್ಕಳನ್ನು ತರಬೇತಿಗೊಳಿಸಿದ ಪ್ರಯುಕ್ತ ಇಂದು ನಲವಡಿ ಗ್ರಾಮದಲ್ಲಿ ಪ್ರತಿವರ್ಷ ದಿ.ನಲವಡಿ ಶ್ರೀಕಂಠ ಶಾಸ್ತ್ರಿಗಳ ಪುಣ್ಯತಿಥಿ ಅಹೋರಾತ್ರಿ ಸಂಗೀತ ಕಾರ್ಯಕ್ರಮದಲ್ಲಿ ಭಾಗವಹಿಸಿದ ಅನೇಕ ಸಂಗೀತಗಾರರಾದ ಮಲ್ಲಿಕಾರ್ಜುನ ಮನ್ಸೂರ, ಲಿಂಗರಾಜ ಬುವಾ ಯರಗುಪ್ಪಿ, ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿಯವರ ಸಂಗೀತ ಕೇಳಲು ಈ ಊರಿನ ಜನತೆ ಕಿಕ್ಕಿರಿದು ಸೇರುತ್ತಾರೆ ಕೀರ್ತಿ ಹಂಡಿ ಮಾಸ್ತರರಿಗೆ ಸಲ್ಲುತ್ತದೆ.

## ಶ್ರೀ ರಾಮಪ್ಪ ಹುಗ್ಗಣ್ಣವರ ಮಾಸ್ತರ

ಇವರು ವೃತ್ತಿಯಿಂದ ಸರಕಾರಿ ಪ್ರಾಥಮಿಕ ಶಾಲಾ ನಿವೃತ್ತ ಶಿಕ್ಷಕರು. ಕುಂದಗೋಳ ತಾಲೂಕಿನ ಗಡಿಯ ನವಲಗುಂದ ಮಣಕವಾಡ ಗ್ರಾಮದವರು.

ಬಾಲ್ಯದಿಂದಲೂ ಸಂಗೀತದ ಬಗ್ಗೆ ಒಲವು ಇದ್ದ ಇವರು ಪ್ರಾರಂಭಿಕ ಸಂಗೀತ ಅಭ್ಯಾಸವನ್ನು ಕಿರೇಸೂರಿನ ವೆ ಕಟೇಶ ಮಾಸ್ತರಲ್ಲಿ ಮಾಡಿದರು. ನಂತರ ಇವರು ಒಂದು ದಿನ ಕಾರ್ಯಕ್ರಮದಲ್ಲಿ ಹಾಡುವದನ್ನು ಕೇಳಿದ ದಿ.ಲಿಂಗರಾಜಬುವಾ ಯರಗುಪ್ಪಿ ಇವರು ಗಮನಿಸಿ ಸಲುಗೆಯಿಂದ ಮಾತನಾಡಿಸಿದ್ದಲ್ಲದೇ ತಮ್ಮೊಡನೆ ನೆಂಟಸ್ತಿಕೆಗೆ

ತಮ್ಮ ತಂಗಿ (ಸಂಬಂಧಿಗಳ) ಯನ್ನು ಕೊಟ್ಟು ಮದುವೆ ಮಾಡಿಸಿದ್ದಲ್ಲದೇ ಮುಂದೆ ಇವರಿಗೆ ಸಂಗೀತ ಶಿಕ್ಷಣವನ್ನಿತ್ತರು.

ಹುಗ್ಗಣ್ಣವರ ಮಾಸ್ತರರು ನೆಂಟಸ್ತಿಕೆಯಾದ ನಂತರ ಸರಕಾರಿ ಶಾಲಾ ಶಿಕ್ಷಕರಾದರು. ಮತ್ತು ಯರಗುಪ್ಪಿಗೆ ವರ್ಗವಾಗಿ ಬಂದು ಲಿಂಗರಾಜರ ಸಾನಿಧ್ಯದಲ್ಲಿ ಸಾಕಷ್ಟು ಕಾಲ ಕಳೆಯುವ ಸಂದರ್ಭ ಒದಗಿ ಬಂತು. ನಿಮಿತ್ತ ಲಿಂಗರಾಜಬುವಾರ ಅನಾವಟ ಚೀಜುಗಳು ಲಯಕಾರಿ, ಅಪ್ರಚಲಿತ ರಾಗಗಳು ಇವುಗಳನ್ನು ಸುಲಲಿತವಾಗಿ ಹಾಡುವ ಕಲೆ ಇವರದಾಗಿದೆ.

ಈಗ ಯರಗುಪ್ಪಿ ಗ್ರಾಮದ ಸುತ್ತಮುತ್ತಲಿನ ಗ್ರಾಮೀಣ ಪ್ರದೇಶದಲ್ಲಿ ಸಂಗೀತಾಸಕ್ತರನ್ನು ಹೆಚ್ಚಿಸುತ್ತ ಯಾವುದೇ ಫಲಾಪೇಕ್ಷೆ ಇಲ್ಲದೇ ಯುವಕರಲ್ಲಿ ಸಂಗೀತದ ಅಭಿರುಚಿ ಹೆಚ್ಚಿಸಿ ಅನೇಕರಿಗೆ ಸಂಗೀತಾಭ್ಯಾಸ ಮಾಡಿಸುತ್ತಿದ್ದಾರೆ.

### ಶ್ರೀ ಟಿ. ಆರ್. ವಾರಂಗ

ಹುಬ್ಬಳ್ಳಿಯಲ್ಲಿ ಜನಿಸಿದ ಶ್ರೀ ಟಿ. ಆರ್. ವಾರಂಗ ಅವರು ಮುಂಬೈಗೆ ಹೋಗಿ ಖುರ್ಷಿದ ಮಿರಜಕರ ಅವರಲ್ಲಿ ಸಿತಾರವಾದನವನ್ನು ಅಭ್ಯಸಿಸಿ, ಶ್ರೀ ಶಂಕರ ದಿಕ್ಷೀತರಲ್ಲಿ ಗಾಯನವನ್ನು ಮುಂದುವರಿಸಿದರು. ಇವರಿಗೆ ಜಲತರಂಗ ವಾದನ ನುಡಿಸುವದರಲ್ಲಿಯೂ ಪ್ರಾವೀಣ್ಯತೆ ಇದೆ.

ನಲವತ್ತು ವರ್ಷಗಳವರೆಗೆ ಸ್ವರ ಸಾಧನ ಸಂಗೀತ ಮಹಾವಿದ್ಯಾಲಯವನ್ನು ಮುನ್ನಡೆಸಿಕೊಂಡು ಹೋದ ಕೀರ್ತಿ ಇವರಿಗೆ ಸಲ್ಲುತ್ತದೆ. ಇವರ ಮಕ್ಕಳು ಕೂಡ ಸಂಗೀತ ಕ್ಷೇತ್ರದಲ್ಲಿ ಪರಂಪರೆಯನ್ನು ಮುಂದುವರೆಸಿಕೊಂಡು ಹೋಗುತ್ತಿದ್ದಾರೆ.

### ಶ್ರೀ ವಿ. ಎನ್. ಬದಿ

ಮೂಲ ಲಕ್ಷ್ಮೇಶ್ವರ ಊರಿನವರಾದ ಇವರು ಸಿಂಧನೂರಿನಲ್ಲಿ ವಾಸ್ತವ್ಯ ಹೂಡಿ ಕೊಳಲು ವಾದಕರಾಗಿದ್ದಾರೆ. ಇವರ ಸಂಗೀತಾಭ್ಯಾಸವು ಶ್ರೀ ಆಯ್. ಎನ್. ಕಲಬುರ್ಗಿಯವರ ಮಾರ್ಗದರ್ಶನದಲ್ಲಿ ನಡೆಯಿತು. ಇವರ ಕೊಳಲು ವಾದನ ಪನ್ನಾಲಾಲ ನುಡಿಸಿದಂತೆ ಕೇಳಿಸುತ್ತದೆ. ೧೯೯೦ ರಲ್ಲಿ ಇವರಿಗೆ ಕರ್ನಾಟಕ ರಾಜ್ಯೋತ್ಸವ ಪ್ರಶಸ್ತಿ ದೊರೆತಿದೆ. ಡಾ. ಹನುಮಣ್ಣ ನಾಯಕ ದೊರೆ ಹಾಗೂ ರಘುನಾಥ ಬದಿಯವರು ಇವರ ಶಿಷ್ಯ ಪರಂಪರೆಯಲ್ಲಿ ಪ್ರಮುಖರು.

### ಶ್ರೀ ಎಲಿವಾಳ ಸಿದ್ಧಯ್ಯ

ಇವರು ಎಲಿವಾಳ ಗ್ರಾಮದವರಾಗಿದ್ದು ಪ್ರಸಿದ್ಧ ಸಂಗೀತಗಾರರಾದ ಪಂಡಿತ ರಾಜಗುರು ಮತ್ತು ಪಂಚಾಕ್ಷರಿ ಸ್ವಾಮಿ ಮತ್ತಿಗಟ್ಟಿ ಇವರ ನಿಕಟವರ್ತಿಗಳಾಗಿದ್ದು, ಸಂಗೀತ ಸಾಧನೆಯನ್ನು ಮಾಡಿದವರು. ಅನಂತರದ ದಿನಗಳಲ್ಲಿ

ರಂಗಭೂಮಿಯನ್ನು ಸೇರಿ ಒಳ್ಳೆಯ ರಂಗಕಲಾವಿದರಾಗಿ ಹೆಸರು ಮಾಡಿ ಚಲನಚಿತ್ರ ನಟರಾಗಿಯು ತಮ್ಮನ್ನು ಗುರುತಿಸಿಕೊಂಡವರು. ಡಾ. ರಾಜಕುಮಾರರೊಡನೆ ಶ್ರೀ ಕೃಷ್ಣಗಾರುಡಿಯಲ್ಲಿ ಕೃಷ್ಣನ ಪಾತ್ರವನ್ನು ವಹಿಸಿ ಪ್ರಖ್ಯಾತಿಯನ್ನು ಪಡೆದಿದ್ದಾರೆ. ಹಾಗೂ ರಕ್ತರಾತ್ರಿ ನಾಟಕದಲ್ಲಿ ವಹಿಸಿದ ಅಶ್ವತ್ಥಾಮನ ಪಾತ್ರ ಈಗಲೂ ಜನಮನದಲ್ಲಿ ಅಚ್ಚಳಿಯದೆ ಉಳಿದಿದೆ.

### ಶ್ರೀ ಚಿಕ್ಕೊ ಗುರುರಾವ ಕುಲಕರ್ಣಿ

ಕದರಮಂಡಲಿಯವರಾದ ಇವರು ಸ್ವಪ್ರಯತ್ನದಿಂದ ಖ್ಯಾತ ಹಾರ್ಮೋನಿಯಂ ವಾದಕರಾಗಿ ಹೆಸರು ಮಾಡಿದ್ದಾರೆ. ಅನೇಕ ಹಾಡುಗಾರರಿಗೆ ಸಾಥನ್ನು ನೀಡಿ ಪ್ರಖ್ಯಾತಿಯನ್ನು ಹೊಂದಿದ ಇವರು ನಾಟಕ ಕಂಪನಿಗಳಲ್ಲೂ ಸೇವೆ ಸಲ್ಲಿಸಿದ್ದಾರೆ. ಖ್ಯಾತ ರಂಗಭೂಮಿ ಕಲಾವಿದೆಯಾದ ಶ್ರೀಮತಿ ಸೋನುಬಾಯಿ ದೊಡ್ಡಮನಿಯವರ ಶಿಷ್ಯರು ಆಗಿದ್ದಾರೆ.

### ಸೈಯದ ಮಾಸ್ತರ

ಸೈಯದ ಸಾಬ ಕುತುಬುದ್ದೀನ ಸಾಬ ಮನಸ್‌ಬದಾರ್ ಎಂಬ ಪೂರ್ತಿ ಹೆಸರಿನ ಹಾಗೂ ಎಲ್ಲ ನಾಟಕ ಜನರಿಂದ ಸೈಯದ ಮಾಸ್ತರ ಎಂದೇ ಪ್ರಸಿದ್ಧಿ ಪಡೆದ ಇವರಿಗೆ ಈಗ ೭೪ ವರ್ಷ ಇವರು ಮೂಲತಃ ಮರಾಠಿ ಆಚ್ಚರಿಯಂದರೆ ತಮ್ಮ ಇಪ್ಪತ್ತು ವರುಷಗಳವರೆಗೆ ಅವರಿಗೆ ಕನ್ನಡ ಓದಲು ಬರೆಯಲು ಬರುತ್ತಿರಲಿಲ್ಲ. ನಿಪ್ಪಾಣಿಯಿಂದ ಮುಂದುವರೆದ ಮಹಾರಾಷ್ಟ್ರ ಗಡಿ ಪ್ರಾರಂಭವಾಗುತ್ತದೆ. ಗಡಿಯಲ್ಲಿಯ 'ಹಾತ್ ಕಣಗಲಾ', ತಾಲೂಕು 'ರಿಂದಾಲ' ಎಂಬ ಪುಟ್ಟ ಗ್ರಾಮ ಕೊಲ್ಲಾಪುರ ಜಿಲ್ಲೆಯಲ್ಲಿ ಬರುತ್ತದೆ. ಬಡ ರೈತ ಕುಟುಂಬದಲ್ಲಿ ಸೈಯದ ಮಾಸ್ತರ ಜನಿಸಿದ್ದು. ಒಟ್ಟು ಆರು ಜನ ಅಣ್ಣಂದಿರು ಒಬ್ಬ ಅಕ್ಕ. ಗ್ರಾಮದ ನಾಟಕ ವಾತಾವರಣ ನಾಟ್ಯ ಸಂಗೀತ ಬಾಲಕ ಸೈಯದನಿಗೆ ಸಂಗೀತದ ಗುಂಗು ಹಿಡಿಸಿದ್ದವು. ಕೆಲದಿನಗಳಲ್ಲಿ ಸನಿಹದ ಈಚಲಿಕರಂಜಿ ಪಟ್ಟಣದಲ್ಲಿ ಛೋಟಾಗಂಧರ್ವರ ಮರಾಠಿ ನಾಟಕ ಕಂಪನಿ ಬಂದಿತ್ತು. ಪದೇ ಪದೇ ನೋಡಿದ್ದಾಗಿ ಆಯಿತು. ಯಾಕೆಂದರೆ ಇವರಿಗೆ ರಂಗ ಸಂಗೀತದ ಬಗ್ಗೆ ತುಂಬಾ ಮನಸ್ಸಿನಲ್ಲಿ ಕುಳಿತಿತ್ತು.

ಇದರಿಂದಾಗಿ ರಿಂದಾಲದ ಅಬ್ದುಲ್ ರಜಾಕ ಅವರಿಂದ ಆರು ವರ್ಷ ಕಾಲ ಶಾಸ್ತ್ರೀಯ ಸಂಗೀತ ಕಲಿತರು. ೧೯೫೭ ರಲ್ಲಿ ಈಚಲಕರಂಜಿಯಲ್ಲಿ ಏಣಗಿಬಾಳಪ್ಪನವರ ಕಲಾವೈಭವ ನಾಟ್ಯ ಸಂಘ ಬೀಡು ಬಿಟ್ಟಿತ್ತು. ಅವರ ಕಂಪನಿಯಲ್ಲಿ ನಾಟ್ಯ ಸಂಗೀತದ ಬಗ್ಗೆ ಹೆಚ್ಚಿನ ಜ್ಞಾನವು ತಿಳಿಯಿತು. ಜೊತೆಗೆ ಕನ್ನಡವೂ ಬರತೊಡಗಿತು. ಕೊನೆಗೆ ಪ್ರತಿತಿಂಗಳಿಗೆ ३೦೦ ರೂ. ಯಂತೆ ಹಾರ್ಮೋನಿಯಂ ಮಾಸ್ತರ ಆಗಿ ಬಾಳಪ್ಪನವರ ಕಂಪನಿಯಲ್ಲಿ ಸೇರಿದರು. ೧೯೭೦ ರ ಸುಮಾರಿಗೆ ಹುಬ್ಬಳ್ಳಿಗೆ ಬಂದು ಬಂದು ಸೇರಿ ಇಲ್ಲಿಯೇ ನೆಲೆಸಿದ್ದಾರೆ.

ಈಗ ನಾಟ್ಯಸಂಗೀತ ಸತ್ತೇ ಹೋಗಿದೆ ಎನ್ನುತ್ತಾರೆ ಇಲ್ಲವೇ ನನ್ನಂತೆಯೇ ವಯಸ್ಸಾಗಿದೆ ಎನ್ನುತ್ತಾ ತಮ್ಮ ಬಿಳಿ ಗಡ್ಡ ತೋರಿಸುತ್ತಾರೆ. ಉತ್ತರ ಕರ್ನಾಟಕದ ದೊಡ್ಡ ದೊಡ್ಡ ವೃತ್ತಿ ನಾಟಕ ಕಂಪನಿಗಳು ಅಳಿದು ಹೋಗಿವೆ.

ಇನ್ನು ಈಗ ಹುಬ್ಬಳ್ಳಿ ಸುತ್ತಲಿನ ಹಳ್ಳಿಗಳಲ್ಲಿ ವರ್ಷಕ್ಕೊಮ್ಮೆ ಆಡುವ ಜಾತ್ರೆ ನಾಟಕಗಳ ಅನ್ನದಾತರು. ಅಷ್ಟಿಷ್ಟು ಅಂತ ಏನಿಲ್ಲ ೫೦೦, ೧೦೦೦ ಆದೀತು ಮಾಡಲು ಕಾಯಕ ಇವರಿಗೆ ಇದೊಂದೆ ಗೊತ್ತಿದೆ. ಇದನ್ನು ಬಿಟ್ಟು ನನಗಿನ್ನೇನಿದೆ ಎನ್ನುತ್ತಾರೆ. ಅವರ ಗಂಡು ಮಕ್ಕಳು ಎಂಜನೀಯರ್ ಆಗಿದ್ದಾರೆ. ನಾಟಕ ಕಂಪನಿ ಮಾಸ್ತರ ಆಗಿ ಜೀವನದಲ್ಲಿ ಸಾಧಿಸಿದ್ದು ಇದೊಂದೆ ಎಂದು ಹೆಮ್ಮೆಯಿಂದ ಹೇಳುತ್ತಾರೆ. ಸಂಗೀತ ಪರಂಪರೆಯಿಂದ ಕಾಲಿಟ್ಟ ಶಾಸ್ತ್ರೀಯ ಹಾಗೂ ಮರಾಠಿ ನಾಟ್ಯ ಸಂಗೀತ ಕಲಿತ ಇವರು ಹುಬ್ಬಳ್ಳಿಯಲ್ಲಿ ನೆಲೆಸಿದ ಪ್ರಯುಕ್ತ ಕುಂದಗೋಳ ಪರಿಸರದ ಪ್ರತಿಯೊಂದು ಹಳ್ಳಿ ಹಳ್ಳಿಗಳಲ್ಲಿ ಸೈಯದ ಮಾಸ್ತರ ಎಂದರೆ ಈಗಿನ ಪೀಳಿಗೆಯಿಂದ ಹಿಡಿದು ವಯಸ್ಸಾದ ಮುದುಕರವರೆಗೆ ಗೊತ್ತು.

ಈ ಭಾಗದಲ್ಲಿ ಪೌರಾಣಕ ನಾಟಕವನ್ನು ಹಳ್ಳಿಗಳಲ್ಲಿ ಆಡಬೇಕಾದರೆ ಮೊದಲು ಸೈಯದ ಮಾಸ್ತರ ತಾರೀಖಿನ ನಿಕ್ಕಿ ಆಗುವದು ಯಾಕೆಂದರೆ ನಾಟಕಕ್ಕೆ ಬೇಕಾದ ಸಾಮಗ್ರಿಗಳು ಪೌರಾಣಿಕ ನಾಟಕದ ಪರದೆ ಹಾಗೂ ತಕ್ಕ ಉಡುಗೆ-ತೊಡುಗೆ ಆಯುಧಗಳು ಅಲ್ಲದೆ ನಾಟ್ಯಸಂಗೀತದ ಪ್ರಸಂಗ ಬಂದರೆ ಓನ್ನೆಲೆಯಾಗಿ ಅದನ್ನು ನಿಭಾಯಿಸುವುದು ಹಾಗೂ ಗೀತೆಗಳನ್ನು ಹಳ್ಳಿಯಲ್ಲಿ ನಾಟಕ ದಿನನಿತ್ಯ ಅಭ್ಯಾಸ ಮಾಡುವದರ ಜೊತೆಗೆ ಅವುಗಳಲ್ಲಿ ಬ ಏವ ರಂಗಗೀತೆಗಳನ್ನು ಕಲಿಸುವದು ಇವರಿಗೆ ತುಂಬಾ ಆಸಕ್ತಿ.

ಕುಂದಗೋಳ ಪರಿಸರದಲ್ಲಿ ಎಲ್ಲೆ ಹಿಂದುಸ್ತಾನಿ ಸಂಗೀತವಿದೆಯೋ ಅಲ್ಲಿ ಸೈಯದ ಮಾಸ್ತರ ಹಾಜರ ಇರಲೇಬೇಕು. ಇವರು ಅನೇಕ ಹಿಂದುಸ್ತಾನಿ ಸಂಗೀತಗಾರರೊಂದಿಗೆ ಹಾರ್ಮೋನಿಯಂ ಸಾಥ ಮಾಡಿದ ಅನುಭವ ಹಾಗೂ ಪ್ರಶಂಸೆಗೆ ಪಾತ್ರರಾಗಿದ್ದಾರೆ.

ಸದ್ಯ ಹುಬ್ಬಳ್ಳಿ ಗಣೇಶ ಪೇಟೆಯಲ್ಲಿ ಇವರ ಮನೆಯಿದ್ದು, ಇವರ ಧರ್ಮಪತ್ನಿ ಒಳ್ಳೆಯ ನಾಟ್ಯ ಪ್ರವೀಣೆಯಾಗಿದ್ದು ಪ್ರತಿದಿನ ಸಂಗೀತ ರಿಯಾಸನ್ನು ರೂಢಿಯಲ್ಲಿಸಿಕೊಂಡ ಸೈಯದ ಮಾಸ್ತರ ಕುಂದಗೋಳ ಹಿಂದುಸ್ತಾನಿ ಸಂಗೀತ ಪರಿಸರಕ್ಕೆ ಚಿರಪರಿಚಿತರು.



# ಅಧ್ಯಾಯ-ಏಳು

# ಉಪಸಂಹಾರ

ಸಂಗೀತ ಮನುಷ್ಯರ ಜೀವನವನ್ನು ಸಮಗ್ರವಾಗಿಯೂ ವೈವಿಧ್ಯಮಯವಾಗಿಯೂ ಅಭಿವ್ಯಕ್ತಿಸುವ ಸಾಧನವಾಗಿದೆ. ವಿಶ್ವದೊಂದಿಗೆ ಅವನ ಸಂಕೀರ್ಣ ಸಂಬಂಧಗಳ ಮೂಲಗ್ರಹಿಕೆಯೊಂದಿಗೆ ಸಂಗೀತದ ಹುಟ್ಟು ಮತ್ತು ಸ್ವರೂಪ ಅಂತರ್ಗತವಾಗಿದೆ. ದೈವಿಕ ಮಾಯೆಯನ್ನೂ, ಪ್ರಕೃತಿಯ ವಿಲಾಸವನ್ನೂ ಲೋಕದ ದೈನಿಕ ಕಸುಬನ್ನೂ ಅರಿಯಲು ಸಂಗೀತವನ್ನು ಸಮರ್ಥ ಭಾಷೆಯಾಗಿ ಕಾಲಾಂತರದಿಂದ ಬಳಸಲಾಗುತ್ತದೆ. ಕಾಲಗತಿಯಲ್ಲಿ ಹುಟ್ಟಿ ಬೆಳೆಯುವ ಮತ್ತು ಅಲ್ಲೇ ನಿಗೂಢವಾಗಿ ಮಾಯವಾಗಿ ಪುನಃ ಅವತರಿಸುವ ಅಮೂರ್ತವಾದ ಸಂಗೀತ ಪ್ರವೃತ್ತಿಯಲ್ಲಿ ಸಂಚಾರಿಯೂ ಆಚರಣೆಯಲ್ಲಿ ಮೌಕಿಕ ಪರಂಪರೆಗೂ ಸೇರಿದ್ದಾಗಿದೆ. ಇದರ ಚಲನೆ ಕಾಲದ ರಹಸ್ಯ ಲಯದೊಂದಿಗೆ ಒಂದಾಗಿದ್ದರೂ ನಿರ್ದಿಷ್ಟ ಪ್ರದೇಶದ ಬಣ್ಣ, ರುಚಿ, ಗಂಧದ ಪ್ರಭಾವ ಅದರ ಜೀವ ಚೈತನ್ಯವನ್ನೂ ಪೊರೆಯುತ್ತ ಬಂದಿದೆ. ಮಾರ್ಗ ಮತ್ತು ದೇಶೀತನಗಳಿಂದ ಸಂಗೀತ ಬಹುರೂಪಿಯಾಗಿದೆ. ಒಂದು ನಿರ್ದಿಷ್ಟ ಪರಿಸರದಲ್ಲಿ ಬದುಕುತ್ತಿರುವ ಜನರ ಸಾಮಾಜಿಕ ಸಂರಚನೆಯಲ್ಲಿ ಮತ್ತು ಅದರ ಕಾರ್ಯ ವಿಧಾನದಲ್ಲಿ ವಿವಿಧ ಬಗೆಯ ಸಾಂಸ್ಕೃತಿಕ ವಿನ್ಯಾಸದೊಂದಿಗೆ ಸಂಗೀತದ ಅಂತಃಸತ್ವವು ಸೇರಿಕೊಂಡಿರುತ್ತದೆ. ಆದ್ದರಿಂದ ಸಂಗೀತ ವೈಯಕ್ತಿಕ ಅಭಿವ್ಯಕ್ತಿಯಾದಂತೆ ಸಮೂಹ ಒಂದರ ಜೀವನ ಶೈಲಿಯ ಆಶೋತ್ತರಗಳ ಮೂರ್ತ ರೂಪವೂ ಹೌದು. ಸಂಗೀತ ನಮ್ಮ ಬದುಕಿನಿಂದ ಹೊರಟು ಹೋದರೆ, ನಮ್ಮ ಸಂಸ್ಕೃತಿಯ ಸ್ಮೃತಿಯ ಸಂಚಯಾತ್ಮಕ ಸೃಜನಶೀಲ ಉತ್ಸವವಾಗದಿದ್ದರೆ ಬದುಕನ್ನು ಗ್ರಹಿಸುವ ಹಾಗೂ ಅರ್ಥೈಸುವ ಒಂದು ಸಮರ್ಥ ಭಾಷೆಯನ್ನೂ, ವಿಧಾನವನ್ನೂ ನಾವು ಶಾಶ್ವತವಾಗಿ ಕಳೆದುಕೊಂಡಂತೆ.

ಸಾವಿರಾರು ವರ್ಷಗಳ ಇತಿಹಾಸವಿರುವ ಭಾರತೀಯ ಸಂಗೀತದ ಹುಟ್ಟು, ಸ್ವರೂಪ, ವಿಕಾಸ ಮತ್ತು ಉಪಯೋಗ ಕಾಲದಿಂದ ಕಾಲಕ್ಕೆ ವೈವಿಧ್ಯಮಯವಾಗುತ್ತ ನಡೆದಿದೆ. ಭಾರತದ ವಿದ್ವಾಂಸರ ಪ್ರಕಾರ ಅದರ ಹುಟ್ಟು ದೈವಿಕ ಮೂಲದ್ದಾಗಿದೆ. ಪಾಶ್ಚಾತ್ಯ ವಿದ್ವಾಂಸರು ಪ್ರಕೃತಿ ಪಶುಪಕ್ಷಿಗಳು ಸೃಷ್ಟಿಸಿದ ಧ್ವನಿಯ ಅನುಕರಣೆಯಿಂದ ಸಂಗೀತದ ಆರಂಭವಾಯಿತೆಂದು ಅಭಿಪ್ರಾಯಪಡುತ್ತಾರೆ. ಆದರೆ ವೇದ ಪೂರ್ವಕಾಲದಲ್ಲಿ ಸಂಗೀತ ವಾದ್ಯಗಳನ್ನು ಪ್ರಾಣಿಗಳ ಬೇಟೆಯಾಡಲು, ಸುಂದರ ನಾರಿಯರನ್ನು ಒಲಿಸಿಕೊಳ್ಳಲು ಉಪಯೋಗಿಸುತ್ತಿದ್ದರು. ಶೃಂಗಾರ ಮತ್ತು ಮನರಂಜನೆಯತ್ತ ಸಾಗಿದ್ದ ಸಂಗೀತವು ಪುನಃ ಆಧ್ಯಾತ್ಮಿಕತೆಯತ್ತ ಸಾಗಿತು. ಇದು ಸಿಂಧು ಸಂಸ್ಕೃತಿಯ ಕಾಲದ ಶಿಲ್ಪಕಲೆಗಳಲ್ಲಿ ಅಭಿವ್ಯಕ್ತವಾಗಿದೆ. ಪ್ರಾಯಶಃ ವೇದಕಾಲದ ಸಂಗೀತವು ಮನೆಯ ಸಾಂಸಾರಿಕ ದಿನಚರಿಯ ಹೊರಗೆಲಸಗಳಲ್ಲಿ ಸೇರಿಕೊಂಡಿತು. ಮಂತ್ರವು ನಾದಮಯವಾದದ್ದಲ್ಲದೇ

ಗಂಧರ್ವರು ವಿಲಾಸಕ್ಕಾಗಿ ಲೋಕಗೀತೆಗಳನ್ನು ಹಾಡುತ್ತಿದ್ದರು. ಹೀಗೆ ಪದಾರ್ಥ ಪ್ರಪಂಚ ಕಾಯಕಗಳಲ್ಲಿ ಬೆರೆತು ಯಾಂತ್ರಿಕವಾಗಿ ಬಿಡಬಹುದಾದ ಜೀವನವನ್ನು ರಸಮಯಗೊಳಿಸಿದ ಸಂಗೀತವನ್ನು ಉಪನಿಷತ್ ಕಾಲದಲ್ಲಿ ಬ್ರಹ್ಮಾನಂದದ ಮೂಲವೆಂದು ಪರಿಭಾಷಿಸಲಾಯಿತು. ಪುರಾಣ ಕಾಲದಲ್ಲಿ ಸಂಗೀತವು ತನ್ನ ಆಂತರಿಕ ತತ್ವಾದರ್ಶಗಳನ್ನು ಕಳೆದುಕೊಂಡು ಬಾಹ್ಯರೂಪ ಪಡೆದುಕೊಳ್ಳುತ್ತ ಲೌಕಿಕ ಪ್ರಗತಿಯತ್ತ ಸಾಗಿತು. ಅದು ತನ್ನ ಧಾರ್ಮಿಕ ಆಶ್ರಯ ಪಡೆದುಕೊಂಡು ಪ್ರಯೋಗಶೀಲತೆಯನ್ನೂ, ಸೂಕ್ಷ್ಮತೆಯನ್ನೂ ಕಳೆದುಕೊಂಡಿತು. ಮಹಾಕಾವ್ಯಗಳ ಕಾಲದಲ್ಲಿ ಮೊಟ್ಟ ಮೊದಲ ಸಲ ಮಾರ್ಗ, ದೇಶೀ ಸಂಗೀತ ಪರಂಪರೆಗಳ ಪ್ರಭೇದ ಹುಟ್ಟಿಕೊಂಡಿತು. ಮಾರ್ಗ ಸಂಗೀತ ಪರಂಪರೆ ಹೆಚ್ಚು ಪಾಂಡಿತ್ಯ ಪೂರ್ಣವೂ ಶಾಸ್ತ್ರೀಯವೂ ಮತ್ತು ಜನಸಾಮಾನ್ಯರಿಂದ ದೂರವೂ ಉಳಿಯಿತು. ದೇಶೀ ಪರಂಪರೆಯು ತನ್ನ ಜಾನಪದಿಯ ಗುಣಸತ್ವದಿಂದ ಜನಸಾಮಾನ್ಯರ ಸುಖ ದುಃಖಕ್ಕೆ ಸ್ಪಂದಿಸುವ ಮಾಧ್ಯಮವಾಗಿ ಹೆಚ್ಚು ವ್ಯಾಪಕವಾಗಿ ಪ್ರಸಾರವಾಯಿತು. ಯುದ್ಧಕಾಲದಲ್ಲಿಯೂ ಸಂಗೀತ ವಾದ್ಯಗಳು ಉಪಯೋಗವಾಗತೊಡಗಿತು. ಪಾಣಿನೀಯ ಕಾಲದಿಂದ ಬೌದ್ಧ ಜೈನರ ಯುಗದವರೆಗೆ ಸಂಗೀತ ಶಾಸ್ತ್ರೀಯ ಮತ್ತು ಲೋಕ ಸಂಗೀತ ಸ್ವರೂಪದಲ್ಲಿ ಮುಂದುವರೆಯಿತು. ಬೌದ್ಧರ ಕಾಲದಲ್ಲಿ ಸಂಗೀತವು ಲೋಕ ಕಲ್ಯಾಣಕ್ಕಾಗಿ ಆಧ್ಯಾತ್ಮಿಕ ಭಾವನೆಗಳ ಉನ್ನತಿಗಾಗಿ ಉಪಯೋಗಿಸಲ್ಪಟ್ಟಿತು. ವೈದಿಕರ ಹಿಡಿತದಲ್ಲಿದ್ದ ಸಂಗೀತವು ಜೈನರ ಯುಗದಲ್ಲಿ ಜನಸಾಮಾನ್ಯರ ಬಳಿಗೆ ಬಂತು. ಸ್ವತಃ ಮಹಾವೀರನು ಸಂಗೀತದ ಬಗೆಗಿರುವ ಧಾರ್ಮಿಕ ಬಂಧನಗಳನ್ನು ಸಡಿಲಿಸಿ ಅದು ಕೆಳವರ್ಗದವರಿಗೂ ದೊರಕುವಂತೆ ಮಾಡಿದ.

ಮೌರ್ಯಕಾಲದಿಂದ ರಜಪೂತರ ಕಾಲದವರೆಗೆ ಸಂಗೀತವು ಕೇವಲ ಮನರಂಜನೆಯ ಸಾಧನವಾಗಿ ತನ್ನೆಲ್ಲ ಶಾಸ್ತ್ರೀಯ ಬಂಧನಗಳನ್ನು ಕಳಚಿಕೊಂಡು ಪೂರ್ಣ ಜಾನಪದ ರೂಪವನ್ನು ಪಡೆದುಕೊಂಡಿತು. ಕಾನಿಷ್ಕನ ಕಾಲದಲ್ಲಿ ಪುನಃ ಸಂಗೀತವು ತನ್ನ ಉಚ್ಛ್ರಾಯ ಸ್ಥಿತಿಯನ್ನು ಮರಳಿ ಪಡೆಯಿತು. ಭರತನು ನಾಟ್ಯಶಾಸ್ತ್ರ ಬರೆದದ್ದು ಇದೇ ಕಾಲದಲ್ಲಿ ಪ್ರಸಿದ್ಧ ಸಂಸ್ಕೃತ ನಾಟಕಕಾರ ಕಾಳಿದಾಸನ ಕಾಲದಲ್ಲಿ ಸಂಗೀತವು ಲಲಿತಕಲೆಯೊಂದಿಗೆ ಒಂದಾಯಿತು. ಹರ್ಷವರ್ಧನನ ಕಾಲದಲ್ಲಿ ನಾಟಕಗಳ ಮೂಲಕ ತನ್ನ ಅಸ್ತಿತ್ವ ಉಳಿಸಿಕೊಂಡಿದ್ದಲ್ಲದೇ ಜನಸಾಮಾನ್ಯರ ನಡುವೆಯೂ ಪ್ರಚಾರವಾಯಿತು. ರಜಪೂತರ ಕಾಲದಲ್ಲಿ ಸಂಗೀತವನ್ನು ಬೇರೆಯವರಿಗೆ ತಿಳಿಸದ ಪಂಡಿತರ ಪ್ರವರ್ತಿಯಿಂದಾಗಿ ಸಂಗೀತ ಶೋಚನೀಯ ಸ್ಥಿತಿ ತಲುಪಿತು.

ಮೊಗಲರ ಕಾಲದಲ್ಲಿ ಪರ್ಷಿಯನ್ ಸಂಗೀತದ ಪ್ರಭಾವ ಉತ್ತರ ಭಾರತದ ಮೇಲೆ ಆಯಿತು. ಅಕಬರನು ಸಂಗೀತಗಾರರಿಗೆ ರಾಜಾಶ್ರಯ ನೀಡಿದನು. ಇದೇ ಕಾಲದಲ್ಲಿ ಸಂತ ತುಳಸಿದಾಸ ಮತ್ತು ವಚನಕಾರರು ಸಂಗೀತ ಉಪಾಸಕರಾಗಿದ್ದರು. ಮತ್ತು ಲೋಕ ಪ್ರಚಾರದ ಪರಿಚಾಕರರೂ ಆದರು. ಆದರೆ ಷಹಜಾನ ಮತ್ತು ಜಹಂಗೀರರ ಕಾಲದಲ್ಲಿ ಸಂಗೀತವು ಶೃಂಗಾರಮಯವೂ ಮತ್ತು ವಿಲಾಸಮಯವೂ ಆಯಿತು.

ಬ್ರಿಟೀಷರ ಕಾಲದಲ್ಲಿ ಸಂಗೀತದ ಸ್ಥಿತಿ ದುರಂತಮಯವಾಯಿತು. ಸಂಗೀತವು ವೇಶ್ಯಾವೃತ್ತಿಯಲ್ಲಿ ಮಾತ್ರ ಬೆಳೆಯುವಂತಾಯಿತು. ಈ ಮೂಲಕ ಜನರು ಪಾಶ್ಚಾತ್ಯ ಸಂಗೀತ ಮಾತ್ರ ಶ್ರೇಷ್ಠವೆಂದು ಆರಾಧಿಸುವ ಪರಿಸರವನ್ನು ಆಂಗ್ಲರು ನಿರ್ಮಿಸಿದರು. ಇದು ಭಾರತೀಯ ಸಂಗೀತವನ್ನು ವಸಾಹತುಶಾಹಿ ಕಾಲದಲ್ಲಿ ವಿಕೃತಗೊಳಿಸಿದ ಬಗ್ಗೆ ದೊರಕುವ ಜ್ವಲಂತ ಐತಿಹಾಸಿಕ ಉದಾಹರಣೆಯಾಗಿದೆ. ಇದೇ ಸಮಯದಲ್ಲಿ ಕರ್ನಾಟಕದ ಕೆಲವು ಸಂಸ್ಥಾನಗಳು, ಜಮೀನ್ದಾರರು ಸಂಗೀತಕ್ಕೆ ಆಶ್ರಯ ನೀಡಿದರು. ಮೈಸೂರು ಸಂಸ್ಥಾನದ ಅರಸರು ಉತ್ತರದಿಂದ ಹಿಂದುಸ್ತಾನಿ ಗಾಯಕರನ್ನು ಕರೆಸಿ ದಸರಾ ಉತ್ಸವದಲ್ಲಿ ಸಂಗೀತೋತ್ಸವವನ್ನು ಏರ್ಪಡಿಸುವ ಪರಿಪಾಠವನ್ನು ಹಾಕಿದರು. ಇದರಿಂದ ಕರ್ನಾಟಕದಲ್ಲಿ ಹಿಂದುಸ್ತಾನಿ ಸಂಗೀತವು ತನ್ನ ಅಸ್ತಿತ್ವವನ್ನು ಪಡೆದುಕೊಂಡಿತು. ಹೀಗೆ ಸಂಗೀತ ಪರಂಪರೆಯ ಹರಿವನ್ನು ಚರಿತ್ರೆಯಲ್ಲಿ ಸ್ಥೂಲವಾಗಿ ನೋಡಿದಾಗ ಅದರ ಲಯಬದ್ಧ ಪರಿಳಿತವನ್ನು ಗುರುತಿಸಬಹುದಾಗಿದೆ. ಸಂಗೀತವು ಲೌಕಿಕದಿಂದ ಅಲೌಕಿಕ, ಆಂತರಿಕತೆಯಿಂದ ಬಾಹ್ಯ ರಾಜಾಶ್ರಯದಿಂದ ಲೋಕಾಶ್ರಯ, ಶಾಸ್ತ್ರೀಯತೆಯಿಂದ ಜನಪದದತ್ತ, ಧಾರ್ಮಿಕತೆಯಿಂದ ಶೃಂಗಾರದತ್ತ ಲೋಲಕದಂತೆ ತೂಗಿಕೊಳ್ಳುತ್ತ ಬದಲಾವಣೆಗೊಳ್ಳುತ್ತ ಸಾಗಿರುವುದನ್ನು ನೋಡಬಹುದು. ಸಂಗೀತ ಪರಂಪರೆಯ ಸಾವಿರಾರು ವರ್ಷಗಳ ರೋಚಕ ಇತಿಹಾಸದ ಸಂಕ್ಷಿಪ್ತ ಅಭಿವ್ಯಕ್ತಿ ಕುಂದಗೋಳ ಪರಿಸದರಲ್ಲೂ ಉಂಟಾಗಿರುವುದು ಆಕಸ್ಮಿಕವಲ್ಲ.

ಹಲವು ಸಂಗೀತ ದಿಗ್ಗಜರನ್ನು ತನ್ನ ಒಡಲಲ್ಲಿಟ್ಟು ಬೆಳೆಸಿದ ಅವರ ಮೂಲಕ ಸಂಗೀತ ಸ್ವರ್ಗವನ್ನು ಧರೆಗಿಳಿಸಿಕೊಂಡ ಕುಂದಗೋಳಕ್ಕೆ ಹಿಂದುಸ್ತಾನಿ ಸಂಗೀತ ಪರಂಪರೆಯಲ್ಲಿ ಮಾತೃಸ್ಥಾನವಿದೆ. ಕೃಷಿ ಕೂಲಿಯಿಂದ ಜೀವನ ಸಾಗಿಸುತ್ತ ಬಂದ ಈ ಪರಿಸರದ ಜನರ ಸಾಂಸ್ಕೃತಿಕ ಅಭಿರುಚಿಯನ್ನು ಕಟ್ಟಿಕೊಟ್ಟ ವಿಶಿಷ್ಟ ಸಂಗತಿಗಳು ನೇಪಥ್ಯದಲ್ಲಿವೆ. ತಮ್ಮ ಲೌಕಿಕ ಜಂಜಾಟದೊಂದಿಗೆ ಸಂಗೀತ ನಾಟಕ, ಬಯಲಾಟ, ಧಾರ್ಮಿಕ ಉತ್ಸವ ಜಾತ್ರೆ ಮತ್ತು ಹಬ್ಬಗಳನ್ನು ತಮ್ಮ ದೈನಿಕ ಬದುಕಿನಲ್ಲಿ ಬಲು ಪ್ರೀತಿಯಿಂದ ತಂದುಕೊಂಡವರು. ಕಾಯಕದ ನಿಷ್ಠೆಯ ಒಳಗೆ ಸಂಗೀತದ ಕುರಿತಾದ ಅಭಿರುಚಿ, ಕಲ್ಪನೆಗಳು ಮತ್ತು ಕನಸುಗಳು ಹಾಸುಹೊಕ್ಕಾಗಿ ಇರದಿದ್ದರೆ ಕುಂದಗೋಳವು ಒಂದು ಸ್ಮರಣೀಯ ಸ್ಥಳವಾಗಿ ಇರುತ್ತಿರಲಿಲ್ಲ. ಈ ಪರಿಸರವು ಪ್ರಭಾವಿಸಿದ ಎರಡು ಬಹಳ ಮುಖ್ಯ ಅಂಶಗಳೆಂದರೆ ದೇವಸ್ಥಾನದ ಶಿಲ್ಪಗಳು, ಅಲ್ಲಿ ನಡೆಯುವ ಹಬ್ಬಗಳು ಮತ್ತು ಅವುಗಳ ಮೂಲಕ ರೂಪ ತಳೆದ ಅದ್ಭುತ ಶಿಲ್ಪಕಲೆಗಳು.

ಇಲ್ಲಿರುವ ಪ್ರಾಚೀನ ದೇವಾಲಯಗಳು ತಮ್ಮ ಹುಟ್ಟಿನ ಕುರಿತಾದ ಪೌರಾಣಿಕ ಕಥೆಗಳಿಗಾಗಿ, ದಂತಕಥೆಗಳಿಗಾಗಿ ಅದ್ಭುತ ವಾಸ್ತುಶಿಲ್ಪಕ್ಕಾಗಿ ಪ್ರಖ್ಯಾತಿಯನ್ನು ಹೊಂದಿವೆ. ಶಂಭುಲಿಂಗ, ಗಣೇಶ, ಪಾರ್ವತಿ, ವಿಷ್ಣು ಹನುಮಂತ ಮುಂತಾದ ದೇವತೆಗಳ ಗುಡಿಗಳು ಇಲ್ಲಿವೆ. ಈ ದೇವತೆಗಳನ್ನು ಅಸಾಧಾರಣ ವಾಸ್ತುಶಿಲ್ಪ ಶೈಲಿಯಲ್ಲಿ ಕಡೆದು ನಿಲ್ಲಿಸಿದ್ದಾರೆ. ಇವುಗಳ ಶಿಲ್ಪಕಲೆಗಳ ಸೌಂದರ್ಯ ಜನರ ಧಾರ್ಮಿಕ ಪ್ರಜ್ಞೆಯ ಜಾಗ್ರತಿಗೆ ಕಾರಣವಾಗಿದೆಯೋ ಇಲ್ಲ ಜನರ ಗಾಢವಾದ ಧಾರ್ಮಿಕ ಶ್ರದ್ಧೆಯ ಅಭಿವ್ಯಕ್ತಿಯಾಗಿ ಶಿಲ್ಪಕಲೆ

ಮೂರ್ತಿವೆತ್ತಿದೆಯೊ ಎಂದು ಸರಳವಾಗಿ ಹೇಳಲು ಸಾಧ್ಯವಿಲ್ಲ. ಭಾರತದ ಸಾಂಸ್ಕೃತಿಕ ಪರಂಪರೆಯಲ್ಲಿ ಧರ್ಮಕ್ಕೂ ಸಂಗೀತಕ್ಕೂ ಅವಿನಾಭಾವ ಸಂಬಂಧವಿತ್ತೆಂಬುದಕ್ಕೆ ಇಲ್ಲಿಯ ದೇವತಾ ಶಿಲ್ಪಗಳ ನರ್ತನ ಭಂಗಿ ತಮ್ಮ ಕೈಯಲ್ಲಿ ಹಿಡಿದ ವಿವಿಧ ಸಂಗೀತ ವಾದ್ಯಗಳು ಜೀವಂತ ಸಾಕ್ಷಿಗಳಾಗಿವೆ. ಹೆಪ್ಪುಗಟ್ಟಿದ ಸಂಗೀತವೇ ಇಲ್ಲಿ ಶಿಲ್ಪಕಲೆಯಾಗಿ ಅರಳಿದೆಯೆಂದು ಅನಿಸುವಂತಿದೆ ಅಥವಾ ಶಿಲ್ಪಕಲೆಯ ನವಿರುತನವೇ ಮಧುರ ಸಂಗೀತವಾಗಿ ಪ್ರಕಟವಾಗಿರಬಹುದು ಎಂದು ಪರಿಭಾವಿಸಬಹುದಾಗಿದೆ.

ಇಲ್ಲಿಯ ಹಲವು ಜಾತಿ ಪಂಗಡಗಳ ದೇವತಾ ಕೇಂದ್ರಗಳಿದ್ದರೂ ಅವು ಎಂದೂ ಮತೀಯ ಸಂಘರ್ಷಕ್ಕೆ ಕಾರಣವಾಗಿಲ್ಲ ಎಂಬುದನ್ನು ಗಮನಿಸಬಹುದು. ಅವು ಶುದ್ಧ ಧಾರ್ಮಿಕ ಪ್ರವೃತ್ತಿಗಳೊಂದಿಗೆ ಅಂಧ ಶ್ರದ್ಧೆಯ ಕಂದಾಚಾರದ ದಾರಿಯನ್ನು ಹಿಡಿದು ವಿಕಾರಗೊಳ್ಳದ ಹಾಗೆ ತಡೆದ ಅದೃಶ್ಯ ಶಕ್ತಿಯಾಗುವುದೆಂದು ಅರಿಯಬೇಕಾಗಿದೆ. ಆಧ್ಯಾತ್ಮಿಕ ಶ್ರದ್ಧೆ, ಶಿಲ್ಪಕಲೆಯ ಕುರಿತಾದ ಒಲವು, ಸಂಗೀತದ ಮೇಲಿನ ಅಭಿರುಚಿ, ಪರಸ್ಪರ ಪೂರಕವಾಗಿಯೂ ಪೋಷಕವಾಗಿಯೂ ಜೀವನ ಪ್ರೀತಿಯನ್ನು ಎತ್ತಿ ಹಿಡಿದಿದೆ. ಸಂಗೀತದಂತಹ ಕಲೆಗಳ ಸ್ಪರ್ಶವಿಲ್ಲದ ಲೌಕಿಕ ಜೀವನ ರಸಹೀನವೂ ಯಾಂತ್ರಿಕವೂ ಆಗಿಬಿಡಬಲ್ಲದು. ಸಂಸಾರವೆಂದರೆ ಅರ್ಥ ಮತ್ತು ಕಾಮಗಳ ಪ್ರಯೋಜನಗಳನ್ನು ಪಡೆಯಲಿರುವ ಭೋಗಕ್ಷೇತ್ರವಾಗಿ ಬಿಡಬಲ್ಲದು. ಲೌಕಿಕ ಅನುಭವವಿಲ್ಲದ ಕಲೋಪಾಸನೆಯು ಅಮೂರ್ತವೂ ಅರ್ಥಹೀನವೂ ಆಗಿಬಿಡಬಲ್ಲದು. ಕಲೆ ಮತ್ತು ಲೌಕಿಕ ಕಾಯಕ ಒಂದು ಸಮರಸದ ಹದದಲ್ಲಿ ಬೆರೆತಾಗ ಜೀವನ ಆರೋಗ್ಯಪೂರ್ಣವಾಗಿರಬಲ್ಲದು ಎಂಬುದಕ್ಕೆ ಕುಂದಗೋಳವೇ ಸಾಕ್ಷಿಯಾಗಿದೆ.

ಮೂಲತಃ ಧಾರ್ಮಿಕ ಶ್ರದ್ಧೆಯ ಕೃಷಿಕರಾದ ಇಲ್ಲಿಯ ಜನ ಸಂಗೀತವನ್ನು ಕೇವಲ ಮನರಂಜನೆಯ ಸಾಧನವನ್ನಾಗಿ ಉಪಯೋಗಿಸಿಕೊಳ್ಳಲಿಲ್ಲ. ತಮ್ಮ ದೈನಂದಿನ ಆಗುಹೋಗುಗಳಲ್ಲಿ ಧರ್ಮ ಮತ್ತು ದೇವರ ಪಾತ್ರವನ್ನು, ಮಹಿಮೆಯನ್ನು ಸದಾ ಕಂಡುಕೊಂಡವರು. ಇಂಥ ಗಾಢವಾದ ಧಾರ್ಮಿಕ ಶ್ರದ್ಧೆ, ಪೂಜೆ, ಮಂತ್ರ, ಶಾಸ್ತ್ರ ವಿಧಿಗಳಲ್ಲೇ ತನ್ನ ಸತ್ವಗಳನ್ನು ಕಳೆದುಕೊಳ್ಳಲಿಲ್ಲ. ಭಕ್ತಿಯ ಅನುಭೂತಿಯನ್ನು ಹೆಚ್ಚು ಸುಂದರವಾಗಿಯೂ ಶೃಂಗಾರಮಯವಾಗಿಯೂ ಅನುಭವಿಸಲು ಈ ಪರಿಸರದ ಗುಡಿಗಳ ವಾಸ್ತು, ಮೂರ್ತಿಗಳ ಶಿಲ್ಪ ಪ್ರೇರಣೆ ನೀಡಿರಬಹುದು. ಗುಡಿಗಳ ವಾಸ್ತು ವಿನ್ಯಾಸ ಮತ್ತು ವಿವಿಧ ದೇವತೆಗಳ ಪರಿವಾರ ಆಧ್ಯಾತ್ಮಿಕತೆಯನ್ನೂ ಕೌಟುಂಬಿಕ ಮೌಲ್ಯಗಳನ್ನು ಸಂಪರ್ಕಿಸಿದ ಸುವರ್ಣ ಸೇತುವೆಯಾಗಿದೆ. ಇಲ್ಲಿಯ ದೇವತೆಗಳಿಗೆ ಸಂಸಾರದ ಪರಿವಾರವಿದೆ. ಅವು ವಾಸವಾಗಿರುವ ಗುಡಿಗಳಲ್ಲೆ ಮನುಷ್ಯರು ವಾಸಿಸುವ ಮನೆಯ ವಾಸ್ತು ಕಲ್ಪನೆ ಸ್ಪಷ್ಟವಾಗಿ ವ್ಯಕ್ತವಾಗಿದೆ. ತಮ್ಮ ಭಾವನೆಗಳನ್ನು ಶಿಲ್ಪಕಲೆ, ದೈವಿಕ ಭಕ್ತಿ ಮತ್ತು ಸಂಗೀತದಿಂದ ಮಾನವೀಯಗೊಳಿಸಿಕೊಳ್ಳುತ್ತಿರುವದು ವಿಶಿಷ್ಟ ಸಂಗತಿಯಾಗಿದೆ.

ಪುರಾಣ ಕಾಲದ ಮುಖ್ಯ ದೇವತೆಗಳಲ್ಲಿ ಹಲವು ರೋಚಕ ಅತೀಂದ್ರಿಯ ಕಥೆಗಳ ಒನ್ನೆಲೆಯೊಂದಿಗೆ ಇಲ್ಲಿ ನೆಲೆಸಿವೆ. ದೇವ ದೇವತೆಗಳ ಆರಾಧಾನೆಯನ್ನು ಮನೆ, ಹೊಲ ಮತ್ತು ದೇವಸ್ಥಾನಗಳಲ್ಲಿ ಜನರು ಸಾಂಗವಾಗಿ ನಡೆಸುತ್ತ ಬಂದಿದ್ದಾರೆ. ದೇವರ ಪೂಜೆಗಳು, ಸ್ತುತಿಗಳು ಹಾಡು ಮತ್ತು ವಾದ್ಯಗಳೊಂದಿಗೆ ಅರ್ಪಿತಗೊಳ್ಳುತ್ತವೆ. ಈ ಪರಿಸರದ ಜನರು ದೇವಸ್ಥಾನದಲ್ಲಿ ಸಾಮೂಹಿಕವಾಗಿ ಸೇರಿ ಸಂಗೀತ ಸೇವೆಯನ್ನು ನಡೆಸುವ ಸಂಪ್ರದಾಯವಿದೆ. ಇಲ್ಲಿನ ಪ್ರಸಿದ್ಧ ದೇವಸ್ಥಾನಗಳಾದ ವಿಠಲಮಂದಿರ, ಶಂಭುಲಿಂಗಮಂದಿರ, ಮಾರುತಿಗುಡಿ, ದತ್ತ ದೇವಸ್ಥಾನ ಇವುಗಳಲ್ಲಿ ಶರಣರ ಪದಗಳು ವಚನಗಾಯನ, ಕೃಷ್ಣ ಪಾರಿಜಾತ ನಾಟಕ, ಭಜನೆಗಳು ಪೀರಗಾಸೆ ಹಾಡುಗಳ ಕಾರ್ಯಕ್ರಮ ನಡೆಯುತ್ತವೆ. ಋತುಮಾನದ ನಿಯಮಿತ ಆವರ್ತನದಂತೆ ಸಂಗೀತ ಸೇವೆಯ ಪುನರಾವರ್ತನೆಯೂ ಜನರ ಮೂಲಕ ನಡೆಯುತ್ತಿರುತ್ತದೆ. ದೈನಿಕ ಜಗತ್ತಿನ ಯಾಂತ್ರಿಕತೆಗೆ ಒಂದಿಷ್ಟು ಸೌಂದರ್ಯ, ರುಚಿ ಹಾಗೂ ಸಂಸಾರದ ಭಾರವನ್ನು ಹಗುರುಗೊಳಿಸುವ ಮುಕ್ತತೆ ಇಂಥಾ ಸಂಗೀತೋತ್ಸವಗಳಿಂದ ಪ್ರಾಪ್ತವಾಗುತ್ತವೆ. ಹಲವು ಮತ, ಪಂಥ, ವರ್ಗ, ಜಾತಿಯ ಜನರು ಒಂದೆಡೆ ಸೇರುವಂಥಾದ್ದು ಸಂಗೀತದ ಸಮ್ಮೋಹನದ ಮೂಲಕವೇ. ಈ ಅರ್ಥದಲ್ಲಿ ಸಂಗೀತ ಜನಸಾಮಾನ್ಯರ ಜೀವನಾಡಿಯ ಮೇಲೆ ಮಾಡುವ ಎರಡು ಮುಖ್ಯ ಪ್ರಭಾವಗಳನ್ನು ಹೀಗೆ ಪರಿಗ್ರಹಿಸಬಹುದಾಗಿದೆ. ವಿಭಿನ್ನ ಜೀವನ ಶೈಲಿಗಳೊಂದಿಗೆ ಸಂಗೀತ ಒಂದಾಗಿ ಬದುಕನ್ನು ಗ್ರಹಿಸುವ, ಅರ್ಥೈಸುವ ಅಂತರ್ ಶಿಸ್ತಿನ ವಿಧಾನವಾಗಿರುವುದು. ಅಂದರೆ ಸಂಗೀತ ಜೀವನದ ಇತರ ಕ್ರಿಯಾಶೀಲ ಚಟುವಟಿಕೆಗಳಿಂದ ಪ್ರತ್ಯೇಕವಾಗಿ ಉಳಿಯದೇ ಅವುಗಳೊಂದಿಗೆ ಸಾವಯವ ಸಂಬಂಧವಿಟ್ಟುಕೊಂಡು ಬೆಳೆಯುತ್ತದೆ ಎಂಬುದು, ಹಾಗಾಗಿ ಸಂಗೀತವು ಮನುಷ್ಯನ ಮನಸ್ಸಿನ ಅಭಿವ್ಯಕ್ತಿಯ ಭಾಗವಾಗಿ ಉಳಿದಿದೆ. ಧರ್ಮ, ಶಿಲ್ಪಕಲೆ, ನೃತ್ಯ ಲೌಕಿಕ ಆಚರಣೆಗಳೊಂದಿಗೆ ಅದರ ಅನ್ಯೋನ್ಯ ಸಂಬಂಧವಿದೆ. ಅವುಗಳ ಗುಣಗಳನ್ನೊಳಗೊಂಡ ಸಂಯುಕ್ತರೂಪ ಅದರ ಸಂರಚನೆಯಲ್ಲಿ ಅಡಗಿದೆ. ಹಾಡುಗಾರರನ್ನೂ ಅವರ ಹಾಡನ್ನೂ ಆಲಿಸುವವರನ್ನೂ ಕಾಲಗತಿಯಲ್ಲಿ ಏಕತ್ರ ಹಿಡಿಯುತ್ತ ಪದಾರ್ಥ ಪ್ರಪಂಚದಾಚೆ ಕೆಲವು ಕ್ಷಣವಾದರೂ, ಜಿಗಿಸಬಲ್ಲ ಶಕ್ತಿ ಅದಕ್ಕಿದೆ. ಈ ತರಹ ಲಲಿತ ಕಲೆಗಳೊಂದಿಗೆ ಅದರ ಸಂಬಂಧದಿಂದಾಗಿ ಜೀವನದ ಸಮಗ್ರದರ್ಶನವನ್ನು ಲೌಕಿಕ ಮತ್ತು ಅಲೌಕಿಕ ನೆಲೆಯಲ್ಲಿ ನೀಡುವ ಸಾಮರ್ಥ್ಯವಿದೆ.

ಭಾವ ಭಕ್ತಿಗಳಲ್ಲಿ ತನ್ನ ಮೂಲ ನೆಲೆಯನ್ನು ಪಡೆದುಕೊಳ್ಳುವ ಸ್ವರೂಪದಿಂದಾಗಿ ಸಂಗೀತವು ಜಾತಿ, ಮತ, ಪ್ರಾಂತ, ಭಾಷೆಗಳ ಗಡಿಗಳನ್ನು ಮೀರಿ ಹೋಗಬಲ್ಲದು. ವಿಶಾಲವೂ, ಸಮಾನವೂ ಆದ ನಾದಲೋಕದಲ್ಲಿ ಐಕ್ಯತೆಯೊಂದಿಗೆ ಬದುಕುವ ಮಾಧ್ಯಮವಾಗಿಯೇ ಸಂಗೀತವನ್ನು ಅರ್ಥೈಸಬಹುದಾಗಿದೆ. ಅಚ್ಚರಿಯೆಂದರೆ ಈ ಎರಡು ಮುಖ್ಯಘಟನೆಗಳು ಕುಂದಗೋಳ ಪರಿಸರದಲ್ಲಿ ಸಂಭವಿಸಿವೆ.

ಊರು ಕೇರಿ ಎಂದ ಮೇಲೆ ಕಾಲಕಾಲಕ್ಕೆ ಹಬ್ಬ ಹರಿದಿನಗಳು ಬಂದು ಹೋಗಲೇಬೇಕು. ಹಬ್ಬಗಳ ಆಚರಣೆ ಮನುಷ್ಯ ಕುಲದ ಸುಪ್ತ ಬಯಕೆಗಳ ಸಾಂಕೇತಿಕ ಅಭಿವ್ಯಕ್ತಿಯಾಗಿದೆ. ಹಬ್ಬಗಳ ಮೂಲಕ ದೇವರು ಮನುಷ್ಯ

ಜೀವನವನ್ನು ಪ್ರವೇಶಿಸಿ ಹಲವು ಲೀಲೆಗಳಲ್ಲಿ ಪ್ರತ್ಯಕ್ಷವಾಗುತ್ತಾನೆ. ತಮ್ಮ ನಂಜಿಕೆಗಳನ್ನು ಬೇಟಿಕೆಗಳನ್ನು ನಿವೇದಿಸಿಕೊಳ್ಳುವ ಸಲುವಾಗಿ ಹಬ್ಬಗಳನ್ನು ಜನರು ಸೃಷ್ಟಿಸಿಕೊಂಡಿದ್ದಾರೆ. ಭಕ್ತಿ ಭಾವಗಳ ತೀವ್ರತೆ, ತಲ್ಲೀನತೆಗೋಸ್ಕರ ಮತ್ತು ಇಷ್ಟ ದೇವತೆಗಳೊಂದಿಗೆ ಸಂವಹನ ನಡಸುವಗೋಸ್ಕರ ಜನರು ಹಬ್ಬಗಳಲ್ಲಿ ಸಂಗೀತ ಆರಾಧನೆಯನ್ನು ಮಾಡುತ್ತಾರೆ. ಕೃಷ್ಣ ಜನ್ಮಾಷ್ಟಮಿ, ನಾಗರಪಂಚಮಿ, ಗಣೇಶೋತ್ಸವದಂತಹ ಪುರಾಣ ಪ್ರಸಿದ್ಧ ಹಬ್ಬಗಳೊಂದಿಗೆ ಬಸವಣ್ಣ, ಶಿವಾಜಿ ಅಂಥವರ ಇತಿಹಾಸ ಪುರುಷರ ಜಯಂತಿಯ ಆಚರಣೆಯು ಇಲ್ಲಿ ನಡೆಯುತ್ತದೆ. ಇವುಗಳೊಂದಿಗೆ ಕರಿಬಂಡಿ ಉತ್ಸವ ಮಣ್ಣೆತ್ತಿನ ಹಬ್ಬದಂತಹ ಜಾನಪದ ಉತ್ಸವಗಳು ನಾಡಹಬ್ಬ ಮತ್ತು ಮೋಹರಂಗಳು ಆಚರಿಸಲ್ಪಡುತ್ತವೆ. ಈ ವೈವಿಧ್ಯಮಯ ಹಬ್ಬಗಳ ಆಚರಣೆ ಕೇವಲ ಪೂಜೆ ಹೊಸ ಬಟ್ಟೆಗಳನ್ನು ಧರಿಸುವಿಕೆ, ಸಿಹಿ ಭಕ್ಷಗಳ ಭೋಜನಗಳೊಂದಿಗೆ ಮುಕ್ತಾಯಗೊಳ್ಳದೇ ಕೀರ್ತನೆ ಅಭಂಗ, ನಾಟ್ಯಸಂಗೀತ, ದೇಶಭಕ್ತಿ ಗೀತೆ ಮತ್ತು ಅಲಾವಿ ಹಾಡುಗಳಿಂದ ಇಡೀ ಪರಿಸರ ನಾದಮಯವಾಗುತ್ತದೆ. ಹಬ್ಬಗಳ ಸಂದರ್ಭಗಳಲ್ಲಿ ಹಾಡುವವರೆಲ್ಲ ಸಂಗೀತದ ಶಾಸ್ತ್ರ ವ್ಯಾಕರಣವನ್ನು ಬಲ್ಲವರು ಎಂದೇನು ಅರ್ಥವಲ್ಲ ಅದ್ವಿತೀಯ ಸಿದ್ಧಿ ಸಾಧನೆಗಳನ್ನು ಗಳಿಸಿದವರೂ ಹಾಡುವ ಪದ್ಧತಿ ಇಲ್ಲಿದೆ. ಆದರೆ ಮುಖ್ಯವಾಗಿ ಗಮನಿಸಬೇಕಾದ ಸಂಗತಿ ಎಂದರೆ ಈ ಹಬ್ಬಗಳು ಸಂಗೀತದ ಬಗ್ಗೆ ಜನರಲ್ಲಿ ಸದಭಿರುಚಿಯನ್ನು ಹುಟ್ಟಿಸಿದವು ಎಂಬುದಾಗಿದೆ.

ಬಸವಣ್ಣ ದೇವರ ಉತ್ಸವವನ್ನು ವಿಶೇಷವಾಗಿ ಉಲ್ಲೇಖಿಸಬೇಕು. ಬಸವ ಜಯಂತಿಯ ದಿನ ಮಹಿಳೆಯರೆಲ್ಲ ಗುಡಿಗೆ ಬಂದು ಶೃಂಗರಿಸಿದ ತೊಟ್ಟಿಲಲ್ಲಿ ಬಾಲ ಬಸವಣ್ಣನನ್ನು ಕೂಡ್ರಿಸಿ ತೂಗುತ್ತ ಜೋಗುಳ ಹಾಡುವ ವಿಶೇಷ ಪದ್ಧತಿಯನ್ನು ಗಮನಿಸಬೇಕು. ಮತ್ತೆ ಮತ್ತೆ ಹುಟ್ಟಿ ಬರುವ ಈ ಅವತಾರಿ ಪುರುಷನಿಗೆ ತಾವು ತಾಯಂದಿರು ಎಂಬ ನಂಬಿಕೆ ಮತ್ತು ಆ ಮೂಲಕ ಬಸವಣ್ಣ ಬೋಧಿಸಿದ, ಪಾಲಿಸಿದ ತತ್ವಗಳನ್ನು ತಮ್ಮ ಜೀವನದಲ್ಲಿ ಅಳವಡಿಸಿಕೊಳ್ಳುವ ವೃತ ಮಹತ್ವದ್ದಾಗಿದೆ. ಬಸವಣ್ಣ ರಚಿಸಿದ ಜೋಗುಳವನ್ನೇ ಹಾಡುವ, ಆ ಜೋಗುಳದಲ್ಲಿ ಬಸವಣ್ಣನನ್ನು ಪ್ರತ್ಯಕ್ಷ ಮಾಡಿಕೊಳ್ಳುವ ಪರಂಪರೆ ಅರ್ಥಪೂರ್ಣವಾಗಿದೆ. ಸ್ತ್ರೀಯರ ಮೂಲಕ ಅಭಿವ್ಯಕ್ತಗೊಳ್ಳುವ ಈ ಸರಳ ಜಾನಪದ ಮಾದರಿಯ ಸಂಗೀತ ಮಾಧ್ಯಮಗಳು ಸಾಮಾಜಿಕ ಸುಧಾರಣೆ ಸಾಧನವಾಗಿಯೂ ಬಳಸಲ್ಪಟ್ಟಿದೆ.

ಕುಂದಗೋಳ ಪರಿಸರವು ಅನೇಕ ವರ್ಷಗಳವರೆಗೆ ಜಮಖಂಡಿ ಸಂಸ್ಥಾನದ ಆಧೀನದಲ್ಲಿತ್ತು. ಸಂಸ್ಥಾನದ ಆಡಳಿತ ಕಾಲದಲ್ಲಿ ಮರಾಠರ ಪ್ರಭಾವ ಸ್ಪಷ್ಟವಾಗಿತ್ತು. ಇದರಿಂದಾಗಿ ಮಹಾರಾಷ್ಟ್ರದಿಂದ ಎರಡು ಮುಖ್ಯ ಸಾಂಸ್ಕೃತಿಕ ವಿಷಯಗಳು ಕನ್ನಡಿಗರ ಸಂವೇದನೆಯನ್ನು ಪ್ರವೇಶಿಸಿದವು. ವಿಠಲ ದೇವರ ಆರಾಧಕರಾದ ವಾರಕರಿ ಭಕ್ತಿ ಪಂಥದವರ ಪ್ರಭಾವ ಕರ್ನಾಟಕದ ಹಿಂದುಸ್ತಾನಿ ಸಂಗೀತದ ಮೇಲೆ ಆಯಿತು. ಈ ಮಾತಿಗೆ ಸಾಕ್ಷಿಯಾಗಿ ಇಂದಿಗೂ ಕುಂದಗೋಳದ ವಿಠಲ ಮಂದಿರದಲ್ಲಿ ಭಜನೆಗಳು, ಅಭಂಗಗಳು ನಡೆಯುತ್ತವೆ. ಭಕ್ತಿ ಭಾವದ

ತಲ್ಲೀನತೆಯಿಂದ ಹಾಡುವ ಭಕ್ತರ ಸಂಗೀತ ಜೀವನದ ಏಕೃತಗಳನ್ನು ದಾಟ ಹೋಗುವ ಹಂಗೋಲಾಗಿದೆ. ಎರಡನೆಯದಾಗಿ ಮಹಾರಾಷ್ಟ್ರದ ನಾಟಕಗಳು ಭಾಷಾಂತರ ರೂಪದಲ್ಲಿ ರಂಗಭೂಮಿ ಪ್ರದರ್ಶನಗಳಲ್ಲಿ ಹಾಗೂ ರಂಗಸಂಗೀತ ತನ್ನ ಚಲಾವಣೆಯಲ್ಲಿ ಕರ್ನಾಟಕದ ಹಿಂದುಸ್ತಾನಿ ಸಂಗೀತವನ್ನು ಪ್ರಭಾವಿಸಿದವು. ಈ ವಿಷಯ ಮಹಾರಾಷ್ಟ್ರದ ಸಂಗೀತ ಮತ್ತು ರಂಗಕಲೆಗಳ ಮೇಲೆ ಕನ್ನಡದ ಪ್ರಭಾವವಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ. ಈ ಎರಡು ರಾಜ್ಯಗಳ ಸಾಂಸ್ಕೃತಿಕ ಸಂಬಂಧ ಸಂಗೀತದ ಮೂಲಕ ಬಲಗೊಂಡಿತು. ಹಿಂದುಸ್ತಾನಿ ಸಂಗೀತಗಾರರು ರಂಗಸಂಗೀತಕ್ಕೆ ಮಾರುಹೋದದ್ದು ಅದಾಗಲೇ ಇತಿಹಾಸವಾಗಿದೆ. ಸಂಗೀತಗಾರರಿಗೆ ರಂಗಭೂಮಿ ಪ್ರೇಕ್ಷಕರನ್ನು ಪೂರೈಸುವದಷ್ಟೇ ಅಲ್ಲದೆ ಆರ್ಥಿಕ ಸಹಾಯವನ್ನೂ ನೀಡುವ ಸಾಧನವಾಗಿತ್ತು. ಪಂಡಿತ ಮಲ್ಲಿಕಾರ್ಜುನ ಮನ್ಸೂರ ಸವಾಯಿಗಂಧರ್ವ, ಬಸವರಾಜ ರಾಜಗುರು, ಲಿಂಗರಾಜಬುವಾ ಯರಗುಪ್ಪಿ ಮುಂತಾದವರು ರಂಗಭೂಮಿಯ ಮೂಲಕವೇ ತಮ್ಮ ಸಂಗೀತ ಭವಿಷ್ಯವನ್ನು ರೂಪಿಸಿಕೊಂಡವರು. ಸ್ವತಃ ಹಾಡುಗಾರರೇ ಪಾತ್ರಧಾರಿಗಳೂ ಆಗಿರುತ್ತಿದ್ದರಿಂದ ನಾಟಕಗಳು ಸಹಜವಾಗಿಯೇ ಸಂಗೀತ ಪ್ರಧಾನವಾದವು.

ಯಾವುದೇ ಪ್ರಕಾರದ ಕಲೆಯಾದರೂ ಸೂಕ್ತ ಆಶ್ರಯದಾತರಿಲ್ಲದೇ, ಶ್ರೋತೃವರ್ಗಗಳಿಲ್ಲದೇ ಅಸ್ತಿತ್ವದಲ್ಲಿರದು. ಕಲಾ ಪ್ರಯೋಗಕ್ಕೆ ಆರ್ಥಿಕ ಪೋಷಣೆ ಮತ್ತು ಅಭಿರುಚಿಯಿಂದ ಅನುಭವಿಸುವ ಮನಸ್ಸುಗಳು ಬೇಕೇ ಬೇಕು ಈಗಾಗಲೇ ಉಲ್ಲೇಖಿಸಿರುವಂತೆ ಅಂದಿನ ಮೈಸೂರು ಸಂಸ್ಥಾನದ ಅರಸರು ಉತ್ತರ ಭಾರತದಿಂದ ಪ್ರಸಿದ್ಧ ಹಿಂದುಸ್ತಾನಿ ಸಂಗೀತಗಾರರನ್ನು ಆಮಂತ್ರಿಸಿ ದಸರಾ ಹಬ್ಬದ ಸಂದರ್ಭದಲ್ಲಿ ಆಸ್ಥಾನದಲ್ಲಿ ಸಂಗೀತ ಉತ್ಸವವನ್ನು ನಡೆಸುತ್ತಿದ್ದರು. ಇಂಥಹ ಸಂಸ್ಥಾನಗಳ ಪ್ರಭಾವವೆನ್ನುವಂತೆಯೇ ಕುಂದಗೋಳ ಪರಿಸರದ ಜಮೀನ್ದಾರ ವಾಡೆಗಳಲ್ಲಿ ಸಂಗೀತ ಕಛೇರಿಗಳು ನಡೆಯತೊಡಗಿದವು. ಕುಂದಗೋಳದ ನಾಡಿಗೇರ ಮನೆತನವು ಇಂಥ ಒಂದು ಸಂಗೀತ ಪರಂಪರೆಯ ರಚನಾತ್ಮಕ ಅನುಕರಣೆಯಲ್ಲಿ ಆಸಕ್ತಿಯನ್ನು ತಳೆಯಿತು. ಶ್ರೀಮಂತರಾಗಿದ್ದ ವಾಡೆಯ ರಂಗನಗೌಡರು ಉತ್ತರದಿಂದ ಮೈಸೂರು ಸಂಸ್ಥಾನಕ್ಕೆ ಬರುತ್ತಿದ್ದ ಸಂಗೀತ ದಿಗ್ಗಜರನ್ನು ಮಾರ್ಗಮಧ್ಯದಲ್ಲೇ ಬರಮಾಡಿಕೊಂಡು ಸಂಗೀತ ಕಛೇರಿಯನ್ನು ಏರ್ಪಡಿಸುತ್ತಿದ್ದರು. ಖ್ಯಾತ ಹಿಂದುಸ್ತಾನಿ ಗಾಯಕರಾದ ಅಬ್ದುಲ್‌ಕರೀಮ್‌ಖಾನರನ್ನು ತಮ್ಮ ವಾಡೆಯಲ್ಲಿ ಉಳಿಸಿಕೊಂಡು ಸ್ಥಳೀಯ ರಸಿಕರಿಗೆ ಸಂಗೀತವನ್ನು ಅನುಭವಿಸುವ ಅವಕಾಶ ಮಾಡಿಕೊಟ್ಟರು. ಕರೀಮಖಾನರಿಂದ ಕುಂದಗೋಳ ಪರಿಸರವನ್ನು ಪ್ರವೇಶಿಸಿದ ಹಿಂದುಸ್ತಾನಿ ಸಂಗೀತವು ಗುರು ಶಿಷ್ಯ ಪರಂಪರೆಗೆ ನಾಂದಿಯಾಯಿತು. ರಂಗನಗೌಡರ ಔದಾರ್ಯದ ನೆರಳಿನಲ್ಲಿ ಸವಾಯಿಗಂಧರ್ವರ ಸಂಗೀತ ಪ್ರತಿಭೆ ಬೆಳೆಯಲು ಸಾಧ್ಯವಾಯಿತು. ಕರೀಮಖಾನರ ಶಿಷ್ಯತ್ವ ಪಡೆಯಲು ಕಾರಣರಾದರು. ಸಂಗೀತವನ್ನು ರಕ್ಷಿಸುವ, ಜನಸಾಮಾನ್ಯರಿಗೆ ಹಂಚುವ ಕೆಲಸ ನಾನಾಸಾಹೇಬರ ಮೂಲಕ ಮುಂದುವರೆಯಿತು. ಸ್ವತಃ ಸಂಗೀತಗಾರರಾಗಿದ್ದ ನಾನಾಸಾಹೇಬರು ತಮ್ಮ ಶ್ರೀಮಂತಿಕೆಯ ಬಹುಭಾಗವನ್ನು ಸಂಗೀತಕ್ಕೋಸ್ಕರ ಮುಡಿಪಾಗಿಟ್ಟರು. ಪ್ರಾಯಶಃ ಸಂಗೀತದ ಸಂಪರ್ಕವಿಲ್ಲದಿದ್ದರೆ ನಾನಾಸಾಹೇಬರ ಶ್ರೀಮಂತಿಕೆಗೆ ಪಾಳೆಗಾರಿಕೆಯ ಹಿಂಸಾಪ್ರವೃತ್ತಿ ಬಂದು ಬಿಡುತ್ತಿತ್ತೇನೋ. ಬಡವ ಮತ್ತು

ಶ್ರೀಮಂತರ ನಡುವಿನ ಸಂಬಧವನ್ನು ಮಾನವೀಯಗೊಳಿಸಿದ ಶಕ್ತಿ ಸಂಗೀತಕ್ಕಿರುವುದು ಸ್ಪಷ್ಟವಾಗಿದೆ. ಏಕೆಂದರೆ ನಾನಾಸಾಹೇಬರು ತಮ್ಮ ವಾಡೆಯಲ್ಲಿ ಕೂಲಿ ಕೆಲಸಕ್ಕಿದ್ದ ಅನ್ಯಮತದ ಬಡವರ ಕೈಗೆ ತಂಬೂರಿ ಒಡಿಸಿದರು. ಸಂಗೀತವನ್ನು ಆಸ್ವಾದಿಸುವ ಸಮಯದಲ್ಲಿ ಮತ್ತು ಆಮೇಲೆ ಲೌಕಿಕ ಭೇದ ಭಾವಗಳು ನಶಿಸಿ ಹೋದವು. ಎಲ್ಲ ಮತ ಪಂಥ ಜಾತಿ ಧರ್ಮಗಳ ಅನುಯಾಯಿಗಳನ್ನು ಒಳಗೊಂಡ ಸಂಗೀತ ಮನುಷ್ಯನ ಸ್ವಾಭಿಮಾನವನ್ನು ಜೀವನ ಪ್ರೀತಿಯನ್ನು ಸಲಹುವ ಉದಾರವಾದ ದಾರಿಯಾಯಿತು.

ಹಿಂದುಸ್ತಾನಿ ಸಂಗೀತವು ಬ್ರಿಟಿಷರ ಕಾಲದಲ್ಲಿ ವಿಕೃತಗೊಂಡಿದ್ದನ್ನು ಈಗಾಗಲೇ ಉಲ್ಲೇಖಿಸಿದ್ದಾಗಿದೆ. ಇಂಥ ಸಂದರ್ಭದಲ್ಲಿ ಸಂಗೀತವು ಪಾವಿತ್ರ್ಯವನ್ನೂ ಅನನ್ಯತೆಯನ್ನೂ ಕಾಯ್ದ ಜವಾಬ್ದಾರಿ ಸಣ್ಣದಲ್ಲ. ವಸಾಹತುಶಾಹಿ ಶಕ್ತಿಗಳು ದೇಶೀಯ ಸಂಸ್ಕೃತಿಗಳನ್ನು ವಿಕೃತಗೊಳಿಸಿದರೂ ಸಂಪೂರ್ಣವಾಗಿ ನಾಶಗೊಳಿಸಲಾರವು ಎಂಬುದಕ್ಕೆ ಇದೊಂದು ಉತ್ತಮ ಉದಾಹರಣೆಯಾದೀತು. ಹಿಂದುಸ್ತಾನಿ ಸಂಗೀತವನ್ನು ತುರ್ಕರ ಸಂಗೀತವೆಂಬ ಮತೀಯ ಭಾವನೆಯನ್ನು ಕೆರಳಿಸುವುದು ವಿಲಾಸ ಪ್ರಿಯರನ್ನು ತಣಿಸಲು ವೇಶ್ಯಾಗೃಹಗಳಲ್ಲಿ ಮಾತ್ರ ಬಳಕೆಯಾಗುತ್ತ ಬಂದಿರುವುದು ಅಪಪ್ರಚಾರ ನಡೆದ ಕಾಲವದು. ಇದೇ ಸಂದರ್ಭದಲ್ಲಿ ಹಿಂದುಸ್ತಾನಿ ಸಂಗೀತವು ಪಾಶ್ಚಾತ್ಯ ಸಂಗೀತದಿಂದಲೊ ಕರ್ನಾಟಕ ಸಂಗೀತದಿಂದಲೋ ಪ್ರತಿರೋಧವನ್ನು ಎದುರಿಸುತ್ತ ತನ್ನ ಅಸ್ತಿತ್ವವನ್ನು ಕಾಪಾಡಿಕೊಳ್ಳಬೇಕಾಗಿತ್ತು. ಧರ್ಮ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ವಸಾಹತು ಶಾಹಿಯ ವಿಕೃತ ನೆರಳು ಚಾಚಿದರೂ ಅದಕ್ಕೆ ಸಂಗೀತದ ಮೂಲ ಸ್ವರೂಪವನ್ನು ಕೆಡಿಸಲು ಸಾಧ್ಯವಾಗಲಿಲ್ಲ. ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವವನ್ನು ಪ್ರತಿರೋಧಿಸುವ ಸ್ವಯಂ ಪ್ರತಿಭೆ ಅಂದು ಎಲ್ಲರಿಗೂ ಇರಲಿಲ್ಲ. ಮೈಸೂರ ಆಸ್ಥಾನದಲ್ಲಿದ್ದ ವರ್ಣಚಿತ್ರಕಲಾವಿದ ರವಿವರ್ಮ ಕೂಡಾ ಈ ಪ್ರಭಾವದಿಂದ ಮುಕ್ತನಾಗಿರಲಿಲ್ಲ. ರವಿವರ್ಮನ ಚಿತ್ರಗಳು ಪಾಶ್ಚಾತ್ಯರ ವಾಸ್ತವ ಮಾರ್ಗದ ಶೈಲಿಯನ್ನು ಅನುಸರಿಸಿಯೇ ರಚಿಸಲ್ಪಟ್ಟದ್ದು. ಆದರೆ ಭಾರತೀಯರ ಅಭಿಜಾತ ಕಲೆ ಮೂಲಭೂತವಾಗಿ ಸಂಕೇತಾತ್ಮಕವಾದದ್ದು. ಹಿಂದುಸ್ತಾನಿ ಸಂಗೀತದ ಗುರು ಶಿಷ್ಯ ಪರಂಪರೆಯಲ್ಲಿ ಹಿಂದು ಮುಸ್ಲಿಂ ಎಂಬ ಮತೀಯ ಪ್ರಶ್ನೆ ಇರಲೇ ಇಲ್ಲ ನಾಡಗೇರರ ವಾಡೆಯಲ್ಲಿ ಅನೇಕ ಜನ ಮುಸ್ಲಿಂ ಜನಾಂಗದ ಕೂಲಿಗಳಿದ್ದರು. ಸ್ವತಃ ಕರೀಮಖಾನರು ಸವಾಯಿಗಂಧರ್ವರನ್ನು ಶಿಷ್ಯನನ್ನಾಗಿ ಸ್ವೀಕರಿಸಿದರು.

ಕುಂದಗೋಳ ಪರಿಸರದ ಭಾವೈಕ್ಯತೆಗೆ ಪರೋಕ್ಷವಾಗಿ ಕಾರಣವಾದದ್ದು ಶಿಶುನಾಳ ಶರೀಫರ ಜೀವನ ವೃತ್ತಾಂತದಲ್ಲಿ ಹಾಸು ಹೊಕ್ಕಾಗಿದ್ದ ತತ್ವಪದಗಳು ಮತ್ತು ಹಾಡುಗಳು, ಶಿಶುನಾಳ ಶರೀಫರ ಸಂತ ಜೀವನದಲ್ಲಿ ಮುಸ್ಲಿಂ, ವೈದಿಕ ಮತ್ತು ವೀರಶೈವ ಮತ ಧರ್ಮಗಳ ಸಮನ್ವಯತೆಯನ್ನು ನೋಡಬಹುದು. ಈ ಮೂರು ಮತಗಳ ತತ್ವಾಚರಣೆಗಳು ಶರೀಫರಿಗೆ ಓದಿನಿಂದ ಪ್ರಾಪ್ತವಾದದ್ದಲ್ಲ, ಬದಲಿಗೆ ಅಯ್ಯನವರ ಮಠದಲ್ಲಿ, ಗೋವಿಂದ ಭಟ್ಟರ ಒಡನಾಟದಲ್ಲಿ ಶರೀಫರು ಮತೀಯ ಗೋಡೆಗಳನ್ನು ಪವಾಡವೆಂಬಂತೆ ದಾಟಿ ಹೋದರು. ಅವರ ಅನುಭಾವಿ ಜೀವನ ದರ್ಶನಕ್ಕೆ ತತ್ವಪದಗಳು ಅವುಗಳನ್ನು ಹಾಡುತ್ತ ಲೋಕ ಸಂಚರಿಸಿದ ವಿರಕ್ತ ರೀತಿಯು

ಕಾರಣವಾಯಿತು. ಕುಂದಗೋಳ ಪರಿಸರದಲ್ಲಿ ಇಂಥ ಪವಾಡಗಳು ಜೀವನದ ಭಿನ್ನ ಕ್ಷೇತ್ರಗಳಲ್ಲಿ ನಡೆಯುತ್ತಲೇ ಇದ್ದವು. ಭೂ ಸುಧಾರಣ ಕಾಯ್ದೆ ಜಾರಿಗೆ ಬರುವ ಮುನ್ನ ಶ್ರೀಮಂತ ಜಮೀನ್ದಾರರಾಗಿದ್ದ ನಾನಾಸಾಹೇಬರು ತಮ್ಮ ಜೀವನದ ಕೊನೆಯ ದಿನಗಳಲ್ಲಿ ಸ್ವಂತ ಜಮೀನನ್ನು ತಮ್ಮ ವಾಡೆಯಲ್ಲೆ ಕೆಲಸ ಮಾಡಿಕೊಂಡಿದ್ದ ಬಡವರಿಗೆ ಅವರ ಜಾತಿ ಮತಗಳನ್ನು ಗಣನೆಗೆ ತೆಗೆದುಕೊಳ್ಳದೇ ಹಂಚಿದ್ದು ಕೂಲಿಕಾರರ ಅದಮ್ಯ ಆಸಕ್ತಿ ಗಮನಿಸಿದ ಅವರಿಗೂ ಸಂಗೀತ ಪಾಠ ಮಾಡಿದ್ದು, ಕನ್ನಡ ಮತ್ತು ರಂಗಭೂಮಿಯ ನಡುವೆ ಎರಡು ಭಾಷೆಗಳ ರಂಗ ಸಂಗೀತಗಳ ವಿನಿಮಯವಾದದ್ದು, ಶರೀಫರು ಗೋವಿಂದ ಭಟ್ಟರಿಂದ ಜನಿವಾರದ ದೀಕ್ಷೆಯನ್ನು ಪಡೆದದ್ದು, ಕುಂದಗೋಳದಂತಹ ಸಾಮಾನ್ಯ ಪರಿಸರದಲ್ಲಿ ಹಲವು ಸಂಗೀತಗಾರರ ಸಮಾವೇಶಗೊಂಡಿದ್ದು ಸಾಮಾನ್ಯ ಸಂಗತಿಗಳಲ್ಲ. ಸಾಮಾಜಿಕ ಮತ್ತು ಆರ್ಥಿಕ ಅಸಮಾನತೆಗಳು ಅಂದಿನ ಕಾಲದಲ್ಲಿ ಇರಲಿಲ್ಲವೆಂದೇನಲ್ಲ ಆದರೆ ಅವು ಸಂಗೀತದ ಸ್ಪರ್ಶದಿಂದ ಮೃದುಗೊಳ್ಳುತ್ತ ಉದಾರವಾಗುತ್ತ ಸಾತ್ವಿಕವಾಗುತ್ತ ಸಾಗಿದವು.

ಬ್ರಿಟೀಷರ ಮೂಲಕ ಭಾರತವನ್ನು ಪ್ರವೇಶಿಸಿದ ಆಧುನಿಕತೆಯ ಒಂದು ಅಂಶ ಕುಂದಗೋಳ ಪರಿಸರದಲ್ಲಿ ಸಂಗೀತ ಬೆಳೆಸಲು ಅಪ್ರತ್ಯಕ್ಷವಾಗಿಯೇ ಕಾರಣವಾದದ್ದು ಕುತೂಹಲಕಾರಿಯಾಗಿದೆ. ಬಹು ವಿಶಾಲವಾದ ಪ್ರದೇಶಗಳಲ್ಲಿ ಹಂಚಿಹೋದ ಭಾರತದ ಭೌಗೋಳಿಕ ಸ್ಥಳಗಳನ್ನು ಸಂಪರ್ಕಿಸಲು ರೈಲು ಹಳಿಗಳು ಸಹಾಯ ಮಾಡಿದವು. ಬಹುದೂರದ ಗ್ವಾಲಿಯರ್‌ದಿಂದಲೋ ಭೂಪಾಲದಿಂದಲೋ ಸಂಗೀತಗಾರರು ಮೈಸೂರು ಸಂಸ್ಥಾನಕ್ಕೆ ಬಂದು ಹೋಗುವಂತಾದದ್ದು ರೇಲ್ವೆ ವ್ಯವಸ್ಥೆಯಿಂದಲೇ. ಹುಬ್ಬಳ್ಳಿ ಕುಂದಗೋಳ ಮಾರ್ಗವಾಗಿ ಮೈಸೂರಿನತ್ತ ಎಳೆದ ಹಳಿಗಳ ಮೇಲೆ ರೈಲುಗಳು ಓಡಾಡತೊಡಗಿದವು. ಆಧುನಿಕ ಸಂಚಾರಿ ಸೌಕರ್ಯದ ಮುಖ್ಯ ಸಾಧನವಾದ ರೇಲ್ವೆಯಿಂದಲೇ ಕರೀಮ್‌ಖಾನರು ಬಂದು ಹೋಗುವಂತಾದದ್ದು ಸುಲಭವಾಯಿತು. ಮೈಸೂರಿಗೆ ಹೊರಡುತ್ತಿದ್ದ ರೈಲು ಡಬ್ಬಿಯಿಂದ ದಾರಿ ಮಧ್ಯ ರಂಗನಗೌಡರು ಅಬ್ದುಲ್‌ಕರೀಮಖಾನರನ್ನು ಇಳಿಸಿಕೊಂಡು ಕುಂದಗೋಳದ ತಮ್ಮ ವಾಡೆಗೆ ಕರೆದೊಯ್ದು ಸಂಗೀತವನ್ನು ಉಣಬಡಿಸುವ ಅವಕಾಶ ಉಂಟಾದದ್ದು ಹೀಗೆ.

ಆಧುನಿಕ ನಾಗರಿಕ ಸಂಚಾರ ವ್ಯವಸ್ಥೆಯಿಂದ ಸಮಾನ ಕಲಾಸಕ್ತರು ಒಂದು ಪ್ರದೇಶದಲ್ಲಿ ಸಮಾಗಮಿಸಲು ಅನುಕೂಲವಾಯಿತು. ಸಂಗೀತ ಪರಂಪರೆ ಮತ್ತು ಸಂಗೀತ ಪ್ರತಿಭೆಗಳ ಸಂಪರ್ಕದಿಂದಾಗಿ ಒಂದು ಪರಿಸರದಲ್ಲಿ ಹೊಸದೇ ಆದ ನಾದಕ್ರಾಂತಿ ಉಂಟಾಗುತ್ತದೆ. ಆದರೆ ಇಂಥಹ ಅದ್ಭುತ ಪವಾಡ ಸಂಭವಿಸಲು ಪ್ರತಿಭೆ ಪರಂಪರೆಗಳ ಸಂಯೋಗವಾಗಬೇಕು. ಇದೇನೋ ತನ್ನಷ್ಟಕ್ಕೆ ತಾನೇ ಜರಗುವ ಘಟನೆಯಲ್ಲ. ಸಂಗೀತದ ವಿಷಯದಲ್ಲಿಯೂ ಅರ್ಪಣಾ ಭಾವದ ಗುರು ಪ್ರತಿಭಾವಂತ ಶಿಷ್ಯರನ್ನು ಶೋಧಿಸುವ ಕೆಲಸ ನಡೆಯುತ್ತಿರುತ್ತದೆ. ಇಂಥ ಹುಡುಕಾಟದಲ್ಲಿ ಮಧ್ಯವರ್ತಿಗಳಾಗಿ ಪ್ರೇರಕ ಶಕ್ತಿಗಳಾಗಿ ದುಡಿಯುವ ಉದಾರ ಜೀವಿಗಳು ಇರಬೇಕಾಗುತ್ತದೆ. ಅಥವಾ ಇದನ್ನು ಹೀಗೂ ಹೇಳಬಹುದೇನೊ ಉದಾರ ಚೇತನಗಳ ಸಹಾಯ ಹಸ್ತಕ್ಕಾಗಿ ಸಂಗೀತ ಸದಾ ಕಾದಿರುತ್ತದೆ ಎಂದು. ಆದರೆ ದುರದೃಷ್ಟವಶಾತ್ ಕಲೆಯ ಪರಿಚಾರಕರಾಗಿ ಪ್ರಾಮಾಣಿಕವಾಗಿ ತಮ್ಮನ್ನು ಸಮರ್ಪಿಸಿಕೊಂಡವರನ್ನು ನೇಪಥ್ಯಕ್ಕೆ ಸರಿಸಿ ಅವರನ್ನು ಅವಜ್ಞೆಗೆ ಗುರಿಪಡಿಸುವ ಕೆಲಸವು

ನಡೆದಿರುತ್ತದೆ. ಇಂಥ ಮಹನೀಯರನ್ನು ಹೆಮ್ಮೆಯಿಂದ ಸ್ಮರಿಸಬೇಕಾದ, ಅಭಿಮಾನದಿಂದ ಅಂಥವರ ನಿಸ್ವಾರ್ಥ ಸೇವೆಯಿಂದ ಸ್ಫೂರ್ತಿ ಪಡೆಯುವ ಅವಕಾಶ ಪ್ರತಿ ತಲೆಮಾರಿಗೂ ದೊರೆಯುವಂತಾಗಬೇಕು. ಕುಂದಗೋಳದ ನಾಡಗೇರ ವಾಡೆಯಲ್ಲಿ ರಂಗನಗೌಡರಂಥ, ನಾನಾಸಾಹೇಬರಂಥ ಸಂವೇದನಾಶೀಲ ಮನಸ್ಸುಗಳು ಸದ್ದಿಲ್ಲದೇ ಸಂಗೀತವನ್ನು ಉಳಿಸಿ ಬೆಳೆಸುವ ಮಹಾಕಾರ್ಯವನ್ನು ಮಾಡಿವೆ. ರಂಗನಗೌಡರು ಕಾಲವಾದ ನಂತರ ನಾನಾಸಾಹೇಬರು ಧರ್ಮ ಮತ್ತು ಶಿಲ್ಪಕಲೆಗಳ ಕುಂದಗೋಳ ಪರಿಸರದ ಫಲವತ್ತಾದ ಭೂಮಿಗೆ ಸಂಗೀತದ ನದಿಯನ್ನು ಹರಿಸಿಕೊಂಡು ಬಂದರು. ನಾಡಗೇರ ವಾಡೆಯು ಹಿಂದುಸ್ತಾನಿ ಸಂಗೀತದ ಗುರುಶಿಷ್ಯ ಪರಂಪರೆಯ ಕೊಂಡಿಯಾಗಿ ಕಾರ್ಯನಿರ್ವಹಿಸಿತು. ಕಿರಾಣಾ ಘರಾಣೆಯ ಅಬ್ದುಲ ಕರೀಮ್‌ಖಾನರನ್ನು ಕುಂದಗೋಳಕ್ಕೆ ಕರೆದುಕೊಂಡು ಬಂದು ಅವರ ದಿವ್ಯ ಸನ್ನಿಧಿಗೆ ಸವಾಯಿಗಂಧರ್ವರನ್ನು ಅರ್ಪಿಸಿದ್ದು ಹಿಂದುಸ್ತಾನಿ ಸಂಗೀತದ ಚರಿತ್ರೆಯಲ್ಲಿ ಮಹತ್ವದ ಮೈಲುಗಲ್ಲಾಗಿದೆ. ಸವಾಯಿಗಂಧರ್ವರು ಮತ್ತು ಫಕ್ಕೀರಪ್ಪ ಹೂಗಾರರು ಕಟ್ಟಿದ ನಾದ ಮಂಟಪದಲ್ಲಿ ಕಿರಾಣಾ ಘರಾಣೆಯ ಗಾಯಕರಾದ ಗಂಗೂಬಾಯಿ ಹಾನಗಲ್ಲ, ಭೀಮಸೇನ ಜೋಶಿ, ಬಸವರಾಜ ರಾಜಗುರು ಖ್ಯಾತನಾಮರಾದರು. ಗ್ವಾಲಿಯರ ಘರಾಣೆಯ ಲಿಂಗರಾಜ ಬುವಾ ಯರಗುಪ್ಪಿ, ಪಂಚಾಕ್ಷರಿ ಗವಾಯಿ ಮುಂತಾದವರು ತಮ್ಮ ನಾದಯಾತ್ರೆಯನ್ನು ಇಲ್ಲಿಂದಲೇ ಆರಂಭಿಸಿದರು. ಜೈಪುರ ಘರಾಣೆಯ ಮಲ್ಲಿಕಾರ್ಜುನ ಮನ್ಸೂರವರ ಸಂಗೀತ ಪರಂಪರೆಗೂ ಇದೇ ಸ್ಥಳ ನಾಂದಿಯಾಯಿತು. ಹೀಗೆ ಹಿಂದುಸ್ಥಾನಿ ಸಂಗೀತದ ಹಲವು ಘರಾಣೆಗಳ ಸಮಾಗಮವಾದದ್ದಷ್ಟೇ ಅಲ್ಲದೇ ಹೊಸ ಬಗೆಯಲ್ಲಿ ಅವುಗಳ ಆವಿಷ್ಕಾರ ಮತ್ತು ಪ್ರಯೋಗದ ಮೂಲಕ ಕುಂದಗೋಳ ಪರಿಸರ ತನ್ನ ಕೊಡುಗೆಯನ್ನು ಹಿಂದುಸ್ತಾನಿ ಸಂಗೀತದ ಬೆಳವಣಿಗೆಗೆ ನೀಡುತ್ತಾ ಬಂದಿದೆ. ತಪ್ಪದೇ ಪ್ರತಿವರ್ಷ ಎರಡು ದಿನಗಳ ನಿರಂತರ ಸಂಗೀತೋತ್ಸವ ತನ್ನೆಲ್ಲ ವೈಭವ ಮತ್ತು ವೈವಿಧ್ಯತೆಯಿಂದ ನಡೆಯುತ್ತದೆ. ದೇಶದ ಹಿರಿಕಿರಿಯ ಸಂಗೀತಗಾರರು ತಮ್ಮ ನಾದ ಸೇವೆಯನ್ನು ಮಾಡಿಹೋಗುತ್ತಾರೆ. ಸಮೂಹ ಮಾಧ್ಯಮಗಳ ಥಳುಕಿನ ಆಕರ್ಷಣೆ ನಡುವೆಯೂ ಶ್ರೋತೃಗಳಿಗೆ ಸಂಗೀತವನ್ನು ಒಂದು ಭೌತಿಕ ಪ್ರದೇಶದಲ್ಲಿ ನೇರವಾಗಿ ಉಣಬಡಿಸುವ ಕುಂದಗೋಳ ಮತ್ತು ಅದರಂಥ ಹಲವು ಊರುಗಳು ದೇಶದ ಸಾಂಸ್ಕೃತಿಕ ಜೀವಂತಿಕೆಯನ್ನು ಕಾಯುವ ಕಟ್ಟಾಳುಗಳಾಗಿವೆ. ಸಂಗೀತ ಪರಂಪರೆಯ ಉಳಿವಿಗಾಗಿಯೇ ತನ್ನನ್ನು ಮುಡಿಪಾಗಿಟ್ಟು ನಾಡಿಗೇರ ವಾಡೆಯಂತಹ ಇನ್ನೂ ಹಲವು ಮನೆತನಗಳ ಸಂಸ್ಥೆಗಳ ಅಧ್ಯಯನವಾಗಬೇಕಾಗಿದೆ. ವಿಕೇಂದ್ರೀಕೃತ ದೇಶಿ ಚಿಂತನೆಯ ಭಾಗವಾಗಿಯೂ ಸಂಗೀತದ ಶಕ್ತಿಯನ್ನು ಬಳಸಿಕೊಳ್ಳುತ್ತ ಇಂದಿನ ಜಾಗತೀಕರಣದ ಸವಾಲುಗಳನ್ನು ಎದುರಿಸುತ್ತ ಪರ್ಯಾಯ ಸಂಸ್ಕೃತಿಯನ್ನು ರೂಪಿಸುವ ಯತ್ನ ಇಂಥ ಪರಿಸರದಿಂದಲೇ ನಡೆಯುತ್ತದೆ ಎಂಬುದು ಆಶಾದಾಯಕ ಸಂಗತಿಯಾಗಿದೆ.



# ಅನುಬಂಧ–೧

## ಗ್ರಂಥಋಣ


೧. ಅಜ್ಜಣ್ಣ. ಯು. ಪಾಟೀಲ, ಗಾನಯೋಗಿ ಪಂಚಾಕ್ಷರಿ ಗವಾಯಿ, ಕರ್ನಾಟಕ ಸಂಗೀತ ನೃತ್ಯ ಅಕಾಡಮಿ, ಬೆಂಗಳೂರು, ೧೯೯೩

೨. ಆಧ್ಯ ರಂಗಾಚಾರ್ಯ : ಭರತನ ನಾಟ್ಯಶಾಸ್ತ್ರ, ಬೆಂಗಳೂರ ವಿಶ್ವವಿದ್ಯಾಲಯ, ಬೆಂಗಳೂರು, ೧೯೭೩

೩. ಆರ್. ಪಿ. ಹೆಗಡೆ : ಶಿಶುನಾಳ ಶರೀಫ ಮತ್ತು ಸಂತ ಕಬೀರ, ಸಮಾಜ ಶಿಕ್ಷಣ ವಿಶ್ವಸ್ಥ ಸಮಿತಿ, ಸಿದ್ದಾಪುರ, ೧೯೯೫

೪. ಆರ್. ಎಸ್. ಮುಗುಳಿ : ದಿ ಹೆವಿಟೆಜ್ ಆಫ್ ಕರ್ನಾಟಕ, ೧೯೪೬

೫. ಎಸ್. ಎ. ತಪಲೆ : ಹಿಂದುಸ್ತಾನಿ ಸಂಗೀತದ ಜ್ಞಾನಕೋಶ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು, ೧೯೯೬

೬. ಎಮ್. ಎಸ್. ಸುಂಕಾಪುರ : ಜೀವನ ಜೋಕಾಲಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ-೧೯೭೬

೭. ಎ. ವಿ. ನರಸಿಂಹ ಮೂರ್ತಿ : ಚಾಲುಕ್ಯರ ವಾಸ್ತು ಶಿಲ್ಪ ಪರಿಚಯ ಐ. ಬಿ. ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು,೧೯೭೬

೮. ಎಚ್. ಕೆ. ರಂಗನಾಥ : ಕನ್ನಡ ರಂಗಭೂಮಿ ವಿಕಾಸ, ಅಭಿನಯ ಪ್ರಕಾಶನ ಕುವೆಂಪು ನಗರ, ಮೈಸೂರು, ೧೯೯೦

೯. ಎ. ಯು. ಪಾಟೀಲ : ಸಂಗೀತ ಶಾಸ್ತ್ರ ದರ್ಪಣ ಭಾಗ-೧, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೦

೧೦. ಎಮ್. ಆರ್. ಶಂಕರಮೂರ್ತಿ : ಸಂಗೀತ ಮೀಮಾಂಸೆ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು, ೧೯೭೧

೧೧. ಎಲ್. ರಾಜಾರಾವ್ : ಸಂಗೀತ ಶಾಸ್ತ್ರ ಚಂದ್ರಿಕೆ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು, ೧೯೭೫

೧೨. ಎನ್ಕೆ : ಸಂಗೀತ ರತ್ನ ತ್ರಯರು : ಬುರ್ಲಿಬಿಂಧುಮಾಧವ ಸ್ಮಾರಕ ಪ್ರತಿಷ್ಠಾನ, ಧಾರವಾಡ, ೧೯೮೩

೧೩. ಎಸ್. ಎಸ್. ಹಿರೇಮಠ : ಹಬ್ಬಗಳು ಭಾಗ-೧, ಸಮತಾಪ್ರಕಾಶನ, ಹರಪನಳ್ಳಿ, ೧೯೯೨

೧೪. ಎಸ್. ಎಲ್. ಭೈರಪ್ಪ : ಗಂಗೂಬಾಯಿ ಹಾನಗಲ್ಲ, ಆರ್ಟ್ಸ್ ಸರ್ಕಲ್ ಹುಬ್ಬಳ್ಳಿ, ೧೯೮೯

೧೫. ಎಚ್. ತಿಪ್ಪೇರುದ್ರಸ್ವಾಮಿ : ಕರ್ನಾಟಕದ ಸಾಂಸ್ಕೃತಿಕ ಸಮೀಕ್ಷೆ,

೧೬. ಎಸ್. ಎಸ್. ಮಾಳವಾಡ : ಸಂಗೀತ ರತ್ನ, ಧಾರವಾಡ, ೧೯೭೬

೧೭. ಎಫಿಗ್ರಾಫಿಯಾ ಇಂಡಿಕಾ

೧೮. ಕರ್ನಾಟಕ ಕಲಾವಿದರು, ಹಿಂದುಸ್ತಾನಿ ಸಂಗೀತ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು, ೧೯೮೬

೧೯. ಕನ್ನಡ ವಿಶ್ವಕೋಶ, ಸಂಪುಟ-೩

೨೦. ಕರ್ನಾಟಕ ಸಂಗೀತ ನೃತ್ಯ ಅಕಾಡಮಿ : ಕಲಾ ಚೇತನ, ಬೆಂಗಳೂರು, ೨೦೦೪

೨೧. ಕೇಶವದಾಸ ಬೇಲೂರ : ಹರಿದಾಸ ಸಾಹಿತ್ಯ, ಮೈಸೂರು, ೧೯೪೪

೨೨. ಗಾಯತ್ರಿ : ಭಾರತೀಯ ಸಂಗೀತ ದರ್ಶನ, ಲೋಕಶಿಕ್ಷಣ ಟ್ರಸ್ಟ್, ಹುಬ್ಬಳ್ಳಿ, ೧೯೬೦

೨೩. ಗುರುಬಸವರಾಜ ಹಿರೇಮಠ : ವಚನ ಸಂಗೀತ, ಬೆಂಗಳೂರು, ೧೯೬೮

೨೪. ಜಿ.ಶಂ. ಪರಮಶಿವಯ್ಯ : ಕರ್ನಾಟಕ ವೃತ್ತಿ ಗಾಯಕರ ಕಾವ್ಯಗಳು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ೧೯೮೨

೨೫. ಜಿ. ಮರುಳಸಿದ್ಧಯ್ಯಾ : ಭರತ ನಾಟ್ಯಶಾಸ್ತ್ರ, ಕನ್ನಡ ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾಲಯ, ೧೯೭೩

೨೬. ದಸ್ತಗೀರ ಅಲ್ಲಿಭಾಯೀ : ಮುಸ್ಲೀಮರ ಹಬ್ಬ ಮತ್ತು ಉರುಸುಗಳು, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೯೯

೨೭. ಪಂಚಮುಖಿ ಆರ್. ಎಸ್ : ಕರ್ನಾಟಕ ಇತಿಹಾಸ, ಧಾರವಾಡ ೧೯೬೭

೨೮. ಬಸವರಾಜ ಎಲ್. ಮೇಸ್ತ : ಶಿವದಾಸ ಗೀತಾಂಜಲಿ, ೧೯೮೩

೨೯. ಬಸವಣ್ಣ ಪಿ.: ಕೈವಲ್ಯ ಪದ್ಧತಿ, ೧೯೮೩

೩೦. ಭಾಸ್ಕರ ಚಂದಾವರ್ಕರ್ (ಮೂಲ) ವೈದೇಹಿ (ಅನು) : ಸಂಗೀತ ಸಂವಾದ, ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ ೧೯೯೯

೩೧. ಬಿಂದುಮಾಧವ ಪಾಠಕ್ : ಪುಟ್ಟರಾಜ ಗವಾಯಿಗಳು, ಕರ್ನಾಟಕ ಸಂಗೀತ ನೃತ್ಯ ಅಕಾಡಮಿ, ೧೯೯೬

೩೨. ಬಿ.ಡಿ.ಪಾಠಕ : ಭಾರತೀಯ ಸಂಗೀತದ ಚರಿತ್ರೆ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ೧೯೭೫

೩೩. ಬಿ. ಎಸ್. ವೆಂಕಟಲಕ್ಷ್ಮಿ : ಮಲ್ಲಿಕಾರ್ಜುನ ಮನ್ಸೂರ, ಕರ್ನಾಟಕ ಸಂಗೀತ ನೃತ್ಯ ಅಕಾಡೆಮಿ, ಬೆಂಗಳೂರು, ೧೯೯೯

